# ಶಿವಾನುಭವ

ವರ್ಷ 24 ಅಕ್ಟೋಬರ 1949 ಸಂಚಿಕೆ 1

# ಶಿವಾನುಭವ

ವರ್ಷ ೨೪ | ಅಕ್ಟೋಬರ ೧೯೪೯ | ಸಂಚಿಕೆ ೧

## ಪ್ರಾಣಲಿಂಗ ಧ್ಯಾನದ ಕ್ರಮ

(ಬರೆದವರು:— ಶ್ರೀ. ಅನ್ನದಾನೀಶ್ವರ ವಿರಕ್ತಮಠ ಮು. ಮುಂಡರಗಿ.)

[೧]

"ಶಿರದೊಳಗೆ ಶಿರ, ಕರದೊಳಗೆ ಕರ, ಕರಣದೊಳಗೆ ಕರಣ, ಕಂಗಳೊಳಗೆ ಕಂಗಳು, ಕರ್ಣದೊಳಗೆ ಕರ್ಣ, ಘ್ರಾಣದೊಳಗೆ ಘ್ರಾಣ, ಜಿಂಹ್ವೆಯೊಳಗೆ ಜಿಂಹ್ವೆ, ದೇಹದೊಳಗೆ ದೇಹ, ಪಾದದೊಳಗೆ ಪಾದವ ಕೂಡಿ, ಶರಣರೊಡನಾಡುವ ನಿಮ್ಮ ಬೆಡಗಿನ ಲೀಲೆಯನಾರು ಬಲ್ಲರು?" ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ ಶರಣರಲ್ಲದೆ॥

ಮೇಲಿನ ಅಮರ ವಚನವನ್ನು ಸಿದ್ಧಲಿಂಗೇಶ್ವರನೆಂಬ ಮಹಾನುಭಾವನು ಬರೆದಿರುತ್ತಾನೆ. ಇದನ್ನು ಪ್ರಾಣಲಿಂಗಿಸ್ಥಲದಲ್ಲಿ ಬರೆದಿರುತ್ತಾನೆ. ಅವನು ಸ್ವತಃ ಪ್ರಾಣಲಿಂಗಿಯಿದ್ದುದರಿಂದ ದಿವ್ಯಾನುಭವವನ್ನು ಬರೆದಿರುವನು. ಈ ವಚನವು ಪ್ರಾಣಲಿಂಗದ ಧ್ಯಾನದ ಹಲವು ಕ್ರಮಗಳಲ್ಲಿ ಒಂದಾಗಿರುತ್ತದೆ. ಈ ವಚನದ ಪ್ರಕಾರ ಸಾಧನ ಮಾಡಬೇಕಾದರೆ ಶರಣರ ಸಹವಾಸವಿಲ್ಲದೇ ಅವರ ಮಾರ್ಗದರ್ಶನವಿಲ್ಲದೇ ಸಾಧ್ಯವೇ ಇಲ್ಲ. ಆದಕಾರಣ ಯೋಗ್ಯ ಶರಣರನ್ನು ಹುಡುಕಿ ಹೊಂದುವದು ಸಾಧಕರಿಗೆ ಅಗತ್ಯವಾಗಿದೆ.

## ಶರಣನ ಲಕ್ಷಣ

ಶರಣನೇ ನಿಜವಾದ ಜಗದ್ಗುರುವು. ಅವನೇ ನಿಜಲಿಂಗವು ಅವನೇ ನಿಜ ಜಂಗಮನು. ಶರಣಸ್ಥಲಕ್ಕೆ ಬರದೇ ಯಾರೂ ಗುರು ಲಿಂಗ, ಜಂಗಮರಾಗಲಾರರು. ಶರಣನು ಪರಮಾತ್ಮನ ಪ್ರತಿಬಿಂಬವು.

ಈ ಜಗತ್ತು ಶಿವನ ಲೀಲೆಯೆಂದು ಅವನು ನೆರೆನಂಬಿರುವನು. ಸಕಲ ಪದಾರ್ಥಗಳನ್ನು ಪ್ರಸಾದರೂಪಾಗಿ ರೂಪಾಂತರಗೊಳಿಸುವದು ಅವನ ದೈವಿಕ ಭಾವನೆಗೆ ಸಾಧ್ಯವಿದೆ. ಶಿವನ ವ್ಯತಿರಿಕ್ತವಾಗಿ ಏನೂ ಇಲ್ಲವೆಂದು ಗಟ್ಟಿಯಾಗಿ ಅವನು ತಿಳಿದಿರುವನು. ಕಾರಣ ಶಿವನಿಗೆ ಸರ್ವಾರ್ಪಣ ಮಾಡಿರುತ್ತಾನೆ. ಶರಣನು ಸರ್ವಾರ್ಪಣ ಯೋಗಿಯು. ಶಿವನಿಗೆ ಕರ್ಮಫಲಗೂಡಿ ಆತ್ಮನೈವೇದ್ಯವನ್ನು ಮಾಡಿದವನೇ ಶರಣನು ಎಂದ ಮೇಲೆ ಕ್ಷುದ್ರ ಸ್ವಾರ್ಥವೂ ಅಹಂಕಾರವೂ ಅವನಲ್ಲಿ ತಲೆಯೆತ್ತಲಾರವು. ಶರಣನ ಕರಣಗಳು ಲಿಂಗನ ಕಿರಣಗಳಾಗಿರುತ್ತವೆ. ಕಣ್ಣಿಗೆ ಕಾಣುವ ಶಿವನೇ ಶರಣನು. ಶರಣನು ಸದಾ ಆನಂದದಿಂದಲೂ ನಿಶ್ಚಿಂತೆಯಿಂದಲೂ ಇರುತ್ತಾನೆ. ಲೀಲಾಜಾಲವಾಗಿ ಸರ್ವ ಪ್ರಾಪಂಚಿಕ ಕಾರ್ಯಗಳನ್ನು ಮಾಡುತ್ತಾನೆ. ಜಡಭಾವನೆ ಅಥವಾ ಜೀವಭಾವ ಇಲ್ಲಧ್ದರಿಂದ ಸಾಮಾನ್ಯರಿಗೆ ಕಠಿಣವಾಗಿ ತೋರುವ ಕಾರ್ಯಗಳನ್ನು ಸುಲಭವಾಗಿ ಮಾಡುತ್ತಾನೆ. ಶರಣನು ಸ್ಫೂರ್ತಿಯ ಕೇಂದ್ರವು ಚೈತನ್ಯದ ಸೆಲೆಯು. ಶಾಂತಿ ಕಲೆಯ ಮಾತೃಸ್ಥಾನವು. ಜ್ಞಾನತೇಜಗಳ ಪುಂಜನು ಶಿವನ ಮಣಿಹವನ್ನು ಪೂರೈಸಲು ದುಡಿಯುತ್ತಿರುವ ಕಾಯಕ ಯೋಗಿಯು. ಶರಣನ ಸರ್ವಾಂಗಗಳೂ ಅಂದರೆ ತನು, ಪ್ರಾಣ, ಮನ, ಬುದ್ಧಿ, ಜೀವಾತ್ಮ ಎಲ್ಲ ಅಂಗಗಳು ಲಿಂಗರೂಪವಾಗಿರುತ್ತವೆ ಅಂತಪ್ಪ ಸಮರಸ ಸದ್ಭಾವಿಯಾದ ಶರಣನೇ ಲಿಂಗವು ಎಂದೂ, ಅಂತಪ್ಪ ಶರಣನ ಭಾವ ಬಲಿದು, ನೆನಹ ನೆಲೆಗೊಳಿಸಿ, ಜ್ಞಾನ ಪೂಜೆಯ ಅಂತಸ್ತು ಪ್ರಾಪ್ತವಾದರೆ ಅದಕ್ಕೇ ಪ್ರಾಣಲಿಂಗದ ಧ್ಯಾನವೆನ್ನುವರೆಂದೂ ಅನೇಕ ಶರಣರು ವಚನಗಳಲ್ಲಿ ಹಾಡಿರುವರು. ಸಚ್ಚಿದಾನಂದ ಜ್ಯೋತಿರ್ಲಿಂಗ ಮೂರ್ತಿಯಾದ ಪರಮಾತ್ಮನು ಜಲ, ಗಂಧಾಕ್ಷತೆ, ಪತ್ರೆ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಂದ ಪೂಜೆಯ ಮಾಡುವ ಪೂಜಕರ ಭಾವಕ್ಕೆ ಸಿಲುಕುವದಿಲ್ಲ. ಅಂತಹ ಶಿವನು ಶರಣರ ಸರ್ವಾಂಗಭರಿತನಾಗಿಹನು.

ಕಾರಣ ಶರಣನೇ ಪ್ರಾಣಲಿಂಗಿಯ ಸ್ಥಿತಿಯನ್ನು ದಾಟಿ ಸಮರಸಸ್ಥಿತಿಗೆ ಮುಟ್ಟಿರುವದರಿಂದ ಅವನನ್ನು ಹೃದಯದಲ್ಲಿ ಸ್ಥಾಪಿಸಿ ಧ್ಯಾನಿಸಲಿಕ್ಕೆ ಏನೂ ಅಡ್ಡಿಯಿಲ್ಲ ಪ್ರಾಣಲಿಂಗಿಯ ಧ್ಯಾನವು ಪ್ರಾಣಲಿಂಗದ ಧ್ಯಾನವೇ ಆಗಿರುವದು. ಈ ಮಾತು ಸ್ವಕಪೋಲ ಕಲ್ಪಿತವಲ್ಲ. ಎಲ್ಲಕ್ಕೂ ಮೊದಲು ನಾವು ಉದಾಹರಿಸಿದ ವಚನವೇ ಪ್ರಬಲ ಸಾಕ್ಷಿಯಾಗಿದೆ.

## ವಚನದ ರಹಸ್ಯವೇನು?

ಶ್ರೀ ಸಿದ್ಧಲಿಂಗೇಶ್ವರನು ತನ್ನ ಗುರುವಿಗೆ ಸ್ವತಂತ್ರ ಸಿದ್ಧಲಿಂಗೇಶ್ವರನೆಂದು ಸಂಬೋಧಿಸಿರುವನು. ಅವನು ತನ್ನ ಗುರುವಿಗೂ ಪರಮಾತ್ಮನಿಗೂ ಭೇದ ಮಾಡುವದಿಲ್ಲ. ಅವನ ಗುರುವಾದ ಸ್ವತಂತ್ರ ಸಿದ್ಧಲಿಂಗೇಶ್ವರನು ಮಹಾನುಭಾವಿಯಾಗಿದ್ದನು ಪ್ರಾಣಲಿಂಗಿಯಾಗಿದ್ದನು. ಶರಣನಾಗಿದ್ದನು. ಪ್ರಾಣಲಿಂಗವಾಗಿದ್ದನು. ಅಂತಹ ಪ್ರಾಣಲಿಂಗವನ್ನು ಹೃದಯ ಕಮಲದಲ್ಲಿ ಅಚಲವಾದ ಜ್ಞಾನ ಲೋಚನದಿಂದ ನೋಡಿ ಮನವನ್ನರ್ಪಿಸಿ ಜ್ಯೋತಿಯಂತೆ ನಿಂದು ನಿಜವ ಕೂಡಿದ ಸಹಜ ಯೋಗಿಯಾಗಿದ್ದನು. ಸಾಧನ ಮಾಡುವಾಗ ಮಿಂಚಿನ ರವೆಯಂತೆ ತೋರಿ ಅಡಗುತ್ತಿತ್ತು. ಆಗ ಅವನು ತನ್ನ ಧ್ಯಾನಮೂರ್ತಿಯಾದ ಗುರುವಿಗೆ "ತೋರಿಯಡಗುವದು ಸಹಜವಲ್ಲವಯ್ಯಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ" ಎಂದು ಹೇಳಿರುವನು ಧ್ಯಾನ ಸಿದ್ಧಿಯಾಗಿ ತಾನು ಪ್ರಾಣಲಿಂಗದ ಅಂಗವಾದಾಗ ಆನಂದ ಲೀಲೆಯು ಸ್ಫುರಿಸಿತು. ಆಗ ಪ್ರಾಣಲಿಂಗ ರೂಪಿಯಾದ ಧ್ಯಾನಮೂರ್ತಿಯು ತನಗೆ ಸಂಪೂರ್ಣ ಶರಣುಹೋದ ತನ್ನ ಶಿಷ್ಯನ ಅಂತರ್ಬಾಹ್ಯ ಅಂಗಗಳ ಮೂಲಕ ಕಾರ್ಯಗೈಯ್ಯುತ್ತುವನು. ಅರ್ಥಾತ್ ಶಿವನೇ ಶರಣನ ಮೂಲಕ ಲೀಲೆಯಾಡುವನು. ಆದ್ದರಿಂದಲೇ ಶರಣನು ಪರಮಾತ್ಮನ ಪ್ರತಿಬಿಂಬ ಎಂದು ಹೇಳಿದ್ದಾರೆ. ಈ ಲೀಲೆಯು ಶರಣರಿಗೆ ಹೊಳೆಯುವದೇ ವಿನಹ ಸಾಮಾನ್ಯ ಜಡ ಜೀವಿಗಳಿಗೆ ಗೋಚರಿಸದು. ಇದೇ ವಚನದ ರಹಸ್ಯವು. ಸ್ವತಂತ್ರ ಸಿದ್ಧಲಿಂಗೇಶ್ವರ ಗುರುವಿಗೆ ಶರಣುಹೋದ ಹಲವು ಶಿಷ್ಯರಿದ್ದರೆಂದೂ, ಅವರಲ್ಲಿ ಸಿದ್ಧಲಿಂಗೇಶ್ವರನು ಒಬ್ಬನಾಗಿದ್ದನೆಂದೂ, ಅಂತಹ ಶರಣರ ಸಮಾಜದಲ್ಲಿ ಪ್ರಾಣಲಿಂಗದ ಧ್ಯಾನವು ಸುಗಮವಾಗಿ ನಡೆಯುತ್ತಿದ್ದಿತೆಂದೂ ನಾವು ಸಹಜವಾಗಿ ತಿಳಿಯಬಹುದು. ಆದರೆ ಈಗ ಅಂತಹ ಶರಣರ ಬಳಗವೆಲ್ಲಿ?

# ಹೃದಯ ಕಮಲ.

[೨]

ನಮ್ಮ ಎದೆಯ ಎಡಭಾಗಕ್ಕೆ ಹೃದಯವಿರುವದು. ಹೃದಯವು ಕಮಲದಂತೆ ಕೋಮಲವಾಗಿರುವದು. ಹೃದಯವು ಬಹಳ ಚಂದವಾಗಿರುವದು. ಸಂಸ್ಕೃತಿ, ಕಲೆ ಅನುಭಾವಗಳು ಅಲ್ಲಿಯೇ ಉದಯವಾಗುತ್ತವೆ. ಹೃದಯ ಕಮಲವು ಯಾವ ಪ್ರಮಾಣದಲ್ಲಿ ಅರಳುತ್ತದೆಯೋ ಆ ಪ್ರಮಾಣಕ್ಕನುಸರಿಸಿ ಸಂಸ್ಕೃತಿ, ಕಲೆ, ಅನುಭಾವಗಳು ಘನವಾಗಿ ಪ್ರಕಾಶಿಸುತ್ತಾ ಹೋಗುತ್ತವೆ ಹೃದಯಕಮಲಕ್ಕೆ ಅಷ್ಟದಳಗಳು ಇರುತ್ತವೆ. ಈ ಅಷ್ಟದಳಗಳಗುಂಟ ಜೀವಾತ್ಮನು ಚರಿಸುತ್ತಿರುವನು. ಈ ಜೀವನು ಹಂಸನಂತಿರುತ್ತಾನೆ. ಜೀವಹಂಸನು ಪರಮಹಂಸನಾಗುವದೇ-ದೈವೀ ರೂಪಾಂತರವೇ-ಪ್ರಾಣಲಿಂಗಧ್ಯಾನದ ಉದ್ದೇಶವು. ಪ್ರಾಣಲಿಂಗಿಯು ಜಗತ್ತಿನಲ್ಲಿ ಶ್ರೇಷ್ಠ ಸಂಸ್ಕೃತಿ, ಕಲೆ, ಅನುಭಾವಗಳನ್ನುಂಟು ಮಾಡುವನು. ಸಹಜವಾಗಿ ಲೀಲಾಜಾಲವಾಗಿ ಉಂಟುಮಾಡುತ್ತಾನೆ. ಜೀವನ ಪ್ರಕೃತಿಭಾವವು ಅಪ್ರಾಕೃತ ಅಥವಾ ಪರಾಶಕ್ತಿಯಲ್ಲಿ ರೂಪಾಂತರ ಹೊಂದಲಿಕ್ಕೇನೇ ಧ್ಯಾನ ಬೇಕು. ಜೀವವನ್ನು ಪರಾಭಾವ ಅಥವಾ ಭಾವಲಿಂಗದಲ್ಲಿ ನಿಕ್ಷೇಪಮಾಡಬಲ್ಲಾತನೇ ಮಹಾನುಭಾವಿ. ಆತನೇ ಮಾನವೀಯತೆಯನ್ನು ಮಹಾನುಭಾವದಲ್ಲಿ ಪರಿವರ್ತನಗೊಳಿಸುವ ವಿಶ್ವಾತೀತ ಮಹಾಘನ ಚೈತನ್ಯಕಳೆ. ನೂತನ ಉಜ್ವಲ ಜಗತ್ತಿನ ನಿರ್ಮಾಣವು ಪ್ರಾಣಲಿಂಗಿಯನ್ನೇ ಅವಲಂಬಿಸಿದೆ. ಪರಾತ್ಪರ ವಸ್ತುವಿನ ಸಮರಸಹೊಂದಿದ ಪ್ರಾಣಲಿಂಗಿಯು ರತ್ನದ ಗಿರಿಗೆ ರವಿಕೋಟಿ ಕಿರಣಗಳು ಮುಸುಗಿದಂತೆ ಮಹಾಬೆಳಗಿನೊಬ್ಬುಳಿಯನೊಳಕೊಂಡು ಘನಗಂಭೀರವಾಗಿಯೂ ಲೀಲಾಯಮಾನವಾಗಿಯೂ ಆನಂದದಿಂದ ಇರುವನು.

## ಧ್ಯಾನದ ಕ್ರಮ.

ಆಸನದಲ್ಲಿ ಕುಳಿತು ಅತ್ತಿತ್ತ ಕಳವಳಿಸಬಾರದು. ಇಂದ್ರಿಯಂಗಳನ್ನೂ ಕರಣಗಳನ್ನೂ ಶಿವನಿಗೆ ಅರ್ಪಿಸಬೇಕು. ಕಂಣಿನ ಚಂಚಲತೆ, ವಾಯುವಿನ ಚಂಚಲತೆ, ಮನದ ಚಂಚಲತೆಗಳನ್ನೂ ಆ ಪರಮಾತ್ಮನಿಗೆ ಅರ್ಪಿಸಬೇಕು ಪ್ರಾಣಲಿಂಗದಲ್ಲಿ ಮನ, ಪ್ರಾಣವಾಯು, ಕಂಣು—

ಈ ಮೂರನ್ನು ಒಂದಾಗಿಸಬೇಕು. ಕಂಗಳು ತುಂಬಿ ನೋಡಬೇಕು. ಮನತುಂಬಿ ಸಂತೋಷಿಸಬೇಕು. ಆ ಪರಮಾನಂದವು ಹೊರಸೂಸುವಷ್ಟು ಸಾಧನ ಮಾಡಬೇಕು. "ನಾನು" ಎಂಬ ಗರ್ವ ಇದ್ದರೆ ಸಾಧನವೇ ಶಕ್ಯವಿಲ್ಲ. ಮಾಯೆಯ ಪಾಶದಲ್ಲಿ ಸಿಲುಕಬೇಕಾಗುವದು. ಅನಿಮಿಷದೃಷ್ಟಿ ಬಲಿಯಬೇಕು. ಅಂದರೆ ಪ್ರಾಣಲಿಂಗವು ಅಂತರಂಗಕ್ಕೆ ವೇಧಿಸುವದು. ಆಗ ಅಂಗಾಂಗಗಳನ್ನು ಲಿಂಗಾಂಗಗಳನ್ನಾಗಿ ರೂಪಾಂತರಿಸುವದು. ವಿಷಯಗಳು ಪ್ರಸಾದರೂಪಾಗುವವು. ಪ್ರಸನ್ನಚಿತ್ತ, ಸ್ಥಿರ ಬುದ್ಧಿಗಳು ಇಂತಪ್ಪ ಪ್ರಸಾದದಿಂದಲೇ ಒಗೆವವು. ಆಗ ಪ್ರಾಣಲಿಂಗವು ವಿಶ್ವರೂಪವಾಗಿರುವದೆಂದೂ, ವಿಶ್ವಭರಿತವಾಗಿರುವದೆಂದೂ, ವಿಶ್ವಾತೀತವಾಗಿರುವದೆಂದೂ ಅನುಭಾವವು ಹೊಳೆಯುವದು. ಪ್ರಾಣಲಿಂಗದ ಚಿತ್ಕಲಾಚೈತನ್ಯವೇ ಎಲ್ಲ ಕಡೆಗೂ ಕಾರ್ಯ ನಡಿಸಿರುವದೆಂದು ತಿಳಿದು ಆ ತಿಳಿವು ಜಗದಲ್ಲಿ ಹರಿಯುವಂತೆ ವಿದ್ಯುತ್ತಿನ ತಂತಿಯಂತಾಗುವವನೇ ಪ್ರಾಣಲಿಂಗದ ಸಂಬಂಧಿಯು. ಪ್ರಾಣಲಿಂಗಕ್ಕೇನೇ ಜ್ಯೋತಿರ್ಲಿಂಗವೆನ್ನುತ್ತಾರೆ. ಈ ಜ್ಯೋತಿರ್ಮಯ ಲಿಂಗವು ಹೃದಯಕಮಲದ ಮಧ್ಯದಲ್ಲಿರುವದು. ಇದೇ ಆಧಾರಚಕ್ರದಲ್ಲಿ ಸುವರ್ಣಕಾಂತಿಯ ಆಧಾರ ಶಕ್ತಿಯಾಗಿರುವದು. ಸ್ವಾಧಿಷ್ಠಾನ ಚಕ್ರದಲ್ಲಿ ಶಿವನಾಗಿರುವದು. ಮಣಿಪೂರಕ ಚಕ್ರದಲ್ಲಿ ಕುಂಡಲಿನಿಶಕ್ತಿಯಾಗಿರುವದು. ಅನಾಹತ ಚಕ್ರದಲ್ಲಿ ಜ್ಯೋತಿರ್ಮಯಲಿಂಗವಾಗಿರುವದು. ವಿಶುದ್ಧಿಚಕ್ರದಲ್ಲಿ ಸುಷುಮ್ನೆಯಾಗಿರುವದು. ಆಜ್ಞಾಚಕ್ರದಲ್ಲಿ ಜ್ಞಾನನೇತ್ರವೆನಿಸುವ ಶುದ್ಧಪ್ರಸಾದ ಜ್ಯೋತಿಯಾಗಿರುವದು. ಆದಕಾರಣ ಕೆಲವರು ಭ್ರೂಮಧ್ಯದ ಈ ಆಜ್ಞಾಚಕ್ರದಲ್ಲಿ ದೃಷ್ಟಿಯನ್ನು ಇಟ್ಟು ಧ್ಯಾನಿಸುವರು. ಭ್ರೂಮಧ್ಯದಲ್ಲಿ ದೃಷ್ಟಿಯನ್ನು ಇಡುವದಕ್ಕಿಂತ ಹೃದಯದಲ್ಲಿ ಇಡುವದು ಹೆಚ್ಚು ಒಳ್ಳೇದೆಂದು ಬಲ್ಲವರು ಹೇಳುತ್ತಾರೆ. ಇಚ್ಛೆಯುಳ್ಳವರು ಭ್ರೂಮಧ್ಯದಲ್ಲಿಯೂ ದೃಷ್ಟಿಯನ್ನಿಡಬಹುದು ಶಿವನ ಮೂರ್ತಿಯನ್ನು ಇಡುವದಕ್ಕಿಂತಲೂ ಹೃದಯದಲ್ಲಿ ಪ್ರಾಣಲಿಂಗವನ್ನು ಕುಳ್ಳಿರಿಸಿ ಧ್ಯಾನಿಸುವದು ಮೇಲೆಂದು ಸ್ವಾನುಭವದಿಂದ ಸಿದ್ಧವಾಗಿದೆ ಪ್ರಾಣಲಿಂಗವು ಆರುಚಕ್ರಂಗಳಲ್ಲಿ ಪೂರೈಸಿ ತುಂಬಿರ್ಪುದು. ಕರ, ಮನ, ಭಾವದ ಒಳಹೊರಗೆ ಅದೇ ತಾನಾಗಿ ಬೆಳಗುವದು ಬ್ರಹ್ಮರಂಧ್ರದ ಸಹಸ್ರದಳ ಕಮಲ ಮಧ್ಯದಲ್ಲಿ ಬೆಳಗುವ ಪರಂಜ್ಯೋತಿಯೂ ಅದೇ. ಅದೇ ಪರಮಾತ್ಮ ಪರಬ್ರಹ್ಮ.

ಧ್ಯಾನ ಮಾಡುತ್ತ ಹೋದಂತೆ ಪ್ರಾಣಲಿಂಗವು ಆಧಾರದಲ್ಲಿ ಎಳೆಯ ಸೂರ್ಯನಂತೆ ಬೆಳಗುವದು. ಸ್ವಾಧಿಷ್ಠಾನದಲ್ಲಿ ಪೂರ್ಣ ಚಂದ್ರನಂತೆಯೂ, ಮಣಿಪೂರಕದಲ್ಲಿ ಮಿಂಚಿನ ಲತೆಯಂತೆಯೂ, ಅನಾಹತದಲ್ಲಿ ಸ್ಫಟಿಕದ ಸಲಾಕೆಯಂತೆಯೂ. ವಿಶುದ್ಧಿಯಲ್ಲಿ ಮೌಕ್ತಿಕದ ಗೊಂಚಲದಂತೆಯೂ, ಆಜ್ಞೆಯಲ್ಲಿ ರತ್ನದ ದೀಪ್ತಿಯಂತೆಯೂ, ಬ್ರಹ್ಮರಂಧ್ರದಲ್ಲಿ ಸ್ವಯಂಜ್ಯೋತಿಯಂತೆಯೂ, ಶಿಖೆಯಲ್ಲಿ ಶುದ್ಧ ತಾರೆಯಂತೆಯೂ, ಪಶ್ಚಿಮದಲ್ಲಿ ಉಳುಕ ನಕ್ಷತ್ರದಂತೆಯೂ, ಪ್ರಾಣಲಿಂಗವು ಬೆಳಗುವದೆಂದು ಶಿವಾನುಭಾವಿಗಳು ಹೇಳುತ್ತಾರೆ. ಇದೇ ಪ್ರಾಣಲಿಂಗದ ಕಳೆ ಸಾಧಕನು ಪ್ರಾಣಲಿಂಗಿಯ ಆಚರಣೆಯನ್ನು ಅನುಸರಿಸಿ ನಡೆಯಬೇಕು.

## ಪ್ರಾಣಲಿಂಗಿಯ ಆಚರಣೆ

ಪ್ರಾಣಲಿಂಗಿಯು ಘ್ರಾಣೇಂದ್ರಿಯವನ್ನು ಆಚಾರ ಲಿಂಗವಾಗಿಯೂ, ಜಿಹ್ವೇಂದ್ರಿಯವನ್ನು ಗುರುಲಿಂಗವಾಗಿಯೂ, ನೇತ್ರೇಂದ್ರಿಯವನ್ನು ಶಿವಲಿಂಗವಾಗಿಯೂ, ತ್ವಗಿಂದ್ರಯವನ್ನು ಜಂಗಮ ಲಿಂಗವಾಗಿಯೂ, ಶ್ರವಣೇಂದ್ರಿಯವನ್ನು ಪ್ರಸಾದಲಿಂಗವಾಗಿಯೂ, ಹೃದಯೇಂದ್ರಿಯವನ್ನು ಮಹಾಲಿಂಗವಾಗಿಯೂ, ರೂಪಾಂತರಗೊಳಿಸುವನು. ಪೂರ್ವಾಶ್ರಯ, ಜಾತೀಯತೆ, ವರ್ಣಾಶ್ರಮ, ಇತ್ಯಾದಿ ಘೋರ ಸಂಸ್ಕಾರಗಳನ್ನು ಭಸ್ಮಮಾಡುವ ಜ್ಞಾನ, ಭಕ್ತಿ, ಕ್ರಿಯೆಗಳು ಇಲ್ಲಿ ದೈವೀ ರೂಪಾಂತರದಲ್ಲಿ ಹುದುಗಿರುತ್ತವೆ. ವಿಶ್ವಶಾಂತಿಯ ಕಳೆಯೇ ಇಲ್ಲಿ ಹೊಳೆಯುತ್ತಿದೆ.

## ಪ್ರಾಣಲಿಂಗಿಗೆ ಈ ನಿಜಾಚರಣೆಯು ಹೇಗೆ ಸಾಧ್ಯವಾಯಿತು?

ಪ್ರಾಣಲಿಂಗಿಯಾಗಬೇಕಾದರೆ ಮೊದಲು ಭಕ್ತ ಸ್ಥಲದಿಂದ ಪ್ರಾರಂಭಿಸಬೇಕಷ್ಟೇ. ಭಕ್ತನು ಮೊದಲು ಗಂಧವನ್ನು ಸ್ವೀಕರಿಸುವಾಗ ತನ್ನ ಧ್ಯಾನ ಮೂರ್ತಿಯಾದ ಪ್ರಾಣಲಿಂಗಿಯ ಘ್ರಾಣಕ್ಕೆ ಅರ್ಪಿಸುವನು. ಸ್ವೀಕರಿಸುವಾಗ ಪ್ರಾಣಲಿಂಗಿಯ ಜಿಹ್ವೆಗೆ ಅರ್ಪಿಸುವನು. ರೂಪು ಗ್ರಹಿಸುವ ಮುನ್ನ ಪ್ರಾಣಲಿಂಗಿಯ ನೇತ್ರಗಳಿಗೆ ಅರ್ಪಿಸುವನು. ಸ್ಪರ್ಶ ಗ್ರಹಿಸುವ ಮುನ್ನ ಪ್ರಾಣಲಿಂಗಿಯ ತ್ವಕ್ಕಿಗೆ ಅರ್ಪಿಸುವನು. ಶಬ್ದ ಗ್ರಹಿಸುವ ಮುನ್ನ ಪ್ರಾಣಲಿಂಗಿಯ ಕಿವಿಗಳಿಗೆ ಅರ್ಪಿಸುವನು. ತೃಪ್ತಿ

ಯನ್ನು ಅನುಭವಿಸುವ ಮುನ್ನ ಪ್ರಾಣಲಿಂಗಿಯು ಹೃದಯಕ್ಕೆ ಅರ್ಪಿಸುವನು. ಹೀಗೆ ಮಾಡುವದರಿಂದ ಗಂಧ, ರುಚಿ, ರೂಪು, ಸ್ಪರ್ಶ, ಶಬ್ದ, ತೃಪ್ತಿ. ಈ ಆರು ಪದಾರ್ಥಗಳು ಪ್ರಸಾದವಾಗುತ್ತವೆ. ಇದು ಪ್ರಥಮ ಅವಸ್ಥೆಯು. ಆಮೇಲೆ ಪ್ರಾಣಲಿಂಗಿಯು ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯಗಳ ಮುಖಾಂತರ ಆ ಪ್ರಸಾದವನ್ನು ಸ್ವೀಕರಿಸುವನು. ಇದು ದ್ವಿತೀಯ ಅವಸ್ಥೆಯು. ಕೊನೆಗೆ ಪ್ರಾಣಲಿಂಗಿಯೇ ಭಕ್ತನ ಮೂಲಕ ಸಂದೇಶ ಕಳಿಸುವನು. ಇದು ತೃತೀಯ ಸಹಜಾವಸ್ಥೆಯು. ಭಕ್ತನೇ! ಪ್ರಾಣಲಿಂಗಿಯಾದರೂ "ನಾನು" ಪ್ರಾಣಲಿಂಗಿಯೆಂಬ ಅಹಂಕಾರವಿರುವದಿಲ್ಲ. ನಾನು ಜಗದ ಸೇವಕ ಎಂದು ನುಡಿದು ವಿನಯದಿಂದ ನಡೆಯುವನು. ಪ್ರಾಣಲಿಂಗಿಗೆ ಸಹಜಾಚರಣೆಯು ಹೀಗೆ ಸಾಧ್ಯವಾಯಿತು. ಸಿದ್ಧರಾಮ ಶಿವಯೋಗಿಯು ನಿಜವಾದ ಪ್ರಾಣಲಿಂಗಿಯು. ಅಂಥ ಪ್ರಾಣಲಿಂಗಿಯನ್ನೇ ಧ್ಯಾನ ಮಾಡಬೇಕು, ಕಂಡ ಕಂಡವರನ್ನು ಗುರುಗಳನ್ನಾಗಿ, ಲಿಂಗವಾಗಿ, ಜಂಗಮವಾಗಿ ಮಾಡಿಕೊಳ್ಳಬಾರದು. ಶರಣ ಶರಣೆಯರು ಪ್ರಾಣಲಿಂಗಿಗಳಾಗಿದ್ದರು. ಅವರ ಧ್ಯಾನ ಮಾಡಲಿಕ್ಕೆ ಅಡ್ಡಿಯಿಲ್ಲ.

## ಆದರ್ಶ ಶರಣರು

ಬಸವಣ್ಣ, ಮಡಿವಳ ಮಾಚಿದೇವ, ಚೆನ್ನಬಸವಣ್ಣ, ಸಿದ್ಧರಾಮದೇವ, ಘಟ್ಟಿವಾಳಯ್ಯ, ಉರಿಲಿಂಗದೇವ, ಅಜಗಣ್ಣ, ನಿಜಗುಣಯೋಗಿ ಅಕ್ಕಮಹಾದೇವಿ, ಅಲ್ಲಮಪ್ರಭುದೇವ — ಹೀಗೆ (೯) ಒಂಬತ್ತು ಶರಣರು ಅನುಕ್ರಮವಾಗಿ ಭಕ್ತಸ್ಥಲ, ಮಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲ, ಆರೂಢಸ್ಥಲ, ನಿತ್ಯನಿರುಪಮಸ್ಥಲ, ನಿರಂಜನಸ್ಥಲ ಎಂಬ ೯ ಸ್ಥಲಗಳಿಗೆ ಅಧಿಪತಿಗಳಾಗಿರುವರು. ನವಚಕ್ರಗಳನ್ನು ಶುದ್ಧಮಾಡುವವರು ಈ ಶರಣರು. ಇವರ ಬೋಧಾಮೃತವನ್ನೂ ಪಾನಮಾನ ಮಾಡಬೇಕು. ಅಂದರೆ ಪ್ರಾಣಲಿಂಗದ ಧ್ಯಾನಕ್ಕೆ ಸಹಾಯವಾಗುವದು. ಈಗಲೂ ಶರಣರಿರಬಹುದು. ಅವರನ್ನು ಹುಡುಕಿ ಹೊಂದಬೇಕು. ಅಂದರೆ ಮಾತ್ರ ಪ್ರಾಣಲಿಂಗ ಸಾಧ್ಯವಾಗುವದು ಲಿಂಗವಂತ ಸಮಾಜವು ನಿಜ ದೃಷ್ಟಿಯನ್ನು ಪಡೆದು ನಿಜಾನಂದದೊಳು ಲೋಲಾಡಲಿ !!!

# ಪ್ರಾಣಲಿಂಗದ ಧ್ಯಾನಕ್ಕೆ ಅಧಿಕಾರಿ.

[೩]

ಪರಮಾತ್ಮನಲ್ಲಿಯೂ, ಸದ್ಗುರುವಿನಲ್ಲಿಯೂ, ನೈತಿಕ ನೇಮಗಳಲ್ಲಿಯೂ, ಸಜ್ಜನರ ಸಹವಾಸದಲ್ಲಿಯೂ, ಶಾಂತಿಯ ಶಕ್ತಿಯಲ್ಲಿಯೂ ನಂಬಿಗೆಯುಳ್ಳ ಎಲ್ಲ ಜನರೂ ಪ್ರಾಣಲಿಂಗದ ಧ್ಯಾನಕ್ಕೆ ಅಧಿಕಾರಿಗಳು. ನಾಸ್ತಿಕರು ಅಧಿಕಾರಿಗಳಲ್ಲ ಭಕ್ತನೇ ಮಹೇಶ್ವರನಾಗಿಯೂ, ಭಕ್ತನೇ ಪ್ರಸಾದಿಯಾಗಿಯೂ, ಭಕ್ತನೇ ಪ್ರಾಣಲಿಂಗಿಯಾಗಿಯೂ, ಭಕ್ತನೇ ಶರಣನಾಗಿಯೂ, ಭಕ್ತನೇ ಐಕ್ಯನಾಗಿಯೂ ಆಗುತ್ತಾನೆಂದು ಎಲ್ಲ ಶಿವಾನುಭವ ಗ್ರಂಥಗಳೂ ಹೇಳುತ್ತವೆ. ಅಯ್ಯನವರಷ್ಟೇ ಅಧಿಕಾರಿಗಳೆಂದು ಹೇಳುವದು ತಪ್ಪು. ಭಕ್ತನೇ ಅಯ್ಯನಾಗುತ್ತಾನೆ. ಭಕ್ತನೇ ಪರಮಾತ್ಮನಾಗುತ್ತಾನೆ ಭಕ್ತನೇ ಎಲ್ಲ ಆಗುತ್ತಾನೆ. ಭಕ್ತಿಯೆಂದರೆ ಪರಮಾತ್ಮನಲ್ಲಿ ಪ್ರೀತಿ. ಭಕ್ತಿಯುಳ್ಳವನೇ ಭಕ್ತನು. ಭವಿಯೆಂದರೆ ಪರಮಾತ್ಮನಲ್ಲಿ ಪ್ರೀತಿಯಿಲ್ಲದವನು. ಭವಿಯು ಹೇಗೆ ಭಕ್ತನಾಗುತ್ತಾನೆ? ಭಕ್ತಿಯಿಂದ ಭವಿಯು ಭಕ್ತನಾಗುತ್ತಾನೆ. ಭಕ್ತಿ ಅಥವಾ ದೇವ ಪ್ರೀತಿಯಿದ್ದವನು ಭವಿಯಲ್ಲ ಅಯ್ಯನೆಂದರೆ ಜ್ಞಾನಿ. ಜ್ಞಾನಿಗೆ ಭಕ್ತಿ ಅಥವಾ ಈಶಪ್ರೀತಿ ಬೇಡವೋ? ಬೇಡವೆಂದರೆ ಅವು ಪರಿಪೂರ್ಣ ಜ್ಞಾನವೇ ಅಲ್ಲ.

ಚಿತ್ತವು ಲಿಂಗ ಅಥವಾ ಪರಬ್ರಹ್ಮನಲ್ಲಿ ಅಚ್ಚೊತ್ತಿದಂತೆ ಇರದಿದ್ದರೆ ಧ್ಯಾನ ಸಾಧ್ಯವಾಗುವದಿಲ್ಲ. ಜಾತ್ಯಭಿಮಾನವಿದ್ದರೆ ಧ್ಯಾನ ಸಾಧ್ಯವಿಲ್ಲ. ಜಾತಿಗೊಂದು ಮಾತು ಕಲಿತು ಸರ್ವರಿಗೆ ಹೇಳುವ ಡಾಂಭಿಕರಿಗೆ ಧ್ಯಾನ ಸಾಧ್ಯವಿಲ್ಲ. ಚಿನ್ಮಯ ಶರಣನಾಗದ ಹೊರತು ಧ್ಯಾನ ಶಕ್ಯವಿಲ್ಲ ಹಮ್ಮು ಬಿಮ್ಮು ಹೆಮ್ಮೆ ಹಿರಿಯತನವುಳ್ಳನ್ನಕ್ಕರ ಧ್ಯಾನ ಸಾಧ್ಯವಿಲ್ಲ. ಲಿಂಗಾನುಭಾವಿಗಳ ಸಂಗದಲ್ಲಿಲ್ಲದಿದ್ದರೆ ಧ್ಯಾನ ಸಾಧ್ಯವಿಲ್ಲ ಸಕಲ ದೇಹದೊಳಗೆ ತುಂಬಿರ್ಪ ಪರವಸ್ತು ಒಂದೇ ಎಂದು ಅಚಲವಾಗಿ ನಂಬದಿದ್ದರೆ ಧ್ಯಾನ ಶಕ್ಯವಿಲ್ಲ. ದೇಹವು ರೋಗಗಳಿಂದ ಬಳಲುತ್ತಿದ್ದರೆ ಧ್ಯಾನ ಶಕ್ಯವಿಲ್ಲ. ಧ್ಯಾನಯೋಗಿಗೆ ರೋಗಗಳಿಲ್ಲ. ಆಸನ, ಪ್ರಾಣಾಯಾಮಗಳು ಧ್ಯಾನಕ್ಕೆ ಸಹಾಯ ಮಾಡುತ್ತವೆ. ಬೆನ್ನು ಮೇಲೆ ನೀಟಾಗಿರುವಂತೆ ಧ್ಯಾನಯೋಗಿಯು ಯತ್ನಿಸಲಿಕ್ಕೇಬೇಕು.

ಕಣ್ಣುಗಳನ್ನು ಲಿಂಗದಲ್ಲಿ ಸ್ಥಿರಗೊಳಿಸುವದನ್ನು ಸಾಧಿಸಲೇಬೇಕು. ಈ ದೇಹವು ಗುಡಿಯು. ಮನವು ಸಿಂಹಾಸನವು. ಜೀವಾತ್ಮನ ಜೀವ ಭಾವ ಅಥವಾ ಪ್ರಕೃತಿ ಭಾವವನ್ನು ಉದಾತ್ತಗೊಳಿಸುವ ಶಕ್ತಿಯೇ ಪ್ರಾಣಲಿಂಗವು. ಪ್ರಾಣಲಿಂಗವು ಜೀವದೊಡೆಯನು. ಅಂತಸ್ಥ ಪ್ರಾಣ ಲಿಂಗವನ್ನು ಮನವೆಂಬ ಸಿಂಹಾಸನದ ಮೇಲೆ ಮೂರ್ತಗೊಳಿಸಬೇಕು. ಸಕಲ ಕರಣಗಳೇ ಉಪಚಾರದ ಪದಾರ್ಥಗಳು. ಈ ಪ್ರಕಾರ ಭಾವವು ಬಲಿಯಬೇಕು. ಅದೇ ಪ್ರಾಣಲಿಂಗದ ಧ್ಯಾನ. ಚಿತ್ತ, ಬುದ್ಧಿ, ಅಹಂ ಕಾರಗಳಿಂದ ಒಡಗೂಡಿ ಮತ್ತು ದೇಹದ ಇಂದ್ರಿಯಗಳಿಂದ ಕೂಡಿ ಮನಸ್ಸು ವ್ಯವಹರಿಸುವದು. ಕಣ್ಣುಗಳ ಮೂಲಕ ಮನಸ್ಸು ಸುಳಿದಾ ಡುವದು. ಈ ಮನಸ್ಸು ಶುದ್ಧವಾಗಬೇಕಾದರೆ ಚಿತ್ತ, ಬುದ್ಧಿ, ಅಹಂ ಕಾರಗಳೂ ಮತ್ತು ಹೊರಗಿನ ಇಂದ್ರಿಯಗಳೂ ಶುದ್ಧವಾಗಬೇಕು. ಅದ ಕ್ಕಾಗಿ ಏಕಲಿಂಗ ನಿಷ್ಠಾಪರನಾಗಿರತಕ್ಕದ್ದು. ಕಾಯಕದಲ್ಲಿ ತೊಡಗಿರ ಲಿಕ್ಕೇಬೇಕು. ನಿರುದ್ಯೋಗ, ಆಲಸ್ಯ, ಜಡತ್ವಗಳು ದೊಡ್ಡ ಶತ್ರುಗಳು. ಭಕ್ತರ ಸೇವೆ ಮಾಡಲಿಕ್ಕೇಬೇಕು. ಭಕ್ತರು ಶಿವಸ್ವರೂಪರೆಂದು ತಿಳಿ ಯಬೇಕು. ಭಕ್ತರಲ್ಲಿ ವಿನಯವುಳ್ಳವನಾಗಿ ವರ್ತಿಸಬೇಕು. ಎಷ್ಟೇ ಸಂಕಟಗಳು ಬಂದರೂ ಸತ್ಯಾಗ್ರಹ ಸ್ಫೂರ್ತಿಯನ್ನು ಬಿಡತಕ್ಕದ್ದಲ್ಲ. ಧೀರನಾಗಿ, ವೀರನಾಗಿ, ಜಗದಲ್ಲಿ ಬಾಳತಕ್ಕದ್ದು. ಭಯವು ತತ್ವನಿಷ್ಠ ಯೋಗಿಯಲ್ಲಿ ಇರುವದಿಲ್ಲ. ಶಿವಯೋಗಿಯನ್ನು ನೋಡುವದರಿಂದ ಕಣ್ಣುಗಳು ಶುದ್ಧವಾಗುತ್ತವೆ. ಶಿವಯೋಗಿಯೇ ಪ್ರಾಣಲಿಂಗಿಯು. ಶಿವ ಯೋಗಿಯ ನಿರೀಕ್ಷಣೆ ಸೇವೆಗಳಿಂದ ದೃಷ್ಟಿಯು ಪಲ್ಲಟವಾಗುತ್ತದೆ. ದೃಷ್ಟಿಪಲ್ಲಟದಿಂದ ಭಾವ ಪಲ್ಲಟವಾಗುವದು. ಭಾವ ಪಲ್ಲಟವು ಧ್ಯಾನ ಸಿದ್ಧಿಯನ್ನು ಸುಲಭವಾಗಿ ಸಾಧಿಸುವದು. ಅದೇ ಧ್ಯಾನ ಸಿದ್ಧಿಯ ಚಿಹ್ನವು ಎಂದರೂ ತಪ್ಪಲ್ಲ. ನೇತ್ರಗಳನ್ನು ಇಷ್ಟಲಿಂಗದಲ್ಲಿ ಹುಗಿಯ ತಕ್ಕದ್ದು. ದಿನಾಲು ಹೀಗೆ ಸಾಧನ ಮಾಡಿದರೆ ದೀರ್ಘಶ್ವಾಸವು ಹಿಡಿಯ ಹತ್ತುವದು. ಆಗ ಮನವು ಅಂತರ್ಮುಖವಾಗುವಂತೆ ಶಿವಯೋಗಿಯ ಧ್ಯಾನವನ್ನು ಹೃದಯದಲ್ಲಿ ಮಾಡತಕ್ಕದ್ದು. ಧ್ಯಾನ ಮಾಡುವ ಭಕ್ತನ ಮುಖಾಂತರ ಲಿಂಗ, ಅಥವಾ ಶಿವಯೋಗಿಯು ಲೀಲೆಯಾಡಹತ್ತುವನು. ನಾನೇ ಶಿವಯೋಗಿಯಾಗಬೇಕೆಂಬ ಹಮ್ಮು ಬೇಡ. ಶಿವಯೋಗಿಯೇ ತಾನಾಗುವ ಸಹಜಭಾವ ಇರಲಿ. ಅಂದರೆ ಮನಕಲ್ಪಿತ, ಜೀವಕಲ್ಪಿತ

ಪಳಿದು ಕಾಯಿ ಹಣ್ಣಾದಂತೆ ಮನವು ಮಹಾಘನ ಪರಬ್ರಹ್ಮವೇ ಆಪ್ಪುದು. ಇದೇ ಮನವ ನಿಲಿಸುವ ಸಹಜ ಪರಿ. ಪ್ರಾಣಲಿಂಗದ ಧ್ಯಾನಕ್ಕೆ ಅಧಿಕಾರಿಯಾಗುವ ರೀತಿ.

---

## ಪರಯೋಗಿಯಾಗು.

(ಲೇ:— ಆರ್. ಕೆ. ಹಿರೇಮಠ.)

ಅಪ್ಪದಿರು ಸಾವಿನೆಡೆ, ಒಪ್ಪದಿರು ಬಾಳಗುಡಿ,
ಪಾಳುಗುಡಿ ಬೀಳುಗುಡಿ ಮಲಿನತಡಿಯೆಂದು
ಗರ್ಭಗುಡಿಯೊಳು ಇಲ್ಲ ಶ್ರೀ ಮಹೇಶ್ವರ ದೇವ
ನಂಬು ಅಲ್ಲಿದೆ ಕಲ್ಲ ಮೂರುತಿಯು ಎಂದು
ಬಿಲ್ವದಳ ಹೂಪತ್ರಿ ಅನುದಿನವು ಧರಿಸಿದಡೆ
ಬೆಳಕು ಬಾರದು ನಿನ್ನೆದೆಯ ಗುಡಿಯುಲ್ಲಿ
ನಿರ್ಮಲತೆ ಸತ್ಯಶಾಂತಿಗಳಲ್ಲಿ ತುಂಬಿಹುದು
ತಥ್ಯವಿಹ ನಿಜಬಾಳು ಬಾಳನೆಡೆಯುಲ್ಲಿ
ಸತ್ಯ ಶಾಂತಿಯು ಸುಧೆಯು ಸುರಿಸಿತೆಲೆ ಬಾಳ್ಗುಡಿಯು
ನಿತ್ಯ ಪರಿಪಾಕದಲಿ ಬೆರೆಸು ಬುದ್ಧಿಯನು
ಸಮತೆ ಮಮತೆಗಳಿಂದ ಮಲಿನಮನವನು ತೊಳೆದು
ನುಡಿಸು ಆತ್ಮಾನಂದ ಪ್ರಭೆಯು ಭೇರಿಯನು
ಹೀನಮನದಲಿ ಕೊರಗಿ ಖಿನ್ನಮುಖ ನಾಗದಿರು
ನಡೆಮುಂದೆ ಬೆಳ್ನೊರೆಯು ಹಸನ್ಮುಖಿಯಾಗಿ
ತಪ್ಪದದು ವಿಧಿಲಲಾಟ ಪಟ್ಟವದುವೆಲ್ಲವು
ಅಪ್ಪದಿರು ಸಾವಿನೆಡೆ ಹೀನಮನವಾಗಿ
ಸಾವು–ನೋವುಗಳೆಲ್ಲ ನಿತ್ಯವವು ಬಿಡದಿಹವು
ಆಗು ಕೆಚ್ಚೆದೆಯುಳ್ಳ ಕನ್ನಡಿಗ ನೀಗು
ಮರುಗಿ ಸುರಿಸುವಿಯೇಕೆ? ಕಣ್ಣೀರಸಾಗರವ
ನಗುತಲಿಹ ಬಾಳ್ಗುಡಿಯ ಪರಯೋಗಿಯಾಗು

# ತ್ರಿಗುಣಂಗಳು.

(ಲೇ:— ಶ್ರೀ. ಕಲ್ಯಾಣಪ್ಪ ಬ್ಯಾಳಿ ಬಿ. ಎ. ಬಿ. ಟಿ. ವಿಜಾಪುರ)

ಪ್ರತಿಯೊಬ್ಬ ಮನುಷ್ಯನಲ್ಲಿ ತಾಮಸ, ರಾಜಸ, ಸಾತ್ವಿಕಗಳೆಂಬ ಮೂರು ಗುಣಗಳು ಹೆಚ್ಚುಕಡಿಮೆ ಪ್ರಮಾಣದಿಂದ ಇದ್ದೇ ಇರುತ್ತವೆ. ಮನುಷ್ಯನಲ್ಲಿ ಯಾವ ಗುಣವು ಅಧಿಕವಾಗಿರುತ್ತದೆಯೋ ಅವನಿಗೆ ಅಂಥ ಗುಣದವನೆಂದು ಹೇಳುವದುಂಟು. ತಾಮಸಗುಣವು ಯಾವನಲ್ಲಿ ಅಧಿಕವಾಗಿದೆಯೋ ಅವನಿಗೆ ತಾಮಸಿಯೆಂದೂ ರಾಜಸಗುಣವು ಅಧಿಕವಾಗಿರುವವನಿಗೆ ರಾಜಸಿಯೆಂದೂ ಸಾತ್ವಿಕ ಗುಣಾಧಿಕ್ಯವುಳ್ಳಾತನಿಗೆ ಸಾತ್ವಿಕನೆಂದೂ ಕರೆಯುವರು. ಮನುಷ್ಯನ ಜೀವನದ ಮುಖ್ಯ ಗುರಿಯೆಂದರೆ ತಾಮಸಗುಣವನ್ನು ಕಡಿಮೆ ಮಾಡುತ್ತ ರಾಜಸಿಯಾಗುವದು; ಹಾಗೆಯೇ ರಾಜಸಗುಣವನ್ನು ಕಡಿಮೆಮಾಡುತ್ತ ಸಾತ್ವಿಕನಾಗುವದು. ಸಾತ್ವಿಕ ಗುಣದ ಪರಾಕಾಷ್ಠತೆಯೇ ದೇವತ್ವ. ಸಾತ್ವಿಕಗುಣಸಂಪನ್ನನೇ ದೇವ. ಒಟ್ಟಿನ ಮೇಲೆ ಮನುಷ್ಯನು ದೇವನಾಗುವದೇ ಆತನ ಮುಖ್ಯ ಧ್ಯೇಯ.

ತಾಮಸ ಗುಣವು ಅಧಿಕವಾದವನಿಗೆ ರಾಕ್ಷಸನೆಂದೂ ರಾಜಸಗುಣವು ಹೆಚ್ಚಾಗಿದ್ದವನಿಗೆ ಮಾನವನೆಂದೂ ಸಾತ್ವಿಕ ಗುಣಾಧಿಕ್ಯನಿಗೆ ದೇವನೆಂದೂ ಸಂಜ್ಞೆಯುಂಟು. ರಾಕ್ಷಸ, ಮಾನವ, ದೇವ, ಇವರು ಬೇರೆ ಬೇರೆ ಲೋಕಗಳಲ್ಲಿ ವಾಸಮಾಡುತ್ತಾರೆಂಬ ನುಡಿ ಹುಸಿ. ಪರಹಿಂಸೆಯಲ್ಲಿಯೇ ಆನಂದಬಡುವವನು ರಾಕ್ಷಸನು. ಸ್ವಾರ್ಥಸಾಧನೆಯಲ್ಲಿ ಆನಂದಬಡುವವನು ಮಾನವನು. ಪರಾರ್ಥದಲ್ಲಿ ಆನಂದಬಡುವವನು ದೇವನು. ತನಗೆ ಹಿತವಾಗಲಿ ಬಿಡಲಿ ಪರಪೀಡೆ ಮಾಡುವದೇ ಅವನ ಕೆಲಸವಾಗಿರುತ್ತದೆ. ಅಭಕ್ಷ್ಯ ಭಕ್ಷಣ, ಅಪಾನಪೇಯ, ಪಾಶವಿಕ ವಿಷಯೋಪಭೋಗಗಳೇ ಆತನ ನಿತ್ಯದ ಪಾಪಕರ್ಮಗಳು. ಈ ತರಹದ ಕೀಳು ಸುಖಗಳು ತನಗೆ ಪ್ರಾಪ್ತವಾಗಲೆಂದು ಆತನು ಮಾರಿ, ಮುಕಣಿ, ದುರ್ಗಿ ಮೊದಲಾದ ಕ್ರೂರ ದೇವತೆಗಳನ್ನು ಕಲ್ಪಿಸಿ ಅವುಗಳಿಗೆ ಬಲಿದಾನ ಮಾಡುತ್ತಿರುತ್ತಾನೆ ಮತ್ತು ಆಯಾಯ ದೇವತೆಗಳ ಆರಾಧನೆ ಮಾಡುತ್ತಿರುತ್ತಾನೆ. ತಾಮಸಿಗೆ ತನ್ನ ಹಾಗೂ ತನ್ನ ಹೆಂಡಿರುಮಕ್ಕಳ ಸುಖದ ಹೊರತು ಬೇರೆಯವರ ಸುಖದ ಕಲ್ಪನೆಯೇ ಇರುವದಿಲ್ಲ.

ಮಾನವನು ಫಲಾಪೇಕ್ಷೆಯಿಂದ ತನ್ನ ಸ್ವಾರ್ಥದ ಸಲುವಾಗಿ ಅನೇಕ ಉದ್ಯೋಗ ವ್ಯವಹಾರಗಳನ್ನು ಮಾಡಿ ದುಡ್ಡುಗಳಿಸುತ್ತಾನೆ, ತನ್ನ ಹೆಂಡಿರು ಮಕ್ಕಳು, ಬಂಧುಬಳಗದವರು, ಸಮಾಜ — ಇವೆಲ್ಲವುಗಳ ಹಿತದ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸುವನು. ಆತನು ನಾಗರಿಕತನದ ಕರ್ತವ್ಯಗಳನ್ನರಿತುಕೊಂಡು ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುವದಲ್ಲದೆ ದಾನ ಪರೋಪಕಾರ ಮುಂತಾದ ಪುಣ್ಯದ ಕೆಲಸಗಳನ್ನೆಸಗುವನು. ತನ್ನ ಜಾತಿ ಸಮಾಜಗಳಿಗಾಗಿ ತನ್ನ ಅಳಿಲ ಭಕ್ತಿಯನ್ನು ಸಲ್ಲಿಸುವನು. ತಾಮಸಿಯಂತೆ ಕೇವಲ ವಿಷಯೋಪಭೋಗವೇ ಮಾನವನ ಗುರಿಯಲ್ಲ. ಸಾತ್ವಿಕನಂತೆ ಕೇವಲ ತ್ಯಾಗವೇ ಆತನ ಧ್ಯೇಯವಿರುವದಿಲ್ಲ. ಆದರೆ ಭೋಗತ್ಯಾಗಗಳನ್ನೊಳಕೊಂಡ ಯೋಗವೇ ಆತನ ಜೀವನದ ಗುರಿಯಾಗಿರುತ್ತದೆ. ಮಾನವನು ತನಗೆ ಫಲಗಳನ್ನು ಕೊಡುವಂಥ ಲಕ್ಷ್ಮಿ, ಸರಸ್ವತಿ, ಶಕ್ತಿ ಮುಂತಾದ ದೇವತೆಗಳನ್ನೂ ವಿಷ್ಣು, ರುದ್ರ, ಗಣಪತಿ, ವೀರಭದ್ರ, ಮಾರುತಿ ಮೊದಲಾದ ದೇವರುಗಳನ್ನು ಆರಾಧಿಸುವನು. ಆತನು ಸುಖಭೋಜನ, ಸುಖವಾಸ, ಸುಖಕರವಾದ ವಸ್ತ್ರಾಭರಣ, ಸುಖಪ್ರದವಾದ ಸಂಪತ್ತುಗಳಿಗಾಗಿ ನಿತ್ಯವೂ ಹೆಣಗಾಡುತ್ತಿರುತ್ತಾನೆ.

ಸಾತ್ವಿಕನಾದ ಮನುಷ್ಯನು ಸರ್ವಸಂಗಪರಿತ್ಯಾಗಮಾಡಿ ಯಾವ ಫಲಾಪೇಕ್ಷೆಯೂ ಇಲ್ಲದೆ ಕೇವಲ ಪರಹಿತಕ್ಕಾಗಿ ದುಡಿಯುವನು. ಸ್ವದೇಶ ಪರದೇಶ, ವಿಶ್ವಹಿತಗಳೇ ಸಾತ್ವಿಕನ ಜೀವನದ ಗುರಿ. ಸಾತ್ವಿಕನು ವೈರಾಗ್ಯಶಾಲಿಯಾಗಿದ್ದು ಆತನು ಯಾವ ತರಹದ ಸುಖವನ್ನೂ ಅಪೇಕ್ಷಿಸುವದಿಲ್ಲ. ಮಿತಾಹಾರ, ಮಿತಭಾಷೆ, ಮಿತವಿಹಾರಗಳಿಂದ ಆತನು ಲೋಕಸಂಗ್ರಹ ಕಾರ್ಯ ಮಾಡುವನು. ಜಗತ್ತಿನ ಸೃಷ್ಟಿ ಸ್ಥಿತಿ, ಲಯಗಳಿಗೆ ಕಾರಣೀಭೂತನಾದ ಪರಮಾತ್ಮನು ಒಬ್ಬನೇ ಎಂದು ಭಾವಿಸಿ ಆತನನ್ನು ಚಿತ್ತದಲ್ಲಿ ಧ್ಯಾನಿಸುತ್ತ ಸರ್ವಕಾರ್ಯಗಳನ್ನೂ ಈಶ್ವರಾರ್ಪಣಬುದ್ಧಿಯಿಂದ ಮಾಡುವನು. ಆತ್ಮಾನಾತ್ಮ ವಿಚಾರದಿಂದ ದೇವನೇ ತಾನಾಗಿ ವಿರಾಜಿಸುವನು.

ತಾಮಸಿಯಾದ ಮನುಷ್ಯನು ಅರಿಷಡ್ವರ್ಗಗಳ ದಾಸನಾಗಿರುತ್ತಾನೆ. ಅವನಿಗೆ ಪರದಾರದಲ್ಲಿ ಕಾಮವೂ ಸನ್ಮಾರ್ಗದಲ್ಲಿ ಕ್ರೋಧವೂ ಪರದ್ರವ್ಯ

ದಲ್ಲಿ ಲೋಭವೂ ಪತ್ನಿತನದ ಮೋಹವೂ ಸೊಕ್ಕಿನ ಆನೆ ಕೋಣಗಳಂಥ ಮದವೂ ಪರಹಿಂಸೆ ಮಾಡಬೇಕೆಂಬ ಮತ್ಸರವೂ ಮನೆಮಾಡಿಕೊಂಡಿರುತ್ತವೆ. ರಾಜಸಿಯಲ್ಲಿ ನಿಜಪತ್ನಿಯಲ್ಲಿ ಕಾಮವೂ, ದುರ್ಮಾರ್ಗದಲ್ಲಿ ಕ್ರೋಧವೂ ಕಾಯಕದಿಂದ ದುಡ್ಡು ಗಳಿಸುವದರಲ್ಲಿ ಲೋಭವೂ, ತನ್ನ ಬಂಧುಬಳಗ ಸಮಾಜಗಳಲ್ಲಿ ಮೋಹವೂ, ಅಧಿಕಾರ, ಸಂಪತ್ತು ಕುಲಾದಿಗಳ ಬಗ್ಗೆ ಮದವೂ ತನಗಿಂತಲೂ ಹೆಚ್ಚಿನವರೊಡನೆ ಸ್ಪರ್ಧೆ ಮಾಡಬೇಕೆಂಬ ಮತ್ಸರವೂ ನೆಲೆಸಿರುತ್ತವೆ. ಸಾತ್ವಿಕನು ಅರಿಷಡ್ವರ್ಗಗಳ ದಿಶೆಯನ್ನು ಲೋಕಸಂಗ್ರಹ ಕಾರ್ಯಗಳಲ್ಲಿಯೂ ಪರಮಾತ್ಮನ ಸೇವೆಯಲ್ಲಿಯೂ ಉಪಯೋಗಿಸಿಕೊಂಡು ಸುಖಿಸುತ್ತಾನೆ.

ನಮ್ಮ ಶಿವಶರಣರು ಮನುಷ್ಯರ ತಾಮಸ ರಾಜಸ ಸಾತ್ವಿಕ ಗುಣಗಳಿಗನುಸರಿಸಿ ಅವರನ್ನುದ್ಧರಿಸಬೇಕೆಂದು ಇಷ್ಟ, ಪ್ರಾಣ, ಭಾವಲಿಂಗಗಳನ್ನು ಕಲ್ಪಿಸಿದರು. “ಆಚಾರಃ ಪ್ರಥಮೋಧರ್ಮಃ” ಎಂದು ಹೇಳಿದಂತೆ ತಮೋಗುಣ ವಿಶಿಷ್ಟರಾದ ಮನುಷ್ಯರಿಗೆ ಇಷ್ಟಲಿಂಗಧಾರಣ ಮಾಡಿ ಕೆಲವು ಆಚಾರ, ಕಟ್ಟುಪಾಡುಗಳನ್ನು ಹಾಕಿಕೊಟ್ಟರು. ಅಂದರೆ ಅವರು ಅಭಿಕ್ಷ್ಯ ಭಕ್ಷಣ, ಅಪಾನಪೇಯ, ಪರಹಿಂಸೆ ಮುಂತಾದ ಗುಣಗಳನ್ನು ತೊರೆದು ಇಷ್ಟಲಿಂಗಪೂಜೆಯಲ್ಲಿಯೇ ಆನಂದಬಡಲೆಂದು ಭಕ್ತಿಭಾವವನ್ನು ಅವರಲ್ಲಿ ನೆಲೆಗೊಳಿಸಿದರು. ಇಷ್ಟಲಿಂಗಪೂಜೆಯಿಂದ ಮನುಷ್ಯನ ತಮೋಗುಣವು ನಷ್ಟಹೊಂದುತ್ತದೆ. ಅರ್ಥಾತ್ ಭಕ್ತಿಯ ಬಲದಿಂದ ಮನುಷ್ಯನು ತಮೋಗುಣದ ಹಾರಾಟವನ್ನು ತಡೆದು ನಿಗ್ರಹಿಸಲು ಸಮರ್ಥನಾಗುತ್ತಾನೆ. ಬೆಣ್ಣೆಯು ಕರಗಿ ತಿಳಿದುಪ್ಪವಾಗಿ ಮುಂದೆ ಗಟ್ಟಿ ತುಪ್ಪವಾಗುವಂತೆ ತಾಮಸ ಭಕ್ತಿಯು ಕರಗಿಗೊಂಡು ರಾಜಸಭಕ್ತಿಯಾಗಿ ಕಡೆಗೆ ಸಾತ್ವಿಕ ಭಕ್ತಿಯಾಗಿ ಪರಿಣಮಿಸುವದು.

ತಾಮಸಿಯು ಇಷ್ಟಲಿಂಗಪೂಜೆಯಿಂದ ರಾಜಸಿಯ ಮಟ್ಟಕ್ಕೆ ಬಂದಾಗ ಆತನಿಗೆ ಶರಣರು ದೀಕ್ಷೆಮಾಡಿ ಪ್ರಾಣಲಿಂಗಾನುಸಂಧಾನವನ್ನು ಹೇಳಿಕೊಟ್ಟರು. ಭಕ್ತಿಯುಕ್ತವಾದ ಧ್ಯಾನವೇ ಪ್ರಾಣಲಿಂಗೋಪಾಸನೆ. ಅದೇ ರಾಜಸಭಕ್ತಿ. ಧ್ಯಾನದಿಂದ ರಾಜಸಗುಣದ ದೋಷಗಳು ನಷ್ಟಹೊಂದುವವು. ಮುಂದೆ ರಾಜಸಿಯು ಸಾತ್ವಿಕಮಟ್ಟಕ್ಕೇರಿದಾಗ ಶರಣರು ಅವನಿಗೆ ಪುನಃ ದೀಕ್ಷೆಮಾಡಿ ಭಾವಲಿಂಗದಲ್ಲಿ ಸಮಾಧಿ

ಹೊಂದುವ ಜ್ಞಾನ ವೈರಾಗ್ಯಗಳನ್ನು ಕಲಿಸಿಕೊಟ್ಟರು. ಭಾವಲಿಂಗದಲ್ಲಿ ಸಮಾಧಿಹೊಂದುವ ಸ್ಥಿತಿಯೇ ಸಾತ್ವಿಕಭಕ್ತಿಯು. ಸಾತ್ವಿಕಭಕ್ತಿಸಂಪನ್ನರಾದ ಶಿವಶರಣರು ಇಹಲೋಕದಲ್ಲಿ ದೇವರಾಗಿ ವಿರಾಜಿಸಿದರು.

ಈಗಿನ ಪ್ರಪಂಚದಲ್ಲಿ ಸಾತ್ವಿಕಭಾವವು ತೀರ ಕಡಿಮೆಯಾಗಿದೆ. ಸಾತ್ವಿಕ ಗುಣಕ್ಕಿಂತಲೂ ರಜೋಗುಣವು ಅಧಿಕವಾಗಿದೆ ರಜೋಗುಣಕ್ಕಿಂತ ತಮೋಗುಣವು ಅತ್ಯಧಿಕವಾಗಿದೆ ಆದುದರಿಂದಲೇ ಜಗತ್ತಿನಲ್ಲಿ ಅಶಾಂತಿ, ಹೋರಾಟ, ವಿಶ್ವಾಸಘಾತಕತನ, ಹಿಂಸೆ, ಜಾತ್ಯಂಧತೆ, ಅನೀತಿ, ಅಧರ್ಮಗಳು ಹೆಚ್ಚಾಗಿವೆ ದುಶ್ಚಟಗಳು ಮಿತಿಮೀರಿವೆ ಸಜ್ಜನಸದಾಚಾರಿಗಳು ಬಹು ವಿರಲವಾಗಿದ್ದಾರೆ. ಈಗ ಜಗತ್ತಿಗೆ ಶಾಂತಿಯು ಬೇಕಾಗಿದೆ. ಆ ಶಾಂತಿಯು ಲಭಿಸಬೇಕಾದರೆ ಎಲ್ಲ ದೇಶಗಳಲ್ಲಿಯೂ ಜನತೆಯ ದೃಷ್ಟಿಕೋನವನ್ನು ದೇವರ ಕಡೆಗೂ ದೇವಭಕ್ತಿಯ ಕಡೆಗೂ ಹೊರಳಿಸುವದು ಅತ್ಯಾವಶ್ಯಕ. ಅಂದರೇನೇ ತಾಮಸಗುಣದ ಪ್ರಾಬಲ್ಯವು ನಷ್ಟವಾಗಿ ಜಗತ್ತು ಸುಖಶಾಂತಿಯಿಂದ ಬಾಳುವದು. ಭಕ್ತಿಯ ಪ್ರಸಾರವೇ ಶರಣರ ಸಂದೇಶ. ಇಂಥ ಪರಿಸ್ಥಿತಿಯಲ್ಲಿ ತೀವ್ರವೇ ಶಿವಶರಣರುದಯಿಸಿ ಜಗತ್ತಿಗೆ ಭಕ್ತಿಸಂದೇಶವನ್ನು ಬೀರುವರೆಂದು ಕಾಲಜ್ಞಾನವು ಸೂಚಿಸುತ್ತದೆ

# ಬಸವಣ್ಣನವರ ಸಂಸಾರ.

(ಲೇಖಕಃ— ಶ್ರೀಯುತ ಸಿಂಪಿ ಲಿಂಗಣ್ಣ ಹಲಸಂಗಿ)

[ ಮುಂದೆ ಸಾಗಿದ್ದು. ]

## ಲಿಂಗಪೂಜೆ

ಹೊತ್ತಾರೆ ಎದ್ದು, ಅಗ್ಗವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ ಲಿಂಗವ ಪೂಜಿಸುತ್ತಿದ್ದರೆಂದು ಹೇಳಿಬಿಟ್ಟರೆ ಸಾಕಾಗುತ್ತಿತ್ತು. ಆದರೆ ಅದು ಅಷ್ಟವಿಧಾರ್ಚನೆ ಷೋಡಶೋಪಚಾರವಾಗಬೇಕು. ಪೂಜಿಸಿದರೆ ಮುಗಿಯುವದಿಲ್ಲ. ಮಾಡಿದ ಪೂಜೆಯ ನೋಡುವುದಯ್ಯ. ಶಿವತತ್ವಗೀತವ ಪಾಡುವುದು. ಶಿವನ ಮುಂದೆ ನಲಿದಾಡುವುದಯ್ಯ. ಭಕ್ತಿ ಸಂಭಾಷಣೆಯ ಮಾಡುವುದು. ನಮ್ಮ ಸಂಗಯ್ಯನ ಕೂಡುವುದು. ಪೂಜೆ ಇಲ್ಲಿಗೆ ಬಂದರೆ ಪರಿಪೂರ್ಣವಾಗುವದು. ಮೊದಮೊದಲಿಗೆ ಅದು ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟವಾಗಿ ಬಿಡಬಹುದು ಆ ಪೂಜೆ ಆ ಮಾಟ ಚಿತ್ರದ ರೂಹಾಗಬಹುದು. ಅದನ್ನು ಅಪ್ಪಿದರೆ ಸುಖವಿಲ್ಲ ಮೆಲಿದರೆ ರುಚಿ ಇಲ್ಲ ಇದನ್ನರಿತೇ ಬಸವಣ್ಣನವರು — "ಲೌಕಿಕರ ಕಂಡು ಆಡುವೆ ಹಾಡುವೆ. ತಾರ್ಕಿಕರ ಕಂಡು ಆಡುವೆ ಹಾಡುವೆ. ಸಹಜ ಗುಣವೆನ್ನಲಿಲ್ಲಯ್ಯ. ನಿಜ ಭಕ್ತಿ ಎನಗಿಲ್ಲ" ವೆಂದು ಮನತೆರೆದು ನುಡಿದಿದ್ದಾರೆ. ಲಿಂಗವ ಪೂಜಿಸಿ ಅಲ್ಲದಾಟವನಾಡುವುದೆಂದರೆ ಬೆಳ್ಳಿತ್ತಿನ ಮರೆಯಲಿದ್ದು ಹುಲ್ಲೆಗಂಬ ತೊಡುವಂತೆ ಇಂಥ ಕಳ್ಳ ಹಾದರಿಗನ ಕೈಯಲ್ಲಿ ಪೂಜೆಯ ಕೊಳ್ಳ ನಮ್ಮ ಕೂಡಲಸಂಗಮದೇವ ಎನ್ನುವ ಮಾತು ಅವರು ಬಲ್ಲವರಾಗಿದ್ದರು. ತಾಪತ್ರಯಗಳನ್ನು ಮನದಲ್ಲಿಟ್ಟುಕೊಂಡು ಬಂಡಿತುಂಬ ಪತ್ರೆಯ ತಂದು ಪೂಜಿಸಿದರೂ ಅದು ಲಿಂಗದೇವನಿಗೆ ತಾಪತ್ರಯವುಂಟಾಗುವದರಿಂದ ಅದನ್ನು ಸ್ವೀಕರಿಸುವದಿಲ್ಲ. ಮನದಲ್ಲಿ ಲೇಸಿಲ್ಲದಿದ್ದರೆ ಹೂಸುವ ವಿಭೂತಿ ಹುಸಿಯೇ ಸರಿ. ಹೃದಯ ಕತ್ತರಿ ತುದಿನಾಲಿಗೆ ಬೆಲ್ಲವಾದವನು ನಿಚ್ಚ ಶಿವರಾತ್ರಿಯ ಮಾಡಿದರೂ ಅವನು ಅವನಂತೆ, ಮನ ಮನದಂತೆ, ಕೂಡಲಸಂಗಮದೇವ ತಾನು ತನ್ನಂತೆ. ಕೋಪಿ ಮಜ್ಜನಕ್ಕೆರೆದರೆ ರಕ್ತಧಾರೆ. ಪಾಪಿ ಹವ್ವ

ಸೇರಿಸಿದರೆ ಮಸೆದಾಯುಧವ ಗಾಯ. ಆದರೆ ಚಕೋರನಿಗೆ ಚಂದ್ರಮನ ಬೆಳಗಿನ ಚಿಂತೆ ಬರುವಂತೆ, ಅಂಬುಜಕೆ ಭಾನುವಿನ ಉದಯದ ಚಿಂತೆ ಇರುವಂತೆ ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ ಇರುವಂತೆ ಎನಗೆ ನಮ್ಮ ಕೂಡಲಸಂಗಮದೇವನ ನೆನೆವ ಚಿಂತೆಯೊಂದೇ ಆಗಿ ನಿಂತಾಗ — ದೇವನ ನೆನೆದಾಗಲೇ ಉದಯವೂ ಮರೆದಾಗಲೇ ಅಸ್ತಮಾನವೂ ಎಂದು ತೋರುವದು. ದೇವನ ನೆನಹೇ ಜೀವ ದೇವನ ನೆನಹೇ ಪ್ರಾಣ ಆಗಿ ಬಿಡುವದು. ಅಂಥ ಭಕ್ತನು ಆಡಿದರೆ ಕಾಲು ದಣಿಯುವದಿಲ್ಲ ನೋಡಿದರೆ ಕಣ್ಣು ದಣಿಯುವದಿಲ್ಲ ಹಾಡಿದರೆ ನಾಲಿಗೆ ದಣಿಯುವದಿಲ್ಲ ಕೈಯಾರೆ ಎಷ್ಟು ಪೂಜಿಸಿದರೂ ಮನವು ದಣಿಯುವದಿಲ್ಲ. ಅಂಥ ಭಕ್ತನ ವಚನದಲ್ಲಿ ನಾಮಾಮೃತ ತುಂಬಿಕೊಂಡಿದ್ದರೆ, ನಯನದಲ್ಲಿ ಮೂರುತಿ ತುಂಬಿಕೊಂಡಿರುತ್ತದೆ. ಮನದಲ್ಲಿ ದೇವನ ನೆನಹು ತುಂಬಿಕೊಂಡಿದ್ದರೆ ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿಕೊಂಡಿರುವದರಿಂದ ಭಕ್ತನು ಕೂಡಲಸಂಗಮದೇವನ ಚರಣ ಕಮಲಗಳಲ್ಲಿಯು ತುಂಬಿಯಂತಾಗಿ ಬಿಡುತ್ತಾನೆ. ಅವನಿಗೆ ವಾರ ದಿನಗಳು ತಿಳಿಯದೆ ಜಾರುತ್ತವೆ. ಹಗಲು-ರಾತ್ರಿಗಳು ಗೊತ್ತಿಲ್ಲದೆ ನುಸುಳುತ್ತವೆ. ಯಾಕಂದರೆ ಭಕ್ತನು ದೇವನನ್ನು ಪೂಜಿಸಿ ತನ್ನನ್ನು ಮರೆಯುತ್ತಾನೆ. ತನ್ನನ್ನು ಮರೆತಷ್ಟು ದೇವನಾಗುತ್ತಾನೆ. ಆಗ ಪೂಜೆಯು ಸಾರ್ಥಕಗೊಳ್ಳುತ್ತದೆ. ನಿಚ್ಚನಿಚ್ಚ ಮಾಡುವ ಪೂಜೆಯಿಂದ ಮನಸ್ಸಿನ ಮಾರ್ಪಾಟು ಕಂಡು ಬರದಿದ್ದರೆ ಆ ಪೂಜೆ ತಪ್ಪಿದ ದಾರಿಯೆಂದು ಬಗೆದು ತಿದ್ದಿಕೊಳ್ಳಲು ಸನ್ನದ್ಧನಾಗಿರತಕ್ಕದ್ದು. ತನ್ನನ್ನು ಮರೆಮರೆತಂತೆ ದೇವದೇವನ ನೆನಹು ಸ್ಥಿರಗೊಳ್ಳುತ್ತದೆಂದು ಹೇಳಿಯಾಯಿತು ತನ್ನೊಳಗಿನ ಸಾಮಾನ್ಯಗುಣಗಳೂ ದೇವದೇವನ ನೆನಹಿನಲ್ಲಿ ಮುಳುಗಿ ನಿಲ್ಲುವದರಿಂದ ಸಾಮಾನ್ಯ ಗುಣಗಳೇ ದಿವ್ಯ ಗುಣಗಳಾಗಿ ಮಾರ್ಪಾಡು ಹೊಂದುತ್ತ ಬರುತ್ತವೆ. "ಕಾಮ ವೇಕೋ ಲಿಂಗ ಪ್ರೇಮ ಎನಿಸುವಂಗೆ." ಸಾಮಾನ್ಯಗುಣವಾದ ಕಾಮವು ದೇವನ ನೆನಹಿನಲ್ಲಿ ಲಿಂಗಪ್ರೇಮವಾಗಿ ಮಾರ್ಪಾಡುತ್ತದೆಂದು ತೋರುತ್ತದೆ. ಅದರಂತೆ ಕ್ರೋಧ ಮಾರ್ಪಟ್ಟವನು ಶರಣವೇದ್ಯನೂ, ಲೋಭಮಾರ್ಪಟ್ಟವನು ಭಕ್ತಿ ಲಾಭ ಬಯಸುವವನೂ, ಮೋಹ ಮಾರ್ಪಟ್ಟು ಪ್ರಸಾದವೇದ್ಯನೂ ಆಗುತ್ತಾನೆ. ಅದರಂತೆ ಮದಮತ್ಸರಗಳು ತೊಲಗಿ ಹೃದಯ ಶುದ್ಧಿಯುಂಟಾಗುತ್ತದೆ. ಶುದ್ಧವಾದ

ಆ ಹೃದಯ ಬಿರಿ ಮುಗುಳಂತೆ ದೇವದೇವನ ಶ್ರೀಚರಣದ ಮೇಲೆ ಬಿದ್ದುರುಳುವದು. ಆದರೆ ಅರಶವರ್ಗದವನೂ, ಕ್ರೋಧ ತೊಲಗದವನೂ, ಕ್ರೂರಕುಭಾಷೆ ಕುಹಕ ಹಿಂಗದವನೂ ಲಿಂಗ ಮಾರ್ಗದಲ್ಲಿ ಹೊರಟಿದ್ದರೆ ದಾರಿ ತಪ್ಪುವದಲ್ಲದೆ, ಮುಂದಿನ ದಾರಿಯೇ ಕಣ್ಣಿನಿಂದ ಮಾಯವಾಗಿ ಬಿಡುವದು. ಶಿವನ ಮಾರ್ಗ ಯಾವುದೆಂದು ಕೇಳಿದರೆ “ನೀನೆತ್ತಲು ಶಿವನೆತ್ತಲು ಹೋಗಲತ್ತಲು ಮರುಳೇ” ಎಂದು ಮಾರ್ನುಡಿ ದೊರೆಯುವದು. ಅರತ ಕ್ರೋಧ, ಕ್ರೂರಕುಭಾಷೆ ಮೊದಲಾದವುಗಳು ಭವರೋಗದ ಲಕ್ಷಣಗಳು. ಈ ರೋಗವುಳ್ಳವನ ಕಣ್ಣಿಗೆ ಯಾವಾಗಲೂ ಕತ್ತಲು ಮುಸುಕಿರುತ್ತದೆ ಆ ಕತ್ತಲೆ ತಿಳಿಯಾಗಿ ಬೆಳಗದಲ್ಲದೆ ಮುಂದಿನ ದಾರಿ ಅಸಾಧ್ಯ. “ಕೂಡಲಸಂಗಯ್ಯನೆತ್ತ ನೀನೆತ್ತ ಮರುಳೇ” ಎನ್ನಿಸಿಕೊಳ್ಳಬೇಕಾಗುವದು. ತನುವಿನ ಕೋಪ ತನ್ನ ಹಿರಿಯತನದ ಕೇಡು. ಮನದ ಕೋಪ ತನ್ನ ಅರಿವಿನ ಕೇಡು. ಅದು ಮನೆಯೊಳಗಿನ ಕಿಚ್ಚಿನಂತೆ. ಮನೆಯನ್ನೇ ಸುಡುವುದಲ್ಲದೆ ನೆರೆಮನೆಯನ್ನು ಸುಡಲಾರದು. ರೋಗ ಪರೀಕ್ಷೆಯಾದ ಮಾತ್ರಕ್ಕೆ ಆರೋಗ್ಯವುಂಟಾಗುವದಿಲ್ಲ. ರೋಗ ಪರೀಕ್ಷೆಯು ನಿಷ್ಪ್ರಯೋಜನದ ಕೆಲಸವೆಂದಲ್ಲ. ಅಷ್ಟು ಕೆಲಸವಾದರೆ ಅರ್ಧ ಭಾರವಿಳಿದಂತೆಯೇ ಸೈ. ಬಿರಣಿಯುಸಾಯ್ದಿಟ್ಟಂತಾಯ್ತು ಆ ಬಳಿಕ ಅಚ್ಚುಕಣ್ಣಾವ ಕೆಲಸ. ಅಲ್ಲಿ ದೇವನೊಲುಮೆ ಹುಟ್ಟಿ ಕೈಗಳಿಗೆ ಅತುಲಶಕ್ತಿಯನ್ನೀಯಲು ಬರುವದು ಕಿರಿಯ ಪ್ರಯತ್ನಕ್ಕೆ ಅಮಿತ ಸಾಹಸದ ಸಾಮರ್ಥ್ಯವನ್ನು ಸಲ್ಲಿಸಲು ನಿಲ್ಲುವದು ಆಗ ಭಕ್ತವಾಣಿ — “ನೀನೊಲಿದರೆ ಕೊರಡು ಕೊನರುವದಯ್ಯ.” ಎಂದು ಹಾಡತೊಡಗುವದು.

## ಆರೋಗಣೆ-ಪ್ರಸಾದ

ಲಿಂಗಪೂಜೆ ಅಥವಾ ದೇವಪೂಜೆಯಾದ ಮೇಲೆ ಮಾಡಿದ ಅಡಿಗೆ ನೈವೇದ್ಯವಾಗಬೇಕಷ್ಟೇ? ನೈವೇದ್ಯವೆಂದರೆ ಅಂಗದಿಚ್ಛೆಗೆ ತಿನ್ನುವ ಕೂಳಲ್ಲ- ದಾಸೋಹಕ್ಕೆಂದು ಕೈಕೊಂಡ ಕಾಯಕದಿಂದ ಗಳಿಸಿದ ಧಾನ್ಯಾದಿಗಳಿಂದ ಸಾತ್ವಿಕರಿಂದ ಸಿದ್ಧವಾದ ಪರಿಶುದ್ಧವೂ ಪವಿತ್ರವೂ ಆದ ಆಹಾರವೇ ನೈವೇದ್ಯಕ್ಕೆ ಅಣಿಗೊಳ್ಳುವುದು ಕ್ರಮಪ್ರಾಪ್ತವಾದದ್ದು. ತನ್ನ ದುಡಿಮೆಗೆ ಪ್ರಾಪ್ತವಾದ ಆಹಾರವು ರಾಜಾನ್ನವಿರಲಿ ಕದನ್ನವಿರಲಿ

ಅದನ್ನು ತನ್ನಿಷ್ಟದೈವಕ್ಕೆ ಸಮರ್ಪಿಸಿದಲ್ಲದೆ ಸಜ್ಜನರು ಒಡಲಿಗುಣಿಸರು. ಕಾಯಕದಲ್ಲಿ ಫಲಾಶೆಯು ಲೇಶವಾಗಿದ್ದರೂ ಪ್ರತಿಫಲಕ್ಕೆ ಗರ್ವಲೇಶವಾಗುವದೆಂದೂ, ಸದಾ ಸಾಹಿತ್ಯದಿಂದ ಅಡಿಗೆ ಅಣಿಪಡಿಸುವಾಗ ಅಡಿಗೆಯವರ ಮನೋಮಾಲಿನ್ಯವು ಎಡೆಗೆ ತಗಲುವದೆಂದೂ ಹೇಳುತ್ತಾರೆ. ಹೀಗೆ ಅಟ್ಟಡಿಗೆಯು ಒಂದು ಬಗೆಯಿಂದ ವಿಷವೇ ಆಗಿರುವದಂತೆ. ಅಂಥ ವಿಷವನ್ನು ಮಾನವರಾದ ನಮ್ಮ ನಿಮ್ಮಂಥವರು ತಿಂದು ದಕ್ಕಿಸಿಕೊಳ್ಳಬಲ್ಲೆವೇ? ಮಾಡಿಟ್ಟ ಅಡಿಗೆ ವಿಷವೇ ಆಗಿಬಿಟ್ಟರೆ ತಿನ್ನಲಿಕ್ಕೇನಿದೆ ಬೇರೆ? ಇದಕ್ಕೇನಾದರೂ ಉಪಾಯವನ್ನು ಯೋಜಿಸಲೇಬೇಕಷ್ಟೇ? ಶಿವನು ವಿಷಕಂಠನು. ವಿಷದಕ್ಕಿಸಿಕೊಂಡು ನಂಜುಂಡನೆನಿಸಿದ್ದಾನೆ. ಅವನೇ ವಿಷವನ್ನು ದಕ್ಕಿಸಿಕೊಳ್ಳಲಿಕ್ಕೆ ಸಮರ್ಥನು. ಮೊದಲ ತುತ್ತಿನ ವಿಷವನ್ನು ನಂಜುಂಡನಿಗೆ ನೈವೇದ್ಯ ಮಾಡಿದ್ದಾರೆ. ಉಳಿದ ಉಚ್ಚಿಷ್ಟಾನ್ನವೆಲ್ಲವೂ ಪ್ರಸಾದವಾಗುವದು ಆ ಪ್ರಸಾದವನ್ನು ಸೇವಿಸಿದವನು ಅಮರನಾಗಬಲ್ಲನು. ಅಂತೆಯೇ ಬಸವಣ್ಣನವರು "ಅಟ್ಟಡಿಗೆಯು ವಿಷವನು ನಿಮಗೆ ಕೊಟ್ಟಲ್ಲದೆ ಉಣ್ಣೆನೆಂಬ ಭಾಷೆ" ತೊಟ್ಟಿದ್ದರು. ಈ ವಿದ್ಯೆಯನ್ನವರು ಕೆಂಭಾವಿಯ ಭೋಗಣ್ಣನಲ್ಲಿ ಕಲಿತವರಂತೆ. ಇರಲಿ. ಲಿಂಗಪೂಜೆಯಾಗುವ ಹೊತ್ತಿಗೆ ನಂಜುಂಡನಾದ ಶಿವನೆಲ್ಲಿ ಸಿಗಬೇಕು? ಅವನನ್ನು ಇನ್ನೆಲ್ಲಿಯೂ ಅರಸುವ ಕಾರಣವಿಲ್ಲ. ಅಂಗೈಯಲ್ಲಿಯೇ ಬಂದು ನೆಲಸಿರುತ್ತಾನೆ. ಇಷ್ಟಲಿಂಗದ ರೂಪದಲ್ಲಿಯೇ ನಾವು ಶಿವನನ್ನು ಕಾಣುವೆವು. ಇಷ್ಟಲಿಂಗಕ್ಕೆ ಅರ್ಪಿಸುವುದೆಂದರೆ ಶಿವನಿಗೆ ಸಮರ್ಪಿಸಿದಂತೆಯೇ ಆಗುವದು. ಅಟ್ಟಡಿಗೆಯಲ್ಲಿ ವಿಷ ಕಾಣಿಸುವುದೂ, ಆ ವಿಷವನ್ನು ಶಿವನಿಗರ್ಪಿಸಿ ಪ್ರಸಾದವನ್ನಾಗಿ ಮಾರ್ಪಡಿಸುವುದೂ ಎಲ್ಲರಿಗೂ ಸಹಜದ ಮಾತಲ್ಲ ಅದರ ಮನವರಿಕೆಯಾದಾಗ ಅದರ ಮಹತ್ವವು ಕಂಡುಬರುತ್ತದೆ. ಮಹತ್ವವು ಕಂಡು ಬರದಿದ್ದರೆ ಉಪಾಯದ ಅಗತ್ಯವೂ ಆಗತ್ಯವು ಅಳವಡದಿದ್ದರೆ ನಿಯಮಪಾಲನದ ಪ್ರಶ್ನವೂ ತಲೆದೋರಲಾರವು. ಅಂಥ ನಿಲವಿಗೆ ಬಂದಾಗ ಬಸವಣ್ಣನವರು "ಲಿಂಗಮುಖದಿಂದ ಬಂದ ಪ್ರಸಾದವಲ್ಲದೆ ಕೊಂಡೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಲಿಂಗಾರ್ಪಿತವಲ್ಲದೆ ಉದಕವ ಮುಕ್ಕಳಿಸಿದಡೆ ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯ. ಲಿಂಗಾರ್ಪಿತವಲ್ಲದೆ ಹುಲ್ಲು ಕಡ್ಡಿಯ ಕೊಂಡರೆ ನಾಬಲ್ಲೆ ಮುಂದೆ ಘನ ಘೋರ ನರಕ ವೆಂಬುದ .... ಕಡೆಮುಟ್ಟಿಸದಿರ್ದಡೆ

ತಲೆ ಹಿಂತ ತಲೆಸಂಡ ಕೂಡಲಸಂಗಮದೇವ." ಎಂದು ಕಟ್ಟುನಿಯಮವನ್ನು ಕೈಕೊಂಡಿದ್ದಾರೆ. ಅನ್ನ-ನೀರುಗಳ ಮಟ್ಟಿಗೇ ಈ ವ್ರತವು ಪಾಲಿಸಲ್ಪಡದೆ ಮುಂದೆ ನಡೆನುಡಿಗಳೆಲ್ಲವುಗಳಲ್ಲಿಯೂ ವ್ಯಾಪಿಸಿಕೊಂಡಿದೆ. "ಲಿಂಗವಿಲ್ಲದೆ ನಡೆವರ, ಲಿಂಗವಿಲ್ಲದೆ ನುಡಿವರ, ಲಿಂಗವಿಲ್ಲದೆ ಉಗುಳ ನುಂಗಿದರೆ ಅಂದಂದಿಗೆ ಕಿಲ್ಬಿಷವಯ್ಯ." ಲಿಂಗಗೂಡಿದ ದುಡಿಮೆ ಲಿಂಗಗೂಡಿದ ಗಳಿಕೆ, ಲಿಂಗಗೂಡಿದ ನುಡಿ, ಲಿಂಗಗೂಡಿದ ವ್ಯವಹಾರ ಸಾಗಿದ ಬಳಿಕ, ಲಿಂಗಗೇಡಿಗಳೊಡನೆ ಲೋಕವ್ಯವಹಾರವನ್ನು ಎಂತು ಸಾಗಿಸುತ್ತರು? ಆ ವ್ಯವಹಾರವೇ ಕೂಡದೆಂದಿದ್ದಾರೆ ಬಸವಣ್ಣನವರು. ಕೊಡುಕೊಳ್ಳುವುದು ಸಹ ವೃಷಭಕ್ತರೊಡನೆಯೇ ಸಾಗಬೇಕಂತೆ. ಕೈಗಡ ಒಯ್ದು ಬಸವೆ ವೃಷಭಕ್ತನಿಂದ ಪಡೆದಿದ್ದರೂ ಕೇಡಿಲ್ಲ. ಆ ಒಡವೆ ಸಾರ್ಥಕನದ ರೀತಿಯಲ್ಲಿಯೇ ವ್ಯಯಗೊಳ್ಳುವದೆಂದು ಅವರ ನಂಬಿಕೆ "ಹಡದೊಡವೆ ವಸ್ತುವನು ವೃಷಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು. ಬಂದರೊಂದು ಲೇಸು. ಬಾರದಿದ್ದರೆರಡು ಲೇಸು. ಅಲ್ಲಿದ್ದಡೆಯೂ ಲಿಂಗಕ್ಕೆ ಬೋನ. ಇಲ್ಲಿದ್ದಡೆಯೂ ಲಿಂಗಕ್ಕೆ ಬೋನ. ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ ಬಂದೀತೆಂಬ ಹರಿಣಾಮವಿಲ್ಲ. ಬಾರದೆಂಬ ದುಃಖವಿಲ್ಲ. ಇದು ಕಾರಣ ಕೂಡಲಸಂಗಮದೇವ ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು." ಇರಲಿ. ಲಿಂಗಕ್ಕೆ ಸಲ್ಲಿಸಿದ ಬೋನದ ಮೊದಲ ತುತ್ತಿನ ವಿಷವು ಲಿಂಗಸ್ಪರ್ಶದಿಂದ ಪ್ರಸಾದವಾದ ಬಳಿಕ, ಅದನ್ನು ಪ್ರಸಾದವೆಂಬ ಎಚ್ಚರಿಕೆಯಿಂದ ಉಣ್ಣದಿದ್ದರೆ ಏನು ಪ್ರಯೋಜನವಾದೀತು? "ನಂಬಿದರೆ ಪ್ರಸಾದ. ನಂಬದಿರ್ದಡೆ ವಿಷವು." ಅದನ್ನು ಅಲಕ್ಷಿಸುವುದೂ, ಉಳಿಸಿಚೆಲ್ಲುವುದೂ ಅಪರಾಧದ ಕೆಲಸಗಳೇ. ಯಾಕೆಂದರೆ "ತುಡುಕಬಾರದು ನೋಡಾ ಲಿಂಗನ ಪ್ರಸಾದ, ಸಂಗನ ಪ್ರಸಾದ. ಕೂಡಲಸಂಗನ ಪ್ರಸಾದ ಸಿಂಗಿಕಾಳಕೂಟವಿಷವು." ಆದ್ದರಿಂದ ಪರಿಣಾಮ ತಪ್ಪಿದರೆ ರಸಾತಳಕ್ಕಿಳಿಯುಬೇಕಾದೀತು! ಪ್ರಸಾದವದು! ಎಚ್ಚರ! ನಾಲಿಗೆಯೇ ಒಸಗೆ ನುಡಿ, ಶಿವಪ್ರಸಾದ ಸ್ವೀಕರಿಸು! ಅದಕ್ಕೆಂತಲೇ ಬಸವಣ್ಣನವರು —"ಮೌನದಲುಂಬುವುದು ಆಚಾರವಲ್ಲ. ಲಿಂಗಾರ್ಪಿತ ಮಾಡಿದ ಬಳಿಕ ಸಾತ್ತಿಗೊಮ್ಮೆ ಶಿವಶರಣು ಎನುತಿರಬೇಕು." ಎಂಬ ಕಟ್ಟಳೆಯನ್ನು ಹೇಳಿ ಬಿಡದೆ "ಕೂಡಲಸಂಗನ ನೆನೆವುತ್ತ ಉಂಡರೆ ಕರಣವೃತ್ತಿಗಳು ಅಡ

ಗುವವು." ಎಂದು ಅಮೋಘವಾದ ಪರಿಣಾಮವನ್ನು ಹೇಳಿಕೊಟ್ಟಿದ್ದಾರೆ. ಕರಣಗಳೆಂದರೆ ತ್ರಿಕರಣಗಳು — ದೇಹ ಮನ ವಾಕು. ದೈಹಿಕ ವೃತ್ತಿಗಳೆಂದರೆ ಆಲಸ್ಯ ಹಾಗೂ ಅಲ್ಪತನ ಹೀನತನ ಎಂಬ ಆತ್ಮಶಾಸ್ಸರತೆ. ಮನದ ವೃತ್ತಿಗಳೆಂದರೆ ತರ್ಕ, ಕಲ್ಪನೆ, ವಿಚಾರ, ನೆನಹು ಮೊದಲಾದ ಸೂಜಿಯಿಂದ ಹಿಮಾಲಯವನ್ನು ಅಗಿಯುವ ಸಾಹಸ. ಮಾತಿನ ವೃತ್ತಿಯೆಂದರೆ — ಅಲ್ಲದ್ದನ್ನ, ಅಲ್ಲದಷ್ಟು, ಅಲ್ಲದಷ್ಟೊತ್ತು ಆಡುವುದು. ಆಹಾರವನ್ನು ಸ್ವಾಸ್ಥ್ಯಕ್ಕಾಗಿ ಬೇಡದೆ ಸವಿಗಾಗಿ ಬೇಡುವುದು. ಈ ಕರಣವೃತ್ತಿಗಳು ನಮ್ಮಲ್ಲಿಲ್ಲವೆಂದು ಕ್ಷಣ ಹೊತ್ತು ಯೋಚಿಸಿ ನೋಡೋಣ. ಆಗ ನಮ್ಮ ನಿಲವು ಎಲ್ಲಿಗೆ ಏರುತ್ತದೆ? ಅಜರಾಮರ ಪುರುಷೋತ್ತಮರಾಗದಿದ್ದರೂ ಪೌರುಷವುಳ್ಳವರಾದರೂ ಆದಂತೆ ತೋರಿ ಬರುವದಿಲ್ಲವೇ? ಹಾಗಾದರೆ ಕರಣವೃತ್ತಿಗಳು ಅಡಗುವ ಉಪಾಯವನ್ನು ಮಾಡಬಾರದೇಕೆ? ಕೆಲವರು ಕರಣವೃತ್ತಿಗಳನ್ನು ಗಮನಿಸಿಲ್ಲ. ಗಮನಿಸಿದ ಕೆಲವರು ಅವನ್ನು ಅಡಗಿಸುವ ಉದ್ದಿಮೆಯನ್ನು ಕೈಕೊಳ್ಳದೆ, ಅವನ್ನು ಕಳಕೊಳ್ಳುವದಕ್ಕಾಗಿ ಹೋರಾಟ ನಡಿಸಿದ್ದಾರೆ. ಕಳಕೊಳ್ಳುವುದು ದುಸ್ಸಾಧ್ಯವೆನ್ನುವದಕ್ಕಿಂತಲೂ ಅಸಾಧ್ಯವೆಂದೇ ಹೇಳಬಹುದು. ಆ ಹೋರಾಟದಲ್ಲಿ ಕಂಡು ಬರುವುದು ಮಾನವಪ್ರಯತ್ನ ಬೇರೆ ಅದು ತೀರ ಅಲ್ಪ ಶಕ್ತಿಯುಳ್ಳದ್ದು. ಆದರೆ ಕರಣವೃತ್ತಿಗಳನ್ನು ಅಡಗಿಸುವ ದಾರಿಯಲ್ಲಿ ದೈವೀ ಪ್ರಯತ್ನವು ಕಾರ್ಯಕಾರಿಯಾಗುತ್ತದೆ. ಅದು ಹಾಗೆ ಕಾರ್ಯಕಾರಿ ಆಗುವುದಕ್ಕೆ "ತುತ್ತು ತುತ್ತಿಗೊಮ್ಮೆ ಶಿವ ಶರಣು" ಎನ್ನುತ್ತಿರುವುದೇ ಪ್ರಾರ್ಥನೆಯಾಗಬಲ್ಲದೆಂದು ತೋರುತ್ತದೆ. ಲಿಂಗಕ್ಕರ್ಪಿಸಿದರೆ ಲಿಂಗಪ್ರಸಾದವುಂಟಾಗುವಂತೆ, ಜಂಗಮಕ್ಕರ್ಪಿಸಿದರೆ ಜಂಗಮಪ್ರಸಾದವೂ ಉಂಟಾಗುತ್ತದೆ. ಅದೂ ಶಿವನಿಗೇ ಸಲ್ಲತಕ್ಕದಾಗಿದೆ. "ಜಂಗಮಕ್ಕೆ ನೀಡಿ, ಜಂಗಮಪ್ರಸಾದ ಕೊಂಡಡೆ ನಿಮಗರ್ಪಿತ ಕಾಣಾ ಕೂಡಲಸಂಗಮದೇವಾ." ಎಂದಿದ್ದಾರೆ. ಬಸವಣ್ಣನವರು. ಏಕೆಂದರೆ ಜಂಗಮರೆನ್ನುವವರು ಪರಮಾತ್ಮವೃಕ್ಷಕ್ಕೆ ಕೆಳದಬೇರುಗಳಿದ್ದ ಹಾಗೆ ಬೇರುಗಳಿಗೆ ನೀರುಣಿಸಿ, ಗೊಬ್ಬರ ಕಟ್ಟಿದರೆ ತುದಿಯಲ್ಲಿ

ವೃಕ್ಷವು ಚಿಗಿತು, ಹೂತು ಫಲಿಸುವದಿಲ್ಲವೇ? * ಕಾಯಕಷ್ಟಗೊಳಿಸಿ ದಾಸೋಹ ಭಾವದಿಂದ, ಶಿವ ಸಮರ್ಪಣೆಯ ಬುದ್ಧಿಯಿಂದ ಸಿದ್ಧಗೊಳಿಸಿದ ಅನ್ನವನ್ನು ಹಾದಿಹೋಕರಿಗೆ ಹಾಕಿದರೆ ಸಾರ್ಥಕವಾಗಲಾರದು. ಅದು ಶಿವನಿಗೇ ಸಲುವಂತಾಗಬೇಕಾದರೆ, ಜಂಗಮಕ್ಕೆ ಅರ್ಪಿತವಾಗಬೇಕು ಹಾಗಾಗದಿದ್ದರೆ ಬೊಡ್ಡಿಯಿಂದ ತುದಿಯವರೆಗೆ ಎಲ್ಲವೂ ವ್ಯರ್ಥವಾಗುವದು. "ಹೊನ್ನನೇಗಿಲಲುತ್ತು ಎಕ್ಕೆಯ ಬೀಜವ ಬಿತ್ತುವರೇ? ಕರ್ಪುರದ ಮರನ ಕಡಿದು ಕಳ್ಳಿಗೆ ಬೇಲಿಯನಿಕ್ಕುವರೇ? ಶ್ರೀಗಂಧದ ಮರವ ಕಡಿದು ಬೇವಿಂಗಡೆಯನಿಕ್ಕುವರೇ? ನಮ್ಮ ಕೂಡಲಸಂಗನ ಶರಣರಿಗಲ್ಲದೆ ಬೇರೆ ಇಚ್ಛಾಭೋಜನವನಿಕ್ಕಿದರೆ ಕಿಚ್ಚಿನೊಳಗೆ ಉಚ್ಚಿಯ ಹೊಯ್ದು ಹವಿಯ ಬೆಳೆದಂತಾಯಿತ್ತು." ಜಂಗಮಕ್ಕೆ ಅರ್ಪಿತವಾಯಿತ್ತು. ಅದು ಶಿವನಿಗೆ ಸಂದಿತು. ಉಳಿದುದು ಪ್ರಸಾದವಾಯಿತ್ತು. ಪ್ರಸಾದವನ್ನು ಭಕ್ತಿಗೊಮ್ಮ ಶಿವಶರಣೆನ್ನುತ್ತ ಭುಂಜಿಸುವುದಾಯಿತ್ತು. ಆದರಿಂದ ಕರಣವೃತ್ತಿಗಳು ಅಡಗುವವಾದರೆ ಅದಕ್ಕೊಂದು ಕಾಲಾವಧಿ ಬೇಕು. ರೋಗವಾಸಿಯಾಗುವ ವರೆಗೆ ತಕ್ಕೊಳ್ಳುವ ಔಷಧಿಯ ವರ್ಗಕ್ಕೆ ಸೇರಿದ ಉಪಾಯವದೆಂದು ಸಂಶಯವುಂಟಾಗುವುದೂ ಸಹಜ. ಕೆಲವೊಂದು ಅವಧಿಯಲ್ಲಿ, ಉಪಾಯಯೋಜಿಸಲಾರಂಭಿಸಿದ ಸ್ವಲ್ಪದರಲ್ಲೇನಾದರೂ ಫಲಪರಿಣಾಮಗಳು ಕಂಡು ಬರುವಂತಿದ್ದರೆ ಹೇಳಿರೆಂದು ನಗದು ವ್ಯಾಪಾರಿಗಳಾದ ಬುದ್ಧಿವಂತರು ಕೇಳಬಹುದಾಗಿದೆ. ಅವರು ಬಸವಣ್ಣನವರು ಕೈಯೆತ್ತಿ ಸಾರಿದ ಪ್ರಸಾದ ಪ್ರಯೋಜನವನ್ನು ಚೆನ್ನಾಗಿ ಅರಿತು ಮನವರಿಕೆ ಮಾಡಿಕೊಳ್ಳಲಿ. ಪ್ರಸಾದ ಸೇವನೆಯಿಂದ ತಮಗೆ ಯಾವ ಯಾವ ಸೌಕರ್ಯಗಳುಂಟಾದವೆಂದು ಅವರೇ ಹೇಳಿದ್ದೇನಂದರೆ—

---

* ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆರೆದಡೆ, ಮೇಲೆ ಪಲ್ಲವಿಸಿತ್ತು ನೋಡಾ! ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದಡೆ ಮುಂದೆ ಸಕಳಾರ್ಥನೀವನು. ಆ ಜಂಗಮವ ಹರನೆಂದು ಕಂಡು, ನರನೆಂದು ಭಾವಿಸಿದಡೆ ನರಕ ತಪ್ಪದು ಕಾಣಾ ಕೂಡಲ ಸಂಗಮದೇವಾ.

“ಹಸಿವು, ತೃಷೆ, ನಿದ್ರೆ, ವಿಷಯಂಗಳ ಮರೆದೆ. ನೀವೆ ಕಾರಣ. ಕಾಮಕ್ರೋಧ ಲೋಭ, ಮೋಹ, ಮದ, ಮತ್ಸರಂಗಳ ಮರೆದೆ. ನೀವೆ ಕಾರಣ. ಕೂಡಲಸಂಗಮದೇವ ಕೇಳಯ್ಯ, ನಿಮ್ಮ ಶರಣರಿಗೆ ಅಮ್ಮಿಯನವಾದರೆ ಎನಗೆ ತೃಪ್ತಿಯಾಯಿತ್ತು.”

ನಿಜವಾದ ಪ್ರಸಾದ ಸಿಕ್ಕಾಗ ಪ್ರಸಾದವೆಂಬ ನಂಬಿಗೆಯಿಂದ ಸೇವಿಸಿದವನು ಒಂದೆರಡೇ ದಿನಗಳಲ್ಲಿ ಹಸಿವೆಯ ಹಪಹಪಿಯನ್ನೂ, ತೃಷೆಯ ತಡವರಿಕೆಯನ್ನೂ, ನಿದ್ರೆಯ ಸುಳಿಹನ್ನೂ ಮರೆಯಬಹುದೆಂದು ಅನುಭವ ಪಡೆಯಬಲ್ಲರು. ಪ್ರಸಾದ ಸ್ವೀಕಾರದಿಂದ ಈ ಪ್ರಯೋಜನಗಳೆಲ್ಲವೂ ಒದಗಬಹುದೆಂದು ನಂಬಿಕೆ ಹುಟ್ಟುತ್ತ ಬರುವದು. ಆದರೆ ಸಿದ್ಧಗೊಳಿಸಿದ ಭೋಜನದೆಡೆಯು ಪ್ರಸಾದಗೊಳಿಸುವ ಕಲೆಯೂ ಒಂದು ಕೈವಶವಾಗಲಿಕ್ಕೆ ಬೇಕು. ಅದು ಸಾಧಿಸುವವರೆಗೆ ಭೋಜನದೆಡೆಯು ಪ್ರಸಾದವೇ ಅಲ್ಲ. ವಿಷದ ಬುತ್ತಿ!

## ನಗುವುದು ನುಡಿವುದು–ಶಿವಭಕ್ತರೊಡನೆ.

ನಗೆಯೆನ್ನುವುದೇ ಅಜ್ಞಾನವಿಲಾಸ. ಪರರ ಅಜ್ಞಾನವು ಕಂಡು ಬರುವಷ್ಟು ತೀವ್ರವಾಗಿ ತಮ್ಮ ಅಜ್ಞಾನವು ಕಂಡುಬರುವದಿಲ್ಲ. ಅಜ್ಞಾನಿಯ ನಡಾವಳಿಯು ಕುಡುಕನ ಕುಣಿತದಂತೆ ಹುಚ್ಚಾಬಟ್ಟೆಯಾಗಿ ಕಾಣಿಸುವದು. ಅಂಥ ದೃಶ್ಯವನ್ನು ಕಂಡರೆ ನಗೆಬರುವುದು; ಆ ದೃಶ್ಯವನ್ನು ಬಣ್ಣಿಸಿದಾಗ ನಗೆ ಸೂಸುವದು. ಸಾಮಾನ್ಯ ಜನರು, ತನ್ನ ಮುಖಕ್ಕೆ ಮಸಿಬಳಕೊಂಡು ಪರರ ಹಣೆಯ ಸಾದನ್ನು ಆಡಿಸಾಡಿದಂತೆ ಅನ್ನಿಗರ ಕುಂದನ್ನೇ ಭೂತಗನ್ನಡಿ ಹಿಡಿದು ನೋಡುವರು. ಮಹಾತ್ಮರೂ ಮಹಾಪುರುಷರೂ ಜನಜಂಗುಳಿಯಲ್ಲಿ ತಾನೊಬ್ಬನೆಂದು ತಿಳಿದು, ಕಳೆಗೆ ನಿಲ್ಲುವ ಬುದ್ಧಿವಂತಿಕೆಯಿಂದ—ಸನ್ನಿವೇಶದಿಂದ ರೇಷೆರೇಷೆಯನ್ನು ಕಂಡುಹಿಡಿದು ನಗೆಗೀಡು ಮಾಡುತ್ತಾರೆ. ಸಜ್ಜನರ ಸಂಗದಲ್ಲಿದ್ದರೆ ಈ ಬುದ್ಧಿಯು ಬಲಿಯುತ್ತದೆ; ದುರ್ಜನರ ಸಭೆಯಲ್ಲಿ ಪರನಿಂದೆಯೇ ಸಾಗಿರುತ್ತದೆ. ಪರನಿಂದೆ ಆತ್ಮಘಾತುಕವಾದದ್ದು; ಸ್ವಾಪಹಾಸ್ಯವು ಉನ್ನತಿಪರವಾದದ್ದು. ಮಾನವನು ಸಹವಾಸಪ್ರಿಯನು. ಅವನು ಯಾವ ಮಟ್ಟದಲ್ಲಿದ್ದರೂ ಅವನಿಗೆ ಒಡನಾಡಿಗಳು

ಬೇಕು. ಮಹಾಪುರುಷರಿಗೆ ಸತ್ಸಂಗಬೇಕು. ಸತ್ಸಂಗದಿಂದ ತನ್ನಲ್ಲಿಯ ತಿಳವಿನ ಕೊರತೆ ಅರದಿ, ಪರಸ್ಪರ ಸಂಸರ್ಗದಿಂದ ಕೆಂಡವಾಗುವುದಕ್ಕೆ ಅನುಕೂಲತೆಯುಂಟಾಗುತ್ತದೆ. "ನಗುವುದು ನುಡಿವುದು ಶಿವಭಕ್ತರೊಡನೆ" ಎಂದು ಬಸವಣ್ಣನವರು ಕಟ್ಟಳೆ ಮಾಡಿಕೊಂಡಿದ್ದರಲ್ಲಿ ಸತ್ಸಂಗವಲ್ಲದೆ ವಿಶ್ರಾಂತಿ, ವಿಚಾರವಿನಿಮಯ, ಹಾದಿತಪ್ಪದಿರುವಿಕೆ ಮುಂತಾದ ಸಂಗತಿಗಳನ್ನು ಅವರು ಲಕ್ಷಿಸಿರಲಿಕ್ಕೆ ಬೇಕು. ಅವರ ವಚನಗಳಲ್ಲಿ ಕಂಡುಬರುವ ನಗೆಯು ನೊರೆಯು, ಆತ್ಮಸಂಶೋಧನೆಯ ಧಾವತಿಯಲ್ಲಿ ಹೊರಟ ಕಿಲ್ಬಿಷವೇ ಸರಿ. ಅಡ್ಡತಿಡ್ಡ ಜಿಗಿದಾಡುವ ಕೋಡಂಗಿಗಳನ್ನು ಬಯ್ದಂತಿದ್ದರೂ ತಮ್ಮ ಕೋಡಂಗಿತನವನ್ನೂ ಅವರಲ್ಲಿ ಎಣಿಸದೆ ಇರತಕ್ಕವರಲ್ಲ. ಯಾಕೆಂದರೆ ಅವರು ನ್ಯಾಯನಿಷ್ಠುರಿ; ದಾಕ್ಷಿಣ್ಯಪರರಲ್ಲ. ದಾಕ್ಷಿಣ್ಯಪರರಲ್ಲದ ನ್ಯಾಯನಿಷ್ಠುರಿಗೆ ತನ್ನವರೇನು ಅನ್ನಿಗರೇನು? ತಾನು ಹೆಚ್ಚಿನವನಲ್ಲ; ಅನ್ನಿಗರು ಕಡಿಮೆಯವರಲ್ಲ. ಅವರ ವಚನಗಳಲ್ಲಿ ಹಾಸು ಹೊಕ್ಕಾಗಿರುವ ಉಪಮಾನಗಳು, ಉದಾಹರಣೆಗಳು, ದೃಷ್ಟಾಂತಗಳು ನಗೆಯ ಜುಳುಕನ್ನು ತಳೆದು ಮೈದಾಳುತ್ತವೆ. "ಕಲ್ಲನಾಗರ ಕಂಡರೆ ಹಾಲನೆರೆವರು; ದಿಟನಾಗರ ಕಂಡರೆ ಕಲ್ಲನೆಸೆವರು" "ನಿಮ್ಮ ನರಿಯುದ ಕಾಮಣ ಕೈಯಲ್ಲಿ ಹುಲ್ಲು. ನಿಮಗೆರಗದ ಕಾರಣ ಕೊರಳಲ್ಲಿ ನೇಣು." ಈ ವಾಕ್ಯಗಳು ಉತ್ತಮ ಪುರುಷದವಲ್ಲವಾದರೂ ಅರ್ಥದಲ್ಲಿ ಉತ್ತಮ ಪುರುಷವೂ ಒಳಗೊಂಡಿದೆ. ತಾಮ್ರ-ಹಿತ್ತಾಳೆಯ ಮೂರ್ತಿಗಳನ್ನೂ, ಕಲ್ಲು-ಕೆಸರಿನ ಗೊಂಬೆಗಳನ್ನೂ ಬಗುಲಿಯ ಮೇಲಿಟ್ಟು ಪೂಜಿಸುವವರ ಸೀಮಾಬದ್ಧವಾದ ತಿಳುವಳಿಕೆಯನ್ನು ಹಂಗಿಸುವ ನುಡಿಗಳು ಯಾವುವೆಂದರೆ— "ಅರಗು ತಿಂದು ಕರಗುವ ದೈವ; ಉರಿಯ ಕಂಡರೆ ಮುರುಟುವ ದೈವ; ಉರಿಯ ಕಂಡರೆ ಮುರುಟುವ ದೈವ; ಅವಸರ ಬಂದರೆ ಮಾರುವ ದೈವ; ಅಂಜಿಕೆ ಬಂದರೆ ಹೂಳುವ ದೈವ" ಹಾಗಾದರೆ ದೇವರಾರು? "ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ." ಪ್ರಭುದೇವರು ಹೇಳಿಕೊಳ್ಳುವ ಗುಹೇಶ್ವರನಾಗಲಿ, ಮಹಾದೇವಿಯಕ್ಕನು ನುತಿಸುವ ಚೆನ್ನಮಲ್ಲಿಕಾರ್ಜುನನಾಗಲಿ, ಸಿದ್ಧರಾಮನೊಲಿದ ಕಪಿಲಸಿದ್ಧಮಲ್ಲಿಕಾರ್ಜುನನಾಗಲಿ, ಬಸವಣ್ಣನವರ ದೃಷ್ಟಿಯಲ್ಲಿ ದೇವರಲ್ಲವೆಂದಂತಾಯಿತೇ? ಈ ಶರಣರು ಕೀರ್ತಿಸಿದ ಹೆಸರುಗಳೆಲ್ಲ ಮೂರ್ತಿಯನಾಮಗಳಲ್ಲ; ತಮ್ಮ ಹೃದಯಕ್ಕೊಪ್ಪುವ ಹೆಸರುಗಳನ್ನವರು ಆರಿಸಿಕೊಂಡ

ದ್ದಾರೆ. ಆದರೆ ಅವರೆಲ್ಲರ ಧ್ಯಾನದೃಷ್ಟಿಯಲ್ಲಿ ಕಂಗೊಳಿಸುವ ದೇವನೊಬ್ಬನು. ಅವನು ತ್ರಿಮೂರ್ತಿಗಳಲ್ಲೊಬ್ಬನಾದ ಶಂಕರನಲ್ಲ; ಸಾಂಬಶಿವನಲ್ಲ. ಕೃಷ್ಣ-ವಿಷ್ಣುಗಳಂತೂ ಅಲ್ಲವೇ ಅಲ್ಲ. ಆದರೆ ಅವರು ಭಾವಿಸಿದ ದೈವತವು ಇನ್ನೆಂತಿರುವದು? ಕೆಳಗೆ ಕಾಣಿಸಿದ ಈ ವಚನದಲ್ಲಿ ಕೂಡಲಸಂಗನ ಸ್ವರೂಪವನ್ನು ಕಾಣಬಹುದಾಗಿದೆ.

"ಸಮುದ್ರ ಘನವೆಂಬೆನೇ? ಧರೆಯ ಮೇಲಡಗಿತ್ತು.
ಧರೆ ಘನವೆಂಬೆನೇ? ನಾಗೇಂದ್ರನ ಫಣಿಯ ಮೇಲಡಗಿತ್ತು.
ನಾಗೇಂದ್ರನ ಘನವೆಂಬೆನೆ? ಪಾರ್ವತಿಯ ಕಿರುಕುಣಿಕೆಯ ಮುದ್ರಿ
ಯಾಯಿತ್ತು.
ಅಂಥ ಪಾರ್ವತಿ ಘನವೆಂಬೆನೆ? ಪರಮೇಶ್ವರನರ್ಧಾಂಗಿಯಾದಳು.
ಅಂಥ ಪರಮೇಶ್ವರ ಘನವೆಂಬೆನೆ? ನಮ್ಮ ಕೂಡಲಸಂಗನ ಶರಣರ
ಮನದ ಕೊನೆಯ ಮೊನೆಯ ಮೇಲಡಗಿದನು."

(ಮುಂದುವರಿಯುವದು)

---

# ಆತ್ಮನಿವೇದನೆಯು.

( ಸಂಪಾದಕ. )

—{*}—

ಶಿವಾನುಭವ ಪತ್ರಿಕೆಗೆ ೨೩ ವರ್ಷಗಳು ಪೂರ್ತಿಯಾಗಿ ಈ ಸಂಚಿಕೆಯಿಂದ ಅದರ ೨೪ನೇ ವರ್ಷವು ಪ್ರಾರಂಭವಾಗುತ್ತದೆ. ಇದು ಎಂದಿನಂತೆ ವೀರಶೈವ ಸಂಸ್ಕೃತಿಯ ವಿಷಯಗಳನ್ನು ಪ್ರಕಾಶಪಡಿಸುತ್ತ ಬಂದಿರುತ್ತದೆ. ಈಚೆಗೆ ನಾವು ವೀರಶೈವೇತಿಹಾಸವನ್ನು ಪ್ರಕಾಶಪಡಿಸಬೇಕೆಂಬ ಉದ್ದೇಶದಿಂದ ಮುಖ್ಯವಾಗಿ ಮೊದಲಿನ ಕಾಲದಲ್ಲಿ ಆಗಿಹೋದ ಶಿವಶರಣರ ಚರಿತ್ರೆಗಳನ್ನು ಸಂಶೋಧಿಸಿ ಪ್ರಸಿದ್ಧಿಸುತ್ತ ಬಂದಿರುತ್ತೇವೆ. ಇದರಲ್ಲಿ ನಾವು ಶಿವಶರಣರ ಸ್ಥಳಗಳಾವವು ಅವರ ಕಾಲ ಇವುಗಳನ್ನು ಶಕ್ಯವಿದ್ದಷ್ಟು ಕಂಡುಹಿಡಿಯಲು ಯತ್ನಿಸುತ್ತಿದ್ದೇವೆ. ಈ ಚರಿತ್ರೆಗಳ ಬಗ್ಗೆ ಈ ವರೆಗೆ ಎರಡು ಭಾಗಗಳು ಪ್ರಕಟವಾಗಿದ್ದು ಈಗ ೩ನೇ ಭಾಗವು ನಡೆದಿರುತ್ತದೆ. ಈ ಚರಿತ್ರೆಗಳಲ್ಲಿ ನಾವು ಪವಾಡಗಳಿಗಿಂತ ಐತಿಹಾಸಿಕ ವಿಷಯಗಳಿಗೆ ಹೆಚ್ಚಿಗೆ ಲಕ್ಷವನ್ನು ಪೂರೈಸುತ್ತ ಬಂದಿದ್ದೇವೆ. ಇನ್ನುಮುಂದೆ ಬಸವೇಶ್ವರನ ಸಮಕಾಲೀನರಾದ ಮಹಾತ್ಮರ ಚರಿತ್ರೆಗಳನ್ನು ಪ್ರಕಟಿಸುತ್ತ ಹೋಗುವೆವು. ಈ ಗ್ರಂಥಗಳಲ್ಲದೆ ವಚನಶಾಸ್ತ್ರಸಾರ ಈ ಗ್ರಂಥದ ಕಡೆಯ ಭಾಗವನ್ನು ನಾವು ಇದರಲ್ಲಿ ಅಚ್ಚುಹಾಕುತ್ತಿದ್ದೇವೆ. ಇದು ಕೇವಲ ಆಚಾರ ವಿಷಯಕ ಗ್ರಂಥವಾಗಿದೆ.

ಈಪ್ರಕಾರ ವೀರಶೈವ ಸಂಸ್ಕೃತಿಯ ಸಂಶೋಧನೆಯ ಕಾರ್ಯವನ್ನು ನಾವು ಕೈಕೊಂಡಿದ್ದು ಇದರಲ್ಲಿ ವೀರಶೈವ ಮಹನೀಯರು ಎಂದಿನಂತೆ ನಮಗೆ ಸಹಾಯಕರಾಗಿ ಪತ್ರಿಕೆಯನ್ನು ಪೋಷಿಸುತ್ತ ಹೋಗಬೇಕೆಂದು ನಮ್ಮ ವಿನಂತಿ ಇದೆ.

ಈ ವರ್ಷ ನಮಗೆ ವಿಶೇಷ ಶರೀರಬಾಧೆಯುಂಟಾಗಿ ಹಾಸಿಕೆಯನ್ನು ಹಿಡಿಯಬೇಕಾದ್ದರಿಂದ ಪತ್ರಿಕೆಯ ಕಾರ್ಯದಲ್ಲಿ ನಮಗೆ ತಡೆಯುಂಟಾದದ್ದಕ್ಕೆ ವಿಷಾದಿಸುತ್ತೇವೆ. ಇದಕ್ಕೋಸ್ಕರ ವಾಚಕರ ಕ್ಷಮಾಪಣೆಯನ್ನು ನಾವು ಬೇಡಿಕೊಳ್ಳುತ್ತೇವೆ.

---

# ವೀರಶೈವ ಸಾಹಿತ್ಯದ ವೈಶಿಷ್ಟ್ಯ.

(ಲೇಖಕ: — ಮಧುಕರ)

ವೀರಶೈವ ಸಾಹಿತ್ಯವನ್ನು ಅದಕ್ಕೂ ಪೂರ್ವದ ಜೈನ ಸಾಹಿತ್ಯದೊಡನೆ ಮತ್ತು ಅದರ ತರುವಾಯ ತಲೆದೋರಿ ಅದರೊಡನೆ ಬೆಳೆದ ಬ್ರಾಹ್ಮಣ ಸಾಹಿತ್ಯದೊಡನೆ ಹೋಲಿಸಿ ನೋಡಿದರೆ ವೀರಶೈವ ಕವಿಗಳ ಸ್ವತಂತ್ರ ಪ್ರವೃತ್ತಿಯು ಅವರ ವೈಶಿಷ್ಟ್ಯವೆಂದು ಕಂಡು ಬರುತ್ತದೆ. ಜೈನ ಬ್ರಾಹ್ಮಣ ಕವಿಗಳೆಲ್ಲರು ಸಾಂಪ್ರದಾಯಿಕರಾಗಿ, ಅವರು ಎಲ್ಲಿಯೂ ಸ್ವಾತಂತ್ರ್ಯವನ್ನು ತೋರಿಸಿಲ್ಲವೆಂತಲ್ಲ ಆದಿ ಪಂಪರನ್ನರು ದುರ್ಯೋಧನನ ಪಾತ್ರವನ್ನು ರಚಿಸುವಲ್ಲಿ ಸ್ವಾತಂತ್ರ್ಯವನ್ನು ತೋರಿಸಿದರು. ಕುಮಾರವ್ಯಾಸನು ಸಂಸ್ಕೃತ ಭಾರತದ ಅನುವಾದಕನಲ್ಲ. "ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪಾರವಾಗುವದು" ಎಂದು ನಾವೆಲ್ಲರೂ ಅನ್ನುವಂತೆ ಸ್ವತಂತ್ರ ರೀತಿಯಲ್ಲಿ ಭಾರತವನ್ನು ರಚಿಸಿರುವನು. ಆದರೆ ವಸ್ತುಗಳನ್ನು ಆರಿಸುವಲ್ಲಿ ಜನ ಸಾಮಾನ್ಯದ ಭಾಷೆಯನ್ನು ಉಪಯೋಗಿಸುವಲ್ಲಿ ಕನ್ನಡ ಛಂದಸ್ಸುಗಳನ್ನು ನಿರ್ಮಿಸುವಲ್ಲಿ ಜನಜೀವನಕ್ಕೂ ಸಾಹಿತ್ಯಕ್ಕೂ ನಿಕಟ ಸಂಬಂಧವನ್ನು ಬೆಳೆಸುವಲ್ಲಿ ಸ್ವಾತಂತ್ರ್ಯ ಮಾರ್ಗಾನುಸರಣವೇ ಅವರ ವೈಶಿಷ್ಟ್ಯ.

ಜೈನ ಪುರಾಣ ಕಾವ್ಯಗಳಲ್ಲಿ ವಸ್ತುವೈವಿಧ್ಯವು ಸ್ವಲ್ಪವೂ ಕಂಡು ಬರುವದಿಲ್ಲ. ಎಲ್ಲ ಕಾವ್ಯಗಳಲ್ಲಿ ಜಂಬೂದ್ವೀಪ ವರ್ಣನೆ, ನಗರ ವರ್ಣನೆ ವನಕೇಳಿ ವರ್ಣನೆ ಜಲಕೇಳಿ ಮುಂತಾದ ಹವನೆಟ ವರ್ಣನೆಗಳು ಬರುವವು ಎಲ್ಲ ಪುರಾಣಗಳಲ್ಲಿಯು ವಸ್ತುಗಳು ಒಂದೇ ತರಹದವು. ಒಬ್ಬ ಅರಸನಿರುವನು ಅವನು ಅನೇಕ ಸ್ತ್ರೀಯರೊಡನೆ ಭೋಗಗಳನ್ನು ಸೇವಿಸುವದು, ಒಂದು ದಿನ ಕೆನ್ನೆಯ ನರೆಗೂದಲವನ್ನು ನೋಡಿಯಾಗಲಿ, ಉಲ್ಕಾಪಾತವನ್ನು ನೋಡಿಯಾಗಲಿ ಅಥವಾ ಸಿಡಿಲಿನಿಂದ ಬಿದ್ದ ವಟವೃಕ್ಷವನ್ನು ನೋಡಿಯಾಗಲಿ ವೈರಾಗ್ಯಪರನಾಗುವನು. ಆ ಮೇಲೆ ತಪಸ್ಸನ್ನಾಚರಿಸಿ ತೀರ್ಥಂಕರನಾಗಿ ಜನಿಸುವುದು. ಇಂದ್ರನು ಜಿನಶಿಸುವನ್ನು ಐರಾವತದ ಮೇಲೆ ಕೂಡಿಸಿಕೊಂಡು ಸ್ವರ್ಗಕ್ಕೊಯ್ಯುವದು. ಇತ್ಯಾದಿ ಎಲ್ಲ ಜೈನ ಪುರಾಣಗಳಲ್ಲಿ ಕಂಡು ಬರುವವು ಮತ್ತು ವೀರಶೈವ ಸಾಹಿತ್ಯವು ತಲೆದೋರುವ ಪೂರ್ವದಲ್ಲಿ ಬರೆದ ಜೈನ ಕಾವ್ಯಗಳೆಲ್ಲವೂ ಬರೆಯಲ್ಪಟ್ಟಿರುವುದು ಒಂದೇ ಒಂದು ಶೈಲಿಯಲ್ಲಿ. ಅನ-

ಚಂಪೂಶೈಲಿ. ಭಾಷೆ ಸಂಸ್ಕೃತ ಪರಭೂಯಿಷ್ಠವಾದುದು ಇವುಗಳನ್ನು ಓದಲು ಪಂಡಿತರೇ ಬೇಕು. ಅವರಿಗೂ ಕೂಡ ಶಬ್ದಕೋಶಗಳ ಸಹಾಯವಿಲ್ಲದೆ ಅರ್ಥವಾಗುವಂತಿಲ್ಲ.

ಈ ಜೈನ ಪುರಾಣಗಳೊಡನೆ ವೀರಶೈವ ಪುರಾಣಗಳನ್ನು ಹೋಲಿಸಿ ನೋಡುವಾ. ವೀರಶೈವ ಕವಿಗಳು ಚಂಪು ಕಾವ್ಯಗಳನ್ನು ರಚಿಸಬಲ್ಲ ಪಂಡಿತರಾಗಿದ್ದರೂ ಸಾಮಾನ್ಯ ಜನರ ಉದ್ಧಾರಕ್ಕಾಗಿ ಕನ್ನಡ ಛಂದಸ್ಸುಗಳಲ್ಲಿ ಮತ್ತು ಸರಳ ಭಾಷೆಯಲ್ಲಿ ಪುರಾಣ ಕಾವ್ಯಗಳನ್ನು ಬರೆದರು ಇದು ಅವರ ಸ್ವತಂತ್ರ ಪ್ರವೃತ್ತಿಯನ್ನು ತೋರಿಸುತ್ತದೆ ಷಟ್ಪದಿಯಲ್ಲಿ ಪುರಾಣ ಬರೆದವರಲ್ಲಿ ರಾಘವಾಂಕನು ಮೊದಲನೆಯವನು ಚಂಪೂ ಕಾವ್ಯಗಳನ್ನು ಜನಸಾಮಾನ್ಯಕ್ಕೆ ತಿಳಿಸಿ ಹೇಳುವದು ಕಠಿಣ ಆದರೆ ಷಟ್ಪದಿ ಕಾವ್ಯಗಳನ್ನು ಸರಾಗವಾಗಿ ಹಾಡಿ ಪಾಮರರಿಗೂ ಕೂಡ ಕಾವ್ಯಾಮೃತಾಸ್ವಾದವನ್ನುಣಿಸಿ ಕೊಡಬಹುದೆಂಬುದಕ್ಕೆ ಹಳ್ಳಿಗಳಲ್ಲಿ ಈಗಲೂ ನಡೆಯುತ್ತಿರುವ ಷಟ್ಪದಿ ಪುರಾಣ ಪ್ರವಚನಗಳೇ ಸಾಕ್ಷಿ. ಶಾಸ್ತ್ರಿಗಳು ಜನಸಾಮಾನ್ಯದೆದುರು ಓದುವ ಪುರಾಣಗಳೆಂದರೆ ಬಸವ ಪುರಾಣ, ಸಿದ್ಧರಾಮ ಪುರಾಣ, ರೇವಣಸಿದ್ಧೇಶ್ವರ ಪುರಾಣ ಮುಂತಾದವುಗಳು. ಆದರೆ ಪ್ರಭುಲಿಂಗ ನಿಜವಾದ ಪ್ರವಚನ ನಡೆದುದನು ಯಾರೂ ಕೇಳಿಲ್ಲ. ಮುಂದೆ ಷಟ್ಪದಿಯಲ್ಲಿ ಬರೆದ ಗದುಗಿನ ಭಾರತ ಮತ್ತು ಜೈಮಿನಿ ಭಾರತಗಳು ಲೋಕಪ್ರಿಯವಾಗಿವೆ. ಸಾಹಿತ್ಯವು ಪಂಡಿತನಿಗಷ್ಟೇ ಬೇಕಾದುದಲ್ಲ. ಪಾಮರರಿಗೂ ಸಾಹಿತ್ಯದ ಅವಶ್ಯಕತೆ ಇದೆ ಚಂಪೂಶೈಲಿಯನ್ನು ಬಿಟ್ಟು ಷಟ್ಪದಿಯನ್ನು ಬಳಕೆಯಲ್ಲಿ ತಂದ ವೀರಶೈವ ಕವಿಗಳ ಸ್ವಾತಂತ್ರ್ಯ ವೃತ್ತಿಯನ್ನು ಅಭಿನಂದಿಸಬೇಕಾಗಿದೆ.

ವಸ್ತುಗಳನ್ನಾರಿಸುವಲ್ಲಿ ವೀರಶೈವ ಕವಿಗಳು ಸ್ವಾತಂತ್ರ್ಯವನು ತೋರಿಸಿರುವರು. ಇಲ್ಲಿ ಕಂಡು ಬರುವದು ಒಂದೇ ಬಗೆಯಾದ ಅರಸರಸುಗಳ ಜೀವನವಲ್ಲ ವಿವಿಧಕಾಯಕಗಳಿಂದ ದೇಹಗಳನ್ನು ಸವಿಸಿ ಅನಂತ ಶಾಂತಿಯನ್ನು ಹೊಂದಿದ ಶಿವಶರಣರುಗಳ ಜೀವನಗಳೇ ಈ ಪುರಾಣಗಳ ವಸ್ತುಗಳು. ಒಬ್ಬ ಪುರಾತನ ಚರಿತ್ರೆಯು ಇನ್ನೊಬ್ಬ ಪುರಾತನ ಚರಿತ್ರೆಯಂತಲ್ಲ. ಒಬ್ಬನು ಅರಸನಿದ್ದರೆ, ಇನ್ನೊಬ್ಬನು ಅಗಸ, ಮತ್ತೊಬ್ಬನು ಅಂಬಿಗ, ಮಗುದೊಬ್ಬನು ಅಸ್ಪೃಶ್ಯ ಶಿವಶರಣರ ದನಗಳನ್ನು ಕಾಯುವವ ಒಬ್ಬನ ಕಾಯಕ, ಜನರನ್ನು ನಗಿಸುವುದ

ಮತ್ತೊಬ್ಬನ ಕಾರ್ಯಕ, ಇದು ಶಿವಶರಣರ ಚರಿತ್ರೆಗಳಲ್ಲಿ ಕಂಡು ಬರುತ್ತದೆ. ಈ ರೀತಿ. ಮಹಾತ್ಮರ ಜೀವನಗಳನ್ನು ವೀರಶೈವ ಕವಿಗಳು ತಮ್ಮ ಕಾವ್ಯವಸ್ತುಗಳನ್ನಾಗಿ ಮಾಡಿಕೊಂಡಿರುವರು. ಅವರು ತಮ್ಮ ಪುರಾಣ ವಸ್ತುಗಳನ್ನು ಆರಿಸುವಲ್ಲಿ ತಮ್ಮ ಸ್ವಾತಂತ್ರ್ಯವನ್ನು ತೋರಿಸಿರುವರು.

ಹರಿಹರದೇವನ ರಗಳೆಗಳಲ್ಲಿ ನಾವು ಇದೇ ಸ್ವಾತಂತ್ರ್ಯವನ್ನು ಕಾಣುವೆವು. ರಗಳೆಗಳು ಸಾಮಾನ್ಯರಿಗೂ ತಿಳಿಯುವಂತಿವೆ. ಲಾವಣಿ ಪದಗಳನ್ನು ಹೇಗೆ ನಿರಕ್ಷರಿಗಳು ಕೂಡ ತಿಳಿದುಕೊಳ್ಳುವರೋ ಅದರಂತೆ ಕನ್ನಡದ ಜ್ಞಾನವು ಕೆಲಮಟ್ಟಿಗೆ ಇದ್ದವನು ಇವುಗಳನ್ನು ಓದಿದರೆ ಗ್ರಹಿಸುವನು. ಗಿರಿಜಾ ಕಲ್ಯಾಣವನ್ನು ಬರೆಯಬಲ್ಲ ಹರಿಹರದೇವನು ರಗಳೆಯ ಕವಿ ಎಂದು ಜನರು ಹಿಯಾಳಿಸಬಹುದೆಂಬ ಹೆದರದೆ ರಗಳೆಗಳನ್ನು ರಚಿಸಿದನು

ಇನ್ನು ವಚನಗಳಿಗೆ ಬಂಧನವೇ ಇಲ್ಲ. ಅವು ಸ್ವತಂತ್ರ ಜೀವಿಗಳ ಹೃದಯಗಳಲ್ಲಿ ಹುಟ್ಟಿ ಓದುಗರ ಎದೆಯನ್ನು ನೇರವಾಗಿ ಸೇರುತ್ತವೆ. ವಚನಗಳಲ್ಲಿರುವ ವಿಚಾರಗಳೆಲ್ಲವೂ ಹೊಸವಲ್ಲ. ಆ ವಿಚಾರಗಳಲ್ಲೆಷ್ಟೋ ಭಗವದ್ಗೀತೆಯಲ್ಲಿ ಉಪನಿಷತ್ತುಗಳಲ್ಲಿ ದೊರೆಯುವವು. ಅವರ ವಿಚಾರಗಳು ಹೊಸವಲ್ಲವಾದರೂ ಅವು ಶರಣರ ಆಚರಣೆಯಲ್ಲಿ ಬಂದು ಅವರ ಮುಖದಿಂದ ಹೊರವಾಗಿ ಸ್ವತಂತ್ರ ಶೈಲಿಯಲ್ಲಿ, ಸುಂದರ ಉಪಮೆಯಲ್ಲಿ ಬಂದಿವೆ.

"ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ? ಸರವೆತ್ತಿ ಪಾಡುವ ನವಿಲುಗಳಿರಾ ನೀವು ಕಾಣಿರೆ? ಚನ್ನಮಲ್ಲಿಕಾರ್ಜುನನೆಲ್ಲಿದ್ದಾನೆಂದು ಹೇಳಿರೆ?

ಇಂಥ ತೀಕ್ಷ್ಣ ವಿರಹದ ತರುವಾಯ ಸಮಾಗಮಾನಂದ ವೆಂತಹದು.

"ಹೊಳೆವ ಕೆಂಜೆಡೆಗಳ, ಮಣಿಮಕುಟದ, ಒಪ್ಪುವ ಸುಲಿಪಲ್ಲ ನಗೆಮೊಗದ ಕಂಗಳ ಕಾಂತಿಯಿಂ ಈರೇಳು ಭುವನವುಂ ಬೆಳಗುವ ದಿವ್ಯಸ್ವರೂಪನ ಕಂಡೆನು. ಕಂಡೆನ್ನ ಕಂಗಳ ಬರಹಿಂಗಿತ್ತೆಂದು ಭವಗೆಟ್ಟು ಬಂದೆಯಾ ಮಗಳೇ ಎಂದು ಕರುಣದಿಂ ತೆಗೆದು ಬಿಗಿದಪ್ಪಿದರೆ ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು."

---

ಗಳನ್ನು ಮಾಡಿದನು. ಅವನು ತನ್ನ ಪ್ರಚಾರ ಕಾರ್ಯದಲ್ಲಿ ಹಿಂಸೆಯನ್ನು ಹೊಂದಿದ್ದಾನೆ. ಅವನು ಧರ್ಮಕ್ಕೋಸ್ಕರ ಕಷ್ಟಪಟ್ಟಿದ್ದಾನೆ. ಅವನು ವೀರಶೈವ ಸಮಾಜದಲ್ಲಿ ನಿಜವಾಗಿ ಆಗಿ ಹೋದ ಐತಿಹಾಸಿಕ ಪುರುಷನು. ಅವನು ಕಾಲ್ಪನಿಕ ಪುರುಷನಲ್ಲ. ಆದ್ದರಿಂದ ಅವನು ವೀರಶೈವರೆಲ್ಲರಿಗೂ ಪೂಜ್ಯನು, ಮಾನ್ಯನು ಎಂದು ನಾವು ಭಾವಿಸಿ ಅವನನ್ನು ವೀರಶೈವ ಮಹಾಪುರುಷರಲ್ಲಿ ಅವಶ್ಯವಾಗಿ ಗಣಿಸಲೇ ಬೇಕು.

---

## ಪಾಲ್ಕುರಿಕೆ ಸೋಮೇಶ್ವರ.

ಪಾಲ್ಕುರಿಕೆ ಸೋಮೇಶ್ವರನು ಆಂಧ್ರ ಮತ್ತು ಕನ್ನಡ ವಾಙ್ಮಯ ದಲ್ಲಿ ಉಚ್ಚ ಸ್ಥಾನವನ್ನು ಹೊಂದಿದ್ದಾನೆ. ಅವನ ಗ್ರಾಮವು ಪಾಲ್ಕುರಿಕೆ ಅಥವಾ ಹಾಲುಕುರಿಕೆ ಎಂಬುದಾಗಿದೆ ಇದು ಮೈಸೂರು ಸಂಸ್ಥಾನ ತುಮಕೂರು ಜಿಲ್ಲೆಯಲ್ಲಿ ಚಿಕ್ಕಬಳ್ಳಾಪುರಕ್ಕೆ ಸಮೀಪವಾಗಿರುತ್ತದೆ. ಅದು ಈಗ ಒಂದು ಚಿಕ್ಕ ಗ್ರಾಮವಾಗಿದೆ. ಆದರೆ ಹಿಂದಿನ ಕಾಲದಲ್ಲಿ ಇದು ಅತ್ಯಂತ ವಿಖ್ಯಾತಿಯನ್ನು ಹೊಂದಿದ ಪಟ್ಟಣವಾಗಿತ್ತು. ಅದು ಈಗ ಕನ್ನಡ ಭಾಷೆ ಇದ್ದ ಪ್ರದೇಶದಲ್ಲಿದ್ದರೂ, ಆದಕ್ಕೆ ಸಮೀಪ ವರ್ತಿಯಾಗಿ ಆಂಧ್ರ ದೇಶವಿರುತ್ತದೆ. ಅನಂತಪುರ, ಕಡಪಾ ಮತ್ತು ಉತ್ತರ ಅರ್ಕಾಟ ಜಿಲ್ಲೆಗಳು ಪಾಲ್ಕುರಿಕೆ ಇದ್ದ ಭಾಗವನ್ನು ಸುತ್ತಲೂ ಆವರಿಸಿರುತ್ತವೆ. ಇದರಿಂದ ಇದು ಕರ್ನಾಟಕದ ಮೇರೆಯ ಪ್ರದೇಶವೆಂದು ಹೇಳಬಹುದು.

ಆದರೆ ದಿವಂಗತ ಆರ್ ನರಸಿಂಹಾಚಾರ್ಯರು ಪಾಲ್ಕುರಿಕೆಯು ಗೋದಾವರೀ ಜಿಲ್ಲೆಯಲ್ಲಿರುತ್ತದೆಂದು ತಮ್ಮ ಕವಿಚರಿತೆಯಲ್ಲಿ ಹೇಳಿದ್ದಾರೆ. ಆದರೆ ಈ ಜಿಲ್ಲೆಯಲ್ಲಿ ಈ ಹೆಸರಿನ ಗ್ರಾಮವೇ ಇಲ್ಲ. ಸೋಮನಾಥ ಪುರಾಣವನ್ನು ರಚಿಸಿದ ತೋಂಟದ ಸಿದ್ಧಲಿಂಗ ದೇಶಿಕನು ಈ ಗ್ರಾಮವು ಶ್ರೀಶೈಲದ ಈಶಾನ್ಯದಿಕ್ಕಿನಲ್ಲಿದೆ ಎಂದು ತನ್ನ ಕಾವ್ಯದಲ್ಲಿ ಬರೆದಿದ್ದಾನೆ. ಆದರೆ ಹೈದರಾಬಾದ ಸಂಸ್ಥಾನದಲ್ಲಿ ಈ ಹೆಸರಿನ ಯಾವ ಗ್ರಾಮವೂ ಇರುವದಿಲ್ಲ. ಪಾಲುಕುರಿಕೆ ಅಥವಾ ಹಾಲುಕುರಿಕೆ ಈ ಶಬ್ದವು ಆಂಧ್ರ ಭಾಷೆಯದಿರದೆ ಕನ್ನಡವಾಗಿದೆಂಬುದು ಅವರ ಶಬ್ದಗಳಿಂದ ಸ್ಪಷ್ಟವಿದೆ.

ಆದ್ದರಿಂದ ಈ ಹೆಸರಿನ ಗ್ರಾಮವು ಕರ್ನಾಟಕದಲ್ಲಿಯೇ ಇರಬೇಕು. ಆದರೆ ಅದನ್ನು ಹುಡುಕಿದರೆ ಇದೊಂದೇ ಗ್ರಾಮವಿಲ್ಲಿರುವದು ಕಂಡು ಬರುತ್ತದೆ. ಆದ್ದರಿಂದ ಪಾಲ್ಕುರಿಕೆಯು ತುಮಕೂರು ಜಿಲ್ಲೆಯ ಗ್ರಾಮವೆಂದು ನಾವು ತಿಳಿಯಬೇಕಾಗುತ್ತದೆ. ಇಲ್ಲಿ ಸೋಮನಾಥ ದೇವಾಲಯವೂ ಉಂಟು.

ಪಾಲ್ಕುರಿಕೆಯು ಇದ್ದ ಪ್ರದೇಶವು ವೀರಶೈವೇತಿಹಾಸದಲ್ಲಿ ಯಾವಾಗಲೂ ಅತ್ಯಂತ ಪ್ರಸಿದ್ಧವಾಗಿರುತ್ತದೆ. ಪಾಲ್ಕುರಿಕೆಯಲ್ಲಿ ಬಸವೇಶ್ವರನ ಕಾಲದಲ್ಲಿದ್ದ ವೇಮನಾರಾಧ್ಯನು ಬಹು ಪ್ರಸಿದ್ಧಿಗೆ ಬಂದಿದ್ದನು. ಅವನಂತೆಯೇ ಕದಿರಿಯ ರೆಮ್ಮಯ್ಯ, ಬಿಜ್ಜಾವರದ ಅಮ್ಮವ್ವೆ ಅಥವಾ ಬಿಜ್ಜಾಂಬಿಕೆ ಈ ಶಿವಶರಣ ಶರಣಿಯರು ಈ ಭಾಗದವರೇ ಇರುತ್ತಾರೆ. ಅಲ್ಲದೆ ಈ ಭಾಗಕ್ಕೆ ಸಮೀಪವರ್ತಿಯಾಗಿ ಸಿದ್ಧಗಂಗಾ, ಕಕುದ್ಗಿರಿ, ಮೊದಲಾದ ಪ್ರಸಿದ್ಧ ವೀರಶೈವ ಕ್ಷೇತ್ರಗಳೂ ಉಂಟು. ಸ್ವಲ್ಪ ದೂರದಲ್ಲಿ ಬಳ್ಳಿಗಾವಿಯೂ ಇದೆ. ಈ ಪ್ರಕಾರ ವೀರಶೈವ ಸಂಸ್ಕೃತಿಯನ್ನು ರಕ್ಷಿಸಿದ ಅನೇಕ ಮಹಾತ್ಮರೂ ಪ್ರಸಿದ್ಧ ಗ್ರಂಥಕಾರರೂ, ಕವಿಗಳೂ ಈ ಭಾಗದಲ್ಲಿ ಆಗಿ ಹೋಗಿದ್ದಾರೆ.

ಈ ಕಾಲದಲ್ಲಿ ಕಲ್ಯಾಣ, ಕಂಚೀಪುರ, ಶ್ರೀಶೈಲ ಮತ್ತು ಓರುಗಲ್ಲು ಇವು ಅತ್ಯಂತ ಮಹತ್ವದ ಐತಿಹಾಸಿಕ ಸ್ಥಳಗಳು. ಈ ಸ್ಥಳಗಳಲ್ಲಿ ಅನೇಕ ವಿದ್ವಾಂಸರು ಉದಯವಾಗಿ ಅವರು ಆಗಿಂದಾಗ್ಗೆ ಆಯಾ ರಾಜರ ಆಸ್ಥಾನಗಳಿಗೆ ಹೋಗಿ ಧರ್ಮ ಚರ್ಚೆ ಮಾಡುತ್ತಾ ಇದ್ದುದು ಕಂಡು ಬರುತ್ತದೆ. ಈ ಪಟ್ಟಣಗಳಿಗೆ ಪಾಲ್ಕುರಿಕೆ ಇದ್ದ ಪ್ರದೇಶವು ಮಧ್ಯವರ್ತಿಯಾಗಿದ್ದು ಇದರೊಳಗಿಂದಲೇ ಹಾಯ್ದು ಆಯಾ ರಾಜಧಾನಿಗಳಿಗೆ ಹೋಗಬೇಕಾಗುತ್ತದೆ. ಆದ್ದರಿಂದ ಅವುಗಳಲ್ಲಿ ನಡೆಯುತ್ತಿದ್ದ ಧಾರ್ಮಿಕ ಚಟುವಟಿಕೆಗಳು ಇಲ್ಲಿದ್ದವರ ಮೇಲೂ ಸ್ವಾಭಾವಿಕವಾಗಿ ಪರಿಣಾಮ ಮಾಡುವದರಿಂದ ಇಲ್ಲಿಯೂ ಅನೇಕ ಜನ ಶಿವಶರಣ ಶರಣೆಯರು ಆಗಿ ಹೋಗಿದ್ದಾರೆ.

ಸೋಮನಾಥನು ಉದಯವಾದ ಕಾಲದಲ್ಲಿ ಈ ಭಾಗವು ಗಣಪುರ ಎಂಬ ಗ್ರಾಮದ ಅರಸನ ಆಧೀನದಲ್ಲಿತ್ತು. ಆದರೆ ಈ ಗಣಪುರವು ಎಲ್ಲಿದೆ ಎಂಬುದು ನಮಗೆ ತಿಳಿದುಬಂದಿಲ್ಲ. ಈ ಅರಸನ ಹೆಸರು ಜಗದೇಕಮಲ್ಲನೆಂಬುದಾಗಿತ್ತು.

ಈ ಪಾಲ್ಕುರಿಕೆ ಗ್ರಾಮದಲ್ಲಿ ರಾಮಿತಂದೆ ಅಥವಾ ರಾಮಿದೇವಮ್ಯ ನೆಂಬ ಶಿವಶರಣನು ವಾಸ ಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಮಹಾದೇವಿಯಮ್ಮ. ಆಕೆಗೆ ಮಕ್ಕಳಿಲ್ಲದ್ದರಿಂದ ಅವಳು ಪುತ್ರಾಪೇಕ್ಷೆಯಿಂದ ಸೋಮನಾಥನನ್ನು ದಿನಾಲು ಭಜಿಸುತ್ತ ಇದ್ದಳು. ಇದರಿಂದ ಅವಳು ಗರ್ಭಿಣಿಯಾಗಿ ಒಂದು ಗಂಡು ಮಗುವನ್ನು ಹೆತ್ತಳು. ಅವನೇ ಸೋಮನಾಥನು. ಅವನು ಸೋಮನಾಥನ ದಯೆಯಿಂದ ಹುಟ್ಟಿದ್ದರಿಂದ ತಾಯಿತಂದೆಗಳು ಅವನಿಗೆ ಸೋಮನಾಥ ಅಥವಾ ಸೋಮೇಶ್ವರನೆಂದು ನಾಮಕರಣ ಮಾಡಿದರು.

ಪಾಲ್ಕುರಿಕೆಯಲ್ಲಿ ಬಸವೇಶ್ವರನ ಕಾಲದಲ್ಲಿ ಅನೇಕ ಪವಾಡಗಳನ್ನು ಮಾಡಿ ಪ್ರಸಿದ್ಧಿಗೆ ಬಂದ ವೇಮಯ್ಯನು, ಅಥವಾ ವೇಮನಾರಾಧ್ಯನು ವಾಸಿಸಿದ್ದನು. ಅವನಿಗೆ ಲಿಂಗಣಾರಾಧ್ಯ ಅಥವಾ ಗುರುಲಿಂಗಾರ್ಯ ಎಂಬ ಮಗನಿದ್ದನು. ಈ ಗುರುಲಿಂಗಾರ್ಯನ ಹೆಂಡತಿಯ ಹೆಸರು ಮಂಗಳಾಂಬೆಯು. ಅವರಿಗೆ ಚತುರ್ಮುಖ ಬಸವ ಅಥವಾ ಬಸವೇಶನೆಂಬ ಮಗನು ಹುಟ್ಟಿದನು. ಅವನು ತನ್ನ ತಂದೆ ಮತ್ತು ಅಜ್ಜನಂತೆ ಶ್ರೇಷ್ಠ ಶಿವಾನುಭವಿಯಾಗಿದ್ದನು. ಅವನೇ ಸೋಮಾರಾಧ್ಯನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು. ಸೋಮಾರಾಧ್ಯನು ಅವನ ನಿದರ್ಶನದಲ್ಲಿ ಶೈವಾಗಮಗಳು, ಚತುರ್ವೇದಗಳು, ಉಪನಿಷತ್ತುಗಳು ಮೊದಲಾದ ಶಾಸ್ತ್ರಗಳನ್ನು ಅಭ್ಯಾಸ ಮಾಡಿ ಶ್ರೇಷ್ಠ ಪಂಡಿತನೆಂದು ನಾಡಿನಲ್ಲಿ ಪ್ರಸಿದ್ಧಿಗೆ ಬಂದನು.

ಈ ಕಾಲದಲ್ಲಿ ಕಟ್ಟಕೂರ ಪೋತಿದೇವಯ್ಯನೆಂಬವನು ಈ ಭಾಗದಲ್ಲಿ ಲಿಂಗಾಂಗ ಸಾಮರಸ್ಯದ ರೀತಿಯನ್ನು ಚನ್ನಾಗಿ ತಿಳಿದವನಾಗಿದ್ದನು. ಸೋಮಾರಾಧ್ಯನು ಅವನಿಂದಲೂ ವೀರಶೈವಾಚರಣೆಯನ್ನು ತಿಳಿದುಕೊಂಡು ಆಚರಿಸುವವನಾದನು. ಕೆಲವು ಗ್ರಂಥಗಳಲ್ಲಿ ಈತನೇ ಸೋಮಾರಾಧ್ಯನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನೆಂದು ಹೇಳಿವೆ. ಆದರೆ ವೇಮನಾರಾಧ್ಯನ ಮೊಮ್ಮಗನಿಂದ ಸೋಮನಾಥನು ದೀಕ್ಷೆಹೊಂದಿದನೆಂದು ಅನೇಕ ಗ್ರಂಥಗಳಲ್ಲಿ ಹೇಳಿರುವದರಿಂದ ಈ ವಿಷಯದ ಸತ್ಯತೆಯನ್ನು ನಾವು ನಂಬಬೇಕಾಗುತ್ತದೆ. ಕೆಲವು ಗ್ರಂಥಗಳಲ್ಲಿ ಸೋಮನಾಥನು ವೇಮನಾರಾಧ್ಯನ ಮೊಮ್ಮಗನೆಂತಲೂ ಹೇಳಿವೆ. ಆದರೆ ಇದು ಸಂಶಯಾಸ್ಪದವಾಗಿದೆ. ಆದ್ದರಿಂದ ಅದನ್ನು ನಾವು ಅನುಸರಿಸಿಲ್ಲ.

ಈ ಕಾಲವಲ್ಲಿ ಕರ್ನಾಟಕದಲ್ಲಿ ಜೈನ, ವೈಷ್ಣವ ಸಮಾಜಗಳು ಬಹು ಮಹತ್ವದವಾಗಿದ್ದವು. ಅಲ್ಲದೆ ಬಹು ಜನ ಸಿದ್ಧರೂ ಯೋಗಾಭ್ಯಾಸಿಗಳೂ ಈ ನಾಡಿನಲ್ಲಿ ವಾಸವಾಗಿದ್ದರು. ಇವರಲ್ಲಿ ದೇವರ ಸ್ವರೂಪವಾವುದು ಮತ್ತು ದೇವರಾರು ಎಂಬುದರ ವಿಷಯವಾಗಿ ಆಗಿಂದಾಗ್ಗೆ ವಾಗ್ವಾದಗಳು ಉಂಟಾಗುತ್ತಿದ್ದವು. ಇವುಗಳಲ್ಲಿ ಸೋಮಾರಾಧ್ಯನು ಮುಂದಾಗಿ ವೀರಶೈವ ಮತದ ತತ್ವಗಳನ್ನು ಜನರಲ್ಲಿ ಪ್ರಸ್ಥಾಪಿಸುತ್ತ ಇದ್ದುದು ಅವನ ಚರಿತ್ರೆಯಲ್ಲಿ ಕಂಡು ಬರುತ್ತದೆ. ಈ ಕಾರ್ಯವನ್ನು ಅವನು ಕಡೆಯುವರೆಗೂ ಮಾಡುತ್ತ ಬಂದದ್ದರಿಂದ ಅವನು ವೀರಶೈವೇತಿಹಾಸದಲ್ಲಿ ಬಹು ಪ್ರಸಿದ್ಧನಾಗಿದ್ದಾನೆ.

ಪಾಲ್ಕುರಿಕೆ ಸೋಮಾರಾಧ್ಯನು ಆಂಧ್ರ, ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ದೊಡ್ಡ ವಿದ್ವಾಂಸನಾಗಿದ್ದನು. ಅವನು ಈ ಭಾಷೆಗಳಲ್ಲಿರುವ ವಾಙ್ಮಯವನ್ನು ಚನ್ನಾಗಿ ಅಭ್ಯಾಸ ಮಾಡಿದ್ದನು. ಈ ಎಲ್ಲ ಭಾಷೆಗಳಲ್ಲಿ ಅವನು ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಅವು ಈಗಲೂ ಪಂಡಿತರಿಗೆ ಮಾನ್ಯವಾಗಿರುತ್ತವೆ. ಈ ಗ್ರಂಥಗಳಲ್ಲಿ ಗಣ ಸಹಸ್ರ ನಾಮಾವಳಿ, ಪಂಡಿತಾರಾಧ್ಯ ಚರಿತ್ರೆ, ಬಸವ ಪುರಾಣ ಇವು ವೀರಶೈವ ಪುರಾತನ ಇತಿಹಾಸದ ದೃಷ್ಟಿಯಿಂದ ಬಹು ಮಹತ್ವದವಾಗಿರುತ್ತವೆ.

ಒಂದು ವೇಳೆ ಪಾಲ್ಕುರಿಕೆ ಸೋಮಾರಾಧ್ಯನು ಈ ಗ್ರಂಥಗಳನ್ನು ರಚಿಸದೆ ಹೋಗಿದ್ದರೆ ವೀರಶೈವೇತಿಹಾಸದ ಮೇಲೆ ಯಾವ ಪ್ರಕಾಶವೂ ಬೀಳುತ್ತಿದ್ದಿಲ್ಲ. ಅವನು ರಚಿಸಿದ ಬಸವ ಪುರಾಣವನ್ನು ಆಧಾರವಾಗಿಟ್ಟುಕೊಂಡು ಭೀಮ ಕವಿಯು ಕನ್ನಡ ಬಸವ ಪುರಾಣವನ್ನು ಬರೆದಿದ್ದಾನೆ. ಹಾಗೆಯೇ ಸೋಮಾರಾಧ್ಯನು ಆಂಧ್ರ ಭಾಷೆಯಲ್ಲಿ ಪಂಡಿತಾರಾಧ್ಯ ಚರಿತ್ರೆಯನ್ನು ಬರೆದಿದ್ದಾನೆ. ಈ ಚರಿತ್ರೆಯನ್ನು ಗುರುರಾಜ ಕವಿಯು ಸಂಸ್ಕೃತದಲ್ಲಿ ಭಾಷಾಂತರಿಸಿದ್ದಾನೆ. ಗಣಸಹಸ್ರವೆಂಬ ಗ್ರಂಥದಲ್ಲಿ ಶೈವಮತದಲ್ಲಿ ಉಚ್ಚ ಸ್ಥಾನವನ್ನು ಹೊಂದಿದ ಒಂದು ಸಾವಿರ ಜನರ ಹೆಸರುಗಳಿವೆ. ಅವರು ಯಾರೆಂದರೆ:—

೪೬೫ ಪ್ರಮಥಗಣಗಳು, ೧೭೧ ರುದ್ರಗಣಗಳು, ೨೮ ಯೋಗಾಚಾರ್ಯರು, ೬೩ ಪುರಾತನರು ಮತ್ತು ೨೭೩ ಜನ ಶಿವಶರಣರು ಇದ್ದಾರೆ. ಶಿವಶರಣರು ವೀರಶೈವ ಸಮಾಜಕ್ಕೆ ಪ್ರತ್ಯಕ್ಷ ಸಂಬಂಧಿಸಿದವರು. ಇವರಲ್ಲಿ ೧೬ ಜನರು ಷೋಡಶರು, ೧೩ ಜನರು ತೇರಸರು, ೧೦ ಜನರು

ದಶಗಣರು ಮತ್ತು ೨೩೪ ಜನರು ಅಮರಗಣಗಳು ಎಂದು ಸೋಮನಾಥನು ವರ್ಗೀಕರಣ ಮಾಡಿ ಅವರ ಹೆಸರುಗಳನ್ನು ಈ ಗ್ರಂಥದಲ್ಲಿ ಕೊಟ್ಟಿದ್ದಾನೆ. ಪಂಡಿತಾರಾಧ್ಯ ಚರಿತ್ರೆ, ಬಸವಪುರಾಣ ಇವುಗಳಲ್ಲಿ ಉಲ್ಲೇಖವಾದ ಶಿವಶರಣರ ಹೆಸರುಗಳು ಈ ಗಣಸಹಸ್ರದಲ್ಲಿ ಬಂದಿವೆ. ಆದರೆ ಪಂಡಿತಾರಾಧ್ಯ ಚರಿತ್ರೆ ಮತ್ತು ಬಸವಪುರಾಣ ಇವುಗಳಲ್ಲಿ ಶಿವಶರಣರು ಮಾಡಿದ ಪವಾಡಗಳ ಸವಿಸ್ತಾರವಾದ ವರ್ಣನೆಗಳು ಇವೆ. ಈ ಚರಿತ್ರೆಗಳ ಮೇಲಿಂದ ವೀರಶೈವ ಸಮಾಜದ ಪೂರ್ವೇತಿಹಾಸದ ಮೇಲೆ ಮಹತ್ವದ ಪ್ರಕಾಶವು ಬೀಳುತ್ತದೆ. ಪಾಲ್ಕುರಿಕೆ ಸೋಮಾರಾಧ್ಯನು ಬಸವೇಶ್ವರನ ತರುವಾಯ ೬೦-೭೦ ವರ್ಷಗಳ ಮೇಲೆ ಅಂದರೆ ೧೨೦೦ ನೇ ಇಸ್ವಿಯ ಸುಮಾರಕ್ಕೆ ಪ್ರಸಿದ್ಧಿಗೆ ಬಂದಿದ್ದಾನೆ. ಆದ್ದರಿಂದ ಅವನು ಸಂಗ್ರಹಿಸಿದ ಈ ಚರಿತ್ರೆಗಳು ಐತಿಹಾಸಿಕ ದೃಷ್ಟಿಯಿಂದ ವೀರಶೈವರಿಗೆ ಅತ್ಯಂತ ಮಹತ್ವದವಾಗಿವೆ.

ಈ ಚರಿತ್ರೆಗಳ ಮೇಲಿಂದ ಬಸವೇಶ್ವರನು ಐಕ್ಯಹೊಂದಿದ ಬಳಿಕ ಸ್ವಲ್ಪ ವರ್ಷಗಳಲ್ಲಿಯೇ ಪಾಲ್ಕುರಿಕೆ ಸೋಮಾರಾಧ್ಯನು ಉದ್ಭವಿಸಿ ಕರ್ನಾಟಕ ಮತ್ತು ಆಂಧ್ರ ದೇಶಗಳಲ್ಲಿ ಸಂಚರಿಸಿ ವೀರಶೈವ ಧರ್ಮಕ್ಕಾಗಿ ಪ್ರಯತ್ನಿಸಿದ ಮಹಾನುಭಾವರು ಯಾರು ಮತ್ತು ಅವರು ಎಲ್ಲಿಯವರು ಎಂಬುದನ್ನು ಸಂಶೋಧಿಸಲು ಪ್ರಯತ್ನಿಸಿದ್ದಾನೆಂದು ಸ್ಪಷ್ಟವದೆ. ಅವನು ಉಲ್ಲೇಖಿಸಿದ ೨೩೪ ಜನ ಶಿವಶರಣರು ಬಹು ಮಹತ್ವದ ಕಾರ್ಯಮಾಡಿದವರು. ಅವರಲ್ಲಿ ಬಹು ಜನರು ವಿಜಾಪುರ, ಕಲಬುರ್ಗಿ ಜಿಲ್ಲೆಯವರೂ ಉತ್ತರ ಆಂಧ್ರ ದೇಶದವರೂ ಇದ್ದಾರೆ. ನಾವು ಈ ವರೆಗೆ "ಶಿವಶರಣರ ಚರಿತ್ರೆಗಳು" ಭಾಗ ೧, ೨ ಇವುಗಳಲ್ಲಿ ೧೧೪ ಜನರು ಮತ್ತು ಮುಂದೆ ೩ನೇ ಭಾಗದಲ್ಲಿ. ಈ ವರೆಗೆ ೧೬ ಜನರು ಹೀಗೆ ಒಟ್ಟು ೧೩೦ ಶಿವಶರಣರ ಚರಿತ್ರೆಗಳನ್ನು ಸಂಶೋಧಿಸಿ ಬರೆದಿದ್ದೇವೆ. ಪಾಲ್ಕುರಿಕೆ ಸೋಮಾರಾಧ್ಯನ ಗಣಸಹಸ್ರದಲ್ಲಿ ಶಿವಶರಣರು ಉಲ್ಲೇಖವಾದ ಗ್ರಾಮಗಳು ಯಾವವೆಂದರೆ:- ಮುಸುಟಿ, ವಿಜಾಪುರ, ಕೆಂಭಾವಿ, ಜಟ್ಟೂರು, ಹೊಟ್ಟಿಲಕೆರೆ, ಮುದ್ದನೂರ, ಬಾಹೂರು, ನಾವದಿಗೆ, ಕೋವೂರ, ಸಗರ, ಕೆರವೂರು, ಹೀರೂರು, ಕುರುಕುಂಟೆ, ಹಾವಿನಹಾಳ, ಇಳಿಹಾಳ, ಬಾಹೂರು, ಏಲೇಶ್ವರ, ಇಂಡಿ, ವನಿಪುರ, ನಿಂಗುಳಗೆ, ಗಂಗಾಪುರ, ಸರವೂರು, ಕೆರವೂರು, ನಿಂಬಾಣ, ಕೊಲ್ಲಿಪಾಕಿ,

---

ಲವಿಗೆ, ರೇಗೂರು, ಮೊರಟ, ಅನುರಗುಂಡ, ನೆರೆಗೊಂಡ, ಉತು
ಡಿ, ಕದಿರಿ ಈ ಗ್ರಾಮಗಳಿವೆ. ಈ ಗ್ರಾಮಗಳು ಈಗಿನ ಕಾಲದಲ್ಲಿ
ಪ್ರಸಿದ್ಧವಾದವುಗಳು. ಆದರೂ ಇಂಥವುಗಳನ್ನು ಪಾಲ್ಕುರಿಕೆ ಸೋಮಾ
ರಾಧ್ಯನು ತನ್ನ ಗ್ರಂಥಗಳಲ್ಲಿ ವಿವರವಾಗಿ ಹೇಳಿದ್ದರ ಮೇಲಿಂದ ಈ
ಗ್ರಾಮಗಳಿಗೆ ಅವನು ಹೋಗಿ ಅಥವಾ ಅವುಗಳಿಗೆ ಸಮೀಪವರ್ತಿ
ಯಾದ ಪ್ರದೇಶಗಳಲ್ಲಿ ಸಂಚರಿಸಿ ಆಯಾ ಶಿವಶರಣರು ಮಾಡಿದ ಮಹ
ತ್ಕೃತ್ಯಗಳನ್ನು ತಿಳಿದುಕೊಂಡು ತನ್ನ ಬಸವ ಪುರಾಣ ಮತ್ತು ಪಂಡಿತಾ
ರಾಧ್ಯ ಚರಿತ್ರೆಗಳಲ್ಲಿ ನಿರೂಪಿಸಿರುವನೆಂದು ನಮಗೆ ತೋರುತ್ತದೆ. ಈ
ಶಿವಶರಣರ ಚರಿತ್ರೆಗಳು ಬಸವೇಶ್ವರನ ತರುವಾಯ ೫೦-೬೦ ವರ್ಷಗಳ
ಮೇಲೆ ಅಂದರೆ ಒಂದೆರಡು ತಲಾಂತರಗಳಾದ ಮೇಲೆ ಸಂಗ್ರಹವಾದ್ದರಿಂದ
ಅವುಗಳಲ್ಲಿ ಅನೇಕ ದಂತ ಕಥೆಗಳೂ ಪವಾಡಗಳೂ ಸ್ವಾಭಾವಿಕವಾಗಿ
ಸೇರಿಕೊಂಡಿರಬಹುದು. ಆದರೂ ನಾವು ಬರೆದ ಶಿವಶರಣರ ಚರಿತ್ರೆ
ಗಳನ್ನು ನೋಡಿದರೆ ಈ ಶಿವಶರಣರು ನಿಜವಾಗಿ ಆಗಿ ಹೋದವರೆಂ
ಬುದು ಗೊತ್ತಾಗದೆ ಇರದು. ಇವರು ವೀರಶೈವ ಧರ್ಮದ ಜಾಗ್ರತಿಗೆ
ಬಹಳ ಪ್ರಯತ್ನಿಸಿದವರು ಇದ್ದಾರೆ. ಇಂಥವರು ಮಾಡಿದ ಮಹತ್ಕಾ
ರ್ಯಗಳನ್ನು ಪಾಲ್ಕುರಿಕೆ ಸೋಮಾರಾಧ್ಯನು ಸಂಶೋಧಿಸಿದ್ದು ವೀರ
ಶೈವ ಸಮಾಜದ ಮೇಲೆ ಅವನು ಮಾಡಿದ ಮಹದುಪಕಾರವಾಗಿರು
ತ್ತದೆ.

ಪಾಲ್ಕುರಿಕೆ ಸೋಮಾರಾಧ್ಯನು ತನ್ನ ಪ್ರವಾಸ ಕಾಲದಲ್ಲಿ ಮರಾಠೀ
ಭಾಷೆಯ ಪರಿಚಯವನ್ನು ಸಹ ಮಾಡಿಕೊಂಡಿದ್ದನೆಂದು ತೋರುತ್ತದೆ.
ಅವನು ವೃಷಾಧಿಪಶತಕವೆಂಬ ಶತಕವನ್ನು ರಚಿಸಿದ್ದು ಅವನು ಅದ
ರಲ್ಲಿ ಸಂಸ್ಕೃತ, ದ್ರಾವಿಡ, ಕನ್ನಡ ಮತ್ತು ಮರಾಠೀ ಈ ನಾಲ್ಕು ಭಾಷೆ
ಗಳಲ್ಲಿ ಬಸವೇಶ್ವರನನ್ನು ಸ್ತುತಿಸಿರುತ್ತಾನೆ. ಮರಾಠಿಯಲ್ಲಿದ್ದ ಪದ್ಯವು
ಕೆಳಗಿನಂತೆ ಇದೆ.

"ದೇವ ಪರೀ ತುವ್ಹೀಚ ಗುರುದೇವ ವ್ಹಣೂನ ತರೀ
ತುವ್ಹೀಚ ಗೋ ।
ಸಾವಿ ತರೀ ತುವ್ಹೀಚ ತುಮಚಾಚ ಪ್ರಸಾದ
ವ್ಹಾಚ ಕೃಪಾ ಕರಾ ॥

ಹೇ ವರದಾಯ ವಂಚು ನ.ತಿಯಿಂಚದ ನಿನ್ನೂನ

ಸಾರೀ ಭಾಸತಿ ।

ವಾ ವಿನ ತಂರ್ಸಲೀಲ ಬಸವಾ ಬಸವಾ ಬಸವಾ

ವೃಷಾಧಿಪಾ ॥

ಶ್ಲೋಕವು ಅಶುದ್ಧವಾಗಿರುವದರಿಂದ ಕೆಲವೆಡೆಗಳಲ್ಲಿ ಶಬ್ದಗಳ ಬೋಧ ವಾಗುವದಿಲ್ಲ. ಆದರೆ ಇದರಿಂದ ಸೋಮಾರಾಧ್ಯನು ಉತ್ತರ ಕರ್ನಾಟಕ ದಲ್ಲಿ ಕೆಲವು ದಿವಸಗಳಿದ್ದು ಮರಾಠೀ ಭಾಷೆಯು ಪರಿಚಯು ಮಾಡಿಕೊಂಡಿರ ಬಹುದೆಂದು ತೋರುತ್ತಿದೆ. ಮರಾಠೀ ಭಾಷೆ ಇಲ್ಲದ ತುಮಕೂರು ಜಿಲ್ಲೆಯಲ್ಲಿದ್ದುಕೊಂಡು ಮರಾಠೀ ಭಾಷೆಯನ್ನು ಹೀಗೆ ಕಲಿಯುವ ಸಂಭ ವವಿಲ್ಲ. ಆದುದರಿಂದ ಅವನು ಆಯಾ ಪ್ರದೇಶಗಳಲ್ಲಿ ಸಂಚರಿಸಿ ಶಿವಶರ ಣರ ಚರಿತ್ರೆಗಳನ್ನು ಸಂಗ್ರಹಿಸಿದನೆಂಬ ವಿಷಯವನ್ನು ಇದು ಬಲಪಡಿ ಸುತ್ತದೆ.

ಹನ್ನೆರಡನೇ ಶತಮಾನದ ಅಂತ್ಯಭಾಗದಲ್ಲಿ ದೇವಗಿರಿ ಯಾದ ವರು ಕರ್ನಾಟಕದ ಉತ್ತರ ಭಾಗವನ್ನು ಆಕ್ರಮಿಸಿದರು. ಆಗ ಅವ ರಿಗೆ ಮಾಂಡಲಿಕರಾಗಿ ಮಲ್ಲ, ಅವನ ತಮ್ಮ ಬೀಚಗಿ ಮತ್ತು ಮಲ್ಲನ ಮಗ ಚಾವುಂಡ ಇವರು ಪಲಿಗೆರೆ ಎಂದರೆ ಲಕ್ಷ್ಮೇಶ್ವರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿ ರಾಜ್ಯವಾಳಿದರೆಂದು ಶಾಸನಗಳಿಂದ ತಿಳಿ ಯುತ್ತಿದೆ. ಇವರ ಕಾಲಕ್ಕೆ ಈ ಭಾಗದಲ್ಲಿ ಮರಾಠೀ ಭಾಷೆಯು ಪ್ರವೇಶ ವಾಗಿರಬೇಕು. ಇದೇ ಕಾಲಕ್ಕೆ ಪಾಲ್ಕುರಿಕೆ ಸೋಮೇಶ್ವರನು ಇದ್ದು ದರಿಂದ ಅವನು ತನ್ನ ಸಂಚಾರ ಕಾಲದಲ್ಲಿ ಮರಾಠೀ ಭಾಷೆಯ ಪರಿ ಚಯುವನ್ನು ಮಾಡಿಕೊಂಡಿರಬಹುದು.

ಕರ್ನಾಟಕದಲ್ಲಿಯಂತೆ ಅವನು ಉತ್ತರ ಆಂಧ್ರ ದೇಶದಲ್ಲಿಯೂ ಪ್ರವಾಸ ಮಾಡಿ ಅಲ್ಲಿ ಆಗಿಹೋದ ಶಿವಶರಣರ ಚರಿತ್ರೆಗಳನ್ನು ಸಂಗ್ರ ಹಿಸಿದ್ದಾನೆ. ಇವು ಅವನು ಆಂಧ್ರ ಭಾಷೆಯಲ್ಲಿ ರಚಿಸಿದ ಪಂಡಿತಾ ರಾಧ್ಯನ ಚರಿತ್ರೆಯಲ್ಲಿಯೂ ಬಸವ ಪುರಾಣದಲ್ಲಿಯೂ ಬಂದಿರುತ್ತವೆ.

ಈ ಪ್ರವಾಸದಲ್ಲಿ ಅವನು ಬಹುಜನ ವಿದ್ವಾಂಸರನ್ನೂ ಶಿವಾನುಭವಿ ಗಳನ್ನೂ ಕಂಡಿರಬಹುದು. ಉತ್ತರ ಕರ್ನಾಟಕದಲ್ಲಿ ಈ ಕಾಲಕ್ಕೆ ವೀರ

ಶೈವರ ದೊಡ್ಡ ಚಳವಳಿಯು ಉಂಟಾಗಿದ್ದಿತು. ಇದರಿಂದ ಸೋಮಾರಾಧ್ಯನು ಅಲ್ಲಿ ವೀರಶೈವ ಧರ್ಮದ ಸ್ವರೂಪವನ್ನು ಚನ್ನಾಗಿ ತಿಳಿದುಕೊಂಡು ಸಂಸ್ಕೃತ ಕನ್ನಡ ಮತ್ತು ಆಂಧ್ರ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಅವನು ಬರೆದ ಗ್ರಂಥಗಳು ಯಾವವೆಂದರೆ:—

(೧) ಬಸವಪುರಾಣ:— ತೆಲುಗು ಭಾಷೆಯಲ್ಲಿ ಇದ್ದ ಈ ಗ್ರಂಥವನ್ನು ಭೀಮಕವಿಯು ಕನ್ನಡದಲ್ಲಿ ಭಾಷಾಂತರಿಸಿದ್ದಾನೆ.

(೨) ಪಂಡಿತಾರಾಧ್ಯ ಚರಿತೆ- ಇದು ತೆಲುಗು ಭಾಷೆಯಲ್ಲಿ ಇದ್ದು ಇದನ್ನು ಗುರುರಾಜ ಕವಿಯು ಸಂಸ್ಕೃತದಲ್ಲಿ ಭಾಷಾಂತರಿಸಿದ್ದಾನೆ.

(೩) ಶೀಲಸಂಪಾದನೆ-ಕನ್ನಡದಲ್ಲಿ
(೪) ಸದ್ಗುರು ರಗಳೆ ,,
(೫) ಚನ್ನಬಸವ ರಗಳೆ ,,
(೬) ಶರಣುಬಸವ ರಗಳೆ ,,
(೭) ಬಸವಪಂಚಗದ್ಯ
(೮) ಅನ್ಯವಾದ ಕೋಲಾಹಳ
(೯) ಅನುಭವಸಾರ
(೧೦) ರುದ್ರಭಾಷ್ಯ
(೧೧) ಗಂಗೋತ್ಪತ್ತಿ ರಗಳೆ
(೧೨) ನಮಸ್ಕಾರ ಗದ್ಯ
(೧೩) ವೃಷಾಧಿಪಶತಕ-ತೆಲುಗು
(೧೪) ಬಸವಾಷ್ಟಕ
(೧೫) ಬಸವಗೀತೆ
(೧೬) ಬಸವೋದಾಹರಣ
(೧೭) ಅಕ್ಷರಾಂಕ ಗದ್ಯ
(೧೮) ಲಿಂಗೋದ್ಭವ ಗದ್ಯ
(೧೯) ಇಷ್ಟಲಿಂಗ ಸ್ತೋತ್ರ
(೨೦) ಗಣಸಹಸ್ರ ನಾಮಾವಳಿ
(೨೧) ಪರ್ವತ ವರ್ಣನೆ
(೨೨ ಸೋಮನಾಥ ಭಾಷ್ಯ ಅಥವಾ ಬಸವರಾಜೀಯ—ಸಂಸ್ಕೃತದಲ್ಲಿ
(೨೩) ಚತುರ್ವೇದಸಾರ.

ಈ ಗ್ರಂಥಗಳಲ್ಲಿ ಅನೇಕ ಗ್ರಂಥಗಳು ಬಸವೇಶ್ವರನ ವಿಷಯವಾಗಿವೆ. ಇದರಿಂದ ಸೋಮನಾಥನು ಬಸವೇಶ್ವರನ ವಿಷಯವಾಗಿ ಎಷ್ಟು ಗಾಢವಾದ ಭಕ್ತಿಯುಳ್ಳವನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಅವುಗಳಲ್ಲಿ ಕೆಲವು ಅಂದರೆ ಅನ್ಯವಾದ ಕೋಲಾಹಳ, ಸದ್ಗುರು ರಗಳೆ ಸೋಮನಾಥ ಭಾಷ್ಯ, ಅನುಭವಸಾರ, ಚತುರ್ವೇದಸಾರ ರುದ್ರಭಾಷ್ಯ ಇವು ತಾತ್ವಿಕ ಗ್ರಂಥಗಳಿರುತ್ತವೆ.

ಈ ಪ್ರಕಾರ ಸೋಮಾರಾಧ್ಯನು ದೇಶದಲ್ಲಿ ಪಂಡಿತೋತ್ತಮನೆಂದು ಪ್ರಸಿದ್ಧಿಯನ್ನು ಹೊಂದಿದವನಾದನು. ಇದರಿಂದ ಅವನಿಗೆ ಶಸ್ತ್ರವಿದ್ಯಾ

ಕಲಾಪ, ಕವಿತಾಸಾರ, ಅನ್ಯದೇವಕೋಲಾಹಳ, ಪ್ರತ್ಯಕ್ಷಭೃಂಗೀಶ್ವರಾವತಾರ ಎಂಬ ಬಿರುದುಗಳು ಪ್ರಾಪ್ತವಾದವು.

ಈ ಪ್ರಕಾರ ಸೋಮಾರಾಧ್ಯನು ಮಹತ್ವದ ಗ್ರಂಥಗಳನ್ನು ರಚಿಸಲಾಗಿ, ಒಂದು ದಿನ ಪುರಜನರು ಅವನ ಮೆರವಣಿಗೆಯನ್ನು ತೆಗೆದು ಅವನನ್ನು ಸನ್ಮಾನಿಸಿದರು. ಆಗ ಶಂಕರನು ಸೋಮಾರಾಧ್ಯನಿಗೆ ಪ್ರತ್ಯಕ್ಷನಾಗಿ ಅವನಿಗೆ ನೀನು ಕೈಲಾಸಕ್ಕೆ ಬರಬೇಕೆಂದು ಕರೆಯಲು ಅವನು ಶಿವನಿಗೆ ನಮಿಸಿ—ಬಸವನಿಂದ ಪುನೀತವಾದ ಈ ಭೂಮಿಯೇ ನನಗೆ ಕೈಲಾಸವು. ನಾನು ಕೈಲಾಸಕ್ಕೆ ಬರಲು ಒಪ್ಪಲಾರೆನು. ಆದರೆ ನನಗೆ ಕ್ರಿಯಾಸಮಾಧಿಯಲ್ಲಿ ನಿರವಯಲ ಲಿಂಗೈಕ್ಯವು ಸ್ವಯವಾಗುವಂತೆ ಕರುಣಿಸಬೇಕೆಂದು ಬೇಡಿಕೊಂಡನು. ಶಿವನು ಹಾಗೆಯೇ ಆಗಲೆಂದು ಹೇಳಿ ಹೊರಟುಹೋದನು.

ಹೇಗೆ ಹರಿಹರ ಕವಿಯು ಕನ್ನಡ ಭಾಷೆಯಲ್ಲಿ ಮಹಾಕವಿ ಎಂದೆನಿಸಿಕೊಂಡಿರುವನೋ ಹಾಗೆಯೇ ಪಾಲ್ಕುರಿಕೆ ಸೋಮನಾಥನು ತೆಲುಗು ಭಾಷೆಯಲ್ಲಿ ಮಹಾಕವಿ ಎಂದೆನಿಸಿಕೊಂಡಿದ್ದಾನೆ. ಉಭಯ ಕವಿಗಳು. ಬಹುಶಃ ಒಂದೇ ಕಾಲದವರಿದ್ದು ಸ್ವಲ್ಪ ಮಾತ್ರ ಅವರು ಹಿಂದುಮುಂದಾಗಿರಬಹುದು. ಸೋಮನಾಥನು ಬರೆದ ಗ್ರಂಥಗಳ ಮೇಲಿಂದ ಅವನು ವೇದವೇದಾಂತ ಆಗಮಪುರಾಣ ಶಾಸ್ತ್ರಗಳಲ್ಲಿ ಗಾಢವಾದ ಪಾಂಡಿತ್ಯವುಳ್ಳವನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಇವನು ರಚಿಸಿದ ಸೋಮನಾಥಭಾಷ್ಯ, ಚತುರ್ವೇದಸಾರ, ಪಂಡಿತಾರಾಧ್ಯ ಚರಿತ್ರದ ವಾದ ಪ್ರಕರಣ ಇವುಗಳನ್ನು ನೋಡಿದಲ್ಲಿ ಅವನು ಅನ್ಯ ಸಮಯಗಳನ್ನು ಶಾಸ್ತ್ರೀಯವಾಗಿ ಖಂಡಿಸಿ ಶಿವಜ್ಞಾನ ಸಿದ್ಧಾಂತವನ್ನು ಸ್ಥಾಪಿಸಿದ್ದು ಕಂಡು ಬರುತ್ತದೆ.

ಸೋಮನಾಥನು ದ್ವಿಪದಿಯಲ್ಲಿ ಕಾವ್ಯವನ್ನು ರಚಿಸಿದ್ದಾನೆ. ತೆಲುಗಿನಲ್ಲಿ ಇಂಥ ಕಾವ್ಯರಚಿಸಲು ಅವನೇ ಮೊದಲಿಗನು. ತೆಲುಗು ಪಂಡಿತರು ಸೋಮನಾಥನು ಆಂಧ್ರ ವಾಙ್ಮಯಕ್ಕೆ ಮಾಡಿದ ಈ ಉಪಕಾರವನ್ನು ಈಗಲೂ ನೆನೆಯುತ್ತಾರೆ. ಹಾಗೆಯೇ ಶತಕ ವಾಙ್ಮಯದಲ್ಲಿ ಇವನು ರಚಿಸಿದ ವೃಷಾಧಿಪಶತಕವು ಅಪೂರ್ವವಾಗಿರುತ್ತದೆ. ಈತನು

ಚತುರ್ವೇದಸಾರದಲ್ಲಿ ವೇದಸೂತ್ರಗಳನ್ನೂ ಅವುಗಳ ಮೇಲಿನ ವ್ಯಾಖ್ಯಾನವನ್ನೂ ಪದ್ಯರೂಪದಲ್ಲಿ ಬರೆದಿದ್ದಾನೆ. ಇದು ಬಹು ಕಠಿಣವಾದ ರಚನೆಯು. ಆದರೂ ಅವನು ತನ್ನ ಕವಿತಾ ಶಕ್ತಿಯಿಂದ ಇಂಥ ರಚನೆಯನ್ನು ಮಾಡಿ ಅದರಲ್ಲಿ ಯಶಸ್ವಿಯಾಗಿದ್ದಾನೆ.

ಅವನು ತನ್ನ ಸೋಮನಾಥ ಭಾಷ್ಯವನ್ನು ಬರೆಯುವಲ್ಲಿ ಬ್ರಹ್ಮಸೂತ್ರಗಳನ್ನು ತೆಗೆದುಕೊಂಡು ವ್ಯಾಖ್ಯಾನ ಬರೆಯುವ ಹಳೇ ಪದ್ಧತಿಯನ್ನು ಬಿಟ್ಟುಕೊಟ್ಟು ತನ್ನದೇ ಆದ ಹೊಸ ಮಾರ್ಗವನ್ನು ತುಳಿದಿದ್ದಾನೆ. ಅವನು ಸ್ಮೃತಿ ಆಗಮ ಪುರಾಣ ಇತಿಹಾಸಗಳನ್ನು ತೆಗೆದುಕೊಂಡು ಶಿವಮುತೋತ್ಕರ್ಷವನ್ನೂ ಅಷ್ಟಾವರಣಗಳ ಮಹಾತ್ಮ್ಯೆಯನ್ನೂ ಇದರಲ್ಲಿ ವಿಶದಪಡಿಸಿದ್ದಾನೆ. ಈ ಗ್ರಂಥದಲ್ಲಿ ವೃಷಭೇಂದ್ರಮಹಿಮೆ, ವಿಭೂತಿ ಮಹಿಮೆ, ಶಿವಲಿಂಗಧಾರಣ ಮಹಿಮೆ, ಲಿಂಗಾರ್ಚನವಿಧಿ, ಪಾದೋದಕಪ್ರಸಾದ ಮಹಿಮೆ, ಸರ್ವದೇವತಾಜನಕತ್ವ, ದ್ವಿಮೂರ್ತಿವಾದನಿರಸನ, ಕರ್ಮವಾದನಿರಸನ, ಮಹಾದೇವ ನಿರ್ವಚನ ಮುಂತಾದ ವಿಷಯಗಳನ್ನು ವಿವೇಚಿಸಿದ್ದಾನೆ.

ಅವನು ಈ ಗ್ರಂಥಗಳಲ್ಲಿ ವೀರಶೈವ ಧರ್ಮವು ವೈದಿಕವಾದುದೆಂದು ಸ್ಥಾಪಿಸಲು ಯತ್ನಿಸಿದ್ದು ಅವನ ವೈಶಿಷ್ಟ್ಯವು. ವರ್ಣಾಶ್ರಮದ ಶೃಂಖಲೆಗಳನ್ನು ಬಿಸಾಟಿದ ಶಿವಶರಣರ ಮಾರ್ಗವು ವೈದಿಕ ಮಾರ್ಗಕ್ಕೆ ವಿರುದ್ಧವಲ್ಲೆಂದು ಅವನು ಇವುಗಳಲ್ಲಿ ಪ್ರತಿಪಾದಿಸಿದ್ದಾನೆ.

ಸೋಮನಾಥನು ಬಸವೇಶ್ವರನಿಗೋಸ್ಕರ ಅತ್ಯಂತ ಭಕ್ತಿಭಾವವುಳ್ಳವನಾಗಿದ್ದಾನೆಂಬುದು ಅವನ ಗ್ರಂಥಗಳಿಲ್ಲ ಹೇಳುತ್ತವೆ. ಅವನು ಬಸವೇಶ್ವರನನ್ನು ಮನೆನಾರಿ ಯಾವಾಗಲೂ ಸ್ತುತಿಸುತ್ತಾನೆ ಅವನು ಬಸವಾದಿ ಪ್ರಮಥರ ಬಗ್ಗೆ ನಿಸ್ಸೀಮ ಭಕ್ತಿಯುಳ್ಳವನು. ಅವನು ಬಸವೇಶ್ವರನನ್ನೇ ತನ್ನ ಆರಾಧ್ಯ ಮೂರ್ತಿಯನ್ನಾಗಿಟ್ಟುಕೊಂಡು ಅವನನ್ನು ಯಾವಾಗಲೂ ಸ್ತುತಿಸುವದುಂಟು.

ಈತನು ಆಂಧ್ರ ರಾಜ್ಯಕ್ಕೆ ಮಾಡಿದ ಮಹದುಪಕಾರವನ್ನು ಅಲ್ಲಿಯ ಪಂಡಿತರು ಈಗಲೂ ನೆನೆಯುತ್ತಾರೆ. ಅವನು ತನ್ನ ಕಾವ್ಯದಲ್ಲಿ ತೆಲುಗು ಭಾಷೆಯ ಸರಳತೆಯನ್ನೂ ಮಾಧುರ್ಯವನ್ನೂ ಚನ್ನಾಗಿ

ಹೊರಗೆಡಹಿದ್ದಾನೆ. ಮೊದಲಿನ ಕಾಲದ ತೆಲುಗು ಕಾವ್ಯಗಳಲ್ಲಿ ಸಂಸ್ಕೃತ ಪದಗಳು ತುಂಬಿ ಹೋಗಿರುತ್ತವೆ. ಆದರೆ ಸೋಮನಾಥನು ಅದ್ವಿತೀಯ ಸಂಸ್ಕೃತ ಪಂಡಿತನಾದರೂ ಕೂಡ ತೆಲುಗು ಭಾಷೆಯ ಸೌಂದರ್ಯವನ್ನು ಕಂಡು ಹಿಡಿದು 'ಜಾನು ತೆಲುಗಿನ' ಪ್ರಯೋಗಗಳನ್ನೇ ತನ್ನ ಕಾವ್ಯಗಳಲ್ಲಿ ಹೆಚ್ಚಾಗಿ ಇಟ್ಟುಕೊಂಡಿದ್ದಾನೆ. ಸಾಧಾರಣ ಹಳ್ಳಿಯ ಜನರು ಮಾತಾಡುವ ಮಾತುಗಳನ್ನೇ ಅವನು ಕಿವಿಗಿಂಪಾಗುವಂತೆ ಜೋಡಿಸಿ ಸಂಸ್ಕೃತ ಪದಗಳನ್ನು ಅಲ್ಲಲ್ಲಿ ಪ್ರಯೋಗಿಸುತ್ತ ತನ್ನ ಶೈಲಿಯನ್ನು ಸರ್ವಜನಾಕರ್ಷಕವಾಗಿ ಮಾಡಿದ್ದಾನೆ.

ಪಾಲ್ಕುರಿಕೆ ಸೋಮಾರಾಧ್ಯನು ನಾಡಿನಲ್ಲಿ ಸಂಚರಿಸುತ್ತಿರುವಾಗ ೬೪ ಶೀಲಗಳ ಕಟ್ಟಾಚರಣೆಗಳು ಹೆಚ್ಚಚ್ಚು ರೂಢವಾಗುತ್ತಾ ಇದ್ದುದು ಅವನ ಲಕ್ಷ್ಯಕ್ಕೆ ಬಂದಿರಬಹುದೆಂದು ನಮಗೆ ತೋರುತ್ತದೆ. ಅವುಗಳು ಬಹು ಮಹತ್ವವಾದವುಗಳೆಂದು ಸೋಮಾರಾಧ್ಯನು ತಿಳಿದು ಅವನು ಅವುಗಳ ರೀತಿಯನ್ನು ನಿರೂಪಿಸುವ ಒಂದು ಮಹತ್ವದ ಗ್ರಂಥವನ್ನು ರಚಿಸಿದನು. ಅದಕ್ಕೆ ಶೀಲಸಂಪಾದನೆ ಎಂಬ ಹೆಸರು. ಹೀಗೆ ಅವುಗಳನ್ನು ನಿರೂಪಿಸಿದ ಬಳಿಕ ಅವುಗಳಂತೆ ತಾನೂ ನಡಿಯಬೇಕೆಂಬ ಇಚ್ಛೆಯು ಅವನಲ್ಲಿ ಪ್ರಬಲವಾಗಿರಬೇಕು.

ಈ ವಿಷಯವಾಗಿ ಅವನು ಮೊದಲು ತನ್ನ ಗುರುವಿನಾಜ್ಞೆಯನ್ನು ಹೊಂದಿ ಒಂದು ದಿವಸ ಭಕ್ತಮಾಹೇಶ್ವರರ ಸಭೆಯನ್ನು ನೆರಿಸಿದನು. ಸೋಮಾರಾಧ್ಯನು ಸಭೆಯಲ್ಲಿ ಎಲ್ಲರಿಗೆ ಕೈಮುಗಿದು ಇನ್ನುಮೇಲೆ ನಾನು ೬೪ ಶೀಲಗಳನ್ನು ನಡಿಸಲು ಅಪ್ಪಣೆಕೊಡಬೇಕೆಂದು ಕೇಳಿಕೊಂಡನು. ಹೀಗೆ ಅವರ ಅಪ್ಪಣೆಯನ್ನು ಹೊಂದಿ ಪ್ರಶಸ್ತನಾಗಿ ಆಚರಿಸಹತ್ತಿದನು.

ಅವನು ಕೈಕೊಂಡ ವ್ರತಗಳಲ್ಲಿ ಲಿಂಗಮುದ್ರೆಯ ಭೂಮಿಯಲ್ಲದೆ ಮತ್ತೆಲ್ಲಿಯೂ ಸಂಚರಿಸಲಾರೆನೆಂಬುವು ಒಂದಾಗಿತ್ತು. ಇದನ್ನು ಶಿವನು ತಿಳಿದು ಗಣಪುರದರಸನ ಸ್ವಪ್ನದಲ್ಲಿ ಬಂದು—ನೀನು ಸೋಮಾರಾಧ್ಯನಿಗೆ ಲಿಂಗಮುದ್ರೆಯ ಭೂಮಿಯನ್ನು ಕೊಡೆಂದು ಅಜ್ಞಾಪಿಸಿದನು. ಆಗ ಅರಸನು ಸೋಮಾರಾಧ್ಯನ ವ್ರತವನ್ನು ತಿಳಿದುಕೊಂಡು ದೇಶ

ದಲ್ಲಿ ಗಾವುದಕೊಂದೂರಲ್ಲಿ ಲಿಂಗಮುದ್ರೆಯ ಭೂಮಿಯನ್ನು ಅವನಿಗೆ ದಯಪಾಲಿಸಿದನು. ಈ ಪ್ರಕಾರ ಸೋಮಾರಾಧ್ಯನು ೬೪ ಶೀಲಗಳಂತೆ ಆಚರಿಸಲು ಪ್ರಾರಂಭಿಸಿದನು.

ಸೋಮಾರಾಧ್ಯನು ಈ ಪ್ರಕಾರ ಕಟ್ಟಾಚರಣೆಯಲ್ಲಿರುವದನ್ನು ದೇಶದಲ್ಲಿಯ ಜನರು ತಿಳಿದು ಅವನಿಗೋಸ್ಕರ ಅತ್ಯಂತ ಭಕ್ತಿ ಭಾವವನ್ನು ತಾಳಿದವರಾದರು. ಇದರಿಂದ ಅವನಲ್ಲಿಯೂ ಒಂದು ಪ್ರಬಲವಾದ ಅಂತಃಶಕ್ತಿಯು ಉತ್ಪನ್ನವಾಯಿತು. ಇದು ಜನರ ಪ್ರತ್ಯಯಕ್ಕೆ ಆಗಿಂದಾಗ್ಗೆ ಬರಹತ್ತಿತು. ಅವನ ಚರಿತ್ರೆಯಲ್ಲಿ ಈ ಬಗ್ಗೆ ಕಂಡುಬರುವ ಉದಾಹರಣೆಯೊಂದನ್ನು ನಾವು ಕೆಳಗೆ ವಿವರಿಸಿದ್ದೇವೆ.

ಸೋಮಾರಾಧ್ಯನು ಒಂದು ದಿವಸ ಶ್ರೀಶೈಲಪರ್ವತದ ಮಹಿಮೆಯನ್ನು ಭಕ್ತಗಣಂಗಳಲ್ಲಿ ಹೇಳುತ್ತ ಇರಲಾಗಿ, ಅವನ ಬಾಯಿಂದ ಒಂದು ಮರ ಅದಕ್ಕೆ ಹಲವು ತೆರದ ಪುಷ್ಪ ಎಂಬ ಶಬ್ದಗಳು ಹೊರಟವು. ಆಗ ಅಲ್ಲಿದ್ದ ಅವನ ಆಳಿಯನಾದ ಗುರಾಮಾತ್ಯನು ಇದನ್ನು ಕೇಳಿ ಹೀಗಿರುವದು ನಿಜವೇ ಎಂದು ಪ್ರಶ್ನೆ ಮಾಡಿದನು. ಅವನು ದಿನಾಲು ತನ್ನ ಪೂಜೆಯಲ್ಲಿ ಐದು ಬೇರೆ ಬೇರೆ ಪುಷ್ಪಗಳನ್ನು ತನ್ನ ಲಿಂಗಕ್ಕೆ ಅರ್ಪಿಸುವ ಕ್ರಮವನ್ನು ಇಟ್ಟುಕೊಂಡಿದ್ದನು. ಸೋಮಾರಾಧ್ಯನು ಇದನ್ನು ತಿಳಿದು ನಮ್ಮ ಹಿತ್ತಿಲಲ್ಲಿ ಒಂದು ಗಿಡವಿದೆ. ಅದರಲ್ಲಿ ಐದು ಪುಷ್ಪಗಳನ್ನು ತೆಗೆದುಕೊಂಡು ಬಾ ಎಂದು ಹೇಳಿದನು. ಗುರಾಮಾತ್ಯನು ಹಿತ್ತಿಲಲ್ಲಿ ಹೋಗಿ ತಿರುಗಿ ಬಂದು, ಅಲ್ಲಿ ಹತ್ತಿಯ ಗಿಡವೊಂದಿದೆ, ಬೇರೆ ಗಿಡಗಳಿಲ್ಲ ಎಂದು ಹೇಳಿದನು. ಅದಕ್ಕೆ ಸೋಮಾರಾಧ್ಯನು ಈ ಭಾವವನ್ನು ಬಿಟ್ಟು ನಾನು ಹೇಳಿದಂತೆ ನೋಡು ಎಂದು ನುಡಿದನು. ಆಗ ಗುರಾಮಾತ್ಯನು ಹಾಗೆಯೇ ಹಿತ್ತಲಲ್ಲಿ ಹೋಗಿ ನೋಡಲು ಆ ಗಿಡಕ್ಕೆ ಐದು ಹೂವುಗಳಿರುವದು ಕಂಡುಬಂದಿತು. ಅದರ ಬೇರೆ ಬೇರೆ ಕೊನೆಗಳಲ್ಲಿ ಜಾಜಿ, ಸಂಪಿಗೆ, ಮಲ್ಲಿಗೆ, ತಾವರೆ, ಕಣಗಿಲೆ ಪುಷ್ಪಗಳನ್ನು ಕಂಡು ಆಶ್ಚರ್ಯಪಟ್ಟು ಹೀಗಾದುದನ್ನು ಸಭಿಕರಿಗೆ ತಿಳಿಸಿದನು. ಸೋಮಾರಾಧ್ಯನಲ್ಲಿ ಶೀಲಗಳ ಮೂಲಕ ಒಂದು ವಿಲಕ್ಷಣ ಸಾಮರ್ಥ್ಯವು ಉಂಟಾಗಿದ್ದು, ಇದರ ಪರಿಣಾಮವೇ ಇದೆಂದು ಅಲ್ಲಿ ನೆರೆದವರು ಭಾವಿಸಿ ಅವನನ್ನು ಸ್ತುತಿಸುವವರಾದರು.



# ಶಿವಾನುಭವ

ಸಂಪುಟ ೨೪ ] [ ಸಂಚಿಕೆ ೨



ನವ್ಹೆಂಬರ ೧೯೪೯



ವಿಜಾಪುರ.

# ವಿಷಯುಗಳು.







# ಶಿವಾನುಭವ

| ವರ್ಷ ೨೪ | ನವ್ಹೆಂಬರ ೧೯೪೯ | ಸಂಚಿಕೆ ೩ |
| --- | --- | --- |

## ವಿಕಾಸ ವಾದ.

(ಲೇಖಕ:- ಕಲ್ಯಾಣಪ್ಪಾ ಬ್ಯಾಳಿ. ಬಿ. ಎ. ಬಿ. ಟಿ. ವಿಜಾಪುರ)

ಇದ್ದಂತೆ ಇರಲಿ, ದೇವರು ಮಾಡಿದಂತೆ ಆಗಲಿ, ಎಂಬುದು ವಿಕಾಸವಲ್ಲ. ಅದು ಯಥಾಸ್ಥಿತಿಯ ಗುಣವು. ಇದ್ದ ಸ್ಥಿತಿಯನ್ನು ಬಿಟ್ಟು ಅಧಃಪತಕ್ಕೆ ಇಳಿಯುವದು ವಿಕಾಸವಲ್ಲ. ಅದು ವಿಕಾಸದ ವಿಪರ್ಯಾಸವು. ಇದ್ದ ಸ್ಥಿತಿಗಿಂತ ಕ್ರಮೇಣ ಹೆಚ್ಚಿನ ಸ್ಥಿತಿಗೇರುವದೇ ವಿಕಾಸ. ಸಣ್ಣದು ದೊಡ್ಡದಾಗುವದು ವಿಕಾಸ. ಕೀಳು ಮೇಲಾಗುವದು ವಿಕಾಸ. ಕೆಡಕು ಒಳಿತಾಗುವದು ವಿಕಾಸ. ಮನುಷ್ಯತ್ವವು ದೇವತ್ವವಾಗುವದು ವಿಕಾಸ. ಅಂಕುರವು ದ್ರುಮವಾಗುವದಾಗಲಿ, ಮಿಡಿಯು ಹಣ್ಣಾಗುವದಾಗಲಿ, ಎಳೆಗರುವು ಎತ್ತಾಗುವದಾಗಲಿ, ಕೂಸು ಮನುಷ್ಯನಾಗುವದಾಗಲಿ ಪ್ರಾಕೃತಿಕ ವಿಕಾಸವೆನಿಸುತ್ತದೆ. ಬಡವನು ಬಲ್ಲಿದನಾಗುವದು, ಗುಲಾಮನು ಸ್ವತಂತ್ರನಾಗುವದು, ದಡ್ಡನು ಜಾಣನಾಗುವದು, ದುರ್ಬಲನು ಬಲಶಾಲಿಯಾಗುವದು, ದುರ್ಗುಣಿಯು ಗುಣವಂತನಾಗುವದು- ಇದು ಸಾಮಾಜಿಕ ವಿಕಾಸವೆನಿಸುತ್ತದೆ. ಭಕ್ತನು ಮಹೇಶನಾಗುವದು, ಮಹೇಶನು ಪ್ರಸಾದಿಯಾಗುವದು, ಪ್ರಸಾದಿಯು ಪ್ರಾಣಲಿಂಗಿಯಾಗುವದು, ಪ್ರಾಣಲಿಂಗಿಯು ಶರಣನಾಗುವದು, ಶರಣನು ಐಕ್ಯಸ್ಥಲಕ್ಕೇರುವದು, ಆಧ್ಯಾತ್ಮಿಕ ವಿಕಾಸವೆನಿಸುತ್ತದೆ. ಆಧ್ಯಾತ್ಮಿಕ ವಿಕಾಸವೇ ಮೇಲ್ತರದ ವಿಕಾಸ

ವಿರಾಟ್ ಸ್ವರೂಪಿಯಾದ ಪರಮಾತ್ಮನು ಆಕುಂಚನ ಹೊಂದುತ್ತ ಹೊಂದುತ್ತ ಕೊನೆಗೆ ಮಾನವನಾದನು. ಆ ಮಾನವನು ವಿಕಾಸ

ಹೊಂದುತ್ತಾ ಹೊಂದುತ್ತಾ ಪರಮಾತ್ಮನಾಗುವದೇ ನಿಜವಾದ ವಿಕಾಸ. ಪರವಸ್ತುವು ಮನುಷ್ಯನಾದ ಪರಿಯೆಂತೆಂದರೆ, ಮೊದ ಮೊದಲು ಆ ಪರವಸ್ತುವು ಏನೇನೂ ಇಲ್ಲದ ಶೂನ್ಯಸ್ಥಿತಿಯಲ್ಲಿದ್ದಿತು. ಅದು ತನ್ನ ಇಚ್ಛೆಯಿಂದ ಚೇತನ ಹೊಂದಿ ಚೈತನ್ಯ ಸ್ವರೂಪವಾಯಿತು. ಆದರ ಚೇತನಾತರಂಗಗಳು ಎಲ್ಲೆಡೆಯಲ್ಲಿಯೂ ಹರಡಿ ಆಕಾಶವಾಯಿತು. ಆಕಾಶವಲ್ಲಿ ತರಂಗಗಳೆದ್ದು ವಾಯುವುಂಟಾಯಿತು. ಆಕಾಶ ವಾಯು ಗಳ ಸಂಕಲನದಿಂದ ಸೂರ್ಯ, ಚಂದ್ರ, ನಕ್ಷತ್ರಗಳು ಹುಟ್ಟಿ ಎಲ್ಲೆಡೆ ಯಲ್ಲಿಯೂ ಪ್ರಕಾಶವು ಹರಡಿತು. ಪ್ರಕಾಶದ ತರಂಗಗಳು, ಹಾಗೂ ವಾಯು ತರಂಗಗಳ ಘರ್ಷಣೆಯಿಂದ ಜಲವು ಪ್ರಾದುರ್ಭವಿಸಿತು. ಜಲವು ಹೆಪ್ಪುಗಟ್ಟಿ ಪೃಥ್ವಿಯುಂಟಾಯಿತು. ಪೃಥ್ವಿಯಲ್ಲಿ ವನಸ್ಪತಿಗಳು ಖನಿಜಗಳು, ಜೀವರಾಶಿಗಳುದ್ಭವಿಸಿದವು. ಜೀವರಾಶಿಗಳಲ್ಲಿ ಇರುವೆ ಉಳ ಲಕ್ಷ ಜೀವರುಗಳು ಉತ್ಕ್ರಾಂತಿ ತತ್ವದ ಪ್ರಕಾರ ಕೊನೆಗೆ ಮಾನವ ಜೀವನಕ್ಕೆ ಬಂದು ತಲ್ಪಿದವು.

ಈ ಮಾನವ ಜೀವನವು ವಿಕಾಸಹೊಂದುತ್ತಾ ಕುಟುಂಬ, ಸಮಾಜ, ದೇಶ, ಜಗತ್ತು ಈ ಪ್ರಕಾರ ಪರ್ಯವಸಾನ ಹೊಂದಿದ್ದು ನಮಗೆ ಗೋಚರವಾಗುತ್ತದೆ. ದೇವನ ನಿವೃತ್ತಿ ಪರವಾದ ಇಚ್ಛೆಯಿಂದ ಮನು ಷ್ಯನಾದ ವ್ಯಕ್ತಿಯು ಪುನಃ ದೇವತ್ವವನ್ನು ಹೊಂದಬೇಕಾದರೆ ವ್ಯಕ್ತಿ ವಿಕಾಸ, ಕುಟುಂಬವಿಕಾಸ, ಸಮಾಜವಿಕಾಸ ,ದೇಶವಿಕಾಸ, ಜಗತ್ತಿನ ವಿಕಾಸಗಳಲ್ಲಿ ಕ್ರಮೇಣ ತನ್ನ ಜೀವನವನ್ನು ಸಮರ್ಪಗೊಳಿಸಬೇಕಾ ಗುತ್ತದೆ ಅಂದರೆ ಮೊದಲು ಮನುಷ್ಯನು ತಾನು ಪರಿಪಕ್ವದಿಶೆ ಯನ್ನು ಹೊಂದಿ ಅನಂತರ ಕ್ರಮೇಣ ತನ್ನ ಕುಟುಂಬ, ಸಮಾಜ, ದೇಶ, ಜಗತ್ತುಗಳನ್ನು ಪರಿಪಕ್ವದಿಶೆಗೊಯ್ಯಲು ಹೆಣಗಾಡುವದೇ ವಿಕಾ ಸವಾದದ ಗುರಿಯಾಗಿರುತ್ತದೆ. ಜಗತ್ತಿನ ಮಾನವಕೋಟಿಯೆಲ್ಲ ಒಬ್ಬ ಪರಮಾತ್ಮನ ಮಕ್ಕಳು. ಅವರು ತನ್ನ ಬಂಧುಗಳು ಅವರ ಹಿತವೇ ತನ್ನ ಸಂತೋಷ ಎಂದು ಸರ್ವರಿಗೂ ಲೇಸನ್ನೇ ಬಯಸುವ ಅದಕ್ಕಾಗಿ ಎಡಬಿಡದೆ ಪ್ರಯತ್ನಿಸುವ ಮಹಾವಿಭೂತಿಗೇ ನಾವು ದೇವಾಂಶನೆಂದು ಅದೇಕೆ ದೇವನೇ ಅವನೆಂದು ಕರೆಯುತ್ತಿದ್ದೇವೆ. ಈ ಮೇರೆಗೆ ಜಗ ತ್ತಿನ ಮಾನವಕೋಟಿಯು ಸುಖಶಾಂತಿಗಾಗಿ ತನ್ನ ಆತ್ಮವನ್ನು ಮಾರ್ಪ ಡಿಸಿಕೊಳ್ಳುವದೇ ವಿಕಾಸದ ಕೊನೆಯ ಮೆಟ್ಟಲು.

ಮನುಷ್ಯನು ಮೊದಲು ಸ್ವತಃ ತಾನೇ ಪರಿಪಕ್ವ ಸ್ಥಿತಿಯನ್ನು ಹೊಂದದೆ ತನ್ನ ಕುಟುಂಬವನ್ನಾಗಲಿ, ಸಮಾಜವನ್ನಾಗಲಿ, ದೇಶವನ್ನಾಗಲಿ, ಜಗತ್ತನ್ನಾಗಲಿ ಉದ್ಧರಿಸಲಾರನು. ಅವುಗಳಲ್ಲಿ ತನ್ನ ಜೀವನವನ್ನು ಸಮರಸಗೊಳಿಸಲು ಸಮರ್ಥನಾಗಲಾರನು. ಮನುಷ್ಯನು ಪರಿಪಕ್ವ ದಿಶೆಗೇರ ಬೇಕಾದರೆ ದೊಡ್ಡ ತಪಸ್ಸೂ, ಅನುಭವವೂ ಕಾರ್ಯವೂ ಬೇಕು. ಆತನು ಜಗತ್ತಿನ ಆಗು ಹೋಗುಗಳನ್ನು ಒಳ್ಳೆ ಚಿಕಿತ್ಸಕ ಬುದ್ಧಿಯಿಂದ ಪರಿಶೀಲಿಸಿ ತನ್ನ ಹೃದಯ ಸಂಸ್ಕಾರವನ್ನು ಬೆಳೆಯಿಸುತ್ತಾಹೋಗಬೇಕು. ಸಂಸ್ಕೃತಿಗಳಲ್ಲಿ ಕರಸಂಸ್ಕೃತಿ, ಉರುಸಂಸ್ಕೃತಿ; ಶಿರಸಂಸ್ಕೃತಿ. ಎಂದು ಮೂರು ತೆರನುಂಟು. ಕರಸಂಸ್ಕೃತಿಯೆಂದರೆ ಉದ್ಯೋಗ ವ್ಯವಸಾಯ, ಕೈಗಾರಿಕೆ, ಕಲಾಕೌಶಲ್ಯಗಳಿಂದ ತನ್ನ ವ್ಯಕ್ತಿತ್ವವನ್ನು ಜಗತ್ತಿಗೆ ತೋರ್ಪಡಿಸುವದು. ಉರುಸಂಸ್ಕೃತಿಯೆಂದರೆ ಸುಖ, ದುಃಖ ಪ್ರೇಮ, ಆನಂದಗಳನ್ನು ತಾನು ಅನುಭವಿಸಿ ಜಗತ್ತಿನ ಸುಖದುಃಖ, ಪ್ರೇಮಾನಂದಗಳಲ್ಲಿ ತಾನು ಬೆರೆತು ಹೋಗುವದು. ಶಿರಸಂಸ್ಕೃತಿಯೆಂದರೆ ಜಗತ್ತಿನಲ್ಲಿ ಅಡಗಿರುವ ಸತ್ಯವನ್ನು ಸಂಶೋಧಿಸಿ ಅದರ ಸುಖವನ್ನು ತಾನು ಅನುಭವಿಸಿ ಅನ್ಯರಿಗೂ ಅದರ ಆನಂದವನ್ನುಂಟುಮಾಡುವದು. ಈ ಸಂಸ್ಕೃತಿಗಳು ಸ್ವಾರ್ಥಪರವಾಗಿರದೆ ಜಗತ್ತಿನ ಹಿತಾರ್ಥವಾಗಿ ಪರಿಣಮಿಸುವದೇ ವಿಕಾಸ ಕರಸಂಸ್ಕೃತಿಯಲ್ಲಿ ಸೌಂದರ್ಯದ ಕಳೆಯಿದೆ ಉರು ಸಂಸ್ಕೃತಿಯಲ್ಲಿ ಭಾವವಿದೆ. ಶಿರಸಂಸ್ಕೃತಿಯಲ್ಲಿ ಸತ್ಯಸ್ವರೂಪವಿದೆ “ ಸತ್ಯಂ ಶಿವಂ ಸುಂದರಂ ” ಎಂಬೀ ತ್ರಿಕೂಟವನ್ನು ಹಾಸು ಹೊಕ್ಕಾಗಿ ಜಗತ್ತಿನಲ್ಲಿ ಬೆಳಗಿಸುವದೇ ವಿಕಾಸದ ಗುರಿ.

ಲೌಕಿಕ ದೃಷ್ಟಿಯಿಂದ ಒಬ್ಬ ವ್ಯಕ್ತಿಯು ವಿಕಾಸವನ್ನು ಆತನ ಆರ್ಥಿಕ, ಶಾರೀರಿಕ, ಬೌದ್ಧಿಕ, ನೈತಿಕ ಹಾಗೂ ಧಾರ್ಮಿಕ ಉನ್ನತಿಯೆಂಬ ಅಳತೆಗೋಲಿನಿಂದ ಅಳೆಯಬಹುದು. ಆದರೆ ಲೌಕಿಕಕ್ಕೂ ಪಾರಮಾರ್ಥಕ್ಕೂ ಭಿನ್ನತ್ವವಿಲ್ಲ. ಲೌಕಿಕೋನ್ನತಿಯು ಸ್ವಾರ್ಥಪರವಾಗಿರದೆ ಪರಾರ್ಥಪರವಾಗಿದ್ದರೆ ಅದೇ ಅಧ್ಯಾತ್ಮ ವಿಕಾಸವೆನಿಸುವದು. ಮನುಷ್ಯನಲ್ಲಿ ಸ್ವಾರ್ಥವು ಅಂಟಿಕೊಂಡಿರುವದರಿಂದ ಅವನು ಅಧೋಗತಿಗಿಳಿಯುತ್ತಾನೆ. ಆದರೆ ಅಸ್ವಾರ್ಥದ ದಿಶೆಯನ್ನು ಪರೋಪಕಾರಾರ್ಥವಾಗಿ ತಿರುಗಿಸಿದರೆ ಅದೇ ಯೋಗ್ಯ ವಿಕಾಸವೆನಿಸುತ್ತದೆ ವ್ಯಕ್ತಿಯ ಆರ್ಥಿಕ ವಿಕಾಸವೆಂದರೆ ಒಕ್ಕಲತನ, ವ್ಯಾಪಾರ, ಉದ್ಯೋಗ, ಕೈಗಾರಿಕೆ, ಗಿರಣಿ,

ಕಾರಖಾನೆ ಮುಂತಾದವುಗಳ ಮುಖ್ಯಾಂತರವಾಗಿ ಹೇರಳ ಹಣವನ್ನು ಗಳಿಸಿ ಸುಖಿಸುವದು. ಶಾರೀರಕ ವಿಕಾಸವೆಂದರೆ ದೇಹವನ್ನು ಸದೃಢವಾಗಿಯೂ ಸುಂದರವಾಗಿಯೂ ನಿರೋಗಿಯಾಗಿಯೂ ಇಟ್ಟುಕೊಂಡು ಬಹುದಿನ ಬಾಳುವದು. ಬೌದ್ಧಿಕ ವಿಕಾಸವೆಂದರೆ ಪ್ರಪಂಚದಲ್ಲಿ ನಡೆಯುವ ಸಾಹಿತ್ಯ, ವಿಜ್ಞಾನ, ಕಲಾಕೌಶಲ್ಯ, ಕೈಗಾರಿಕೆ, ಯಾಂತ್ರಿಕೋದ್ಯೋಗ ಮುಂತಾದ ವಿಷಯಗಳಲ್ಲಿ ನಿಪುಣತೆಯನ್ನು ಪಡೆಯುವದು. ನೈತಿಕ ವಿಕಾಸವೆಂದರೆ ಸಮಾಜದಲ್ಲಿ ವ್ಯವಹರಿಸುವಾಗ ತನ್ನ ಕಣ್ಣು, ನಾಲಿಗೆ, ಮನಗಳನ್ನು ಪರಿಶುದ್ಧವಾಗಿಟ್ಟುಕೊಂಡು ಶೀಲವನ್ನು ಕಾಪಾಡಿಕೊಂಡು ಶಿಷ್ಟಾಚಾರವನ್ನನುಸರಿಸಿ ನಡೆಯುವದು. ಧಾರ್ಮಿಕ ವಿಕಾಸವೆಂದರೆ ಭಕ್ತಿ, ನಿಷ್ಠೆ, ಸಾವಧಾನ, ಅನುಭವ, ಸಮರಸ ಆನಂದಗಳಿಂದ ದೇವತ್ವವನ್ನು ಹೊಂದುವದು. ಆಯಾಯ ವ್ಯಕ್ತಿಗಳು ತಮ್ಮ ಅಭಿರುಚಿ, ಬುದ್ಧಿ, ಕರ್ಮಾನುಸಾರವಾಗಿ ಒಂದಿಲ್ಲೊಂದು ರೀತಿಯಿಂದ ತಮ್ಮ ವಿಕಾಸವನ್ನು ಮಾಡಲು ಹೆಣಗಾಡುತ್ತಾರೆ. ಆದರೆ ಸ್ವಾರ್ಥ ದೃಷ್ಟಿಯಿಂದ ಯಾವ ಕಾರ್ಯವನ್ನೂ ನಾವು ಮಾಡದೆ ನಮ್ಮ ಯೋಗ್ಯತಾನುಸಾರವಾಗಿ ನಮ್ಮ ಕುಟುಂಬ, ಸಮಾಜ, ದೇಶ, ಜಗತ್ತು ಇವುಗಳ ಕಲ್ಯಾಣಾರ್ಥವಾಗಿ ಮಾಡುವದೇ ನಿಜವಾದ ವಿಕಾಸ.

ಮನುಷ್ಯನಿಗೆ ದುಡ್ಡು ಬೇಕು, ಶರೀರದ ಸಂಪತ್ತು ಬೇಕು, ಆತನ ಬುದ್ಧಿಯು ಬೆಳವಣಿಗೆಯಾಗಬೇಕು, ಆತನ ನೀತಿ ನಡಾವಳಿಗಳು ಉಚ್ಚತರದವಾಗಬೇಕು, ಆತನು ಭಕ್ತಿ, ಜ್ಞಾನ, ವೈರಾಗ್ಯ ಸಂಪನ್ನನಾಗಬೇಕು. ಆದರೆ ಅವವುಗಳ ವ್ಯಾಪ್ತಿಯ ಮೇಲೆ ಮನುಷ್ಯನ ಯೋಗ್ಯತೆಯು ಅವಲಂಬಿಸಿರುತ್ತದೆ. ಮನುಷ್ಯನು ಅವೆಲ್ಲವುಗಳ ಉಪಯೋಗವನ್ನು ತನಗಾಗಿಯೇ ಮಾಡಿಕೊಂಡರೆ ಅವನ ಯೋಗ್ಯತೆಯು ಕೀರ ಕಡಿಮೆತರಹದ್ದೆನಿಸುತ್ತದೆ. ಆದರೆ ಅವುಗಳ ಉಪಯೋಗವನ್ನು ತನ್ನ ಕುಟುಂಬದ ಹಿತಕ್ಕಾಗಿ ಮಾಡುವವನ ಯೋಗ್ಯತೆಯು ಮೊದಲಿನಕ್ಕಿಂತ ಹೆಚ್ಚಿನದೆನಿಸಿಕೊಳ್ಳುತ್ತದೆ. ಅದೇ ಮೇರೆಗೆ ಅವುಗಳ ಉಪಯೋಗವು ಸಮಾಜಕ್ಕೆ ಸಲ್ಲುತ್ತಿದ್ದರೆ ಅವನ ಯೋಗ್ಯತೆಯು ಮತ್ತಿಷ್ಟು ಹೆಚ್ಚಿನಂತಾಗುತ್ತದೆ. ಅದರಂತೆ ದೇಶ ಹಿತಕ್ಕಾಗಿ ಕೆಲಸ ಮಾಡುವವರ ಯೋಗ್ಯತೆಯು ಇನ್ನಿಷ್ಟು ಬೆಳೆಯುವದು. ಅದೇ ಪ್ರಕಾರ ಜಗತ್ತಿಗೆ ತಮ್ಮ ಆಚಾರ ವಿಚಾರ ಸಂಸ್ಕೃತಿಗಳನ್ನು ಧಾರೆಯರೆಯುವ ಮಹಾ

ಪುರುಷರ ಯೋಗ್ಯತೆಯು ಎಲ್ಲಕ್ಕೂ ಶ್ರೇಷ್ಠವಾದುದು. ಅಂಥವರೇ ವಿಭೂತಿಗಳು, ಅವತಾರಿ ಪುರುಷರು, ದೇವರು. ಅಂತೆಯೇ ಭಗವಾನ್ ಬುದ್ಧ, ಕ್ರೈಸ್ತ, ಮುಹಮ್ಮದ ಪೈಗಂಬರ, ಬಸವೇಶ್ವರ, ರಾಮಕೃಷ್ಣ, ಪರಮಹಂಸ, ಮ. ಗಾಂಧಿ ಇವರು ಜಗದ್ವಿಭೂತಿಗಳು. ಇವರ ತತ್ವಗಳು ಜಗತ್ತಿನ ಸುಖ ಶಾಂತಿಗೆ ಸಾಧನಗಳಾಗಿವೆ.

ಮನುಷ್ಯನು ನಿಜವಾಗಿ ವಿಕಾಸಹೊಂದಬೇಕಾದರೆ ಆ ಜಗದ್ವಿಭೂತಿಗಳ ತತ್ವಗಳನ್ನು ಆದರ್ಶವಾಗಿಟ್ಟುಕೊಂಡು ಪ್ರಪಂಚದಲ್ಲಿ ತನ್ನ ನಡುವಳಿಕೆಯನ್ನು ಸುಧಾರಿಸುತ್ತ ಹೋಗಬೇಕು. ಮನುಷ್ಯನು ಪರಿಶುದ್ಧ ಕಾರ್ಯದಿಂದ ವೆಗ್ಗಳವಾದ ಸಂಪತ್ತು ಗಳಿಸಬೇಕು. ಕಳ್ಳಪೇಟೆಯಿಂದಲ್ಲ ಆದರೆ ಆ ಸಂಪತ್ತಿನ ಭೋಗವೆಲ್ಲ ತನಗಾಗಿಯೇ ಇರಬೇಕೆಂಬದು ಪಾಪದ ಕೆಲಸ. ಹಾಗೆ ಆಧುನಿಕ ಜಗತ್ತಿನಲ್ಲಿ ನಡೆದದ್ದರಿಂದಲೇ ಸಾಮಾಜಿಕ ಕ್ರಾಂತಿ ವಾದವು ತಲೆಯೆತ್ತಿದೆ. ಸ್ವಾರ್ಥಮಯ ಜೀವನವು ಮಾನವ ಸೃಷ್ಟಿಗೆ ವಿಘಾತಕವಾಗಿದೆ. ಅದರ ವಿನಿಯೋಗವು ಲೋಕಕಲ್ಯಾಣಕ್ಕಾಗಿರುವದೇ ಆಧ್ಯಾತ್ಮಸಂಸ್ಕೃತಿ. ನಾವು ಶಾರೀರಿಕ ಸಂಪತ್ತನ್ನು ಪಡೆದು ಕೋಣನಂತೆ ಕೊಬ್ಬಿದರೆ ತೀರಲಿಲ್ಲ. ಗೂಬೆಯಂತೆ ಬಿಹುದಿನ ಬಾಳಿದರೆ ಪ್ರಯೋಜನವಿಲ್ಲ. ನಮ್ಮ ಶಕ್ತಿಯು ಪರಹಿತಕ್ಕಾಗಿ ವಿನಿಯೋಗವಾದರೆ ಅದೇ ಆಧ್ಯಾತ್ಮಸಂಸ್ಕೃತಿ. ನಾವು ವಿದ್ಯಾಬುದ್ಧಿಯನ್ನು ಯಥೇಷ್ಟವಾಗಿ ಗಳಿಸಿ ಘನತಂವಾದ ಅಧಿಕಾರ ಸಂಪಾದಿಸಿ ಬಂಗಲೆಯನ್ನು ಕಟ್ಟಿಸಿಕೊಂಡು ತನ್ನಷ್ಟಕ್ಕೆ ತಾನೇ ಐಷಆರಾಮದಿಂದಿದ್ದರೆ ಆ ಜೀವನವು ಹೇಯವಾದುದು. ಆದರೆ ತನ್ನ ವಿದ್ಯಾಬುದ್ಧಿಗಳ ಉಪಯೋಗವನ್ನು ಅನ್ಯರಿಗೆ ಮಾಡಿಕೊಡುವದೇ ಆಧ್ಯಾತ್ಮಿಕ ಸಂಸ್ಕೃತಿ. ಮನುಷ್ಯನು ತನ್ನಷ್ಟಕ್ಕೆತಾನು ಸದಾಚಾರಿಯೂ ಸದ್ಗುಣಿಯೂ ಆಗಿ ಬಾಳಿದರೆ ತೀರದು. ತನ್ನ ಮಕ್ಕಳುಮರಿಗಳನ್ನೂ ಕುಟುಂಬವನ್ನೂ ಸಮಾಜವನ್ನೂ ದೇಶವನ್ನೂ ಜಗತ್ತನ್ನೂ ನೈತಿಕ ಮಟ್ಟಕ್ಕೇರಿಸಬೇಕು. ಅದೇ ಆಧ್ಯಾತ್ಮಿಕ ಸಂಸ್ಕೃತಿ ಅದರಂತೆ ಭಕ್ತಿ, ಜ್ಞಾನ ವೈರಾಗ್ಯ ಸಂಪನ್ನನಾದ ಯೋಗಿಯು ಏಕಾಂತವಾದ ಮಠದಲ್ಲಿಯೋ ಪರ್ಣಶಾಲೆಯಲ್ಲಿಯೋ ಇದ್ದುಕೊಂಡು ತನ್ನ ಉಜ್ವಲ ಶಕ್ತಿಗಳನ್ನು ಅಲ್ಲಿಯೇ ಲಯಗೊಳಿಸಿದರೆ ಅದರಿಂದೇನೂ ಪ್ರಯೋಜನವಿಲ್ಲ ಅವುಗಳನ್ನು ಜಗತ್ತಿನಲ್ಲಿ ಹರಡಿ ಜನತೆಯನ್ನು ಉದಾತ್ತಗೊಳಿಸುವದೇ ಆಧ್ಯಾತ್ಮಿಕ ಸಂಸ್ಕೃತಿ. ಈರೀತಿಯಾಗಿ ಪ್ರತಿ

ಯೊಂದು ಸಂಸ್ಕೃತಿಯು ಆಧ್ಯಾತ್ಮಿಕ ಸಂಸ್ಕೃತಿಯೇ ಆಗಿರುವದರಿಂದ ಒಂದು ಹೆಚ್ಚಲ್ಲ, ಇನ್ನೊಂದು ಕಡಿಮೆಯಲ್ಲ. ಸ್ವಾರ್ಥಮಯವಾಗಿ ಮಾಡುವ ಸಂಸ್ಕಾರವೆಲ್ಲ ಹೀನವಾದುದೇ. ಪರಾರ್ಥವಾಗಿ ಮಾಡುವದೆಲ್ಲವೂ ಉದಾತ್ತವೇ ಆಗಿದೆ. ಉದಾತ್ತವಾಗಿ ಬಾಳುವದೇ ನಿಜವಾದ ವಿಕಾಸ.

ಆಧುನಿಕ ಜಗತ್ತಿನಲ್ಲಿ ಸ್ವಾರ್ಥ, ಹೋರಾಟ, ಕೊಲೆಸುಲಿಗೆ, ರಕ್ತಪಾತ, ಅಶಾಂತತೆ- ಮುಂತಾದ ಅನಿಷ್ಟಕಾರಕ ಘಟನೆಗಳು ಏಳುತ್ತ ನಡೆದದ್ದು ವಿಕಾಸದ ವಿಪರ್ಯಾಸ. ಹೊರಗೆ ಕೈಚಾಚಿ ಎಲ್ಲವನ್ನೂ ತನ್ನ ಕಡೆಗೇ ಎಳೆದುಕೊಳ್ಳುವ ಆಕುಂಚನ ವೃತ್ತಿಯಿಂದಲೇ ಇಂಥ ಅನರ್ಥಗಳು ಘಟಿಸತೊಡಗಿವೆ. ಆದರೆ ತನ್ನೊಳಗಿದ್ದದನ್ನು ಅನ್ಯರಿಗೆ ಕೈಚಾಚಿ ನೀಡುವ ಪ್ರವೃತ್ತಿಯು ಎಲ್ಲಿಯ ವರೆಗೆ ವ್ಯಕ್ತಿಗಳಲ್ಲಿಯೂ, ಸಮಾಜಗಳಲ್ಲಿಯೂ, ರಾಷ್ಟ್ರಗಳಲ್ಲಿಯೂ ನೆಲೆಗೊಳ್ಳುವದಿಲ್ಲವೋ ಅಲ್ಲಿಯ ವರೆಗೆ ಜಗತ್ತಿನಲ್ಲಿ ಸುಖಶಾಂತಿಯು ನೆಲಿಸದು. ಈಗ ಅಮೇರಿಕಾ, ಇಂಗ್ಲಂಡ, ರಶಿಯಾ ರಾಷ್ಟ್ರಗಳು ಜಗತ್ತಿನಲ್ಲಿ ಇಂಥ ಕೆಲಸದಲ್ಲಿ ಮುಂದಾಗಿವೆ. ಆದರೆ ಆ ರಾಷ್ಟ್ರಗಳು ಅನ್ಯರಲ್ಲಿದ್ದುದನ್ನು ದೋಚಿಕೊಳ್ಳುವ ಎತ್ತುಗಡೆ ಮಾಡದೆ ಅನ್ಯರಿಗೆ ಹಿತಮಾಡುವ ಕೃಪೆ ಮಾಡಿದರೆ ಜಾಗತಿಕ ಸುಖಶಾಂತಿಗೆ ವಿಲಂಬವಾಗಲಿಕ್ಕಿಲ್ಲ. ಆದರೆ ಮಹಾತ್ಮಾಜಿಯವರ ತತ್ವಗಳನ್ನು ರಾಜ್ಯದಾಡಳಿತೆಯ ಗುರಿಯನ್ನಾಗಿಟ್ಟುಕೊಂಡ ಭಾರತವು ಜಗತ್ತಿನ ಸುಖಶಾಂತಿಗಾಗಿ ಕಂಕಣಬದ್ಧವಾಗಿದೆ. ಇದನ್ನರಿತೇ ಅಮೇರಿಕಾ ರಾಷ್ಟ್ರದವರು ನಮ್ಮ ಮುಖ್ಯಮಂತ್ರಿಗಳನ್ನು ತಮ್ಮೆಡೆಗೆ ಇಂದು ಬರಮಾಡಿಕೊಂಡಿದ್ದಾರೆ. ನಾಳೆ ರಶಿಯಾ ದೇಶವಾದರೂ ಅದೇ ಉದ್ದೇಶದಿಂದ ನಮ್ಮ ಮುಖ್ಯಪ್ರಧಾನರನ್ನು ಬರಮಾಡಿಕೊಳ್ಳಬಹುದು. ಭಾರತದ ಮಧ್ಯಸ್ತಿಕೆಯಿಂದ ಅಮೇರಿಕಾ- ರಶಿಯಾಗಳು ಒಂದಾದರೆ ಜಗತ್ತಿನ ಸುಖಶಾಂತಿಗೆ ವಿಳಂಬವಾಗುವದು ಶಕ್ಯವಿಲ್ಲ. ಜಗತ್ತಿನ ಹಿತಾರ್ಥವಾಗಿ ಅಮೇರಿಕಾ ಭಾರತ ರಶಿಯಾಗಳೊಂದಾದ ಪಕ್ಷದಲ್ಲಿ ಭಯಸೂಚಕವಾದ ಜಾಗತಿಕ ೩ನೇ ಯುದ್ಧದಲ್ಲಿ ಅನಿಷ್ಟ ಪ್ರಸಂಗವು ತಪ್ಪಿ ಹೋಗುವದು.

ಭಾರತವು ಧರ್ಮಭೂಮಿಯಾಗಿದೆ. ಇಲ್ಲಿ ಕಾಲಕಾಲಕ್ಕೆ ಧಾರ್ಮಿಕ ವಿಭೂತಿಗಳು ಅವತರಿಸಿ ಜಗತ್ತಿಗೆ ಕಲ್ಯಾಣ ಮಾಡತ್ತಲಿದ್ದಾರೆ.

ಹಿಂದಕ್ಕೆ ಭಾರತಕ್ಕೆ ಉಳಿದ ಜಗತ್ತಿನ ಸಂಬಂಧವು ವಿಶೇಷವಾಗಿರಲಿಲ್ಲ ಈಗ ಜಗತ್ತು ಒಂದು ಕುಟುಂಬವಾದಂತಾಗಿದೆ. ಶಾಸ್ತ್ರೀಯ ಶೋಧಗಳು ದೂರದೂರಿನ ರಾಷ್ಟ್ರಗಳನ್ನು ತೀರ ಸನಿಹಕ್ಕೆ ತಂದು ಬಿಟ್ಟಿವೆ. ಇದು ವಿಜ್ಞಾನವು ಜಗತ್ತಿಗೆ ಮಾಡಿದ ಮಹದುಪಕಾರ. ಆದರೆ ಅದೇ ವಿಜ್ಞಾನವು ಟ್ಯಾಂಕ್ಸ್, ಬಾಂಬರ್ಸ್, ಸಬ್‌ಮರೀನ್, ವಿಷವಾಯು, ಆ್ಯಟಂಬಾಂಬ ಮುಂತಾದ ಘಾತಕವಾದ ಶೋಧಗಳನ್ನು ಮಾಡಿ ಜಗತ್ತನ್ನು ಸಂಹಾರಮಾಡುತ್ತ ನಡೆದಿರುವದು ಅತ್ಯಂತ ಸಾಹಸಿಕ, ಅಮಾನುಷ ಹಾಗೂ ರಾಕ್ಷಸೀಕೃತ್ಯವಾಗಿದೆ. ಇವುಗಳಿಂದ ಇನ್ನು ಮೇಲಾದರೂ ಜಗತ್ತಿಗೆ ಭಯಂಕರ ನಷ್ಟವಾಗದಂತೆ ಎಲ್ಲ ರಾಷ್ಟ್ರಗಳು ಜಾಣರಾಗಿ ನಡೆಯುವದು ಹಿತಕರ.

ವಿಭೂತಿಗಳು ಜೀವಿಸಿರುವಾಗ ಅವರ ತತ್ವಗಳು ಅಷ್ಟು ಪ್ರಸಾರವಾಗದಿದ್ದರೂ ಅವರು ಕಣ್ಮರೆಯಾದ ಬಳಿಕ ಅವು ಹೆಚ್ಚಾಗಿ ಬೆಳಕಿಗೆ ಬರುತ್ತವೆಂಬದನ್ನು ಇತಿಹಾಸವು ತೋರಿಸಿಕೊಡುತ್ತದೆ. ಹೀಗಿದ್ದ ಪಕ್ಷದಲ್ಲಿ ವಿಶ್ವಕುಟುಂಬದ ಅಶಾಂತಿ ಹೋರಾಟಗಳ ಸಮಯಕ್ಕೆ ಮಹಾತ್ಮಾಜಿಯವರ ಅವತಾರವಾಗಿದ್ದು ತಮ್ಮ ಪಶ್ಚಾತ್ ಎಲ್ಲ ರಾಷ್ಟ್ರಗಳು ಸುಖ ಶಾಂತಿಯಿಂದ ಬಾಳಲೆಂದು ಬೇಗನೆ ಕಣ್ಮರೆಯಾದರೋ ಏನೋ ಎಂಬಂತೆ ಮಹಾತ್ಮರ ಹಸ್ತಕರಾದ ಪಂಡಿತ ಜವಾಹರಲಾಲಜಿಯವರನ್ನು ಅಮೇರಿಕೆಯು ಆಮಂತ್ರಣ ಕೊಟ್ಟು ಕರೆಯಿಸಿದ್ದುದನ್ನು ನಿರೀಕ್ಷಿಸಿದರೆ ಅಮೇರಿಕೆಗೆ ಮಹಾತ್ಮರ ತತ್ವಗಳು ಮಾನ್ಯವೆಂದು ಸೂಚಿಸಲಿಕ್ಕೇ ಅದು ಹಾಗೆ ಮಾಡಿತೆಂದು ನಮಗೆ ಭಾಸವಾಗುತ್ತದೆ. ಕಾಲಕಾಲಕ್ಕೆ ಪೂರ್ವದಿಂದಲೇ ಪಶ್ಚಿಮಕ್ಕೆ ಶಾಂತಿಯ ಗಾಳಿಯು ಬೀಸಿದೆ. ಬುದ್ಧ, ಕ್ರಿಸ್ತ, ಪೈಗಂಬರರು ಪೂರ್ವದಿಕ್ಕಿನವರು- ಇವರು ಜಗತ್ತಿನ ಶಾಂತಿಗಾಗಿ ಜನಿಸಿದರು. ಅದರಂತೆ ಮ. ಗಾಂಧಿಯವರಾದರೂ ಭಾರತೀಯರಾದರೂ ಪೌರ್ವಾತ್ಯರು. ಭಾರತದ ಪುಣ್ಯಪುರುಷರಾದ ಮಹಾತ್ಮಾಜಿಯವರ ಶಾಂತಿ ಸಂದೇಶದ ಗಾಳಿಯನ್ನು ಪಂಡಿತ ಜವಾಹಿರಲಾಲರು ಬೇಗನೆ ಜಗತ್ತಿನಲ್ಲಿ ಬೀಸಿ ಸುಖ ಶಾಂತಿಗಳು ನೆಲಿಸುವಂತೆ ಮಾಡುವರೆಂದು ಆಶಿಸುತ್ತೇವೆ. ಜಗತ್ತಿನಲ್ಲಿ ಸುಖ ಶಾಂತಿಯನ್ನು ನೆಲಿಸುವದೇ ನಿಜವಾದ ವಿಕಾಸವೆಂಬದನ್ನು ನಾವು ಹೇಳದಿರಲಾರೆವು.

---

# ಜೀವನೋನ್ನತಿಕ್ರಮ

( ಬರೆದವರು :- ಶ್ರೀ. ಅನ್ನದಾನೀಶ್ವರ ವಿರಕ್ತಮಠ )

ಜೀವನದ ಸರ್ವಾಂಗ ಸುಂದರವಾದ ಉನ್ನತಿಯು ಒಂದು ಕ್ರಮವನ್ನು ಅನುಸರಿಸಿ- ಸಾಗುವದೆಂದು ಆ ಕ್ರಮವು ಶಾರೀರಿಕ ಮಾನಸಿಕವಾಗಿರುವದೆಂದೂ ಮತ್ತು ಆ ಕ್ರಮವನ್ನು ಹಿಡಿದು ನಡೆದರೆ ಬಾಳಿನಲ್ಲಿ ಬೆಳಕು ಖಂಡಿತವಾಗಿ ಬೀಳುವದೆಂದೂ ಸಿದ್ಧಮಾಡಬಯಸುತ್ತೇವೆ.

## ಜೀವನೋನ್ನತಿ-ಕ್ರಮ

ಅಜ್ಞಾನದಿಂದ ನಮಗೆ ರೋಗಗಳಾಗಲಿ ಮಾನಸಿಕ ತಾಪಗಳಾಗಲಿ, ಬರುತ್ತವೆಯೇ ವಿನ: ಸ್ವಾಭಾವಿಕವಾಗಿ ನಮ್ಮ ದುರ್ದೈವದಿಂದ ಬರುವದಿಲ್ಲ. ಅಜ್ಞಾನವೇ ನಮ್ಮ ದುರ್ದೈವವು ನಮ್ಮ ಬುದ್ಧಿಶಕ್ತಿಯನ್ನು ಸರಿಯಾದ ಶಿಕ್ಷಣಕ್ರಮದಿಂದ ಬೆಳೆಯಿಸಿ-ಕೊಂಡರೆ, ಉನ್ನತ ವಿಚಾರಶಕ್ತಿಯು ಪ್ರಾಪ್ತವಾಗಿ ಕಠಿಣ ಪರಿಸ್ಥಿತಿಯಿಂದ ಪಾರಾಗಲಿಕ್ಕೆ ಬರುತ್ತದೆ. ಯಾವಾಗಲೂ ನಮ್ಮ ಹಿಂದಿನ ಅನಾರೊಗ್ಯ, ಅಪಜಯ ಪಾಪಕೃತ್ಯಗಳ ಬಗ್ಗೆ ಚಿಂತಿಸುವದರಿಂದ ಶರೀರದ ಮೇಲೆ ಅನಿಷ್ಟ ಪರಿಣಾಮವಾಗಿ ಸೊರಗಹತ್ತುವದು. ನಮ್ಮ ಮನಸ್ಸಿನ ರಚನೆಯಲ್ಲಿ ಈ ಅನಿಷ್ಟ ಅನುಭವ ಶೇಷ ಅಥವಾ ಪರಿಣಾಮೆಗಳ ಭಾವಗ್ರಂಥಿಯು ಸಿದ್ಧವಾಗುವದು. ಆ ಮೇಲೆ ಎಲ್ಲಿಯಾದರೂ ಅಪಜಯ, ಅನಾರೋಗ್ಯ, ಪಾಪಕಾರ್ಯಗಳನ್ನು ನೋಡಿದ ಕೂಡಲೆ ಒಮ್ಮೆಲೆ ಅವಿಚಾರ ಬಂದು ಮನಸ್ಸು ಪರಗತಿ ಹೊಂದುವದಿಲ್ಲ ಇದು ಮಾನಸ ಶಾಸ್ತ್ರದ ಸಿದ್ಧಾಂತ ಆದಕಾರಣ ನಿರಾಶಾವಾದದ ದುಃಖಮಯ ದೃಷ್ಟಿಯನ್ನು ಬಿಟ್ಟು ಆಶಾವಾದದ ಆನಂದದ ಜ್ಞಾನ ದೃಷ್ಟಿಯನ್ನು ವಿಕಾಸಗೊಳಿಸುವದರ ಕಡೆಗೇನೇ ನಮ್ಮ ಒಲವಿರಬೇಕು. ನನ್ನ ಜೀವನವು ಉನ್ನತಿಹೊಂದುತ್ತಿರುವದೆಂದೂ ಜಯ, ನೀತಿ, ಬುದ್ಧಿ, ಶಕ್ತಿ, ಆರೋಗ್ಯಗಳು ಹೆಚ್ಚುತ್ತಿರುವವೆಂದೂ ಆತ್ಮವಿಶ್ವಾಸದ ವಿಚಾರಗಳನ್ನೇ ನಿಧಿ ಧ್ಯಾಸಮಾಡಲಿಕ್ಕೆ ಅಭ್ಯಾಸಮಾಡಬೇಕು. ಈ ಬಗ್ಗೆ ಶಿವಶರಣರ ವಚನಗಳನ್ನು ಓದಬೇಕು.

ಹೆಚ್ಚು ತರ್ಕ ಮಾಡುತ್ತ ಸಂಶಯ ಸ್ವಭಾವದಿಂದ ಹೋದರೆ ಬುದ್ಧಿಕೆಟ್ಟು ವಿನಾಶ ಕಾಲವೇ ಬಂದಬಹುದು. ಹೆಂಡತಿಯ ಬಗ್ಗೆ ಯಾವಾಗಲೂ ವಿಪರೀತ ಸಂಶಯ ಮಾಡುತ್ತ ಮಿದುಳಿಗೆ ಆಯಾಸವಾಗುವಂತೆಯೂ ಪ್ರಗತಿಹೊಂದುವಂತೆಯೂ ಮಾಡಬಾರದು. ಹೆಂಡತಿಯ ಸಂಬಂಧವಾದ ಸಂಶಯ, ದ್ವೇಷಾಸೂಯೆ, ಮುಂತಾದವುಗಳಿಂದ ದೇಹವು ಕ್ಷೀಣವಾಗುತ್ತದೆ. ಮನಸ್ಸು ಉಲ್ಲಾಸವಾಗಿದ್ದರೆ ಆಹಾರವು ಚನ್ನಾಗಿ ಜೀರ್ಣವಾಗುವದೆಂದೂ, ಮನಸ್ಸಿನ ಉಲ್ಲಾಸವು ಸಂಶಯ ಸ್ವಭಾವದಿಂದ ದೂರವಾಗುವದೆಂದೂ ಹಿರಿಯರು ಹೇಳುವ ಮಾತು ಅನುಭವ ಸಿದ್ಧವಾದದ್ದು.

ಲಗ್ನವಾಗುವದಕ್ಕಿಂತ ಮೊದಲು ಶರೀರವನ್ನು ಚನ್ನಾಗಿ ರಕ್ಷಿಸಿರಿ. ಆಮೇಲೆ ಪತಿ-ವ್ರತಾ ಧರ್ಮವನ್ನು ಪಾಲಿಸಬೇಕು.

ಶುದ್ಧವಾದ ಹವೆಯಲ್ಲಿ ಪ್ರತಿನಿತ್ಯ ತಿರುಗಾಡುವದರಿಂದಲೂ, ಸೃಷ್ಟಿ ಸೌಂದರ್ಯದ ಕಡೆಗೆ ಲಕ್ಷಗೊಡುತ್ತ ಕಲಾಸಂಬಂಧವಾದ ಕಲ್ಪನೆ ಅಥವಾ ಪ್ರತಿಭೆಯನ್ನು ಬೆಳೆಸುತ್ತ ಹೋಗುವದರಿಂದಲೂ ಮಂಗಳವಾದ, ಸತ್ಯವಾದ, ಚಂದವಾದವುಗಳ ಕಡೆಗೆ ಮನಸ್ಸು ಒಲಿದು ಸುಂದರವಾದ ಶಿಸ್ತು ಮಾರ್ಗದಿಂದ ವರ್ಧಿಸುವದು.

ರಕ್ತಶುದ್ಧಿ, ಕೆಂಪುಬಣ್ಣ, ಆರೋಗ್ಯ ಭಾಗ್ಯಗಳನ್ನು ಶುದ್ಧ ಹವೆಯೇ ಕೊಡಬಲ್ಲದು. ಸೂರ್ಯೋದಯ, ಸೂರ್ಯಾಸ್ತ, ಚಂದ್ರೋದಯ, ಹೂವು, ಹಕ್ಕಿಯ ಹಾಡು, ರಮ್ಯಕೋಟೆ, ನದಿ, ನಕ್ಷತ್ರ, ಹಸಿರುಹುಲ್ಲು, ಗಿಡಬಳ್ಳಿಗಳು, ಮೊದಲಾದ ಸೃಷ್ಟಿಸೌಂದರ್ಯದ ರಾಶಿಯನ್ನು ಕಣ್ಣಿನಿಂದ ನೋಡಿ ಮನಸ್ಸಿನಿಂದ ಸ್ವಾದಿಸಿ. ದೇಹಕ್ಕೆ ಪ್ರಾಣವಾಯುವನ್ನು ಹೆಚ್ಚಾಗಿ ಒದಗಿಸಿ. ನಮ್ಮನ್ನು ಸುಖಿಗಳನ್ನಾಗಿ ಮಾಡುವದು ಶುದ್ಧ ಬಯಲು ಹವೆ. ಕಾರಣ ಅಶುದ್ಧಹವೆಯಿದ್ದ ಸಿನೇಮಾ ನಾಟಕಗೃಹಗಳಿಗೆ ಹೋಗಬಾರದು.

ಆಟಗಳು, ಚುರುಕು ತಿರುಗಾಟ, ಈಸುವದು, ಓಡುವದು, ಈ ಮೊದಲಾದ ವ್ಯಾಯಾಮದಿಂದ ದೌರ್ಬಲ್ಯವು ಹೋಗುವದು. ಬಹು ಆಯಾಸವಾಗುವಂತೆ ಮಾತ್ರ ವ್ಯಾಯಾಮ ಮಾಡಬಾರದು.

ಸೂರ್ಯಪ್ರಕಾಶ, ಬೆಳಕು, ಹವೆ, ತಣ್ಣೀರು ಸ್ನಾನಗಳಿಂದ ರಕ್ತ ವೃದ್ಧಿಯಾಗುವದರಿಂದ ಯಾವಾಗಲೂ ಈ ಸಂಗತಿಗಳ ಕಡೆಗೆ ಲಕ್ಷಿಸಿ ನಡೆಯಬೇಕು.

ರಸಭರಿತ ಹಣ್ಣುಗಳು ಪಕ್ವವಾದ ಹಸಿರುಕಾಯಿಪಲ್ಲೆಗಳು ಹೆಚ್ಚು ಮತ್ತು ಚಲೋ ರಕ್ತವನ್ನು ಉತ್ಪನ್ನಮಾಡುತ್ತವೆ. ಮಿತವಾದ, ಹಿತವಾದ ಆಹಾರವನ್ನು ಸರಿಯಾಗಿ ಅಗಿದು ಸೇವಿಸಬೇಕು ಬಹಳ ಕಡಿಮೆ ಯೆಂದರೆ ೩ ತಾಸುಗಳ ನಂತರವೇ ಮತ್ತೊಮ್ಮೆ ಊಟಮಾಡಬೇಕೇ ವಿನಃ ನಡುವೆ ಏನೂ ತಿನ್ನಬಾರದು. ಧೈರ್ಯದಿಂದ, ಆನಂದದಿಂದ ನಗುತ್ತ, ಒಳ್ಳೇ ಮಾತಾಡುತ್ತ ಚನ್ನಾಗಿ ಅಗಿದು ಉಂಡರೆ ರೋಗದ ಭಯವಿಲ್ಲ. ಅಜೀರ್ಣದ ಭಯವಿಲ್ಲ. ಶೀತಕಾಲದಲ್ಲಿ ತುಪ್ಪಸಕ್ಕರೆ, ಬೇಸಿಗೆಯಲ್ಲಿ ಹಣ್ಣು ಕಾಯಿಸೊಪ್ಪುಗಳನ್ನು ಈ ಪ್ರಕಾರ ಋತುಮಾನಕ್ಕನುಸರಿಸಿ, ಆಹಾರ ಸೇವಿಸಬೇಕು. ಹೆಚ್ಚು ತಿಂದು ಅದು ಜೀರ್ಣವಾಗಲಿಕ್ಕೆ ಔಷಧ ತಕ್ಕೊಳ್ಳುವದು ರೋಗಕ್ಕೆ ಆಮಂತ್ರಣ ಕೊಟ್ಟಂತೆಯೇ ಸರಿ. ಜೋಳ, ಗೋದಿ, ಕಡಲೆ, ಬೇಳೆ, ಆಲೂಗಡ್ಡೆ, ಗೆಣಸು, ಮಾವು, ದ್ರಾಕ್ಷಿ, ಅಂಜೂರ, ಸೇಬು, ಹಾಲು, ಬೆಣ್ಣೆ, ಜೇನುತುಪ್ಪ ಈ ಪದಾರ್ಥಗಳು ಶರೀರಕ್ಕೆ ಪುಷ್ಟಿಯನ್ನುಂಟುಮಾಡುತ್ತವೆ.

ನಿಯಮಿತ ವೇಳೆಗೆ ಊಟಮಾಡಬೇಕೇ ವಿನಃ ಸಿಕ್ಕ ಸಿಕ್ಕಾಗ ತಿನ್ನಬಾರದು. ಚಹ, ಕಾಫಿ, ತಂಬಾಕು, ಮದ್ಯ, ಅತಿಕಾರವಿರುವ ಚಟಣಿ, ಮಸಾಲಿ- ಇವು ಶಕ್ತಿವೃದ್ಧಿಮಾಡುವದಿಲ್ಲ.

ಕೋತಂಬರಿ ಕಷಾಯ, ಶುದ್ಧಹವೆ, ವ್ಯಾಯಾಮ, ಹಣ್ಣುಸೇವನೆ ಇವುಗಳಿಂದ ಮಲವಿಸರ್ಜನೆ ಸರಿಯಾಗಿ ಆಗುವದು.

ತಣ್ಣೀರಿನಲ್ಲಿ ಈಸುವದೇ ಯೋಗ್ಯವಾದದ್ದು. ಈಸಲಿಕ್ಕೆ ಬರದಿದ್ದರೆ ಕಲಿಯಬೇಕು.

# ಹಿರಿಯನಾರು ಅಥವಾ ಚಿರಂಜೀವಿ.

(ಲೇಖಕ:— ವಿದ್ವಾನ್ ಟಿ. ಜಿ. ಸಿದ್ಧಪ್ಪಾರಾಧ್ಯ ಎಮ್. ಎ. ಸಂಸ್ಕೃತ ಅಧ್ಯಾಪಕ, ಇಂಟರ್‌ಮಿಡಿಏಟ ಕಾಲೇಜ ದಾವಣಗೆರೆ )

---

ಪ್ರಪಂಚದಲ್ಲಿ ಮಾನವನು ಮನಬಂದುದ ಬಯಸಿ, ಬೆಂದ ಒಡಲ ಹೊರೆವುದೇ ಬಾಳಿನ ಗುರಿಯೆಂದೆಣಿಸಿ, ವಿಷಯ ಸಂಸಾರದಕಗ್ಗತ್ತಲೊಳು ಅಂಧಕನಂತೆ ಪರಿತಪಿಸುತ್ತಿರುವನು. ತನಗೂ ಪ್ರಪಂಚಕ್ಕೂ ಯಾವ ಸಂಬಂಧವಿದೆ ಎಂದು ತಿಳಿಯಲು ಶಕ್ತಿ ಇಲ್ಲದೆ ಸುಖದುಃಖಗಳ ಗೊಂದಲದಲ್ಲಿ ಸಿಲುಕಿ ನರಳುವನು. ಪ್ರಪಂಚವೆಂಬುದು ಮಹಾದೇವಸೆಟ್ಟಿಯು ಹಿರಿದಾದ ಅಂಗಡಿಯೆಂದೂ ಅದರಲ್ಲಿ ಪ್ರಾಮಾಣಿಕತೆ, ಯಥಾರ್ಥ ಜ್ಞಾನಗಳಿಂದ ವ್ಯವಹರಿಸಿದರೆ ತನಗೆ ದುಃಖವಿಲ್ಲದ ಸುಖವು ದೊರೆವುದೆಂದೂ ತಿಳಿಯದೆ ಕಷ್ಟ ನಷ್ಟಗಳಿಗೀಡಾಗುವನು. ಪ್ರಪಂಚಕ್ಕೆ ತಾನು ಬಂದ ಮೇಲೆ ಅದರಲ್ಲಿ ಸುಖವನ್ನು ಮಾತ್ರವೇ ಬಯಸಿ ದುಃಖವನ್ನು ಅಲ್ಲಗಳೆಯುವದು ತಿಳಿಗೇಡಿತನ. ನೋಡುವ ದೃಷ್ಟಿಕೋಣವನ್ನು ಹಿಗ್ಗಲಿಸಿ, ಬಾಳಿನ ರಹಸ್ಯವನ್ನು ಅರಿತರೆ, ದುಃಖವೇ ಪರಮ ಸುಖವಾಗುವದು. ನೋಡುವ ನೋಟವನ್ನು ಸಂಕುಚಿಸಿದರೆ ಸುಖವೇ ದುಃಖವಾಗಿ ತೋರುವುದು. "ನಿನ್ನ ಅರಕೆಯ ನರಕವೇ ಮೋಹಕಂಡಯ್ಯ. ನಿನ್ನನರಿಯದ ಮುಕ್ತಿಯೇ ನರಕ ಕಂಡಯ್ಯ. ನೀನೊಲ್ಲದ ಸುಖವೇ ದುಃಖ ಕಂಡಯ್ಯ. ನೀನೊಲಿದ ದುಃಖವೇ ಪರಮ ಸುಖ ಕಂಡಯ್ಯ." ಹೀಗೆ ಸುಖ ದುಃಖಗಳೂ ಬಂಧ ಮುಕ್ತಿಗಳೂ ನಮ್ಮ ವಿಶಾಲ ಮತ್ತು ಸಂಕುಚಿತ ಭಾವನೆಗಳನ್ನು ಅವಲಂಬಿಸಿವೆ.

ಮಾನವನು ವಿವೇಕರಹಿತನಾಗಿ ಕಾಲದ ಮೇಲಣ ಭೋಗವೇ ಶಾಶ್ವತವೆಂದು ಭ್ರಮಿಸಿ, ಅದರಲ್ಲಿಯೇ ಮಗ್ನನಾಗಿ ಕಷ್ಟ ದುಃಖಗಳನ್ನನುಭವಿಸುತ್ತ, ಭವ ಬಂಧನದಿಂದ ಪಾರಾಗದಿರುವನು. ಭವಸಾಗರದಲ್ಲಿ ಈಸಾಡುತ್ತ, ವಿಷಯ ಸುಖಗಳನ್ನೇ ನೆಚ್ಚಿ ನಿತ್ಯ ಸುಖದ ಚಿಂತೆಯೇ ಇಲ್ಲದೆ ಅಲೆಯುತ್ತಿರುವನು. ಸಾಸವೆಯಷ್ಟು ಸುಖಕ್ಕೆ ಸಾಗರ

ದಷ್ಟು ದುಃಖವನ್ನನುಭವಿಸುವನು. ಯಾವುದಕ್ಕಾಗಿ ದೇಹೇಂದ್ರಿಯು ಗಳು ಬಂದಿವೆಯೋ ಅದನ್ನೇ ಮರೆತು ದುರ್ವಿಷಯುಗಳಿಗಾಗಿ ಅದನ್ನು ಉಪಯೋಗಿಸುತ್ತ ತನ್ನ ಕರ್ಮದಿಂದಲೇ ತನ್ನನ್ನು ಬಂಧಿಸಿಕೊಳ್ಳುವನು. ಕಣ್ಣುಗಳು ತಪ್ಪಿನೋಡಿ, ನಾಲಿಗೆ ತಪ್ಪಿ ನುಡಿದು ತನ್ನ ಆತ್ಮವೇ ತನಗೆ ಹಗೆಯಾದ ಬಳಿಕ ತಾನು ಸುಖವನ್ನು ಕೊಂಡುವದಾದರೂ ಹೇಗೆ? ಬಾಹ್ಯ ಸೌಂದರ್ಯದ ಮೆರುಗಿಗೆ ಬೆರಗಾಗಿ, ಸದ್ವಸ್ತುವಿನ ಕಡೆಗೆ ಗಮನವೇ ಕೊಡದೆ, ಮಿಂಚಿನಂತಹ ಥಳಕಿಗೆ ಬಳಲಿ ಬೆಂಡಾಗುವನು ಯಥಾರ್ಥ ಜ್ಞಾನವಿಲ್ಲದೆ, ಕಣ್ಣಿದಕ್ಕೆ ಆಶಿಸಟ್ಟು ಮೋಹ ಜಾಲದಲ್ಲಿ ಸಿಲುಕಿ ನರಳುವನು. ತಾನು ಯಾರೆಂದರಿಯದೆ, ಪಶುವಿನಂತೆ ಭವ ಸಾಗರದಲ್ಲಿ ಬಡಿದಾಡುತ್ತ ಆಯುಸ್ಸನ್ನು ವ್ಯರ್ಥವಾಗಿ ಕಳೆಯುವನು. ಇಂದ್ರಿಯಗಳನ್ನು ಅಲ್ಲಗಳೆಯದೆಯೇ ಸ್ವಸ್ವರೂಪವನ್ನು ದುರುಪಯೋಗ ಪಡಿಸುತ್ತ, ಮಾನವ ಜನ್ಮದ ಪವಿತ್ರತೆಯನ್ನು ಅರಿಯದೆ ನುಡಿವೇಣ ನಾಗಿರುವನು. ನಿಜವಾದ ಸುಖಿಯಾರು ನಿಜವಾದ ದುಃಖಿಯಾರು ಎಂಬು ದನ್ನರಿಯದೆ ನಾನೇ ಹಿರಿಯನೆಂಬ ದುರಭಿಮಾನದಿಂದ ಹೇಳಿಕೊಳ್ಳು ವನು. "ಸಕಲೇಂದ್ರಿಯಗಳಲ್ಲಿ ವಿಕಾರಿಸುವ ಮನವ ಸೆಳೆದು ನಿಂದಾ ತನೇ ದುಃಖಿ." ಹೀಗೆ ಇಂದ್ರಿಯಗಳ ಪ್ರೇರಣೆಗೊಳಗಾಗಿ ದೇಹಸೌ ಖ್ಯವನ್ನು ಪಡೆಯುವ ಹವ್ಯಾಸದಲ್ಲಿ ನಿರತನಾಗಿ, ಪ್ರಪಂಚದ ವ್ಯವ ಹಾರದಲ್ಲಿ ಬಳಲಿ ನಿತ್ಯ ಸುಖದ ಕಡೆ ಲಕ್ಷಿಸದೆ, ಕಣ್ಣಿದ್ದು ಕಾಣದೆ, ಕಿವಿಯಿದ್ದೂ ಕೇಳದೆ ವ್ಯಥೆಪಡುವನು. « ನಡೆವೇಣನ, ನುಡಿವೇಣನ, ಬಾಳ್ವೆಣನ, ಬೀಳ್ವೆಣನ ಸಂಸಾರವೇನವನ? ಇಂತವನ ಸಂಸಾರವಾ ದರೂ ನಾಯಿಯ ಮತ್ತು ಹಂದಿಯ ಬಾಳುವೆಯಂತೆ ವ್ಯರ್ಥ.

ಈ ಸಂಸಾರವನ್ನು ತಪ್ಪಿಸಿಕೊಳ್ಳಲು ತನ್ನ ಇಷ್ಟವಲ್ಲ, ಗಿರಿಯ ಹೊಕ್ಕರೂ ಬಿಡದು. ಮಣ್ಣ ಹೊತ್ತರೂ ಬಿಡದು, ಬೆನ್ನಿಂದ ಬೆನ್ನಹತ್ತಿ ಬರುವುದು. "ಅಯ್ಯೋ ನೀ ಮಾಡಲಾದ ಜಗತ್ತು ನೀ ಮಾಡಲಾದ ಸಂಸಾರ, ನೀ ಮಾಡಲಾದ ಮದುವೆ, ನೀ ಮಾಡಲಾದ ದುಃಖ, ನಾ ನೀ ಮಾಯೆಯ ಗೆದ್ದೆನೆಂಬ ಹಮ್ಮಿದೇಕೆ?" ಅಯ್ಯ ಸಂಸಾರವೆಂಬ ರಾಹು ಆತ್ಮನನ್ನು ಸರ್ವಗ್ರಾಸಿಯಾಗಿ ನುಂಗುವುದು. ಸರ್ಪದ ನೆರಳಲ್ಲಿ ಸುಖ ವನ್ನು ಕಾಣಬಹುದೆಂದು ನಿಂತ ಕಪ್ಪೆಯಂತೆ ನಿತ್ಯ ಮೃತ್ಯುವಿನ ಭಯ

ಇರುವ ಮಾನವನಿಗೆ ನಾನಾ ವರ್ಣದ ಸಂಸಾರವು ಯಾವ ಸುಖವನ್ನು ತಾನೇ ದೊರಕಿಸಬಹುದು? ಸಂಸಾರವೆಂಬ ಸಾಗರದೊಳಗೆ ಬಿದ್ದು, ಸುಖ ದುಃಖಗಳೆಂಬ ತೆರೆಗಳ ಹೊಡೆತಕ್ಕೆ ಸಿಕ್ಕಿ ದಾರಿಯು ಸಾಗದೆ ಬಡಿದಾಡುವನು. ಸಂಸಾರ ಸಾಗರ ಕೊರಳುದ್ದವಿದ್ದರೆ ಹೇಗೋ ಸಹಿಸಬಹುದು. ಶಿರದುದ್ದವಾದ ಬಳಿಕ ಆದರಲ್ಲಿ ತೇಲುವ ಸಂಭವವಾದರೂ ಉಂಟೇ? ಈ ಹಗೆಯು ತನ್ನನ್ನು ಅರಿಸಿಕೊಂಡು ಬಂದು ಹಿಡಿದು ಕೊಲ್ಲುತ್ತಿದೆ. ಇದರಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ಕಾಣದೆ ಮಾಯದ ಮದವ ಮುರಿಯದೆ. ಯಾರ ಮರೆಹೊಕ್ಕರೆ ಜೀವದ ಜಂಜಡವನ್ನು ಪರಿಹರಿಸಿಕೊಳ್ಳಬಹುದೆಂದರಿಯದೆ, ತನ್ನ ಸುತ್ತಿನ ಪ್ರಪಂಚದಲ್ಲಿ ತೆರಣಿಯ ಹುಳುವಿನಂತೆ ಅಭಿಮಾನಿಸಿಕೊಂಡು ಸಾಯುವನು. ಕಾಂಚನವೆಂಬ ನಾಯನೆಕ್ಕಿ, ಅರಿಷಡ್ವರ್ಗದುರವಣೆಗೊಳಗಾಗಿ, ಹಸಿವು ತೃಷೆ ವ್ಯಸನಗಳಿಂದ ಕುದಿಯುತ್ತ, ಪಂಚೇಂದ್ರಿಯಗಳ ಉಪಟಳಕ್ಕೆ ಸಿಲುಕಿ ನರಳುವನು. ಮಡದಿ ಮಕ್ಕಳು, ಪಡೆದ ದ್ರವ್ಯವು ತನ್ನೊಡನೆಯೆಂದು ನೆಚ್ಚಿ, ಅವರನ್ನು ಬೆಳೆಸುವ ಸಲುವಾಗಿ ಅನ್ಯಾಯಗಳನ್ನು ಮಾಡುವನು. ಆದರೆ ಸಾಯುವಾಗ ತಾನು ಮಾಡಿದ ಕರ್ಮ ಬೆನ್ನ ಹತ್ತುವುದಲ್ಲದೆ ಹೆಂಡಿರು ಮಕ್ಕಳು ಬೆನ್ನ ಹತ್ತುವರೇ? ಇದನರಿತು ಮೃಡನ ಸೇವೆಯೊಳು ತೊಡಗಿದರೆ ಕಡೆಮೊದಲಿಲ್ಲದ ಪದವು ದೊರಕೊಳ್ಳದೆ? ಅರಿಗಾರೂ ಇಲ್ಲ. ಕೊಟ್ಟವನಿಗೆ ಕೇಡಿಲ್ಲ ಜಗದ ನಂಟ ನೀನೇ ದೇವಾ ಕಂಡಕಂಡವರಿಗೆಲ್ಲ ಸೆರೆಗೊಡ್ಡಿದರೆ ದುಃಖದಿಂದ ಪಾರಾಗಲು ಸಾಧ್ಯವಿಲ್ಲ. ಹೆಂಡತಿಯೆಂದು ಮೋಹಿಸಿ ದುಃಖಪಡುವುದಕ್ಕಿಂತ ಮಹಾದೇವಿಯೆಂದು ಪ್ರೇಮದಿಂದ ಆದರಿಸಿ ತಾನು ನಿತ್ಯ ಸುಖಿಯಾಗುವುದು ಉಚಿತವಲ್ಲವೇ?

ತನ್ನ ಈ ದುಃಖವಾದರೂ ಹೊನ್ನು ಹೆಣ್ಣು ಮಣ್ಣಿನ ಆಶೆಯಿಂದ ಬಂದದ್ದು. ಊರ ಸೀರೆಗೆ ಅಗಸ ತಡಬಡಗೊಂಬಂತೆ ಇದೆಲ್ಲವೂ ತನ್ನದೆಂದು ನೆನೆದು ತಾನೇ ಕೆಡುವನು. ಭೂಮಿ ನನ್ನದಲ್ಲ. ಹೇಮ ತನ್ನದಲ್ಲ. ಕಾಮಿನಿ ತನ್ನವಳಲ್ಲ. ಅದು ಜಗಕ್ಕಿಕ್ಕಿದ ವಿಧಿ. ತನ್ನೊಡವೆ ಯೆಂಬುದು ಜ್ಞಾನ ರತ್ನ ಆ ದಿವ್ಯ ರತ್ನವ ಕೆಡೆಗೊಡದೆ ಆದನ್ನು ತಾನು ಅಲಂಕರಿಸಿದನಾದರೆ ತನಗಿಂತ ಬೇರೆ ಸಿರಿವಂತರಿಲ್ಲ. ನಶ್ವರವಾದ ಹೊರಗಿನ ಸಿರಿಗಾಗಿ ಆಶೆಪಟ್ಟು ಅಪಾರವಾದ ದುಃಖವನ್ನು ಬರ

ಮಾಡಿಕೊಳ್ಳುವನು. ಹೊರಗಿನ ಸಿರಿಯಾದರೂ ತನ್ನೊಬ್ಬನ ಸ್ವತ್ತಲ್ಲ. ತಾನು ಎಷ್ಟು ದಿವಸ ಅದನ್ನು ಅನುಭವಿಸಬೇಕೆಂದು ಮಹದೇವಶೆಟ್ಟಿಯು ಇಚ್ಛೆ ಇರುವುದೋ ಅಲ್ಲಿಯವರೆಗೆ ಅವರ ಕಾವಲಿಗಾಗಿ ಇದ್ದು ಅದರೊಡನೆ ಬೆರೆಯದಂತೆ ಕಾರ್ಯವನ್ನೆಸಗುವುದಾದರೆ ತನಗೆ ಪುಣ್ಯಪಾಪಗಳು ಅಂಟಲಾರವು. ವಿಷಯದ ಹಸುರಿಗೆ ಮೋಹಗೊಂಡರೆ ಜ್ಞಾನರತ್ನವು ಕೆಡುವುದು, ವ್ಯಾಮೋಹದ ಪಿತ್ತ ತಲೆಗೇರಿ, ವಿವೇಕವು ನಷ್ಟವಾಗಿ ಮತಿಮಂದವಾಗಿ ನಿಜದ ನೆನಹು ಮರೆತು ಅಹಂಕಾರದ ಸೋಗಿನಿಂದ ತಾನು ಕೆಡುವನು. ಅಹಂಕಾರ ತಲೆದೋರಿದಲ್ಲಿ ಕುಹಕವೆಂಬ ಬಿರುಗಾಳಿ ಹುಟ್ಟಿ ಜ್ಞಾನಜ್ಯೋತಿಯು ಕೆಡುವುದು. ಜ್ಞಾನಜ್ಯೋತಿಯು ಕೆಡಲೊಡನೆ ತಾನು ತಾಮಸಕ್ಕೊಳಗಾಗಿ ಸೀಮೆದಪ್ಪುವನು. ಅಹಂಕಾರವು ಮನವನ್ನಿಂಬುಗೊಂಡಲ್ಲಿ ಮನದೊಡೆಯ ದೂರಸರಿಯುವನು. ಅಹಂಕಾರರಹಿತನಾದಲ್ಲಿ ದೇವನು ಅಲ್ಲಿಯೇ ಸನ್ನಿಹಿತನಾಗಿರುವನು. "ನಾನೆಂಬ ಅಹಂಕಾರವಲ್ಲಿ ತಾನುಂಡೆನಾದರೆ ತನಗದೇ ಭಂಗ" ಇಂತಹ ಪಿಶಾಚಿಯು ಕೈಗೆ ಸಿಲುಕದೆ, ಜೀವನದ ಆಗುಹೋಗುಗಳಲ್ಲಿ ತನ್ನ ಸ್ವತಂತ್ರತೆಯನ್ನು ಸ್ಥಾಪಿಸದೆ ಫಲದ ಮರೆಯ ರುಚಿಯಂತೆ ಭಾವದ ಮರೆಯ ಬ್ರಹ್ಮದ ನಿಲವ ನರಿಯಬಲ್ಲಡೆ ಅತನೇ ಹಿರಿಯನು., ಧೀರನು, ಮುಕ್ತ ವೀರನು.

ಅಹಂವೆಂಬ ಪೆಡಂಭೂತದಿಂದ ತಪ್ಪಿಸಿಕೊಂಡರೂ ತಾನು ಎಲ್ಲಕೂ ಕರ್ತ ಮತ್ತು ಶಕ್ತನೆಂಬ ದುರಭಿಮಾನವು ತನ್ನನ್ನು ಬಾಧಿಸಹತ್ತುವುದು. ಆದರೆ ವಾಸ್ತವವಾಗಿ ನೋಡಿದರೆ, ಆಗುವುದನ್ನು ತಪ್ಪಿಸಲೂ ಸಚ್ಚಿದಾನಂದ ಶಿವಯೋಗಿಗಲ್ಲದೆ ನರರಿಗೆ ಸಾಧ್ಯವಿಲ್ಲ. ಬಾರದು ಬಪ್ಪದು ಬಪ್ಪದು, ತಪ್ಪದು. ನಾವೆಲ್ಲರೂ ಆಡುವ ಗೊಂಬೆಯಂತೆ ಅಸ್ವತಂತ್ರರು. "ಆಡುವ ಗೊಂಬೆಯನು ಆಡಿಸುವಾತಂಗಲ್ಲದೆ ಆಡುವ ಗೊಂಬೆಗೆಲ್ಲಿಯದೋ ಸ್ವತಂತ್ರತೆಯು?"

ಆದುದರಿಂದ ಬಂದ ಸುಖ ದುಃಖಗಳನ್ನು ಸಂತಸದಿಂದ ಸ್ವಾಗತಿಸಿ ಸುಖ ಬಂದರೆ ಪುಣ್ಯದ ಫಲವೆಂದು ಹಿಗ್ಗದೆ, ದುಃಖ ಬಂದರೆ ಪಾಪದ ಫಲವೆಂದು ಕುಗ್ಗದೆ ಕನ್ನಡಿಯೊಳಗಣ ಸ್ನೇಹದಂತೆ ತನ್ನೊಳಗೆ ಅಡಕವಾಗಿರುವ ಪರಮಾತ್ಮನ ನಿಲವನ್ನು ಅರಿತವನೇ ಹಿರಿಯನು.

ಅರಿಯ ಬಲ್ಲೊಡೆ ಲಿಂಗ ಹೃದಯದಲ್ಲಿದ್ದಾನೆ. ಹೃದಯ ಕಮಲದಲ್ಲಿ ಇರುವ ದೇವನ ದೇಹಾರವ ಮಾಡಲರಿಯದೆ, ಅನಂತ ಮುಖದಲ್ಲಿ ದೇಹಾರವ ಮಾಡಲು ದೇವನು ದೊರಕುವನೇ? ಅಸತ್ಯವಿಡಿದು ಹುಸಿಯ ಪೂಜಿಸಲು ಗಸಣಿಗೊಳಗಾದವರೆಲ್ಲರೂ ಹಿರಿಯರೇ? ಭಸ್ಮ ರುದ್ರಾಕ್ಷಿಗಳನು ಧರಿಸಿ ವೇಷ ಭೂಷಾದಿಗಳಿಂದ ಜನರನ್ನು ಮೋಸಗೊಳಿಸುವನು ಹಿರಿಯನೇ? ಮಾಡುವ ಕ್ರಿಯೆ ಭಸ್ಮವಾದಲ್ಲಿ, ನೋಡುವ ದೃಷ್ಟಿ ರುದ್ರಾಕ್ಷವಾದಲ್ಲಿ ಆತನೇ ಹಿರಿಯನು. ನೂರು ವರುಷ ಬಾಳಿದರೂ ತತ್ವಸಾರವ ತಿಳಿಯದೆ ಭವ ಬಾಧೆಗೊಳಗಾದವರೆಲ್ಲರೂ ಹಿರಿಯರೇ? ಮೂರು ವರುಷವೇ ಬಾಳಿದರೂ, ಪರಮಾರ್ಥವನ್ನರಿದು, ಭವದ ಬೇರನ್ನು ಕಿತ್ತು ಬಿಸುಡ ಬಲ್ಲೊಡೆ ಅತನೇ ಹಿರಿಯನು. "ಹೊರಗೆ ಹಿರಿಯರಾಗಿ, ನಿಜವನರಿಯದವರೇ ಕಿರಿಯರು. ಒಳಗನರಿದು ಕಿರಿಯರಾದೊಡವರೆ ಜಗಕೆ ಹಿರಿಯರು." ಅರಿವಿಂಗೆ ಹಿರಿದು ಕಿರಿದುಂಟು?

ಜೀವ ಪರಮೈಕ್ಯವನರಿತವರೆಲ್ಲರೂ ಜಾತಿ ವಯೋಭೇದಗಳಿಗೆ ಅಂಟದೆ ನಿರಾಭಾರಿ ಜಂಗಮರಾಗುವರು. ತಿಳಿವೆನಿಸುವ ಸುಗಂಧದೊಡಗೂಡಿ ಶೋಭಿಸುವ ಹೃದಯಕಮಲದ ಅಮಳ ಕರ್ಣಿಕೆಯಲ್ಲಿ ಬೆಳಗುವ ಇಷ್ಟಲಿಂಗದೊಡನೆ ಬೆರೆತವನು ಯಾವ ಜಾತಿಯಲ್ಲಿ ಹುಟ್ಟಿದ್ದರೂ ಜಂಗಮನೇ. ಎಲ್ಲರಿಗೂ ಹೃದಯದಲ್ಲಿ ಇಷ್ಟಲಿಂಗ ವಿರುವದು ಅದರ ಅರಿವು ಯಾವನಿಗೆ ಆಗುವದೋ ಅವನೇ ಜಂಗಮನು. ಶರೀರವೆಂಬುವ ಹೊಲವನ್ನು ಹಸನು ಮಾಡಿ, ಪರತತ್ವವೆಂಬ ಬೆಳೆಯನ್ನು ಬೆಳೆದು, ಪರಮಾನಂದದೊಳು ನಲಿದಾಡುವ ಜಂಗಮನೇ ಜಗತ್ತಿಗೆ ಹಿರಿಯನು. ಪತ್ರಿ ಪುಷ್ಪ ಧೂಪ ದೀಪದಿಂದ ಆಡಂಬರದ ಪೂಜೆ ಮಾಡಿ ಏನೊಂದೂ ಅರಿಯದೆ, ಲಯಕ್ಕೆ ಒಳಗಾಗಿ ಹೋದವರು ಹಿರಿಯರಲ್ಲ. ಮಾಡಿ ನೀಡಿ ಫಲವ ಬೇಡುವವನು ಭೂಮಿಗೆ ಹೊರೆಯೆನಿಸುವನು. ಅರಿವೆಂಬ ಗುರುವಿನಿಂದ ಪ್ರಾಣ ಲಿಂಗವನ್ನು ಕಂಡುಕೊಂಡು, ಅದನ್ನು ಮನವೆಂಬ ನೀರಿನಿಂದ ಜ್ಞಾನವೆಂಬ ಪುಷ್ಪದಿಂದ ಪೂಜಿಸ ಬಲ್ಲೊಡೆ ಆತನೇ ಹಿರಿಯನು.

ಹೀಗೆ ಅಂತರಂಗದಲ್ಲಿ ಆತ್ಮ ದೇವನನ್ನು ಅರಿತು, ಅವನನ್ನು ಮೊರೆಹೊಕ್ಕರೆ ಮಾನವನು ಕಾಯದ ಕಳವಳಕ್ಕಂಜಬೇಕಾಗಿಲ್ಲ. ಉರಿ ಬರಲಿ ಸಿರಿ ಬರಲಿ ಬೇಕು ಬೇಡೆನ್ನನು. ನಾಳೆ ಬರುವುದು

ತನಗೆ ಇಂದೇ ಈಗಲೇ ಮರಣವೆಂದು ಯಾತ್ರನನ್ನು ಅಳುಕದೆ ನಿರ್ಭಯನಾಗುವನು. ಪುಣ್ಯ ಪಾಪಗಳಿಲ್ಲಾಗಿ ಅವನಿಗೆ ಯಮನ ಹಂಗಿಲ್ಲ ಯಾವ ತೃಪ್ತಿಯಲ್ಲಿದ್ದರೂ ಅವನು ಕಾಣಿಯ ಲೋಭಕ್ಕಾಗಲೀ ಕೋಟಿಯ ಲಾಭಕ್ಕಾಗಲೀ ಆಶೆ ಮಾಡನು. ದೇಹೇಂದ್ರಿಯ ಮನಬುದ್ಧಿಗಳೆಲ್ಲವೂ ಪರಮನ ಸೇವೆಗಾಗಿ ಬಂದಿರುವವೆಂದೂ, ಅವುಗಳು ತಮ್ಮ ತಮ್ಮ ಕೆಲಸವನ್ನು ಪರಮನಿಚ್ಛೆಯಂತೆ ನಡೆಸುವುವೆಂದೂ ತಿಳಿದು ತಾನು ನಿರಂಜನನಾಗಿರುವನು. ಅವನ ದೃಷ್ಟಿಯಲ್ಲಿ ಶಿರ ಮುಖ ಮನ ಬುದ್ಧಿ ಚಿತ್ತ ಅಹಂಕಾರಗಳು ಶಿವನ ಕಿರಣಗಳು. ಒಳಗೂ ಹೊರಗೂ ಶಿವನೇ. "ನಾನೆಂಬುದಿಲ್ಲ, ನಾನೇನು ಮಾಡಿತ್ತು ಎಲ್ಲವು ನಿಮ್ಮ ವಿನೋದ. ಎನ್ನ ಸರ್ವ ಭೋಗವೆಲ್ಲ ನಿಮ್ಮ ಭೋಗವಯ್ಯ ಕರ್ತೃತ್ವವಿಲ್ಲ ನಾನಿಮ್ಮೊಳಗು." ಇಂತಹ ಶುದ್ಧ ಭಾವನೆಯ ಜ್ಞಾನಿಗೆ ಕಾಲ ಬಾಧೆಯುಂಟೆ? ಹೀಗೆ ಅರಿತವನು ಎಂತು ಸತ್ತಾನು? ಎಂತು ಹುಟ್ಟುವನು? ಎಂತು ಘೋರ ಪಾಪಕ್ಕೆ ಒಳಗಾಗುವನು? ಅವನು ಸುಖಿಯೇ ಆಗಿರುವನು. ಅವನೇ ಚಿರಂಜೀವಿ ಅವನಿಗೆ ದೇಹವೇ ದೇವಾಲಯ ವಾಗಿರುವದರಿಂದ ಬೇರೆ ದೇವಾಲಯವನ್ನು ಹುಡಿಕಿಕೊಂಡು ಹೋಗುವ ಅವಶ್ಯಕತೆ ಇಲ್ಲ. ಈತನು ಯೋಗಿಯಂತೆ ಏಕಾಂತ ವಾಸಿಯಾಗದೆ ಜನಮಧ್ಯದಲ್ಲಿ ಯಾವುದಾದರೂ ವೃತ್ತಿಯಲ್ಲಿ ಇದ್ದು, ಅದರೊಡನೆ ಅಂಟುಕೊಳ್ಳದೆ ಆನಂದವಾಗಿರುವನು ಮಿಥಿಲೆಯೆಲ್ಲವೂ ದಹಿಸಿದರೂ ತನ್ನದು ಏನೂ ನಷ್ಟವಾಗಲಿಲ್ಲವೆಂಬ ಜನಕನ ಅಮರ ವಾಣಿಯಂತೆ ಜ್ಞಾನಿಯು ಸಂಸಾರದಲ್ಲಿ ಇದ್ದರೂ ಅವನೊಳಗೆ ಸಂಸಾರವು ಬಾರದು. ಇವನ ವೇಷ ಭೂಷಣವಾದರೂ ಉಪಮಿಸಲಾಗದು. ಸಮತೆಯೆಂಬ ಕಂಥೆಯ ತೊಟ್ಟು ಸುಬುದ್ಧಿಯೆಂಬ ಟೊಪ್ಪಿಯನಿಟ್ಟು, ವಿಷಯವೆಂಬ ಹಾವುಗೆಯ ಮೆಟ್ಟಿ, ತಮಂಧವೆಂಬ ಕಳಿಯ ಬೀಳಿಸಿ, ವೈರಾಗ್ಯವೆಂಬ ಕೊರಡ ಸೆಡಹದೆ ಮರವೆಯೆಂಬ ಚಳ ಮೆಟ್ಟಿವೆ, ಲಿಂಗದೇವನ ಕಿಂಕರನಾಗಿ ಆನಂದದಿಂದಿರುವನು.

ಅವನಿಗೆ ಪೂಜೆಯ ಫಲವಾದರೂ ವಿಶ್ವದಲ್ಲಿ ಸಮರತಿ ಸಮಕಳೆ ಸಮ ಸುಖವನ್ನರಿಯುವುದೇ ಆಗಿದೆ. ನದಿಯೊಳಗೆ ನದಿ ಬೆರಸಿದಂತೆ ವಿಶಾಲ ದೃಷ್ಟಿಯಿಂದ ಎಲ್ಲೆಲ್ಲಿಯೂ ತನ್ನನ್ನು ತನ್ನಲ್ಲಿ ಎಲ್ಲ

ರನ್ನು ಕಾಣುವುದೇ ಅವನ ಪೂಜೆಯು ಫಲವಾಗಿರುವದು. ಅವನು ದೇಹದೊಳಗೆ ಇದ್ದರೂ ದೇಹವೇ ತಾನೆಂಬ ಅಜ್ಞಾನ ಅಭಿಮಾನಗಳನ್ನು ತೊರೆದು ಲಿಂಗಮುಖನಾಗಿರುವನು. ಜನರು ನಾನು ಘನ ತಾನು ಘನವೆಂದು ತೊಗಲಿನ ಚರ್ಮಕ್ಕಾಗಿ ಹೊಡೆದಾಡುವರು. ಜಗದೊಳಗೆ ಹಿರಿಯರ ಹಿರಿತನವಿಂತೇನಾಯಿತ್ತು? ಹಿರಿದು ಕಿರಿದೆಂಬ ಶಬ್ದವಡಗಿದರೆ ಆತನೇ ಶರಣ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಆಮಿಷಗಳೆಂಬ ಏಳು ಭವಿಗಳನ್ನು ತಮ್ಮೊಳಗೆ ಇಟ್ಟುಕೊಂಡು ಇತರರನ್ನು ಹೀಯಾಳಿಸುವವರಿಗೆ ಅಘೋರ ನರಕ ತಪ್ಪದು. ಪ್ರಪಂಚದಲ್ಲಿ ಮುಕ್ಕಣ್ಣನು ಚಲ್ಲಿರುವ ಹೊನ್ನು ಹೆಣ್ಣು ಮಣ್ಣೆಂಬ ಸಣಸಲ ಕಂಟಗೆ ಬಲಿ ಬೀಳದೆ ಕೋಪ ತಾಪವಂ ಬಿಟ್ಟು ಭ್ರಾಂತಿ ಭ್ರಮೆಗಳಂ ನೀಗಿ, ಆಶೆ ರೋಷ ಹೆಣ್ಣುಗಳಿಗೆ ದೂರನಾಗಿ ಜಂಗಮನಾಗಲು ಪ್ರತಿಯೊಬ್ಬನೂ ಸಾಧನೆ ಮಾಡಬೇಕು.

ಹೀಗೆ ಷಡ್ ಲೋಭದ ರುಚಿಯು ಹಿಂಗಿ ಜಂಗಮವಾದಲ್ಲದೆ ಭವ ಹಿಂಗದು. ಸಂಸಾರ ದುಃಖದಿಂದ ಪಾರಾಗಬೇಕಾದರೆ, ಪ್ರತಿಯೊಬ್ಬನೂ ತನ್ನ ಡೊಂಕನ್ನು ತಾನು ತಿದ್ದಿಕೊಳ್ಳಲು ಪ್ರಯತ್ನಿಸಬೇಕು ಸ್ತುತಿ ನಿಂದೆಗಳಿಗೆ ನೋಯದೆ, ತನುಮನಗಳನ್ನು ನಿರ್ಮಲಗೊಳಿಸಿ ಆತ್ಮಾರಾಮನನ್ನು ದೇಹ ರಾಜ್ಯದಲ್ಲಿ ಸ್ಥಿರವಾಗಿ ಇರಿಸಿಕೊಳ್ಳಬೇಕು. ಇಳಿವಯಸ್ಸಿನಲ್ಲಿ ದೇಹ ಸುಖಕ್ಕಾಗಿ ಹೊರಗೆ ಸಂಪತ್ತನ್ನು ಗಳಿಸಿ ಇಟ್ಟುಕೊಳ್ಳುವಂತೆ ಅಂತರಂಗದಲ್ಲಿ ಸಮಾಧಾನ ಸಾಧಿಸಿಕೊಳ್ಳಬೇಕು. ದೇಹಪೋಷಣೆಯಲ್ಲಿಯೇ ಕಾಲವನ್ನು ಕಳೆಯುವ ಎಷ್ಟೋ ಜನರಿಗೆ ತಾನು ಸಚ್ಚಿದಾನಂದನೆಂಬ ಅರಿವೇ ಇಲ್ಲವಾಗಿ, ದೇಹ ವ್ಯಸನಗಳಲ್ಲಿಯೇ ಬೆರೆತಿರುವರು. ಅವರ ಚಿಂತೆಗಳಾದರೂ ಅನಂತ. "ಬಡತನಕೆ ಉಂಬುವ ಚಿಂತೆ, ಉಣಲಾದರೆ ಇಡುವ ಚಿಂತೆ, ಇಡಲಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ, ಬದುಕಿದರೆ ಕೇಡಿನ ಚಿಂತೆ, ಕೇಡಾದರೆ ಸಾವಿನ ಚಿಂತೆ," ಹೀಗೆ ಹಲವೊಂದು ಚಿಂತೆಗಳನ್ನು ಜಗತ್ತು ನಿರಾಕರಿಸಿ ನಡೆಯುತ್ತಿರುವುದು. ಕಾಲ, ಕಾಮತಮಂಥ ಗುರಿಯಾಗಿ ಹಲವರು ಲಯವಾಗುತ್ತಿರುವರು. ಆಸೆ, ಆಮಿಷ, ಹೊನ್ನು ಹೆಣ್ಣು ಮಣ್ಣಿಗಾಗಿ ಸಾವಿರಾರು ಮಂದಿ ದಿನವೂ ಸಾಯುತ್ತಿರುವರು. ದೇಹದೊಳಗಿರುವ ಪರಮನ ಚಿಂತೆಯನ್ನು ಯಾವನೂ ಹಚ್ಚಿಕೊಳ್ಳುವದಿಲ್ಲ. ಆದುದರಿಂದಲೇ ಭವದ ಬೀಜ ನಿರ್ವಾದವಾಗಿ

ಬೆಳೆಯುತ್ತಿರುವುದು. ಇಂತಹ ಬಯಕೆಯನ್ನು ಕಾಮಿನೀಕಾಂಚನಗಳ ಕಡೆಯಿಂದ ಅಂತರ್ಲಿಂಗದ ಕಡೆಗೆ ತಿರುಗಿಸಿದರೆ ಮಾನವ ಜನ್ಮವು ಸಾರ್ಥಕವಾಗುವುದು.

ಮನ ಬುದ್ಧಿ ಇಂದ್ರಿಯಗಳನ್ನು ನಿಗ್ರಹಿಸುವುದಾದರೂ ಸುಲಭದ ಕೆಲಸವಲ್ಲ. ನಿರೋಧಿಸಿದಂತೆಲ್ಲ ಅವುಗಳ ಉಪಟಳವು ಮೀರಿ ಹೋಗುವುದು. ಯಾಕೆಂದರೆ, ಇವೆಲ್ಲಕ್ಕೂ ವಿಷಯಗಳನ್ನು ಪರಮಾತ್ಮನೇ ದೊರಕಿಸಿರುವನು. ಇವನ್ನು ಬೇಡವೆಂದು ತಡೆದು, ದೂರದಲ್ಲಿ ನಿಲ್ಲಿಸಿದರೂ, ಪೂರ್ಣ ಚಂದ್ರನನ್ನು ರಾಹು ನಿರ್ಭಯವಾಗಿ ಹಿಡಿಯುವಂತೆ, ಒಮ್ಮೆಗೇ ಬಂದು ಹಿಡಿಯುವವು. "ನೆನೆವ ಮನಕ್ಕೆ ಹೊನ್ನ ತೋರಿದೆ. ನೋಡುವ ಕಂಗಳಿಗೆ ಹೆಣ್ಣ ತೋರಿದೆ. ಪೂಜಿಸುವ ಕೈಗೆ ಮಣ್ಣ ತೋರಿದೆ." "ಕಂಗಳೇಕೆ ನೋಡಬೇಡವೆಂದರೆ, ಮನವು ಶ್ರೋತ್ರಂಗಳೇಕೆ ಆಲಿಸಬೇಡವೆಂದರೆ, ಮಾಣವು. ನಾಸಿಕವೇಕೆ ವಾಸಿಸಬೇಡವೆಂದರೆ, ಮಾಣದು? ಸೋಂಕ ಬೇಡವೆಂದರೆ, ಮಾಣದು" ಹೀಗೆ ಇಂದ್ರಿಯ ಕಾರ್ಯಗಳನ್ನು ತಡೆಗಟ್ಟುವುದೂ ವ್ಯರ್ಥ. ಬುದ್ಧಿವಂತನಾದವನು ಅವುಗಳ ಸಹಾಯದಿಂದಲೇ, ಅವೆಲ್ಲಕ್ಕೂ ಚೈತನ್ಯದಾಯಕನಾದ ಆತ್ಮನಲ್ಲಿ ದೃಷ್ಟಿಯಿಟ್ಟು, ಎಲ್ಲ ಇಂದ್ರಿಯಗಳೂ ಲಿಂಗಾಧೀನವೆಂದು ತಿಳಿದು, ಸರ್ವಾಂಗ ಲಿಂಗಿಯಾಗಿ, ಆಯಾ ಲಿಂಗಗಳು ಅರ್ಪಿಸಿದ ಪ್ರಸಾದವನ್ನು ಸೇವಿಸುತ್ತ ನಿಜಾನಂದದಲ್ಲಿ ಇರುವನು. ಹೊರಗೆ ಹರಿಯುವ ಮನಸ್ಸನ್ನು ಒಳಗೆ ತಿರುಗಿಸಿ, ಮಹದಲ್ಲಿ ಬೆರಸಿ, ತಾನೇ ಸ್ವಯಂ ಲಿಂಗನಾಗುವನು. ಇಂತಹ ಸಾಧನೆಗೆ ಕಾಡಿಗೆ ಹೋಗಬೇಕಾಗಿಲ್ಲ. ಕ್ಷೇತ್ರಗಳನ್ನು ಸುತ್ತಬೇಕಾಗಿಲ್ಲ. ಗಂಗೆಯಲ್ಲಿ ಮುಳುಗಬೇಕಾಗಿಲ್ಲ. ಅತ್ತ ಇತ್ತ ಹರಿದ ಮನದ ತಿರವ ನರಿದಡೆ, ಬಚ್ಚಬರಿಯ ಬೆಳಗಾಗುವನು. ಸುಮನ ಮಂಟಪದೊಳಗೆ ನಿತ್ಯನಿರಂಜನ ಪ್ರಭೆಯ ಬೆಳಗನ್ನು ಕಂಡು ಸದಾ ಸುಖಿಯಾಗುವನು. ಇಂತಹ ಜ್ಞಾನಿಯು ಕೋಪ ತಾಪಗಳಿಂದ ಕಾವೇರದೆ, ಹೊಗಳಿಕೆಯಿಂದ ಉಬ್ಬದೆ, ತೆಗಳಿಕೆಯಿಂದ ಕುಸಿಯದೆ, ಸಮತೆ ಸಮಾಧಾನಗಳಿಂದ ತುಂಬಿರುವನು. ಯಾರು ಜರೆದರೂ ಅವರು ತನ್ನ ಮನದ ಕಾಳಿಕೆಯ ಕಳೆವರೆನ್ನುವನು. ಯಾರು ಸ್ತೋತ್ರ ಮಾಡಿದರೂ, ಅವರು ತನ್ನ ಹಗೆಗಳೆನ್ನುವನು. ಹಾವಿನ ಬಾಯಿಯ ಹಲ್ಲ ಕಳೆದು ಹಾವ

ನೋಡಿಸ ಬಲ್ಲೊಡೆ, ಹಾವಿನ ಸಂಗವೇ ಹೇಗೆ ಲೇಸೆನಿಸುವುದೋ, ಹಾಗೆ ಅವನಿಗೆ ಕಾಯದ ಸಂಗವೇ ಲೇಸಾಗುವುದು. ಅವನಿಗೆ ಕಾಯ ಕತ್ರನೆ ಕಂಪಿದರೇನು, ಮಿತ್ರನೆ ಮಿಂಚಿದರೇನು, ಅಂತರಂಗ ಶುದ್ಧವಾದ ಬೆಳಗ ದೇವನೊಲಿದ ಕಾಯ ಹೇಗಿದ್ದರೇನು? ಮನ ವಚನ ಕಾಯ ಗಳಲ್ಲಿ ಅಹಿತವಿಲ್ಲದೆ. ಪ್ರಾಣಿ ವರ್ಗವೆಲ್ಲವು ತನ್ನಂತೆ ತಿಳಿಯುವನು.

ಹೀಗೆ ಅಂತರ್ಲಿಂಗನ ಕಲೆಯ ನರಿತಲ್ಲದೆ, ಯಾರಿಗೂ ಭಕ್ತಿ ವಿರಕ್ತಿಗಳು ದೊರೆಕೊಳ್ಳವು. ಜ್ಞಾನಾನಂದವು ದೊರೆಯದು. ಕ್ಷಮೆ, ದಮೆ, ಸಮತೆ, ಸದಾಚಾರಗಳು ಲಭಿಸವು. ವಿನಯ ಮೃದು ವಚನ ಗಳೂ ಅಳವಡವು. ಲಿಂಗ ಕಳೆಯಾದರೋ ಜ್ಞಾನದಿಂದಲ್ಲದೆ ಪ್ರಜ್ವಲಿ ಸದು. ಜ್ಞಾನವಾದರೋ ತನ್ನನ್ನು ಬಿಟ್ಟು ಬೇರೆ ಇಲ್ಲ. ತನ್ನಲ್ಲಿ ತಾನೇ ತಿಳಿದು ನೋಡಿದರೆ, ಅರಿವು ತನ್ನಲ್ಲಿಯೇ ತದ್ಗತವಾಗಿದೆ. ತನ್ನಲ್ಲಿ ಅರಿವು ಸ್ವಯಂ ವಾಗಿರಲು ಅನ್ಯರ ಕೇಳಲುಂಟೇ? ತನ್ನ ತಾನರಿಯದೆ, ಎಲ್ಲವ ನರಿದು, ಫಲವಿಲ್ಲ. ಅನ್ಯ ಭಾವವ ನೆನೆಯದೆ, ತನ್ನಲ್ಲಿ ತಾನು ಎಚ್ಚರ ವಿದ್ದರೆ. ಲಿಂಗವು ತನ್ನಲ್ಲಿಯೇ ತನ್ಮಯವಾಗುವುದು. " ಹೊರಗನೇ ಕೊಯ್ದು, ಹೊರಗನೇ ಪೂಜಿಸಿದೊಡೆ, ಪರಿಣಾಮವಿಲ್ಲ. ಪ್ರಯೋಜನ ವಿಲ್ಲ. ಸುಖ ದೊರೆಕೊಳ್ಳದು.'' ಹೊರಗಣ ದೇವರನ್ನು ಕುರಿತು, ಧ್ಯಾನ ಮಾಡಿ, ಅತನ ಸ್ವರೂಪವನ್ನು ಅರಿಯುವುದು ಬಾಳಿನ ಗುರಿಯಲ್ಲ. ತನಗೆ ಮುಸುಕಿರುವ ಮಾಯೆ ಮೋಹಗಳನ್ನು ಬಗೆದು, ತನ್ನ ಸ್ವರೂಪ ವನ್ನು ಕಂಡುಕೊಳ್ಳುವುದೇ ಗುರಿ. ತನ್ನ ನಿಧಿಯನ್ನು ತಾನೇ ಕಂಡು ಕೊಳ್ಳುವುದು, " ಅಖಂಡ ಗೋಳವಾಗಿಹ ಲಿಂಗವು ತಾನೆಂದರಿದೊಡೆ ತಾನೇ ದೇವ " ತನ್ನ ಮರೆತು ದೇವರ ಕಾಣುವುದು ಎಂದಿಗೂ ಸಾಧ್ಯ ವಿಲ್ಲ. ಆ ದೇವರ ಮರೆತು ತನ್ನನ್ನು ಅರಿತರೆ, ತಾನೇ ಸ್ವಯಂ ದೇವ. ಅರಿದರೆ ಶರಣ, ಮರೆತರೆ ಮಾನವ, ಕಂಗಳ ಮುಂದಣ ಕಾಮನ ಕೊಂದು ಮನದ ಮುಂದಣ ಆಶೆಯ ತಿಂದು, ತನ್ನ ತಾನರಿದೊಡೆ, ತಾನೇ ಚಿನ್ಮಯ ಪರಬ್ರಹ್ಮ. ಆಚಾರವ ನರಿಯದೆ, ವಿಭವವಳಿಯದೆ, ಕೋಪ ಮುರಿಯದೆ, ತಾಪ ಉಡುಗದೆ, ಇಂತಹ ನಿತ್ಯಾನಂದವು ಅಳವಡದು- ಇದರ ಸ್ವರೂಪ ವಾದರೋ ವರ್ಣನೆಗೆ ಸಿಲುಕದ, ಉಪಮಿಸಲಾಗದ, ಕಾಲ ಕರ್ಮ ಭವದ ಸೋಂಕಿಲ್ಲದ, ಜ್ಞಾನಿಯ ಅನುಭವಕ್ಕೆ ಮಾತ್ರವೇ ವೇದ್ಯವಿರುವುದು- ಆದುದರಿಂದಲೇ ಶಿವಾನುಭವಿಗೆ "ನುಡಿಯಲು ಬೇಡ,

ನಡೆಯಲು ಬೇಡ, ಪೂಜಿಸಲು ಬೇಡ, ಉಣ್ಣಲು ಬೇಡ" ಆನಂದಾಮೃತದ ಸವಿಯನುಂಡವನಿಗೆ ಕ್ಷುದ್ಬಾಧೆಯುಂಟೇ? ನಿತ್ಯ ನೇಮದ ಹಂಗುಂಟೇ? ಅಗ್ಗವಣಿ ಪುಷ್ಪಗಳ ಅವಶ್ಯಕತೆಯುಂಟೆ?

ಇಂತಹ ವಿಶಾಲ ಭಾವನೆಯ ದಿವ್ಯಜ್ಯೋತಿಗಳನ್ನು ಪಡೆದ ನಾಡೇ ಪುಣ್ಯಭೂಮಿ. ಅವರು ಒಲಿದು ಪಾದವನಿಟ್ಟ ನೆಲವೇ ಕ್ಷೇತ್ರ, ಅವರು ಮುಟ್ಟಿದ ಜಲವೇ ಪಾವನ ತೀರ್ಥ. ಅವರ ನಗೆಯು ಶುದ್ಧವೂ ನಿಷ್ಕಳಂಕವೂ ಪಾವನವೂ ಆದುದು. ನುಡಿಯು ಮುತ್ತಿನ ಹಾರದಂತೆ ಲಿಂಗ ಮೆಚ್ಚಿ ಅಹುದೆನುವಂತೆ, ವಿಶದವೂ ಕರುಣಾಮಯವೂ ಆದುದು. ಅವರಿಗೆ ಜಗವೆಲ್ಲವೂ ಪರಶಿವ ಮಯವಾಗಿ ಕಾಣುವುದು. ಇಂತಹ ವಿರಲವೂ ಪೂರ್ಣವೂ ಆದ ಪ್ರೇಮ ಜೀವನವನ್ನು ಪ್ರತಿಯೊಬ್ಬರು ಆಚರಿಸುತ್ತ ಬಂದರೆ, ಲೋಕದಲ್ಲಿ ಡೊಂಕು ಎಲ್ಲಿ ಬಂದೀತು? ಆತ್ಮ ಪ್ರೇಮಿಯ ದರ್ಶನದಿಂದ ಪ್ರತಿಯೊಬ್ಬರು ದ್ವೇಷಾಸೂಯೆಗಳನ್ನು ತೊರೆದು ಅಹಂಕಾರವೆಂಬ ಮದಗಜವನ್ನೇರದೆ ಇಂದ್ರಿಯಾಶ್ವಗಳನ್ನು ವ್ಯವಸ್ಥೆಯಿಂದ ನಡೆಸುತ್ತ, ತನುವೆಂಬ ಭೂಮಿಯಲ್ಲಿ ಬ್ರಹ್ಮಬೀಜವ ಬೆಳಸಿ, ಸಮತೆ ಎಂಬ ಫಲವ ಬೆಳೆದು, ಶಾಂತ ಸುಖವನ್ನು ಅನುಭವಿಸ ಬಹುದು. ಒಳಗೆ ತೊಳೆಯಲರಿಯದೆ, ಹೊರಗೆ ತೊಳೆದು ತಾವು ಉತ್ತಮ ವರ್ಣದವರೆಂದು ಜಂಬದ ಕೋಳಿಗಳಂತೆ ಜಾತ್ಯಂಧರಾಗಿ ಬಡಿದಾಡುವ ಪ್ರತಿಯೊಬ್ಬನೂ ತನುವಿನಲ್ಲಿ ತುಂಬಿದ ಹುಸಿಯನ್ನು ಮನದಲ್ಲಿ ತುಂಬಿದ ವಿಷಯ ವಾಸನೆಗಳನ್ನು ದೂರಮಾಡಿ ಕತ್ತಲೆಯಲ್ಲಿ ಪರದಾಡದೆ ಆತ್ಮ ಜ್ಯೋತಿಯನ್ನು ಕಂಡರಿದು ಜಂಗಮರಾದರೆ ಭವದ ಬೆಳೆಯು ಬಹು ಮಟ್ಟಿಗೆ ಕಡಿಮೆಯಾದೀತು.

---

# ಮಹಾದೇವಿ ಅಕ್ಕನ ಮಹಾಯುದ್ಧ

## (ಫೊನೋ ರಿಕಾರ್ಡಿನ ವಿಮರ್ಶೆ)

ಲೇ:— ಶ್ರೀ ಜ. ಚ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳವರು
ಜಗದ್ಗುರು ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ.

---

ಶ್ರೀಮಾನ್ ವ್ಹಿ. ಕೆ. ಕರಡಿಯವರು ಮಹಾದೇವಿ ಅಕ್ಕನ ಜೀವನದ ಹೋರಾಟವನ್ನು ಜನಪದ ಸಾಹಿತ್ಯದ ಒಂದಂಗವಾದ 'ಜೀ' ಪದದ ಮಟ್ಟದಲ್ಲಿ ಹಾಡಿದ್ದಾರೆ. ಹಾಡಿಕೆ ಸ್ಪಷ್ಟವಾಗಿದ್ದು ಶ್ರಾವ್ಯವಾಗಿದೆ. ಶೈಲಿ ಸುಂದರವಾಗಿದ್ದು ಚೇತೋಹಾರಿಯಾಗಿದೆ.

ಯುದ್ಧ ಒಳ ಹೊರಗೆಂದು ಇತ್ತರವಾಗಿದೆ. ಹೊರಗಿನ ಈ ಭೌತಿಕ ಯುದ್ಧದಿಂದ ಶಾಂತಿಯಿಲ್ಲ, ಸೌಖ್ಯವಿಲ್ಲ. ನಾಶಕಾರಣವಾದ 'ಶಸ್ತ್ರಾಸ್ತ್ರಗಳ ಹೋರಾಟ' ಗಾಳಿಯಲಿ ಗುಂಡುಗಳ ತೂರಾಟ, ಇವೆಂದಿಗೂ ಬೇಡ ಎಂದು ಶ್ರೀ ಕರಡಿಯವರು ವಿಶ್ವ ಶಾಂತಿಗಾಗಿ ಹಾರೈಸಿದ್ದಾರೆ. ಮಹಾತ್ಮಾಜಿಯವರ ಮಾರ್ಗಾವಲಂಬಿಗಳಾಗಿ ಮಹತ್ವಾಕಾಂಕ್ಷೆಯನ್ನು ಬಿತ್ತರಿಸಿದ್ದಾರೆ ಮುಂಬರುವ ಮೂರನೆಯ ಮಹಾ ಯುದ್ಧದ ಅಣುಬಾಂಬಿನ ಅಟ್ಟಹಾಸದ ಜಾಗತಿಕ ಭೀಕರ ದೃಶ್ಯವು ಮಾಯವಾಗಿ ಜನಾಂಗದ ಬಾಳಿಗೆ ಬದುಕಿಗೆ ಸಹಾಯಕವಾಗಿ, ಶಾಂತಿ ಸಾಧನವಾಗಿ ನಿಲ್ಲಬೇಕಾದರೆ ಕೃತಿ ಕರ್ತರು ಹೇಳುವಂತೆ ಎಲ್ಲರೂ ಅಕ್ಕನ ಹಾಗೆ ಅಂತರಂಗದ ಆತ್ಮ ಯುದ್ಧವನ್ನು ಮಾಡಿಯಾಗಬೇಕು- ಆ ದಿವ್ಯ ಸಂದೇಶವನ್ನು ಜಗತ್ತಿಗೆ ಬೀರಲಿಕ್ಕಾಗಿಯೇ ಅಕ್ಕನು ಅಂದು ಆ ಬಗೆಯ ಯುದ್ಧವನ್ನೆಸಗಿ ವಿಜಯಶಾಲಿಯಾಗಿದ್ದಾಳೆ. ವಿಶ್ವ ವಲ್ಲಭನ ಕೈ ಹಿಡಿದಿದ್ದಾಳೆ. ಕರಡಿಯವರ ಕಲಾ ವಾಣಿಯಲ್ಲಿಯೇ ಹೇಳಬೇಕೆಂದರೆ 'ಶಿವ ಬಳ್ಳಿಗೊಂದು ಹೂವು ಬಿಟ್ಟು ಸುಂದರವಾಯಿತು. ಸುಗಂಧ ಸೂಸಿತು. ಈ ಚಿತ್ರವನ್ನು ಕರಡಿಯವರು ತಮ್ಮದೇ ಆದ ಶೈಲಿಯಲ್ಲಿ ಹೀಗೆ ಚಿತ್ರಿಸಿದ್ದಾರೆ.

## ೧ ಮೋಹ ಯುದ್ಧ.

ಮಹದೇವಿಯು ಮೊದಲು ಮಾಡಿದ್ದು ಮೋಹ ಯುದ್ಧ. ಈ ಯುದ್ಧದಲ್ಲಿ ಅಕ್ಕನನ್ನು ಕೌಶಿಕ ರಾಜನು ಎದುರಿಸಿದನು. ಬರೀ ರಾಜನಾಗಿ ಮಾತ್ರವಲ್ಲ. ಕಾಮನಾಗಿ ಕುಸುಮ ಬಾಣಗಳನ್ನು ಎಸೆಯುತ್ತ ಎದುರಾಳಿಯಾದನು. ಏನಾದರೇನು? ಅವನು ರತಿ ಲಕುಮಿಯರ ರಸನೆ ಹೊರತು ಶಕ್ತಿಯ ರಸನಲ್ಲ. ಮಹದೇವಿ ಅಕ್ಕಗಳಾದರೂ ಸ್ವಯಂ ಶಕ್ತಿ ಸ್ವರೂಪಿಣಿ, ಸ್ವಯಂಧುರೀಣೆ, ಆತ್ಮಶಕ್ತಿ ಅವಳಲ್ಲಿ ಅಪಾರವಾಗಿತ್ತು. ಅದಕ್ಕಾಗಿ ಅವಳು ಅಧೀರಳಾಗಿರಬೇಕಾಗಿರಲಿಲ್ಲ. ಅತ್ಯಂತ ಧೈರ್ಯ ಸಹಾಸಗಳಿಂದಲೆ ಕಾದಿದಳು. ಕೌಶಿಕನ ರೂಪದಲ್ಲಿ ಕಾಮನನ್ನೆ ಜಯಿಸಿದಳು.

ಕಾಮವು ಅಣುಬಾಂಬಿನಂತಹ ಮಹಾಸ್ತ್ರ. ಕಾಮಿಯು ಮಹಾಶತ್ರು. ಅಕ್ಕನು ಅಸ್ತ್ರವನ್ನು ಮುರಿದಿಕ್ಕಿದಳು. ಇಂದು ಅಣುಬಾಂಬು ಹೊರಗಿನ ಮಹಾಸ್ತ್ರವಾಗಿದ್ದಂತೆ ಕಾಮವು ಅಂತಃಶಸ್ತ್ರವಾಗಿ ಅಖಿಲ ಮಾನವ ಕೋಟಿಯನ್ನೇ ವಿಕಾರಗೊಳಿಸುತ್ತಲಿದೆ, ವಿಧ್ವಂಸಗೊಳಿಸುತ್ತಲಿದೆ. ಅಣುಬಾಂಬಿನ ಪ್ರಯೋಗದ ತಡೆ (ಕಂಟ್ರೋಲ)ಗೆ ಆಲೋಚಿಸುತ್ತಿರುವಂತೆ ಕಾಮ ಕೇಳಿಯ ಅತಿ ಪ್ರಯೋಗದ ತಡೆಗು ಆಲೋಚಿಸುವದು ಜಾಗತಿಕ ಪ್ರಶ್ನೆಯಾಗಿದೆ. ಕ್ಷೇಮವೂ ಆಗಿದೆ. ಈ ದಿವ್ಯ ಸಂದೇಶವನ್ನು ಅಕ್ಕನು ತನ್ನ ಈ ಮೋಹ ಯುದ್ಧದ ವಿಜಯದಿಂದ ಬಿತ್ತರಿಸಿದ್ದಾಳೆ. ಇದನ್ನು ಶ್ರೀ ಕರಡಿಯವರು ಕಂಡುಕೊಂಡು ಕಲಾಪೂರ್ಣವಾಗಿ ಹಾಡಿದ್ದಾರೆ. ಹೀಗಾಗುವದು ನಿಜ, ಸಹಜ. ಅದಕ್ಕಾಗಿಯೇ ಪ್ರತಿಯೊಬ್ಬರಿಗು ಅಂತರಂಗದ ಆತ್ಮ ಯುದ್ಧ ಅವಶ್ಯ, ಅನಿವಾರ್ಯ. ಆ ಯುದ್ಧಕ್ಕಾಗಿ ಅಕ್ಕನಂತೆ ಎಲ್ಲರೂ ಜ್ಞಾನದಲಗನ್ನು ಧರಿಸಿ ಸದಾ ಸಿದ್ಧನಾಗಿರಬೇಕು.

## ೨ ವಿಷಯ ಯುದ್ಧ

ಇದು ಅಕ್ಕನ ಎರಡನೆಯ ಯುದ್ಧ. ಜ್ಞಾನದಿಂದ ಕಾಮನ ಗೆಲಿದ ಅಕ್ಕನಿಗೆ ವಿಷಯಗಳಿಂದ ಏನು ಫಲ? ಅವಳಿಗೆ ವಿರಸವಾಯಿತು. ಆ ಕ್ಷಣದಲ್ಲಿಯೇ ಅನ್ನ ವಸ್ತ್ರ ಮುಂತಾದವುಗಳ ಮೋಹವನ್ನು ವಿರತಿ

ಖಡ್ಗದಿಂದ ಕತ್ತರಿಸಿದಳು. ಅನ್ನ ಅರಿವೆಗಳ ಆಶೆಯನ್ನು ಅಳಿದಳು. ವಸ್ತ್ರ ಪಡವೆಗಳನ್ನು ಬಿಚ್ಚಿ ಬಿಸುಟಿದಳು. ಸತ್ಯವೇ ಶಾಶ್ವತವೆಂದರಿದಳು. ಸತ್ಯವೇ ಸೌಂದರ್ಯವೆಂದಾಚರಿಸಿದಳು. ಅಂತಿಯ (ಸತ್ಯವು ಬರಲಿರುವದು ತಾನೆಚಂದ) ಎಂದು ಶ್ರೀ ಕರಡಿಯವರು ನಾಡೆ ನುಡಿದಿದಾರೆ, ನೆರೆ ನಂಬಿದಾರೆ.

ಇಂದು ಅನ್ನ ಅರಿವೆಗಳಿಲ್ಲದೆ ಒಂದು ಮಹಾಯುದ್ಧವಾಗಿ ನಿಂತಿದೆ. ಇದಕ್ಕೆ ದೀನ ದರಿದ್ರರು ಸಾಯುತ್ತಲಿದ್ದಾರೆ. ಯಾಗುತ್ತಲಿದ್ದಾರೆ. ಸಿರಿವಂತರು ಸುಖ ವಿಲಾಸಿಗಳು ಅತಿಭೋಗಿಗಳು ತ್ಯಾಗದ ಮಿತ ಭೋಗದ ಮಹತ್ವವನ್ನು ತಿಳಿದು ವಿರತಿಯನ್ನು ತಳೆದರೆ ಹಸಿದು ಹಂಬಲಿಸುವ ಹೊಟ್ಟೆಗಳು ತುಂಬಿಯಾವು, ತಣ್ಣಗಾದಾವು, ಹರಕು ಚಿಂದಿಯ ನುಟ್ಟು ವಿಕಾರಗೆಟ್ಟು ಅವಮಾನಗೊಳ್ಳುವವರ ಮೈಗಳು ಮುಟ್ಟಿಯಾವು, ಮಾನದಿಂದ ಬಾಳಿಯಾವು.

## ವಾಗ್ಯುದ್ಧ (ಅನುಭಾವ ವಾದ)

ಅಕ್ಕನು ಕಲ್ಯಾಣದ ಅನುಭವ ಮಂಟಪದಲ್ಲಿ ಅಲ್ಲಮರೊಡನೆ ಮಾಡಿದ ಮಾರನೆಯ ಯುದ್ಧವಿದು. ಇದನ್ನು ಕರಡಿಯವರ ವಾಣಿಯಲ್ಲಿಯೇ ಪೋನೊ ರಿಕಾರ್ಡಿನ ಮುಖದಲ್ಲಿಯೇ ಕೇಳಿಯಾಗಬೇಕು. ಆ ವಾದದಲ್ಲಿ ('ದೇವಿಯ ಮಾತು ಮಾಣಿಕ,) ವಾಗಿದ್ದರೆ ಶ್ರೀ ಕರಡಿಯವರ ಹೇಳಿಕೆಯು ಕೊನ್ನುಡಿಯಾಗಿ ಕರ್ಣಾನಂದವ ನೀಡುತ್ತದೆ.

## ಯುದ್ಧ ಸಿದ್ಧಿ.

ಅಕ್ಕನ ಈ ಮಾದೇನಾದ ಯುದ್ಧ ಸಿದ್ಧಿ ಚೆನ್ನಮಲ್ಲಿಕಾರ್ಜುನನ ಒಲುಮೆ ಆತನ ಮನದನ್ನೆಯಾಗಿ ಮಹದಾನಂದವ ಪಡೆಯಬೇಕೆಂಬುದೇ ಅಕ್ಕನ ಹೆಬ್ಬಯಕೆ. ಆದರೆ ಅಕ್ಕನ ಆ ಗಂಡನು ಬರಿ ತನ್ನವನಲ್ಲ, ತನ್ನ ಸುಖ ಮೊಂದನ್ನೆ ನೋಡುವವನಲ್ಲ. ಅವಳ ದೇವನು ಹಕ್ಕಿಗಳಿಗೆ ಹಣ್ಣು ಕೊಟ್ಟಿಹನು. ಬಾವಿಗಳಿಗೆ ನೀರು ತುಂಬಿಹನು. ಅತ ಸಕಲ ಜೀವಾತ್ಮರಿಗೆ ಲೇಸ ಒದಗಿಸುವ ತಂದೆ. ಒದಗಿಸಿದ್ದಾನೆ. ಒದಗಿಸಬಲ್ಲ. ಅಂಥವನು ಅಕ್ಕನ ನಲ್ಲ. ಆದಕ್ಕಾಗಿ ಅವನಿಗಾಗಿ ಅವಳ

ಹಂಬಲ. ಆ 'ಮಲ್ಲಿಕಾರ್ಜುನ'ನಿಗೆ ಅವಳ ಮನದ ನಂದನ. ಅಂತೆಯೇ ಅಂತರಂಗದಲ್ಲಿ ಹೋರಾಡಿ ಅನಂತ ಎಡರಾಳಿಗಳ ಎದುರಿಸಿ ಆತನನ್ನು ಒಲಿಸಿದಳು. ಆಗ ಆತನು ಇವಳನ್ನು ನೋಡಿದನು, ಮಾಡಿದನು, ನಗೆಮೊಗವ ತೋರಿದನು, ನಳಿತೋಳ ನೀಡಿದನು, ಬಿಗಿದಪ್ಪಿದನು. ಬೆರದೇಕ ಮಯವಾಗಿ ಒಪ್ಪಿದರು. 'ಬೆಳಕಿನೊಳು ಬೆಳಕು ಮರೆಯಾಯ್ತು. ಏನೆಂತು ಹೇಳಲಿ? ಆ ದಿವ್ಯ ತೇಜವ ಎನಿಸಿದೆ, ಮನ್ನಿಸಿದೆ.

ಮರುಗೇಗೆಯಲ್ಲಿ ಕವಿಯೊಡೆ ಅರಳಿದೆ. ಕವಿವಾಣಿಯಮೃಡಿಯಾಗಿ ಹೊಮ್ಮಿದೆ. ಜನಪದ ಸಾಹಿತ್ಯರಂಗದಲ್ಲಿ 'ಜಿ, ಪದವಾಗಿರಿಸಿ ಹಾಡಿಸಿದೆ. ಎದೆಯುನ್ನುಕ್ಕಿಸಿ ಅಕ್ಕನ ನಮಿಸುತ್ತಿದೆ. ನಮಿಸಿದ್ದಾನೆ, ಸೇವಿಸಿದ್ದಾನೆ, ಅಕ್ಕನ ಋಣ ತೀರಿಸಿದ್ದಾನೆ, ಕೃತಾರ್ಥನಾಗಿದ್ದಾನೆ. ಇಂಥ ತತ್ವಗಳನ್ನು ತಾತ್ವಿಕ ಮಾಲಿಗಳನ್ನು ಪೋನೋ ರಿಕಾರ್ಡುಗಳ ಮೂಲಕ ಪ್ರಚಾರ ಪಡಿಸುವದು ಇಂದು ಒಂದು ಅಗತ್ಯವಾದ ಕಾರ್ಯ. ಅತ್ಯಧಿಕವಾದ ಸೇವೆ. ಏಕೆಂದರೆ ಇಂದಿನ ಭೌತಿಕ ಕ್ರಾಂತಿಯಲ್ಲಿ ಇವು ತಕ್ಕವಟ್ಟಿಗೆ ಜೀವನ ಶಾಂತಿಯನ್ನು ಕಾಂತಿಯನ್ನು ಸಾರಬಲ್ಲವು, ನೀಡಬಲ್ಲವು. ಇದನರಿತು ಶ್ರೀಮಾನ್ ಪಿ. ಕೆ. ಕಡಿಯುವರು ಈ ದಿಶೆಯಲ್ಲಿ ಮಾಡಿದ ಸೇವೆಯು ಸ್ತುತ್ಯರ್ಹವಾದುದು, ಗಮನಾರ್ಹವಾದುದು. ಇದನ್ನು ಶ್ರೋತೃವೃಂದವು ಗಮನಿಸಿ ಪ್ರೋತ್ಸಾಹಿಸಬೇಕು. ಅಕ್ಕನ ಕಥಾಂಶವನ್ನೆಲ್ಲ ನಾಲ್ಕು ಭಾಗವಾಗಿಸಿ ಎರಡು ಪ್ಲೇಟುಗಳಲ್ಲಿ ಪೂರ್ತಿ ಮಾಡಿದ್ದಾರೆ. ಎಲ್ಲರೂ ತರಿಸಿ ಅವಶ್ಯ ಕೇಳಬೇಕಾದವು, ಆನಂದಿಸಬೇಕಾದವು.

ಇಂತಹ ಪ್ರಚಾರ ಕಾರ್ಯವನ್ನು ಕೈಕೊಂಡ ಶ್ರೀಮಾನ್ ಎಂ. ಎಸ್. ಭೂಸ್ತ. ಅ್ಯಂಡ ಸನ್ಸ ಗದಗ ಅವರು ಹೆಚ್ಚು ಸ್ತುತ್ಯರ್ಹರು. ಇವರ ಸೇವೆಯಿಂದ ನಾಡಿನ ಸಾಹಿತ್ಯ ಸಂಸ್ಕೃತಿಗಳು ಬಾಳಿ ಬದುಕಬಲ್ಲವು. ಶಾಂತಿ ದಾಂತಿಗಳು ನೆಲೆ ನಿಲ್ಲಬಲ್ಲವು. ಇವರು ಈ ಪ್ರಚಾರ ಕಾರ್ಯದಿಂದ ಇನ್ನು ಹಲವಾರು ಕೃತಿ ರತ್ನಗಳು ಹೊರಬೀಳುವಂತಾಗಲಿ. ಇವರ ಮತ್ತು ಕೃತಿಕರ್ತರ ಕೀರ್ತಿ ಚಿರಕಾಲ ಬೆಳಗುವಂತಾಗಲಿ.

---

ಸೋಮಾರಾಧ್ಯನಿದ್ದುದು ವೀರಶೈವ ಮತಪ್ರಸಾರದ ಕಾಲದಲ್ಲಿ. ಆಗ ಪರವಾದಿಗಳ ಮತಗಳನ್ನು ಖಂಡಿಸಿ ಶಿವಾನುಭವದ ತತ್ವಗಳನ್ನು ನೆಲೆಗೊಳಿಸುವ ಕಾರ್ಯಗಳು ಎಲ್ಲ ಕಡೆಗೂ ಭರದಿಂದ ನಡೆದಿದ್ದವು. ಇಂಥ ವಾದಗಳಲ್ಲಿ ಪಾಲ್ಕುರಿಕೆ ಸೋಮಾರಾಧ್ಯನು ಬಹು ಮುಂದು ವರಿದವನಾಗಿದ್ದನು. ವೇಮನಾರಾಧ್ಯನ ಕಾಲದಿಂದಲೂ ಇಂಥ ಮತ ಪ್ರಸಾರದ ಕಾರ್ಯಗಳು ಕರ್ನಾಟಕಾಂಧ್ರದೇಶಗಳಲ್ಲಿ ಭರದಿಂದ ಸಾಗಿದ್ದವು. ಹೀಗಿರಲು ಒಂದು ದಿವಸ ವೈಷ್ಣವರಿಬ್ಬರು ಪಾಲ್ಕುರಿಕೆಗೆ ಬಂದು ಸೋಮಾರಾಧ್ಯನಿಗೆ ತಿಳಿಯದಂಥ ಪ್ರಶ್ನೆಗಳನ್ನು ಹಾಕಿ ಅವನನ್ನು ಸೋಲಿಸಬೇಕೆಂದು ಯೋಚಿಸಿ ಒಬ್ಬ ಚಾರನನ್ನು ಕರೆದು — ಪಟ್ಟಣಕ್ಕೆ ಮೊಸರು ಕುರಿಕೆ ಶಾಸ್ತ್ರಿಗಳು ಮತ್ತು ಆಜ್ಯ ಕುರಿಕೆ ಶಾಸ್ತ್ರಿಗಳು ಹೀಗೆ ಇಬ್ಬರು ಶಾಸ್ತ್ರಿಗಳು ವಾದ ಮಾಡಲು ಬಂದಿದ್ದಾರೆ. ಪಾಲ್ಕುರಿಕೆಯಾರಾಧ್ಯರಿಗೆ ಬರಹೇಳೆಂದು ಅವರು ಹಾಸ್ಯದಿಂದ ಅವನ ಕೂಡ ಹೇಳಿ ಕಳಿಸಿದರು. ಸೋಮಾರಾಧ್ಯನು ಇದಕ್ಕೆ ಉತ್ತರವಾಗಿ — ಹಾಲು ಕುರಿಕಿದ ಮೇಲೆ ಮೊಸರೆಲ್ಲಿಯದು? ಮೊಸರು ಕುರಿಕಿದ ಮೇಲೆ ಘೃತ (ಆಜ್ಯ) ಎಲ್ಲಿಂದ ಬಂದೀತು? ಮೊಸರು ಕುರಿಕೆಯ ಶಾಸ್ತ್ರಿಗಳು ಘೃತ ಕುರಿಕೆಯ ಶಾಸ್ತ್ರಿಗಳು ಪಾಲ್ಕುರಿಕೆ ಶಾಸ್ತ್ರಿಗಳಿಂದ ಹುಟ್ಟಿದವರು ಎಂದು ಹೇಳಿ ಕಳುಹಿದನು. ಚಾರನು ಹಾಗೆಯೇ ಉಭಯತರ ಕಡೆಗೆ ಹೋಗಿ ಹೇಳಲು, ಸೋಮಾರಾಧ್ಯನು ಬಲು ಗಟ್ಟಿಗನು ಚದುರನು, ಇಂಥವನ ಕೂಡ ನಮ್ಮ ವಾದ ಸಲ್ಲದು. ಎಂದು ಆ ವೈಷ್ಣವರಿಬ್ಬರೂ ನಾಚಿ ಸೋಮಾರಾಧ್ಯರನ್ನು ಭೆಟ್ಟಿಯಾಗದೆ ಪಟ್ಟಣದಿಂದ ಹಾಗೆಯೇ ಹೋಗಿ ಬಿಟ್ಟರು.

ಮುಂದೆ ಕರ್ನಾಟಕ ಆಂಧ್ರದೇಶಗಳಲ್ಲಿ ಸೋಮಾರಾಧ್ಯನ ಕೀರ್ತಿಯು ಎಲ್ಲ ಕಡೆಗೂ ಪಸರಿಸುತ್ತ ನಡೆಯಿತು. ಎಲ್ಲೆಲ್ಲಿಯೂ ಅವನು ಆಂಧ್ರ ಭಾಷೆಯಲ್ಲಿ ರಚಿಸಿದ ಬಸವ ಪುರಾಣದ ಪಠಣವು ನಡೆಯಹತ್ತಿತು.

ಹೀಗಿರುವಲ್ಲಿ ಓರುಗಲ್ಲಿ (ವರಂಗಲ್ಲ) ನಲ್ಲಿ ಕಾಕತೀಯ ವಂಶದ ರಾಜನಾದ ಪ್ರತಾಪರುದ್ರನು ಈಕಾಲದಲ್ಲಿ ರಾಜ್ಯವಾಳುತ್ತಿದ್ದನು. ಅವನು ಒಂದುದಿವಸ ಅಲ್ಲಿದ್ದ ಶಿವಾಲಯಕ್ಕೆ ದೇವರ ದರ್ಶನಕ್ಕೋಸ್ಕರ ಹೋಗಿರಲು ಅಲ್ಲಿ ಬಸವಪುರಾಣದ ಪ್ರವಚನವು ನಡೆದಿತ್ತು. ಅದನ್ನುಕೇಳಲು ದೇವಾಲಯದಲ್ಲಿ ಜನರು ಕಿಕ್ಕಿರಿದಿದ್ದರು. ಅದನ್ನು ಅರಸನು ನೋಡಿ ಇಲ್ಲಿ ಏನು ನಡಿದಿದೆ ಎಂದು ಕೇಳಲು ಅಲ್ಲಿದ್ದ ಬ್ರಾಹ್ಮಣರು ಪಾಲ್ಕುರಿಕೆ ಸೋಮಾರಾಧ್ಯನೆಂಬೊಬ್ಬನು ಬಸವನೆಂಬುವನ ಪುರಾಣವನ್ನು ಮೊನ್ನೆ

ತಾನೇ ರಚಿಸಿದ್ದಾನಂತೆ, ಉಂಡಾಡಿಗರು ಇಲ್ಲಿ ನೆರೆದು ಅದನ್ನುಕೇಳುತ್ತ ಕಾಲಕ್ಷೇಪಮಾಡುತ್ತಾ ಇದ್ದಾರೆ ಎಂದು ಹೇಳಿದರು. ಬ್ರಾಹ್ಮಣರು ಈ ಪ್ರಕಾರ ಬಸವೇಶ್ವರನನ್ನೂ ಸೋಮಾರಾಧ್ಯನನ್ನೂ ಪುರಾಣ ಕೇಳುತ್ತಲಿದ್ದವರನ್ನೂ ಜರಿದು ನುಡಿದದ್ದನ್ನು ಕೇಳಿ ಅದನ್ನು ಸೈರಿಸಲಾರದೆ ಅವರು ಪಾಲ್ಕುರಿಕೆಗೆ ಹೋಗಿ ಸೋಮಾರಾಧ್ಯನಿಗೆ ಆದ ಸಂಗತಿಗಳನ್ನು ನಿವೇದಿಸಿದರು. ಸೋಮಾರಾಧ್ಯನು ಅರಸನೆದುರು ಹೀಗೆ ನಡೆದದ್ದನ್ನು ತಿಳಿದು, ಶಿವಶರಣರ ತತ್ವಗಳ ಮಹತ್ವವನ್ನು ಅರಸನಲ್ಲಿ ಪ್ರಸ್ಥಾಪಿಸುವದು ಅವಶ್ಯವೆಂದು ಭಾವಿಸಿ ಓರುಗಲ್ಲಿಗೆ ಹೊರಡಲುದ್ಯುಕ್ತನಾದನು.

ಅವನು ಹೊರಡುವಾಗ ಬಂಡಿಗೆ ಮತ್ತು ಎತ್ತುಗಳಿಗೆ ಲಿಂಗಮುದ್ರೆಯನ್ನು ಒತ್ತಿಸಿದನು. ಆನೇಲೆ ತಾನು ಒಳಗೆ ಕುಳಿತುಕೊಂಡು ಭವಿಗಳನ್ನು ನೋಡಬಾರದೆಂದು ಮೇಲೆ ಗುಡಾರದ ಮುಸುಕನ್ನು ಹಾಕಿಸಿ ಪ್ರವಾಸ ಮಾಡುತ್ತ ಓರುಗಲ್ಲಿನ ಹೆಬ್ಬಾಗಿಲಿಗೆ ಬಂದನು.

ಆಗ ಬಂಡಿಗೆ ಹೂಡಿದ ಬಸವಗಳು ಹೆಬ್ಬಾಗಿಲನ್ನು ಸಮೀಪಿಸಲಾಗಿ ಅವು ಪುರಪ್ರವೇಶವನ್ನು ಮಾಡದೆ ಅಲ್ಲಿಯೇ ನಿಂತುಕೊಂಡುಬಿಟ್ಟವು. ಪರಿಚಾರಕರು ಎಡಬಲ ನಿರೀಕ್ಷಿಸಲು ಯಾವ ಗಂಡಾಂತರವಿಲ್ಲೆಂದು ತಿಳಿದು ಅವರು ಬಸವಗಳನ್ನು ಮುಂದೆ ಹೊಡೆದರು. ಆದರೆ ಅವು ಮೂರುಮಾರು ಮಾತ್ರ ಮುಂದೆ ಹೋಗಿ ಪುನಃ ನಿಂತುಕೊಂಡು ಬಿಟ್ಟವು. ಆಗ ಪರಿಚಾರಕರು ಮೇಲೆ ನೋಡುತ್ತಿರುವಲ್ಲಿ ಅಲ್ಲಿ ವಿಷ್ಣು ಪ್ರತಿಮೆಗಳಿರುವದನ್ನು ಕಂಡು ಅವುಗಳ ಕೆಳಗಿನಿಂದ ಗೂಳಿಗಳು ಹೋಗಲಿಲ್ಲವೆಂಬುದನ್ನುತಿಳಿದರು. ಇದನ್ನು ಅವರು ಸೋಮಾರಾಧ್ಯನಿಗೆ ಹೇಳಲು ಅವನು ಒಂದು ಚೀಟಿನಲ್ಲಿ ಶಿವಮಂತ್ರವನ್ನು ಬರೆದು ತನ್ನ ಮಗ ಚತುರ್ಮುಖ ದೇಶಿಕನ ಕೈಯ್ಯಲ್ಲಿತ್ತು, ಅವನ್ನು ತತ್ ಪ್ರತಿಮೆಗಳಿದಿರಾಗಿ ಹಿಡಿ ಎನಲು ಅವರು ಹಾಗೆಯೇ ಹಿಡಿಯಲು ಆ ಬೊಂಬೆಗಳು ಥಟ್ಟನೆ ಧರೆಗುರುಳಿಬಿದ್ದವು. ಆ ಮೇಲೆ ಬಸವಗಳು ಅವುಗಳನ್ನು ತುಳಿಯುತ್ತ ಪುರಪ್ರವೇಶ ಮಾಡಿದವು.

ಪಾಲ್ಕುರಿಕೆ ಸೋಮಾರಾಧ್ಯನು ಪಟ್ಟಣಕ್ಕೆ ಬರುವನೆಂಬುದನ್ನು ಪರವಾದಿಗಳು ತಿಳಿದು ಅವನನ್ನು ಅಪಹಾಸ್ಯಕ್ಕೀಡುಮಾಡಬೇಕೆಂದು ಅವರು ಊರಲ್ಲಿದ್ದ ಉಂಡಾಡಿಗರನ್ನು ವಿಭೂತಿ ರುದ್ರಾಕ್ಷಿಗಳಿಂದ ಅಲಂಕರಿಸಿ ಅವನನ್ನು ಕಾಣಲು ಮೊದಲು ಹೆಬ್ಬಾಗಿಲಿಗೆ ಕಳಿಸಿದ್ದರು. ಆದರೆ ಸೋಮಾರಾಧ್ಯನು ಅವರನ್ನು ಕಡೆಗಣಿಸಿ ಭೀಮಯ್ಯನೆಂಬ ತನ್ನ ಶಿಷ್ಯನ ಮನೆಗೆ ಬಂದು ಅಲ್ಲಿ ಇಳಿದನು.

ಮುಂದೆ ಸೋಮಾರಾಧ್ಯನು ಪಟ್ಟಣದಲ್ಲಿರುವ ವರೆಗೂ ತಾನು ಸರ್ವಾಂಗಲಿಂಗ ಪ್ರಸಾದಿಯಾಗಿ ತನ್ನಶೀಲವಲ್ಲಿ ಇರಹತ್ತಿದನು. ಪಟ್ಟಣ ದಲ್ಲಿಯ ಶಿಷ್ಯರೆಲ್ಲರೂ ಅವನನ್ನು ಭಕ್ತಿಯಿಂದ ಕಂಡು ಅವನ ಶುಶ್ರೂಷೆ ಯಲ್ಲಿ ತೊಡಗಿದವರಾದರು.

ಓರುಗಲ್ಲಿನ ರಾಜನಾದ ಪ್ರತಾಪ ರುದ್ರನು ದೇಶದಲ್ಲೆಲ್ಲ ಅತ್ಯಂತ ಪ್ರಸಿದ್ಧಿಯನ್ನುಹೊಂದಿದ ಸೋಮಾರಾಧ್ಯನು ತನ್ನ ಪಟ್ಟಣಕ್ಕೆ ಬಂದಿರುವ ನೆಂಬುದನ್ನು ತಿಳಿದು ತನ್ನ ಓಲಗದಲ್ಲಿ ವಿದ್ವಾಂಸರಾದ ಪರವಾದಿಗಳನ್ನು ಬರಮಾಡಿಕೊಂಡು ಅವರ ಕೂಡ ವಿವಾದಗಳು ಜರಗುವಂತೆ ವ್ಯವಸ್ಥೆ ಮಾಡಿ ದನು. ಈ ವಿವಾದಗಳ ಕಾಲದಲ್ಲಿ ಸೋಮಾರಾಧ್ಯನು ಶಿವಶರಣರ ಧರ್ಮ ತತ್ತ್ವಗಳನ್ನು ವೇದ ವೇದಾಂತಗಳ ವಾಕ್ಯಗಳಿಂದ ಪ್ರಸ್ಥಾಪಿಸಿದನು. ಅರಸನು ಅವನ ವಿದ್ವತ್ತೆಗೆ ಪ್ರೀತನಾಗಿ ಅವನಿಗೆ ದೊಂಕಿಪರ್ತಿ ಮೊದ ಲಾದ ಗ್ರಾಮಗಳನ್ನು ಉಂಬಳಿ ಹಾಕಿಕೊಟ್ಟನು. ಹೀಗೆ ರಾಜಧಾನಿಯಲ್ಲಿ ಸೋಮನಾಥನು ಒಂಬತ್ತು ದಿವಸ ಕಳೆದು ಪಾಲ್ಕುರಿಕೆಗೆ ಮರಳಿ ಬಂದನು. ಅವನು ಬರುವ ಮುಂದೆ ಅರಸನಿಂದ ತನಗೆ ದೊರೆದ ಗ್ರಾಮಗಳನ್ನು ತನ್ನ ಶಿಷ್ಯರಿಗೆ ಕೊಟ್ಟುಬಿಟ್ಟನು.

ಓರುಗಲ್ಲಿನಲ್ಲಿ ಅರಸನ ಎದುರಿಗೆ ಸೋಮಾರಾಧ್ಯನು ತೋರಿಸಿದ ಮಹಾತ್ಮ್ಯೆ ಮತ್ತು ವಿದ್ವತ್ತೆ ಇವುಗಳ ವಾರ್ತೆಯು ಎಲ್ಲ ಕಡೆಗೂ ಹಬ್ಬಿತು. ಈ ಕಾಲದಲ್ಲಿ ಚಕ್ರಪಾಣಿ ರಂಗನಾಥನೆಂಬ ವೈಷ್ಣವಾಚಾ ರ್ಯನು ಬಹು ವಿದ್ವಾಂಸನೆಂದು ದೇಶದಲ್ಲಿ ಪ್ರಸಿದ್ಧನಾಗಿದ್ದನು. ಅವನು ಸೋಮಾರಾಧ್ಯನ ವಾಕ್ ಪ್ರೌಢಿಮೆ ಮತ್ತು ಮಹಿಮಾತಿಶಯಗಳನ್ನೂ ಅವನು ಓರುಗಲ್ಲಿನಲ್ಲಿ ಅಚ್ಯುತ ಪ್ರತಿಮೆಯನ್ನು ಕೆಡಹಿದ್ದನ್ನೂ ಕೇಳಿ ಬಳಿಗೊಂಡು ಅವನನ್ನು ವಾದದಲ್ಲಿ ಸೋಲಿಸಬೇಕೆಂಬ ಉತ್ಕಟೇಚ್ಛೆ ಯುಳ್ಳವನಾಗಿ ಪಾಲ್ಕುರಿಕೆಗೆ ಬಂದನು. ಅವನು ಬರುವ ಮುಂದೆ ಸೋಮಾರಾಧ್ಯನಿಗೆ ವಿರೋಧಿಗಳಾಗಿದ್ದ ಲೋಕಾಯತರು, ಬ್ರಹ್ಮವಾದಿ ಗಳು, ಬೌದ್ಧ ಜೈನರು ಮೊದಲಾದ ಪಂಗಡದವರನ್ನು ಹುರಿಗೊಳಿಸಿ ತನ್ನೊಡನೆ ಕರೆತಂದನು. ಹೀಗೆ ಪಟ್ಟಣದಲ್ಲಿ ಆಯಾ ಮತಸ್ಥರ ಒಂದು ದೊಡ್ಡ ತಂಡವೇ ಸಿದ್ಧವಾಯಿತು.

ಸೋಮಾರಾಧ್ಯನು ಹೀಗೆ ಅವರು ಕೂಡಿದ್ದನ್ನು ನೋಡಿ ಅತ್ಯಂತ ಆನಂದ ಭರಿತನಾದನು. ಅವನು ಅವರ ಸಭೆಯನ್ನು ಪಟ್ಟಣದಲ್ಲಿ ಸೇರಿಸಿದನು. ಆಗ ಪರವಾದಿಗಳು ತಮ್ಮ ಒಕ್ಕಣಿಕೆಗಳನ್ನು ಹೇಳುತ್ತ ಆರ್ಭಟಿಸುತ್ತ ಸಭೆಗೆ ಬರುತ್ತಾ ಇದ್ದರು. ಅವರೊಡನೆ ವಾದಿಸಲು ಸೋಮಾರಾಧ್ಯನು ಅಣಿಯಾಗಿ ನಿಂತನು. ಆಗ ವಾದವಿವಾದಗಳು ಹಲವು ದಿವಸಗಳ ವರೆಗೆ ನಡೆದವು. ಅವುಗಳಲ್ಲಿ ಸೋಮಾರಾಧ್ಯನು ಕ್ರಮ ಕ್ರಮವಾಗಿ ವಿರೋಧಿಗಳನ್ನು ವಾಗ್ವಾದದಲ್ಲಿ ಸೋಲಿಸುತ್ತ ಕಡೆಗೆ ಚಕ್ರಪಾಣಿ ರಂಗನಾಥನನ್ನು ಸೋಲಿಸಿದನು. ಆಗ ರಂಗನಾಥನು ಮ್ಲಾನ ಮುಖನಾಗಿ ಉಮ್ಮಳಿಸುತ್ತ ಪಟ್ಟಣವನ್ನು ಬಿಟ್ಟು ಸ್ವ ಗ್ರಾಮಕ್ಕೆ ತೆರಳುವವನಾದನು.

ಅವನು ತನ್ನ ಗ್ರಾಮಕ್ಕೆ ಹೋಗುವ ಮಾರ್ಗವು ಶ್ರೀಶೈಲ ಪರ್ವತದ ಮಗ್ಗುಲಿನಿಂದಲೇ ಇತ್ತು. ಆದರೆ ಅವನು ಆ ಪವಿತ್ರ ಪರ್ವತ ಶಿಖರವನ್ನು ನೋಡಬಾರದು, ನೋಡಿದರೆ ಅದು ದೋಷವೆಂದು ತಿಳಿದು ಸತ್ತಿಗೆಯನ್ನು ಅಡ್ಡ ಹಿಡಿಸಿ ಅದನ್ನು ಮರೆ ಮಾಡಿಕೊಳ್ಳುತ್ತ ಹೋದನು. ಆದರೆ ಇದಕ್ಕೆ ತಕ್ಕ ಪ್ರತಿಫಲವು ಅವನಿಗೆ ತತ್‌ಕ್ಷಣವೇ ದೊರಕಿತು. ಅವನ ಕಣ್ಣುಗಳು ಕೂಡಲೇ ಹಿಂಗಿ ಹೋಗಿ ಅವನು ಪೂರ್ಣ ಕುರುಡನಾದನು.

ರಂಗನಾಥನಿಗೆ ಈ ಸ್ಥಿತಿಯು ಉಂಟಾಗಲು ಅವನು ಸಂಕಟಪಡುತ್ತ ಹಾಗೆಯೇ ಅಹೋಬಲಕ್ಕೆ ಹೋಗಿ ನರಸಿಂಹನ ಮೊರೆಹೊಕ್ಕನು. ಅವನು ಅತ್ಯಂತ ದೈನ್ಯ ಬಟ್ಟು ನರಸಿಂಹನನ್ನು ಸ್ತುತಿಸುತ್ತಿರಲು ನರಸಿಂಹನು ಅವನಿಗೆ -- ನಿನಗೇನು ಬೇಕು? ಬೇಡೆಂದು ಕೇಳಲು, ರಂಗನಾಥನು ನಡೆದ ಎಲ್ಲ ಸಂಗತಿಗಳನ್ನು ಅವನಿಗೆ ತಿಳಿಸಿದನು.

ಅದಕ್ಕೆ ನರಸಿಂಹನು — ನೀನು ತಪ್ಪು ಮಾಡಿದೆ. ನೀನು ಹೀಗೆ ಮಾಡತಕ್ಕದ್ದಿದ್ದಿಲ್ಲ. ನೀನು ಇನ್ನು ಮೇಲೆ ಆ ಮಲ್ಲಿಕಾರ್ಜುನ ಸ್ವಾಮಿಯ ಕಡೆಗೆಯೇ ಹೋಗಿ ಅವನಿಗೆ ಶರಣು ಹೋಗು ಎಂದು ಹೇಳಿ ಕಳುಹಿದನು. ಹಾಗೆಯೇ ರಂಗನಾಥನು ಶ್ರೀಶೈಲಕ್ಕೆ ಬಂದು ಮಲ್ಲಿಕಾರ್ಜುನ ಸ್ವಾಮಿಯನ್ನು ನಾನಾ ಪ್ರಕಾರವಾಗಿ ಸ್ತುತಿಸಿದನು. ಆಗ ಅವನ ಒಂದು ಕಣ್ಣು ಜಳಕ್ಕನೆ ಹೊಳೆಯಿತು. ಬಳಿಕ ರಂಗನಾಥನು ಮಲ್ಲಿಕಾರ್ಜುನನಿಗೆ — ನೀನು ನನಗೆ ಒಂದು ಕಣ್ಣು ಮಾತ್ರ ಕೊಟ್ಟೆ. ಇನ್ನೊಂದನ್ನು ಕೊಡಬೇಕು ಎಂದು ಕೇಳಿಕೊಂಡನು.

ಆಗ ಮಲ್ಲಿಕಾರ್ಜುನನು ನೀನು ಸೋಮಾರಾಧ್ಯನ ಕಡೆಗೆಯೇ ಹೋಗು. ಅವನೇ ಎರಡನೇ ಕಣ್ಣನ್ನು ಕೊಡುವನು ಎಂಬ ಶಬ್ದಗಳು ಮೂರ್ತಿಯೊಳಗಿಂದ ಹೊರಟವು. ಅದಕ್ಕೆ ರಂಗನಾಥನು ನೀನೇ ಏಕೆ ಕೊಡುವದಿಲ್ಲ ಎಂದು ಕೇಳಲು ಅವನು ಉಳಿದ ಕಣ್ಣನ್ನು ಅವನಿಂದ ಪಡೆದು ಅವನಿಂದಲೇ ದೀಕ್ಷೆಯನ್ನು ಹೊಂದು ಎಂದು ಹೇಳಿದನು.

ಆಗ ರಂಗನಾಥನು ಹಾಗೆಯೇ ಆಗಲೆಂದು ಪಾಲ್ಕುರಿಕೆಗೆ ಹೋಗಿ ಸೋಮನಾಥನನ್ನು ಕಂಡು ನನ್ನಿಂದ ತಪ್ಪಾಗಿದೆ. ನಾನು ಮಲ್ಲಿಕಾರ್ಜುನ ಸ್ವಾಮಿಯೊಡನೆ ಅಹಂಕಾರದಿಂದ ನಡೆಯತಕ್ಕದ್ದಿದ್ದಿಲ್ಲ. ನನಗೆ ದೀಕ್ಷೆಯನ್ನಿತ್ತು ಎರಡನೆಯ ಕಣ್ಣನ್ನು ಕೊಟ್ಟು ರಕ್ಷಿಸು ಎಂದು ಹೇಳಿಕೊಂಡನು.

ಆಗ ಸೋಮಾರಾಧ್ಯನ ಅಪ್ಪಣೆಯಿಂದ ಅವನ ಕುಮಾರನಾದ ಚತುರ್ಮುಖ ಬಸವನು ಅವನ ಕಣ್ಣಿಗೆ ಭಸಿತವನ್ನು ಹಚ್ಚಲು, ಅದು ತಿರುಗಿ ಬಂದಿತು. ಆ ಮೇಲೆ ಚತುರ್ಮುಖ ಬಸವನು ತನ್ನ ತಂದೆಯ ಆಜ್ಞೆಯಂತೆ ರಂಗನಾಥನಿಗೆ ಲಿಂಗದೀಕ್ಷೆಯನ್ನು ಮಾಡುವವನಾದನು. ಅಂದಿನಿಂದ ರಂಗನಾಥನು ವೀರಶೈವಾಚಾರದಲ್ಲಿ ನಿರತನಾಗಿ ಸೋಮಾರಾಧ್ಯನ ಪ್ರೀತಿಯ ಶಿಷ್ಯನಾಗಿ ಉಳಿದನು.

ರಂಗನಾಥನು ಬಹಳ ದೊಡ್ಡ ವಿದ್ವಾಂಸನಾಗಿದ್ದನು. ಅವನು ಹೀಗೆ ದೀಕ್ಷೆಯನ್ನು ಹೊಂದಿದ ಬಳಿಕ ವೀರಭದ್ರ ವಿಜಯ ಮತ್ತು ಶರಭ ಚಾರಿತ್ರ ಎಂಬ ಎರಡು ಶ್ರೇಷ್ಠ ಗ್ರಂಥಗಳನ್ನು ರಚಿಸಿ ಸೋಮಾರಾಧ್ಯನಿಗೆ ಅರ್ಪಿಸಿದನು. ಅವನು ಪಂಚಾಕ್ಷರೀ ರಗಳೆಯನ್ನು ರಚಿಸಿದ್ದಾನೆ.

ಸೋಮಾರಾಧ್ಯನು ತನ್ನ ೭೪ ಶೀಲಗಳಲ್ಲಿ ದೃಢವಾದ ವಿಶ್ವಾಸವುಳ್ಳವನಾಗಿ ಅವುಗಳಂತೆ ಆಚರಿಸುತ್ತಲೇ ಬಂದನು. ಹೀಗಿರಲು ಕರ್ನಾಟಕದಲ್ಲಿ ಕಲ್ಲೆ, ಎಂಬ ಗ್ರಾಮದಲ್ಲಿ ಚೆನ್ನಮ್ಮನೆಂಬುವಳು ತನ್ನಂತೆಯೇ ೭೪ ಶೀಲಗಳನ್ನು ದೃಢ ಭಕ್ತಿಯಿಂದ ಆಚರಿಸುತ್ತಿದ್ದಾಳೆಂಬ ವಾರ್ತೆಯನ್ನು ಕೇಳಿ ಅವಳನ್ನು ಕಾಣಬೇಕೆಂದು ನಿರ್ಧರಿಸಿದನು. ಆಮೇಲೆ ಅವನು ತನ್ನ ಮಗ ಚತುರ್ಮುಖ ಬಸವ ಮತ್ತು ಕೆಲವು ಪರಿಚಾರಕರೊಂದಿಗೆ ಆ ಗ್ರಾಮದ ಕಡೆಗೆ ಹೊರಟನು.

ಅವನು ಮೊದಲು ಪಂಚಗಂಗಿಗೆ ಬಂದು ಅಲ್ಲಿಂದ ಈಗ ತುಮಕೂರ ಪಟ್ಟಣಕ್ಕೆ ಸಮೀಪವಿರುವ ಕಕುದ್ಗಿರಿ, ಅಲ್ಲಿಂದ ಕಲ್ಲೆಗ್ರಾಮಕ್ಕೆ ಬಂದನು. ಈ ಗ್ರಾಮವು ಪಾಲ್ಕುರಿಕೆಯಿಂದ ನೈಋತ್ಯದಿಕ್ಕಿಗೆ ಸುಮಾರು ೬೦-೭೦ ಮೈಲುಗಳ ಮೇಲೆ ಇರುತ್ತದೆ. ಕಕುದ್ಗಿರಿಯ ದಕ್ಷಿಣಕ್ಕೆ ಕೆಲವು ಅಂತರದ ಮೇಲೆ ತಾರಕಾಚಲವೆಂಬ ಪರ್ವತವಿದೆ. ಇದರ ಸಮೀಪದಲ್ಲಿ ಈ ಕಲ್ಲೆ ಗ್ರಾಮವಿದ್ದು ಈ ಪರ್ವತಪ್ರದೇಶದಲ್ಲಿ ತಾರಕಾಸುರನ ಮಕ್ಕಳು ಉಜ್ವಲ ಭಕ್ತಿಯಿಂದ ತಪಸ್ಸು ಮಾಡುತ್ತಿದ್ದರು. ಅದರ ಪ್ರಭಾವದಿಂದ ಕಲ್ಲೇಶ್ವರನೆಂಬ ಲಿಂಗವು ಇಲ್ಲಿ ಉದಯವಾಯಿತು. ಈ ಲಿಂಗವಿದ್ದ ಗ್ರಾಮಕ್ಕೆ ಕಲ್ಲೆ ಎಂಬ ಹೆಸರು ಬಂದಿತು. ಹೀಗೆ ಈ ಪ್ರದೇಶವು ಪವಿತ್ರವಾದುದೆಂದು ಪುರಾಣ ಪ್ರಸಿದ್ಧವಾಗಿರುತ್ತದೆ.

ಬೆಂಗಳೂರ ಪಟ್ಟಣದಿಂದ ಪಶ್ಚಿಮಕ್ಕೆ ಮಾಗಡಿ ಎಂಬ ಗ್ರಾಮವಿದ್ದು ಈ ಗ್ರಾಮದ ವಾಯುವ್ಯದಿಕ್ಕಿಗೆ ೫-೬ ಮೈಲುಗಳ ಮೇಲೆ ಈ ಕಲ್ಲೆಗ್ರಾಮವಿರುತ್ತದೆ. ಈ ಗ್ರಾಮದಲ್ಲಿ ಈಗಲೂ ಕಲ್ಲೇಶ್ವರನ ದೇವಾಲಯವಿದೆ.

ಸೋಮಾರಾಧ್ಯನು ಈ ಕಲ್ಲೆ ಗ್ರಾಮಕ್ಕೆ ಬಂದು ಚನ್ನಮ್ಮನ ಗೃಹದಲ್ಲಿ ಶಿವಗಣ ಗೋಷ್ಠಿಗಳಲ್ಲಿ ಒಂದು ತಿಂಗಳು ಕಾಲ ಕಳೆದನು. ಆ ಮೇಲೆ ಅವನು ಸ್ವ ಗ್ರಾಮಕ್ಕೆ ಹೊರಡಲು ಸಿದ್ಧನಾಗಿ ಅದಕ್ಕೋಸ್ಕರ ಅವನು ಚನ್ನಮ್ಮನ ಅಪ್ಪಣೆಯನ್ನು ಕೇಳಿದನು. ಆದರೆ ಚನ್ನಮ್ಮನು ಆವ ಕಾರಣದಿಂದಲೋ ಏನೋ, ಇನ್ನೂ ಕೆಲವು ದಿವಸ ಇಲ್ಲಿಯೇ ಇರಲು ಅವನಿಗೆ ಕೇಳಿಕೊಂಡಳು. ಆದರೆ ಸೋಮನಾಥನು ತನ್ನಗ್ರಾಮಕ್ಕೆ ಹೋಗಲು ಆತುರಪಟ್ಟು ಅಲ್ಲಿರಲು ಒಪ್ಪದ್ದರಿಂದ ಅವಳು ಅದಕ್ಕೆ ಒಪ್ಪಿಕೊಂಡಳು.

ಆ ಮೇಲೆ ಸೋಮನಾಥನು ಬಂಡಿಯಲ್ಲಿ ಕುಳಿತುಕೊಂಡು ಗ್ರಾಮದಿಂದ ಹೊರಟನು. ಆದರೆ ವೃಷಭಗಳು ಮುಂದೆ ಹೆಜ್ಜೆಯನ್ನಿಡದೆ ಅಲ್ಲಿಯೇ ನಿಂತುಕೊಂಡು ಬಿಟ್ಟವು. ಅವು ಏನು ಮಾಡಿದರೂ ಮುಂದೆ ಹೋಗಲಿಲ್ಲ. ಹೀಗೇಕಾಯಿತೆಂದು ಸೋಮಾರಾಧ್ಯನು ಶರಣರನ್ನು ಕೇಳಲು ಅವರು ಭಸಿತವನ್ನು ಹಿಡಿದು ಅದಕ್ಕೆ ಮೀರಿ ಹೋಗುತ್ತಾ ಇದ್ದೀರಿ. ಹೀಗೆ ಹೋಗುವದು ಸಲ್ಲದೆಂದು ಹೇಳಿದರು. ವೃಷಭಗಳು ಮುಂದೆ

ಒಂದಡಿಯನ್ನಿಡದೆ ಹೋಗಲು ಭಕ್ತರೆಲ್ಲರೂ ಇದು ಚೋದ್ಯವೆಂದು ನುಡಿಯುತ್ತಿರಲು ಸೋಮಾರಾಧ್ಯನು ಸ್ವಗ್ರಾಮಕ್ಕೆ ಹೋಗಲು ಯುಕ್ತ ವಲ್ಲವೆಂದು ಹಿಂದಿರುಗಿ ಚನ್ನಮ್ಮನ ಮನೆಗೆಯೇ ತಿರುಗಿ ಬಂದನು.

ಕೆಲವು ದಿವಸಗಳಾದ ಮೇಲೆ ಶಂಕರನು ಸೋಮಾರಾಧ್ಯನಿಗೆ ಪ್ರತ್ಯಕ್ಷನಾಗಿ ಅವನಿಗೆ — ದುರ್ಘಟವಾದ ಸರ್ವ ಶೀಲಗಳನ್ನು ನೀನು ಈ ವರೆಗೆ ಆಚರಿಸುತ್ತ ಬಂದಿರುವಿ. ಹೀಗೆ ಆಚರಿಸುವವರು ಜಗತ್ತಿನಲ್ಲಿ ಯಾರೂ ಇಲ್ಲ. ಆದ್ದರಿಂದ ನೀನು ನನ್ನೊಡನೆ ಕೈಲಾಸಕ್ಕೆ ಬರಬೇ ಕೆಂದು ಹೇಳಿದನು. ಅದಕ್ಕೆ ಸೋಮಾರಾಧ್ಯನು ಶಂಕರನಿಗೆ— ನನ್ನ ಅಂಗ ದಲ್ಲಿ ಆಚಾರವು ನೆಲಿಸಿರುತ್ತದೆ. ಇಂಥದನ್ನು ನಾನು ಬೇರೆ ಯಾವ ಲೋಕ ದಲ್ಲಿಯೂ ತರಲಾರೆನು ಶಿವಾಚಾರವು ನನ್ನ ಆತ್ಮನಲ್ಲಿ ಪೂರ್ಣವಾಗಿ ನೆಲ ಸಿರುವದರಿಂದ ಅದು ಲಿಂಗ ದೇಹವೆನಿಸಿಕೊಳ್ಳುತ್ತದೆ ಅದರಿಂದ ಶಿವ ಶರಣರು ಜೀವನ್ಮುಕ್ತರು. ಅವರು ಇಂಥ ದೇಹವನ್ನು ಬಿಟ್ಟು ಬೇರಾವ ಲೋಕಕ್ಕೆ ಹೋಗರು. ಆದ್ದರಿಂದ ಅಖಂಡಾದ್ವೈತ, ಸುಖರೂಪ, ನಿರ್ಗುಣ, ಪರಬ್ರಹ್ಮ ಸ್ವರೂಪರಾದ ಅವರು ತಮ್ಮ ಲಿಂಗದಲ್ಲಿಯೇ ಲಯವಾಗುವರು. ಆದ್ದರಿಂದ ಯಾವ ಕಾರಣದಿಂದಲೂ ನಾನು ಈ ದೇಹವನ್ನು ಬಿಟ್ಟು ನಿನ್ನ ಲೋಕಕ್ಕೆ ಬರಲಾರೆನು. ಲಿಂಗದಲ್ಲಿ ಉದಯವಾದ ಶರಣನು ಲಿಂಗ ದಲ್ಲಿಯೇ ಲಯವಾಗುವನು. ಆದ್ದರಿಂದ ಭೂತಳದಲ್ಲಿಯೇ ಘನ ಸಮಾಧಿ ಯಲ್ಲಿ ನಾನು ನನ್ನ ಶರೀರವನ್ನು ಬಿಟ್ಟು ಇಲ್ಲಿಯೇ ಲಯವಾಗುವೆನು, ಎಂದು ಹೇಳಲು ಶಂಕರನು ಸೋಮಾರಾಧ್ಯನ ಉತ್ತರಕ್ಕೋಸ್ಕರ ಅತ್ಯಂತ ಆನಂದ ಬಟ್ಟು, ಅಲ್ಲಿಯೇ ಅಂತರ್ಧಾನನಾದನು.

ಮುಂದೆ ಸೋಮಾರಾಧ್ಯನು ಕೆಲ ದಿನಗಳು ಕಳೆದು ಹೋದಮೇಲೆ ಭಕ್ತರನ್ನು ಕರಿಸಿ ಅವರಿಗೆ — ನನಗೆ ಇನ್ನುಮುಂದೆ ೨೧ ದಿವಸಗಳಲ್ಲಿ ಸಮಾಧಿಯಾಗುವದೆಂದು ಹೇಳಿದನು.

ಮುಂದೆ ಸಮಾಧಿಯಾಗುವ ದಿನವು ಬರಲು ಸೋಮಾರಾಧ್ಯನು ಶಿವಶರಣರನ್ನು ಕರೆದು ಅವರಿಗೆ — ಈ ಪಟ್ಟಣವು ಮುಂದೆ ಕೂಷ್ಮಾಂದ ಫಲನಿಮಿತ್ತವಾಗಿ ಹಾಳಾಗುವದು. ಇದನ್ನು ನೀವು ಮನಸ್ಸಿನಲ್ಲಿ ತಂದು ಕೊಳ್ಳಬಾರದು, ಎಂದು ಹೇಳಿ ಕಲ್ಲೇಶ್ವರನ ರಾಜಾಂಗಣದಲ್ಲಿ ಮಕುಟಾ

ಗಮದಲ್ಲಿ ಹೇಳಿದ ಪ್ರಕಾರ ಘನತರವಾದ ಒಂದು ಸಮಾಧಿಯನ್ನು ನಿರ್ಮಿಸಿದನು. ಅದು ಮುಗಿದಬಳಿಕ ಸೋಮಾರಾಧ್ಯನು ತನ್ನ ಅವಸಾನದವೇಳೆಯು ಪ್ರಾಪ್ತವಾಗಲು ಅವನು ಸಮಾಧಿಯಲ್ಲಿಯ ಸೋಪಾನಗಳನ್ನಿಳಿದು ವೇದಿಕೆಯಲ್ಲಿ ಮೂರ್ತಗೊಂಡು ಭಸಿತವನ್ನುಧರಿಸಿ ಲಿಂಗ ಪಾದೋದಕದಿಂದ ಪ್ರಕ್ಷಾಲನೆಗೈದು ಪಂಚಾಕ್ಷರ ಮಂತ್ರವನ್ನು ಉಚ್ಚರಿಸುತ್ತ ತನ್ನ ಲಿಂಗದಲ್ಲಿಯೇ ಲಯವಾದನು.

ಭಕ್ತಜನರು ಸಮಾಧಿಯನ್ನುಮುಚ್ಚಿ ಅದರಮೇಲೆ ಎರಡು ವೃಷಭಗಳನ್ನು ನೆಲೆಗೊಳಿಸಿ ಪಾಲ್ಕುರಿಕೆ ಸೋಮಾರಾಧ್ಯನು ಘನಮಹಿಮನೆಂದು ಅವನನ್ನು ಸ್ತುತಿಸುವವರಾದರು. ಅವನ ಈ ಸಮಾಧಿಯು ಈ ಗ್ರಾಮದಲ್ಲಿ ಈಗಲೂ ಇದೆ.

ಸೋಮಾರಾಧ್ಯನು ಹೀಗೆ ಲಿಂಗೈಕ್ಯನಾದ ಬಳಿಕ ಭಕ್ತರೆಲ್ಲರೂ ಕೂಡಿ ಅವನ ಮಗನಾದ ಚತುರ್ಮುಖ ಬಸವನಿಗೆ ಗುರುಪಟ್ಟವನ್ನು ಕಟ್ಟಿದರು

ಪಾಲ್ಕುರಿಕೆ ಸೋಮಾರಾಧ್ಯನು ವೀರಶೈವ ಗ್ರಂಥ ಕಾರರಲ್ಲಿ ಮತ್ತು ಮಹಿಮರಲ್ಲಿ ಉಚ್ಚ ಸ್ಥಾನವನ್ನು ಹೊಂದಿರುತ್ತಾನೆಂಬುದು ನಿರ್ವಿವಾದ ವಾದದ್ದು. ಆದರೆ ಅವನಿಗೂ ಇತರ ಆಂಧ್ರ ವಿದ್ವಾಂಸರಿಗೂ ಕೆಲವು ವ್ಯತ್ಯಾಸಗಳಿರುವದು ಕಂಡು ಬರುತ್ತದೆ. ಆಂಧ್ರ ಪಂಡಿತರು ಬ್ರಾಹ್ಮಣ್ಯದ ರೀತಿಗಳಿಗೆ ಒಳಗಾಗಿ ಅವರ ಆಚರಣೆಗಳನ್ನಿಟ್ಟುಕೊಂಡಿರುವದು ಕಂಡು ಬರುತ್ತದೆ. ಮಲ್ಲಿಕಾರ್ಜುನ ಪಂಡಿತಾರಾಧ್ಯನು ತಾನು ಬ್ರಾಹ್ಮಣ್ಯವನ್ನು ಬಿಡಲಾರೆನೆಂದು ಬಸವೇಶ್ವರನಲ್ಲಿ ಹೇಳಿಕೊಂಡಿರುವದೇ ಇದಕ್ಕೆ ಉದಾಹರಣೆಯಾಗಿದೆ. ಹೀಗೆ ಆಂಧ್ರ ವೀರಶೈವರಲ್ಲಿಯ ಕೆಲ ಪಂಗಡಗಳು ಈಗಲೂ ಲಿಂಗ ಯಜ್ಞೋಪವೀತಗಳನ್ನು ಧರಿಸುವದೂ ಕಂಡುಬರುತ್ತದೆ. ಆದರೆ ಪಾಲ್ಕುರಿಕೆ ಸೋಮಾರಾಧ್ಯನು ಈ ಆಂಧ್ರ ಪಂಡಿತರಂತೆ ಆಚರಿಸದೆ ಶಿವಶರಣರ ಆಚರಣೆಗಳನ್ನು ಸಂಪೂರ್ಣವಾಗಿ ಮನ್ನಿಸಿದ್ದಾನೆ. ಉದಾ :— ಅವನು ಕೈಕೊಂಡ ೬೪ ಶೀಲಗಳಲ್ಲಿ ೪ನೇ ಶೀಲವು ಪಂಚ ಸೂತಕಗಳನ್ನು ಬಿಡುವದೆಂಬುದಿದೆ. ೫ನೇ ಶೀಲವು ತದ್ದಿನ ಮೊದಲಾದ ಕರ್ಮಗಳನ್ನು ಬಿಡುವದು ಇದೆ. ೭ನೇ ಶೀಲವು ತೀರ್ಥ ಕ್ಷೇತ್ರಸ್ಥಾನ ಲಿಂಗಪೂಜೆಗಳನ್ನು ಬಿಡುವುದು. ಇದೆ. ೧೩ನೇ ಶೀಲವು ಜಂಗಮ ಪಾದೋದಕದಿಂದ ಲಿಂಗಕ್ಕೆ ಮಜ್ಜನವಾಡಿ

ಆ ಜಂಗಮದ ಶೇಷವನ್ನು ಲಿಂಗಕ್ಕೆ ನೈವೇದ್ಯ ಮಾಡಬೇಕೆಂದಿದೆ. ೧೫ನೇ ಶೀಲವು ಶಿವಭಕ್ತರಲ್ಲಿ ಜಾತಿ ಸೂತಕಗಳನ್ನೆಣಿಸದಿರುವದಿದೆ. ಹೀಗೆ ಈ ಶೀಲಗಳಿಂದ ಸೋಮನಾರಾಧ್ಯರು ಶಿವಶರಣರ ತತ್ವಗಳನ್ನು ಅಕ್ಷರಶಃ ಮನ್ನಿಸುತ್ತಿದ್ದನೆಂಬುದು ಸ್ಪಷ್ಟವಾಗಿದೆ. ಆದರೆ ಇತರ ಆಂಧ್ರ ವೀರಶೈವ ಪಂಡಿತರು ಬಸವೇಶ್ವರನಿಗೆ ಮನ್ನಣೆ ಕೊಡುತ್ತಿದ್ದರೂ ಕೆಲವೊಂದು ಮಿಶ್ರ ಮಾರ್ಗವನ್ನು ಅನುಸರಿಸುತ್ತಿದ್ದರೆಂದು ಅವರ ಗ್ರಂಥಗಳಿಂದ ಮತ್ತು ಅವರ ನಡೆಯಿಂದ ಕಂಡುಬರುತ್ತದೆ.

ಆದರೆ ಬಸವೇಶ್ವರನ ಕಾಲದಲ್ಲಿದ್ದ ಶಿವಶರಣರು ೬೪ ಶೀಲಗಳ ಕಟ್ಟಾಚರಣೆಗಳನ್ನು ವ್ಯವಹಾರದಲ್ಲಿ ಕೆಲಮಟ್ಟಿಗೆ ಸಡಿಲಗೊಳಿಸಿದಂತೆ ಅವರ ವಚನಗಳಿಂದ ಮತ್ತು ನಡೆಯಿಂದ ಗೊತ್ತಾಗುತ್ತದೆ. ಈ ಶೀಲಗಳನ್ನು ಅಕ್ಷರಶಃ ಅವರು ಅನುಸರಿಸಿದಲ್ಲಿ ಅವರು ಭವಿಗಳ ಕೂಡ ಎಷ್ಟು ಮಾತ್ರವೂ ಸಂಬಂಧವನ್ನಿಡುವದು ಸಾಧ್ಯವಾಗುವದಿಲ್ಲ. ಆದರೆ ಬಸವೇಶ್ವರನ ಕಾಲದಲ್ಲಿ ಬಸವೇಶ್ವರ, ಸೊಡ್ಡಳ ಬಾಚರಸ, ಕೊಂಡಗುಳಿಯ ಕೇಶಿರಾಜ, ಮಧುವರಸ, ಮೊದಲಾದವರು ಭವಿಗಳಾದ ರಾಜರಲ್ಲಿ ನೌಕರಿಯಲ್ಲಿದ್ದದ್ದು ಕಂಡುಬರುತ್ತದೆ. ಮತ್ತು ಅನೇಕ ಶಿವಶರಣರು ಒಕ್ಕಲತನ, ಕುರಿ ಕಾಯುವದು, ತೊಗಲು ಹದಮಾಡುವದು ಇಂಥ ಶೀಲಾಚರಣೆಗೆ ವಿರೋಧವಾದ ಕಾಯಕಗಳನ್ನು ಕೈಕೊಂಡಿರುತ್ತಾರೆ. ಆದರೂ ಅವರು ಶಿವಾನುಭವಿಗಳೆಂದೆನಿಸಿಕೊಂಡಿದ್ದಾರೆ. ಇದರಿಂದ ಶೀಲಗಳ ಆಚರಣೆಯನ್ನು ಪಾಲಿಸುವಲ್ಲಿ ಬಸವಾದಿ ಪ್ರಮಥರು ಅವುಗಳ ಬಿಗಿತನವನ್ನು ಸಡಿಲು ಮಾಡಿದ್ದು ಕಂಡುಬರುತ್ತದೆ.

ಬಸವಾದಿ ಪ್ರಮಥರು ಹೀಗೆ ಆಚರಿಸಿದ್ದು ಜಾಣತನದ ಸಂಗತಿಯಾಗಿದೆ. ಇದರಿಂದ ವೀರಶೈವ ಧರ್ಮವನ್ನು ಎಲ್ಲ ಸಮಾಜಗಳಲ್ಲಿ ಪ್ರಸಾರ ಮಾಡುವದು ಅವರಿಗೆ ಶಕ್ಯವಾಯಿತು. ಉದ್ಯೋಗಗಳ ಮೂಲಕ ಉಂಟಾಗಿರುವ ಜಾತಿಗಳು ಕಡಿಮೆ ಎಂದು ತಿಳಿಯಲು ಬಾರದಂತಾಯಿತು. ಅದರ ಬದಲು ನೀತಿ, ಧರ್ಮ, ಸುವಿಚಾರ ಇವುಗಳಿಗೆ ಅವರು ಉನ್ನತ ಸ್ಥಾನವನ್ನು ಕೊಟ್ಟರು. ಇದರಿಂದ ಕಾಯಕದ ಮಹತ್ವವು ಹೆಚ್ಚಿತು. ಹೀಗೆ ಕರ್ನಾಟಕ ದೇಶದಲ್ಲಿ ವೀರಶೈವ ಧರ್ಮವು ಎಲ್ಲ ಸಮಾಜಗಳಲ್ಲಿ ಮತ್ತು ಎಲ್ಲ ಕಡೆಗೆ ಬೆಳೆಯಲು ಸಾಧ್ಯವಾಯಿತು. ಮತ್ತು ಅವರಲ್ಲಿ ಬಹುಜನರು ವಚನಕಾರರಾದರು ಮತ್ತು ಅವರು ಶಿವಶರಣರೆಂದೆನಿಸಿಕೊಂಡರು.

ಆದರೆ ಆಂಧ್ರ ದೇಶದಲ್ಲಿ ಹೀಗಾದುದು ಕಂಡು ಬರುವದಿಲ್ಲ. ಅಲ್ಲಿ ಪಂಡಿತರು ಬ್ರಾಹ್ಮಣ್ಯದ ವಿಚಾರಗಳನ್ನು ಅನುಸರಿಸಿದ್ದರಿಂದ, ಅಲ್ಲಿ ವೀರಶೈವ ಧರ್ಮವು ಕರ್ನಾಟಕದಲ್ಲಿಯಂತೆ ಬೆಳೆಯಲಿಲ್ಲ. ಅಲ್ಲಿ ವಚನಗಳ ರೀತಿಯನ್ನನುಸರಿಸಿ ಯಾರೂ ಧರ್ಮ ಗ್ರಂಥಗಳನ್ನು ಬರೆಯಲಿಲ್ಲ. ಇದರಿಂದ ಅಲ್ಲಿ ಧಾರ್ಮಿಕ ಪ್ರಸಾರವು ಕರ್ನಾಟಕದಲ್ಲಿಯಂತೆ ಆಗಿರುವದಿಲ್ಲ.

ಪಾಲ್ಕುರಿಕೆ ಸೋಮಾರಾಧ್ಯನು ಅರವತ್ತುನಾಲ್ಕು ಶೀಲಗಳ ಆಚರಣೆಗಳಲ್ಲಿ ಸಿಲುಕಿ ಕೊಂಡಿದ್ದರಿಂದ ಅವನಿಗೆ ಜನಸಾಮಾನ್ಯರ ಸಂಬಂಧವು ತಪ್ಪಿಹೋಯಿತು. ಒಂದು ವೇಳೆ ಅವನು ಉತ್ತರ ಕರ್ನಾಟಕದ ಶಿವಶರಣರ ರೀತಿಯನ್ನು ಅನುಸರಿಸಿ ವರ್ತಿಸಿದ್ದರೆ, ಅವನಿಗೆ ಸಂಬಂಧವಿದ್ದ ಬೆಂಗಳೂರು, ತುಮಕೂರು, ಕೋಲಾರ ಜಿಲ್ಲೆಗಳು, ಹಾಗೆಯೇ ಅನಂತಪುರ, ಕಡಪಾ, ಆರ್ಕಾಟ ಜಿಲ್ಲೆಗಳು ಉತ್ತರ ಕರ್ನಾಟಕ ಜಿಲ್ಲೆಗಳಂತೆ ವೀರಶೈವ ಮಯವಾಗುತ್ತಿದ್ದವು.

ವಚನ ವಾಙ್ಮಯದ ರೀತಿಗಳು ಮತ್ತು ಅದರ ಪ್ರಸಾರ, ಉತ್ತರ ಕರ್ನಾಟಕ ದೇಶದಲ್ಲಿಯೂ ಕೂಡ ಬಹಳ ದಿವಸ ನಡೆದದ್ದು ಕಂಡು ಬರುವದಿಲ್ಲ. ಹರಿಹರನ ಕಾಲಕ್ಕೆಯೇ ಅದರ ಗತಿಯು ಬಹಳ ಮಂದವಾಗಹತ್ತಿತ್ತು. ಇಷ್ಟರಲ್ಲಿ ಸಮಾಜದಲ್ಲಿ ಜಾತಿಭೇದದ ವಿಚಾರಗಳೂ, ಕೃತ್ರಿಮ ಕರ್ಮಠತನವೂ, ಹಿತ ಸಂಬಂಧಿಗಳ ಆಕ್ರಮಣಗಳೂ ಮುಂದುವರಿದವು. ಆದ್ದರಿಂದ ಇಲ್ಲಿಯೂ ಕೂಡ ಕ್ರಿ. ಶ. ೧೨೦೦ ರ ತರುವಾಯ ಧರ್ಮಪ್ರಸಾರದ ಕಾರ್ಯಗಳು ನಿಂತು ಹೋದದ್ದು ಕಂಡು ಬರುತ್ತದೆ.

ವಿಜಯನಗರದ ಅರಸರ ಕಾಲದಲ್ಲಿ ಸಹ ತೋಂಟದಾರ್ಯ ಮತ್ತು ಅವನ ಕೆಲವು ಶಿಷ್ಯರಹೊರ್ತಾಗಿ ವಚನಗ್ರಂಥಗಳನ್ನು ಬಹುಜನರು ಸ್ವತಂತ್ರವಾಗಿ ಬರೆದದ್ದು ಕಂಡು ಬರುವದಿಲ್ಲ. ಗಣಭಾಷ್ಯ ರತ್ನಮಾಲೆ, ಲಿಂಗಲೀಲಾ ವಿಲಾಸ, ಶೂನ್ಯ ಸಂಪಾದನೆ, ಹೀಗೆ ಕೆಲವು ಬಗೆಯ ವಚನಸಂಗ್ರಹ ಗ್ರಂಥಗಳು ಮಾತ್ರ ಉಂಟಾದವು.

ಒಟ್ಟಿಗೆ ವಚನ ಶಾಸ್ತ್ರದ ತತ್ವ ಪ್ರಸಾರ ಕಾರ್ಯಗಳು ಬಸವೇಶ್ವರನ ತರುವಾಯ ೬೦—೭೦ ವರ್ಷ ಮಾತ್ರ ನಡೆದು ಮುಂದೆ ಅವು ಕುಂಠಿತವಾದಂತೆ ಕಂಡು ಬರುತ್ತದೆ.

ಪಾಲ್ಕುರಿಕೆ ಸೋಮಾರಾಧ್ಯನು ೧೨೯೫ ರಿಂದ ೧೩೨೩ ರ ವರೆಗೆ ಆಳಿದ ಪ್ರತಾಪ ರುದ್ರನ ಆಸ್ಥಾನದಲ್ಲಿ ಪ್ರಸಿದ್ಧಿ ಹೊಂದಿದನೆಂಬ ಕಥೆಯು ಅವನ ಚರಿತ್ರೆಯಲ್ಲಿ ಬರುವುದರಿಂದ ಅವನಿದ್ದ ಕಾಲವು ೧೩೦೦ ಎಂದು ಕೆಲವರು ತರ್ಕಿಸುವದುಂಟು. ಆದರೆ ೧೨೨೨ ರಲ್ಲಿ ಸೋಮರಾಜ ಕವಿಯು ಬರೆದಂಥ ಉದ್ಭಟ ಕಾವ್ಯದಲ್ಲಿ ಸೋಮಾರಾಧ್ಯನ ಉಲ್ಲೇಖ ವಿರುವ ದರಿಂದ, ಅವನು ೧೧೯೫ ರಲ್ಲಿ ಇದ್ದಿರಬೇಕೆಂದು ಆರ್. ನರಸಿಂಹಾಚಾರ್ಯರು ಊಹಿಸಿ, ಕವಿಚರಿತೆಯಲ್ಲಿ ಹಾಗೆ ಬರೆದಿದ್ದಾರೆ. ಸೋಮಾರಾಧ್ಯನು ಬಸವೇಶ್ವರನ ಸಮಕಾಲೀನನು. ಅವನ ಮೊಮ್ಮಗನ ಕಾಲದಲ್ಲಿ ಸೋಮಾರಾಧ್ಯನು ಇದ್ದನೆಂಬ ಆಖ್ಯಾಯಿಕೆ ಇರುತ್ತದೆ. ಈ ಸಂಗತಿಯು ಆರ್. ನರಸಿಂಹಾಚಾರ್ಯರ ಅಭಿಪ್ರಾಯವನ್ನು ಬಲಪಡಿಸುತ್ತದೆ. ಬಸವೇಶ್ವರನು ೧೧೬೮ ರಲ್ಲಿ ಅಂತ್ಯವನ್ನು ಹೊಂದಿದ್ದು, ಅವನಿಂದ ಮೂರು ತಲೆಯ ತರುವಾಯ ಅಂದರೆ ೫೦ ೬೦ ವರ್ಷಗಳಲ್ಲಿ ಸೋಮಾರಾಧ್ಯನು ಪ್ರಸಿದ್ಧಿಗೆ ಬಂದಿರಬಹುದೆಂದು ತೋರುತ್ತದೆ.

ಪ್ರತಾಪ ರುದ್ರನು ಆಂಧ್ರ ದೇಶದಲ್ಲಿ ಬಹು ಪ್ರಸಿದ್ಧ ರಾಜನಾಗಿದ್ದರಿಂದ, ಪುರಾತನ ಕಾಲದಲ್ಲಿ ಆಗಿ ಹೋದ ವಿದ್ವಾಂಸರು, ಮುಖ್ಯವಾಗಿ ಶೈವರು ಅವನ ಕಾಲಕ್ಕೆಯೇ ಆಗಿ ಹೋದರೆಂದು ಹೇಳುವ ಸಾಂಪ್ರದಾಯವಿದೆ. ಮಹಾ ಕವಿರಾಘವಾಂಕನ ವಿಷಯವಾಗಿಯೂ ಇದೇ ಆಖ್ಯಾಯಿಕೆಯು ಇದೆ. ಅದೇ ಪ್ರಕಾರ ಬಹು ಜನ ಶಿವಶರಣರಿಗೆ ಬಸವೇಶ್ವರನ ಸಂಬಂಧ ವಿಲ್ಲದಿದ್ದರೂ ಕೂಡ ಅವರು ಅವನ ಆಸ್ಥಾನದಲ್ಲಿದ್ದರೆಂದು ಆಖ್ಯಾಯಿಕೆಗಳು ಉಂಟಾಗಿರುತ್ತವೆ. ಐತಿಹಾಸಿಕ ಪ್ರತ್ಯಂತರ ಆಧಾರಗಳಿಲ್ಲದ ಹೊರತು ಅವುಗಳನ್ನು ನಂಬಲಿಕ್ಕೆ ಬರಲಾರದು.

ಹೀಗೆ ಸೋಮಾರಾಧ್ಯನ ಚರಿತ್ರೆಯನ್ನು ಒಟ್ಟಾರೆ ನೋಡಲು ಅವನು ಕರ್ನಾಟಕ ಮತ್ತು ಆಂಧ್ರ ದೇಶಗಳಿಗೆ ಸಮೀಪವರ್ತಿಯಾದ ಕೆಲವೊಂದು ಗಡಿ ಪ್ರದೇಶವಲ್ಲಿಯ ಗ್ರಾಮದವನಿರಬೇಕೆಂಬ, ಊಹೆಯು ದೃಢ ಪಡುತ್ತದೆ. ಅವನು ಮಧ್ಯ ಆಂಧ್ರ ದೇಶದವನಿದ್ದಂತೆ ತೋರುವದಿಲ್ಲ. ಮತ್ತು ಅದು ಅವನು ಸಮಾಧಿಹೊಂದಿದ ಕಲ್ಲೆ ಗ್ರಾಮದಿಂದ ಬಹಳ ದೂರವಿರಬಾರದು. ಇಂಥ ಗ್ರಾಮಗಳು ತುಮಕೂರು ಜಿಲ್ಹೆಯಲ್ಲಿ ಎರಡು ಮಾತ್ರ ದೊರೆಯುತ್ತವೆ. (೧) ಒಂದು ನಾವು ಹಿಂದೆ

---

(೧) ಈ ಸಂಗತಿಯು ನಮಗೆ ಈಚೆಗೆ ತಿಳಿದು ಬಂದಿತು.

ಕೇಳಿದಂತೆ ಚಿಕ್ಕ ಬಳ್ಳಾಪುರದ ಉತ್ತರಕ್ಕೆ ೫-೬ ಮೈಲ`ಗಳ ಮೇಲೆ ಇರುತ್ತದೆ. ಈ ಗ್ರಾಮದ ಉತ್ತರಕ್ಕೆ ಸುಲಿಕುಂಟೆ ಮತ್ತು ದಕ್ಷಿಣಕ್ಕೆ ಮರಸನಹಳ್ಳಿ ಎಂಬ ಗ್ರಾಮಗಳಿವೆ. -ಹಾಲುಕುರಿಕೆ ಎಂಬ ಹೆಸರಿನ ಗ್ರಾಮವು ಈಗಿನ ಡಿಗ್ರಿ ನಕಾಶೆಯಲ್ಲಿ ದೊರೆಯುವದಿಲ್ಲ. ಆದರೆ ಅದು ಹಳೇ ನಕಾಶೆಯಲ್ಲಿ ದೊರೆಯುತ್ತದೆ. ಇದೇಹೆಸರಿನ ಇನ್ನೊಂದು ಗ್ರಾಮವು ಇದೇ ಜಿಲ್ಹೆಯಲ್ಲಿ ಶಿಪಟೂರಿನ ಉತ್ತರಕ್ಕೆ ೯ ಮೈಲಿನ ಮೇಲೆ ಇದೆ. ಇದು ಈಗಿನ ನಕಾಶೆಯಲ್ಲಿದೆ. ಈಗ್ರಾಮದ ವಿಷಯವಾಗಿ ಹೆಚ್ಚಿಗೆ ಸಂಶೋಧಿಸಲು ತರಳಬಾಳ ಉಜ್ಜನಿ ಚರಪಟ್ಟಾಧಿಕಾರಿಗಳು ಇದೇ ಗ್ರಾಮದಲ್ಲಿ ಮೊದಲು ನೆಲೆಸಿದ್ದು ಅವರ ಪೀಠದಲ್ಲಿ ಪಟ್ಟಕ್ಕೆ ಬಂದ ಸರ್ವಭೂಷಣ ಸಿದ್ದಲಿಂಗ ಒಡೆಯರು ಎಂಬವರ ಗದ್ದುಗೆಯು ಇಲ್ಲಿ ಇದೆ. ಅದರ ಮೇಲಿನ ಶಾಸನದಲ್ಲಿ "ಪಾಲ್ಕುರಿಕೆ" ಎಂಬ ಹೆಸರು ಇದೆ. ಈ ಶಾಸನವು ೨೭೦ ವರ್ಷ ಹಿಂದಿನದಿರುತ್ತದೆ. ಈ ಗ್ರಾಮದಲ್ಲಿ ಅನೇಕ ದೇವಾಲಯಗಳಿರತ್ತವೆ. ಇದರಿಂದ ಇದು ಪುರಾತನ ಗ್ರಾಮವೆಂಬುದು ಸ್ಪಷ್ಟವು. ಆದರೆ ಈ ಗ್ರಾಮವು ಕನ್ನಡದೇಶದ ಮಧ್ಯದಲ್ಲಿರುತ್ತದೆ. ಮತ್ತು ಅದರಲ್ಲಿ ಸೋಮೇಶ್ವರನ ದೇವಾಲಯವಿಲ್ಲವೆಂದು ತಿಳಿದುಬರುತ್ತದೆ. ಆದ್ದರಿಂದ ಇದು ಸೋಮಾರಾಧ್ಯನ ಸ್ಥಳವೆಂಬುದರ ಬಗ್ಗೆ ಸಂದೇಹವು ಉಂಟಾಗುತ್ತದೆ. ಆದರೆ ಚಿಕ್ಕಬಳ್ಳಾಪುರದ ಉತ್ತರಕ್ಕೆ ಇರುವ ಪಾಲಕುರ್ಕೆ ಗ್ರಾಮವು ಈಗಿನ ಡಿಗ್ರಿ ನಕಾಶೆಯಲ್ಲಿ ದೊರೆಯದಿದ್ದರೂ ಹಿಂದಿನ ನಕಾಶೆಯಲ್ಲಿ ದೊರೆಯುತ್ತದೆ. ಈ ಗ್ರಾಮದ ಹಿಂದಿನ ಅವಶೇಷಗಳು ಅಲ್ಲಿ ಇರಬಹುದು. ಇದು ಆಂಧ್ರ ದೇಶದ ಮೇರೆಗೆ ಸಮೀಪವಿರುವದರಿಂದ ಮತ್ತು ಇಲ್ಲಿ ಸೋಮೇಶ್ವರನ ದೇವಾಲಯವಿರುತ್ತದೆಂದು ತಿಳಿದುಬರುವದರಿಂದ ಇದು ಸೋಮಾರಾಧ್ಯನ ಗ್ರಾಮವಿರಬಹುದೆಂದು ನಾವು ಊಹಿಸಿದ್ದೇವೆ. ಆದರೆ ಈ ವಿಷಯವು ಇನ್ನೂ ಹೆಚ್ಚಿಗೆ ಸಂಶೋಧನ ಮಾಡತಕ್ಕದ್ದಾಗಿದೆ. ಆದರೆ ಅದು ಯಾವ ಗ್ರಾಮವಿದ್ದರೂ ಸದ್ಯದ ಸ್ಥಿತಿಯಲ್ಲಿ ಅದು ತುಮಕೂರ ಜಿಲ್ಹೆಯಲ್ಲಿದೆಂದು ಊಹಿಸಲು ಯಾವ ಪ್ರತ್ಯವಾಯವು ಕಂಡುಬರುವದಿಲ್ಲ.

ಪಾಲ್ಕುರಿಕೆ ಸೋಮಾರಾಧ್ಯನು ಭೃಂಗೀಶನವತಾರವೆಂದು ಆಂಧ್ರ ಮತ್ತು ಕರ್ನಾಟಕ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಹೇಳುವದುಂಟು. ಇದರಿಂದ ಇವನ ಮಹತ್ವವು ಎಷ್ಟಿದೆಂಬುದು ಕಂಡು ಬರುವದು.

# ಕಥಾಂತರಗಳು.

(೧) ಸೋಮಾರಾಧ್ಯನ ತಂದೆ ತಾಯಿಗಳ ವಿಷಯವಾಗಿ ಬೇರೆ ಬೇರೆ ಗ್ರಂಥಗಳಲ್ಲಿ ಬೇರೆ ಬೇರೆ ವಿವರಣೆ ಗಳಿರುತ್ತವೆ. ತೋಂಟದ ಸಿದ್ಧಲಿಂಗನು ತನ್ನ ಗ್ರಂಥದಲ್ಲಿ ವೇಮನನ ಮಗ ಗುರುಲಿಂಗಾರ್ಯ ಅಥವಾ ಲಿಂಗಣಾರಾಧ್ಯನು, ಅವನ ಹೆಂಡತಿಯ ಹೆಸರು ಮಂಗಲಾಂಬೆ, ಅವರ ಮಗ ಸೋಮಾರಾಧ್ಯನೆಂದು ಹೇಳಿದೆ; ಆದರೆ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ದಲ್ಲಿ ಅವನ ತಂದೆಯು ರಾಮಿತಂದೆ ಮತ್ತು ತಾಯಿಯ ಹೆಸರು ಮಹಾದೇವಿಯಮ್ಮ ಎಂದು ಹೇಳಿದೆ. ಇದು ಹೆಚ್ಚಿಗೆ ಸಂಭವನೀಯವೆಂದು ತಿಳಿದು ಇದನ್ನು ನಾವು ಅನುಸರಿಸಿದ್ದೇವೆ.

(೨) ಒಂದು ಕಡೆಗೆ ಸೋಮಾರಾಧ್ಯನಿಗೆ ವೇಮನನ ಮೊಮ್ಮಗ ಬಸವೇಶನು ದೀಕ್ಷೆಯನ್ನಿತ್ತನೆಂತಲೂ ಅಲ್ಲದೆ ಕಟ್ಟಕೂರ ಪೋತಿದೇವ ನೆಂಬವನು ಅವನಿಗೆ ಲಿಂಗೋಪದೇಶ ಮಾಡಿದ ನೆಂತಲೂ ಹೇಳಿದೆ. ಬೇರೆ ಕಡೆಗೆ ವೇಮನನ ಮಗ ಗುರುಲಿಂಗಾರ್ಯನು ಅವನಿಗೆ ಶಾಸ್ತ್ರಗ್ರಂಥದ ಪರಿಚಯ ಮಾಡಿಕೊಟ್ಟು ಲಿಂಗಬೋಧೆ ಮಾಡಿದನೆಂದು ಹೇಳಿದೆ. ಇದು ಹೆಚ್ಚಿಗೆ ಸಂಶೋಧಿಸತಕ್ಕ ವಿಷಯವಾಗಿದೆ.

(೩) ಕಲ್ಲೆಯದಲ್ಲಿ ಸೋಮಾರಾಧ್ಯನು ಶಿವಶರಣೆ ವೀರಮ್ಮನೆಂಬ ವಳ ಮನೆಯಲ್ಲಿ ವಾಸ ಮಾಡಿದನೆಂದು ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರ ರತ್ನಾಕರದಲ್ಲಿ ಹೇಳಿದೆ. ಆದರೆ ತೋಂಟದ ಸಿದ್ಧಲಿಂಗನು ತನ್ನ ಗ್ರಂಥದಲ್ಲಿ ಆಕೆಯ ಹೆಸರು ಚನ್ನಮ್ಮನೆಂದು ಹೇಳಿದ್ದಾನೆ. ಇದು ಹೆಚ್ಚಿಗೆ ಸಂಶೋಧಿಸತಕ್ಕ ವಿಷಯವಿದೆ.

# ಗುಜರಾಥ ದೇಶದ ಶಿವಶರಣರು.

ಶಿವಶರಣರು ಕೇವಲ ಕರ್ನಾಟಕ ಮಾತ್ರವಲ್ಲ, ಹಿಂದುಸ್ತಾನದ ಎಲ್ಲ ಭಾಗಗಳಲ್ಲಿಯೂ ಉದಯವಾಗಿ. ಬಸವೇಶ್ವರನು ಮತ್ತು ಅವನ ಕಾಲದಲ್ಲಿದ್ದ ಶಿವಶರಣರು ನಡಿಸುತ್ತಿದ್ದ ಶಿವಾನುಭವ ಗೋಷ್ಠಿಗಳನ್ನು ತಿಳಿದುಕೊಳ್ಳಲು ಕಲ್ಯಾಣ ಪಟ್ಟಣಕ್ಕೆ ಆಗಿಂದ ಗ್ಗೆ ಬರುತ್ತಿದ್ದರೆಂಬುದು ನಾವು ಈ ವರೆಗೆ ಪ್ರಸಿದ್ಧಿಸುತ್ತ ಬಂದ ಶಿವಶರಣರ ಚರಿತ್ರೆಗಳಿಂದ ವಾಚಕರ ನಿದರ್ಶನಕ್ಕೆ ಬಂದಿಶಬಹುದು. ಓಡಿಸಾ ಪ್ರಾಂತದ ನನ್ನಯ್ಯ ಸುಜ್ಞಾನಿಗಳು, ಕಾಶ್ಮೀರ ದೇಶದ ಬೊಂತಾದೇವಿ, ಮಹಾದೇವರಾಜ, ಅಥವಾ ಮೋಳಿಗಿ ಮಾರಯ್ಯ, ಚಿಕ್ಕಯ್ಯಗಳು, ಕೇರಳ (ಮಲಬಾರ) ದೇಶದ ಗೊಗ್ಗವ್ವೆ, ಚಾರಮರಾಯ, ಭದ್ರಗಾಯಕ ಮೊದಲಾದವರು, ಕಾಶೀ ಕ್ಷೇತ್ರದ ಶಿವಲೆಂಕ ಮಂಚಣ್ಣಗಳು, ದ್ರಾವಿಡ (ತಮಿಳ) ದೇಶದ ಚನ್ನಯ್ಯ, ಮೆರೆಮಿಂಡ ದೇವ, ಎಡೆಮಠದ ನಾಗಿದೇವ, ಮೊದಲಾದ ಅನೇಕರು, ಮಹಾರಾಷ್ಟ್ರ ದೇಶದ ಉರಿಲಿಂಗ ದೇವ, ಉರಲಿಂಗ ಪೆದ್ದಿ, ಕೋಲಂಬೆ, ಸೋಹಳಿಯ ಸೋಮವ್ವೆ, ಪರಿವಳಿಗೆ(ಪರಳಿ)ಯ ವೈಜವ್ವೆ, ಭಲ್ಲುಕೆ(ಭಾಲ್ಕಿ)ಯ ಕುಂಬಾರ ಗುಂಡಯ್ಯ ಮೊದಲಾದವರು, ಪರ ಪ್ರಾಂತದವರಿದ್ದಾರೆ. ಆಂಧ್ರ ದೇಶದಲ್ಲಂತೂ ಶ್ರೀಪತಿ ಪಂಡಿತ, ಮಲ್ಲಿಕಾರ್ಜುನ ಪಂಡಿತಾರಾಧ್ಯ, ವೇಮನಾರಾಧ್ಯ, ಪಾಲ್ಕುರಿಕೆ ಸೋಮಾರಾಧ್ಯ ಹೀಗೆ ಬಹು ಜನ ಶಿವ ಶರಣರು ಆಗಿಹೋಗಿದ್ದಾರೆ. ನಾವು ಪ್ರಸಿದ್ಧ ಮಾಡುತ್ತ ಬಂದ ಶಿವ ಶರಣರ ಚರಿತ್ರೆಗಳಲ್ಲಿ ಇವರೆಲ್ಲರ ಕಥೆಗಳು ಬಂದಿರುತ್ತವೆ. ಇದಕ್ಕೆ ಗುಜರಾಥ ದೇಶವೂ ಅಪವಾದವಾಗಿಲ್ಲ. ಪುಲಿಗೆರೆ ಅಂದರೆ ಈಗಿನ ಲಕ್ಷ್ಮೇಶ್ವರದ ಆದಯ್ಯ ಅಥವಾ ಆದಿಶೆಟ್ಟಿ, ನಾವದಿಗೆಯ ಗುಡ್ಡವ್ವೆ, ಸೊಡ್ಡಳ (ಸೌರಾಷ್ಟ್ರ) ಬಾಚರಸ ಇವರೆಲ್ಲರು ಗುಜರಾಥದವರಿದ್ದು ಇವರು ಸೌರಾಷ್ಟ್ರ ಸೋಮೇಶ್ವರನ ಭಕ್ತರಾಗಿದ್ದಾರೆ. ಅವರು ಸೋಮೇಶ್ವರನನ್ನು ಕರ್ನಾಟಕದಲ್ಲಿ ತಾವಿದ್ದ ಸ್ಥಳದಲ್ಲಿಯೇ ತಂದು ಸ್ಥಾಪಿಸಿದರೆಂದು ಅವರ ಚರಿತ್ರೆಗಳಿಂದ ಗೊತ್ತಾಗುತ್ತದೆ. ಅವರು ಸೋಮೇಶ್ವರನ ಹೆಸರಿನಿಂದ ಶಿವಾನುಭವದ ವಚನಗಳನ್ನು ರಚಿಸಿ ಸಾರಿದ್ದಾರೆ. ಇವರೆಲ್ಲರ ಚರಿತ್ರೆಗಳನ್ನು ನಾವು ಈ ಮೊದಲಿಗೆಯೇ ಪ್ರಸಿದ್ಧಿಸುತ್ತ ಬಂದಿದ್ದೇವೆ. ಇನ್ನು ಮುಂದೆ ನಾವು ಸೌರಾಷ್ಟ್ರ ಅಂದರೆ ಗುಜರಾಥ ದೇಶದಲ್ಲಿ ಆಗಿ ಹೋದ

ಕೆಲವು ಶಿವಶರಣರ ಚರಿತ್ರೆಗಳನ್ನು ಇಲ್ಲಿ ವಿವರಿಸಲಿರುವೆವು. ಇದರಿಂದ ಶಿವಶರಣರ ಪ್ರಭಾವವು ಹಿಂದಿನ ಕಾಲದಲ್ಲಿ ಬರೀ ಕರ್ನಾಟಕದಲ್ಲಿಯು ಷ್ಟೇಯಲ್ಲ, ಪರಪ್ರಾಂತಗಳಲ್ಲಿಯೂ ಕೂಡ ಹಬ್ಬಿತ್ತೆಂಬುದು ಕಂಡು ಬರುತ್ತದೆ.

ಈ ಶಿವಶರಣರ ಕೀರ್ತಿಯು ಹೀಗೆ ಹಬ್ಬಲಿಕ್ಕೆ ಕೆಲವು ವಿಶೇಷ ಕಾರಣಗಳಿವೆ. ೧೦ ನೇ, ೧೧ ನೇ, ೧೨ ನೇ ಶತಮಾನಗಳಲ್ಲಿ ಕರ್ನಾಟಕ ದೇಶದಲ್ಲಿ ಅಸಂಖ್ಯ ವೀರ ಪುರುಷರೂ, ಧರ್ಮ ಸುಧಾರಕರೂ, ತತ್ವ ಜ್ಞಾನಿಗಳೂ, ರಾಜ್ಯ ಸ್ಥಾಪಕರೂ ಆಗಿಹೋದರು. ಅವರು ಮಾಡಿದ ಮಹತ್ಕಾರ್ಯಗಳ ಮೂಲಕ ಅವರು ಭರತಖಂಡದಲ್ಲೆಲ್ಲ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದವರಾದರು. ಅವರಲ್ಲಿ ಅನೇಕರು ಜೈನ, ಶೈವ, ಪಾಶುಪತ, ಕಾಳಾಮುಖ, ರಾಮಾನುಜ, ಅದ್ವೈತ ಮತಗಳಲ್ಲಿ ಪಂಡಿತ ರೆನ್ನಿಸಿಕೊಂಡು, ತಮ್ಮ ತಮ್ಮ ತತ್ವಗಳನ್ನು ಪ್ರತಿಪಾದಿಸುತ್ತ ಇಡೀ ಹಿಂದುಸ್ಥಾನದಲ್ಲಿ ಸಂಚರಿಸಿದ್ದಾರೆ. ಇದರಿಂದ ಕರ್ನಾಟಕದ ಪ್ರಸಿದ್ಧಿಯು ಸ್ವಾಭಾವಿಕವಾಗಿ ಎಲ್ಲ ಕಡೆಗೂ ಹಬ್ಬಿರಲಿಕ್ಕೇ ಬೇಕು. ಕರ್ನಾಟಕ ದೇಶವು ಆಗ ಗೋದಾವರೀ ತೀರದ ವರೆಗೂ ಹಬ್ಬಿ ಅದಕ್ಕೆ ಗುಜರಾಥ ದೇಶವು ನೆರೆ ಪ್ರಾಂತವಾಗಿತ್ತು. ಈ ಕಾರಣದಿಂದಲೂ ಗುಜರಾಥ ದೇಶ ದಲ್ಲಿ ರಾಷ್ಟ್ರಕೂಟ ಚಾಲುಕ್ಯ ರಾಜರ ವಂಶಜರು ಕೆಲ ಕಾಲ ರಾಜ್ಯ ವಾಳುತ್ತಿದ್ದುದರಿಂದಲೂ, ಈ ಎರಡೂ ದೇಶಗಳಲ್ಲಿ ಪರಸ್ಪರ ಸಂಬಂಧವು ಬೆಳೆಯಲು ಕಾರಣವಾಯಿತು. ಇದಲ್ಲದೆ ಬಹು ಜನ ಗುರ್ಜರರು ಕರ್ನಾಟ ಕಕ್ಕೆ ವ್ಯಾಪಾರಕ್ಕೋಸ್ಕರ ಬರುತ್ತಾ ಇದ್ದುದು ಕಂಡು ಬರುತ್ತದೆ. ಅವರು ಬಹುಶಃ ಸಮುದ್ರ ಮಾರ್ಗವಾಗಿ ಕಾಠೇವಾಡ ಮತ್ತು ಗುಜರಾಥ ದೇಶಗಳ ಬಂದರಗಳಿಂದ ಕಾರವಾರ ಜಿಲ್ಲೆಯ ಬಂದರುಗಳಿಗೆ ಬಂದು, ಅಲ್ಲಿಂದ ಒಳದೇಶದೊಡನೆ ವ್ಯಾಪಾರ ನಡಿಸುತ್ತಿರಬೇಕು. ಆದ್ದರಿಂದ ಬನವಾಸಿ, ಹಾನಗಲ್ಲು, ಗೋವೆ, ಹಲಸಿ ಇಂಥಾ ದುರ್ಗಮಯವಾದ ಅರಣ್ಯ ಪ್ರದೇಶ ಗಳಲ್ಲಿ ಕದಂಬ ರಾಜರ ರಾಜಧಾನೀ ಪಟ್ಟಣಗಳು ಉದಯವಾದವು. ಈ ಪಟ್ಟಣಗಳು ಪಶ್ಚಿಮ ಸಮುದ್ರದ ಬಂದರಗಳಿಗೆ ಹೋಗುವ ಮಾರ್ಗಗಳ ಮೇಲೆಯೇ ಇದ್ದು ಇವುಗಳ ಮೇಲಿಂದಲೇ ಕರ್ನಾಟಕದ ವ್ಯಾಪಾರವು ಗುಜರಾಥ, ಇರಾಣ, ಪೂರ್ವ ಆಫ್ರಿಕಾ ಮೊದಲಾದ ದೇಶಗಳ ಕೂಡ

ನಡಿಯುತ್ತಿತ್ತು. ಬಳ್ಳಿಗಾವಿಯ ಒಂದು ಕಾಳಾಮುಖರ ಶಿಲಾಶಾಸನ ದಲ್ಲಿ ಅಲ್ಲಿ ನೆಲಸಿದ್ದ ವೀರ ಬಣಂಜುಗಳು ಸಮುದ್ರ ಮಾರ್ಗವಾಗಿ ವ್ಯಾಪಾರ ನಡಿಸುತ್ತಿದ್ದರೆಂಬ ಉಲ್ಲೇಖವಿದೆ. ಇದು ಅತಿಶಯೋಕ್ತಿಯಲ್ಲ. ಇದು ಆಗಿನ ನಿಜ ಸ್ಥಿತಿಯನ್ನು ತೋರಿಸುತ್ತದೆ. ಶಿವಶರಣೆಯಾದ ಶಿವಪ್ರಿಯ ನಾಚಿಯ ಅಣ್ಣ ತಮ್ಮಂದಿರಾದ ನಾಚಯ್ಯ ಅರುಣಾದ್ರಿಯರು ಪರ ದೇಶ ವ್ಯಾಪಾರ ಮಾಡುತ್ತಿದ್ದರೆಂಥು ಆಕೆಯ ಚರಿತ್ರೆಯಿಂದ ಕಂಡು ಬರುತ್ತದೆ. ಹೀಗೆ ಗುಜರಾಥಕ್ಕೂ, ಕರ್ನಾಟಕಕ್ಕೂ ಹಿತ ಸಂಬಂಧ ವಿದ್ದಿತು. ಆದ್ದರಿಂದ ಕರ್ನಾಟಕದಲ್ಲಿ ಉಂಟಾದ ಧಾರ್ಮಿಕ ಚಳವಳಿಗಳ ಪರಿಣಾಮಗಳು ಗುಜರಾಥ ದೇಶದ ಮೇಲೆಯೂ ಆಗುತ್ತಿರಬೇಕೆಂದು ಅನು ಮಾನ ಮಾಡಲು, ಯಾವ ಪ್ರತ್ಯವಾಯವೂ ಇರುವದಿಲ್ಲ. ಇದರಿಂದ ಗುಜರಾಥ ದೇಶದಲ್ಲಿಯೂ ಶಿವಶರಣರು ಆಗಿಹೋಗಿರುವರೆಂಬುದ ಅಸಂಭಾ ವ್ಯವಲ್ಲ.

ಗುಜರಾಥದೇಶದಲ್ಲಿ ಈಗ ಲಿಂಗಧಾರಿಗಳ ಸಂಖ್ಯೆಯು ಅತ್ಯಲ್ಪ ವಾಗಿರುತ್ತದೆ. ಆದರೂ ಈ ದೇಶವು ಒಂದು ಕಾಲದಲ್ಲಿ ಶೈವ ಸಾಂಪ್ರದಾ ಯದ ನಾಡಾಗಿತ್ತೆಂದು ತೋರುತ್ತದೆ. ಇಲ್ಲಿ ಸೌರಾಷ್ಟ್ರ ಸೋಮನಾಥನ ಪ್ರಸಿದ್ಧ ದೇವಾಲಯ ವಿದ್ದು, ಇದು ಇದರ ದ್ಯೋತಕವಾಗಿದೆ. ಈ ದೇವಾ ಲಯವು ಹಿಂದುಸ್ಥಾನದಲ್ಲಿ ಅತ್ಯಂತ ಪ್ರಸಿದ್ಧವಾದದ್ದು. ಈ ದೇವಾಲಯವನ್ನು ಅಸಂಖ್ಯಾತ ಭಕ್ತರು ಬಹು ಭಕ್ತಿಯಿಂದ ಯಾವಾಗಲೂ ಕಾಣುತ್ತ ಬಂದಿ ದ್ದಾರೆ. ಆದ್ದರಿಂದಲೇ ಗಜನಿ ಮಹಮ್ಮದನು ಈ ದೇವಾಲಯದ ಮೇಲೆ ದಾಳಿ ಮಾಡಿ ಆದರಲ್ಲಿಯ ಲಿಂಗ ಮೂರ್ತಿಯನ್ನು ಒಡೆದು ಹಾಕಿ, ಅಲ್ಲಿ ದೊರಕಿದ ಅಪರಿಮಿತ ಹಣವನ್ನು ದೋಚಿಗೊಂಡು ಹೋದನು. ಹೇಗೆ ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯವು ದಕ್ಷಿಣ ದೇಶದಲ್ಲಿ ಪ್ರಸಿದ್ಧವಾದುದೋ ಹಾಗೆ ಯೇ ಈ ಸೋಮನಾಥ ದೇವ ಲಯವು ಈ ಭಾಗದಲ್ಲಿ ಬಹು ಪ್ರಸಿದ್ಧ ವಾದುದು. ಈ ಸೋಮನಾಥನನ್ನು ಬಹು ಭಕ್ತಿಯಿಂದ ಕಾಣುವವರು ಗುಜರಾಥದಲ್ಲಿ ಅನೇಕರಾಗಿ ಹೋಗಿದ್ದು ಇವರಲ್ಲಿ ಮಹಾತ್ಮರಾದವರನ್ನು ಬಸವೇಶ್ವರನ ಕಾಲದ ಶಿವಶರಣರು ತಮ್ಮ ಶರಣರ ಮಾಲಿಕೆಯಲ್ಲಿ ಸೇರಿಸಿ ಅವರನ್ನು ಸ್ತುತಿಸುತ್ತ ಬಂದಿದ್ದಾರೆ. ಅವರ ಹೆಸರುಗಳು ಗಣ ಸಹಸ್ರ ಗ್ರಂಥದಲ್ಲಿ ಬಂದಿವೆ.

R. N. B. 2554

# ಶಿವಾನುಭವ.

ಸಂಪುಟ ೨೪ ] ( ಮಾಸಪತ್ರಿಕೆ ) [ ಸಂಚಿಕೆ ೧೧



ನವ್ಹೆಂಬರ ೧೯೫೦] ವಿಜಾಪೂರ [ ಕಾರ್ತಿಕ ೧೮೭೨

ವಾ. ಚಂ. ೫-೧೨-೦

# ವಿಷಯಾನುಕ್ರಮಣಿಕೆ



**ಶಿವಾನುಭವ ಪತ್ರಿಕೆ, ವಿಜಾಪುರ.**

**ಮಾಸಿಕ ೬೪ ಪುಟಗಳು.**

**ವಾರ್ಷಿಕ ಚಂದಾ ರೂ.೧೨-೦**

# ಶಿವಾನುಭವ

ವರ್ಷ ೨೪ | ನವ್ಹಂಬರ ೧೯೫೦ | ಸಂಚಿಕೆ ೧೧


## ಶ್ರೀಕರ ಭಾಷ್ಯದ ಸ್ಥಾನಮಾನ.


( ಲೇ:— ಶ್ರೀಯುತ ವೀರಪ್ಪ ಯಗಟಿ ಬಿ. ಎ. ಎಲ್. ಎಲ್. ಬಿ. )

( ಹಾವೇರಿ )




ಬ್ರಹ್ಮಜ್ಞಾನದಿಂದ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಳ್ಳುವದು ಮಾನವನ ಅಂತಿಮ ಧ್ಯೇಯವು. ಬ್ರಹ್ಮಜ್ಞಾನದ ಜಿಜ್ಞಾಸುಗಳಿಗೆ ತೃಪ್ತಿಯನ್ನುಂಟು ಮಾಡಲು ವ್ಯಾಸ ಋಷಿಗಳು ಬ್ರಹ್ಮ ಸೂತ್ರಗಳನ್ನು ರಚಿಸಿದ್ದಾರೆ. ಅನೇಕ ಧರ್ಮಪಂಥಗಳ ಪುರಸ್ಕರ್ತರು ತಮ್ಮ ತತ್ವಗಳ ಪುಷ್ಟಿಗಾಗಿ ಬ್ರಹ್ಮ ಸೂತ್ರಗಳ ಮೇಲೆ ಬೇರೆ ಬೇರೆ ಭಾಷ್ಯಗಳನ್ನು ಬರೆದಿದ್ದಾರೆ. ಈಗ ಉಪಲಬ್ಧವಿರುವ ಭಾಷ್ಯಗಳೆಂದರೆ, (೧) ಶಂಕರ (೨) ಭಾಸ್ಕರ (೩) ರಾಮಾನುಜ (೪) ಮಾಧ್ವ (೫) ನಿಂಬಾರಕ (೬) ಶ್ರೀಕಂಠ (೭) ಶ್ರೀಪತಿ (೮) ವಲ್ಲಭ (೯) ಶುಕ (೧೦) ವಿಜ್ಞಾನಭಿಕ್ಷು (೧೧) ಬಲದೇವ ಇವರ ಭಾಷ್ಯಗಳು. ಬ್ರಹ್ಮಸೂತ್ರಗಳು ಜೀವ ಜಗತ್ತು, ಬ್ರಹ್ಮ, ಈ ಮೂರು ವಸ್ತುಗಳ ಪರಸ್ಪರ ಸಂಬಂಧ ಹಾಗು ಲಕ್ಷಣಗಳನ್ನು ಪ್ರತಿಪಾದಿಸುತ್ತಿವೆ. ಶಂಕರನು ಅದ್ವೈತವನ್ನೂ, ಮಾಧ್ವನು ದ್ವೈತವನ್ನೂ, ರಾಮಾನುಜನು ವಿಶಿಷ್ಟಾದ್ವೈತವನ್ನೂ,

ಶ್ರೀಪತಿಯು ದ್ವೈತಾದ್ವೈತಗಳ ಸಮನ್ವಯ ಅಥವಾ ಶಿವಾದ್ವೈತವನ್ನು ಪ್ರತಿಪಾದಿಸಿದ್ದಾರೆ. ಶಂಕರಾಚಾರ್ಯರು "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಜೀವಬ್ರಹ್ಮರು ಒಂದು, ಜಗತ್ತು ಸುಳ್ಳು ಎಂದು ಹೇಳಿದರು. ಮಧ್ವಾಚಾರ್ಯರು ಜೀವಬ್ರಹ್ಮರು ಪ್ರತ್ಯೇಕವಿದ್ದು ಆಳು ಅರಸರಲ್ಲಿರುವ ಭೇದವಿದ್ದು ಜೀವವು ಎಂದೂ ಬ್ರಹ್ಮವಾಗಲಾರದು ಎಂದು ಹೇಳಿದ್ದಾರೆ. ರಾಮಾನುಜರು ಜೀವವು ಬ್ರಹ್ಮವಾಗಿರದಿದ್ದರೂ ಅದಕ್ಕೆ ಬ್ರಹ್ಮನ ಸಾರೂಪ್ಯವಿರುವದೆಂದು ಹೇಳಿದ್ದಾರೆ. ಶ್ರೀಪತಿಯು ಪ್ರಾರಂಭದಲ್ಲಿ ಜೀವಬ್ರಹ್ಮರಲ್ಲಿ ಭೇದ ತೋರಿದಾಗ್ಯೂ ಅಂತ್ಯದಲ್ಲಿ ಜೀವವು ಜ್ಞಾನಪಡೆದ ನಂತರ ಬ್ರಹ್ಮವೇ ಆಗಿ ಬ್ರಹ್ಮದಲ್ಲಿ ಸಮರಸಹೊಂದುವದೆಂದು ಹೇಳಿದ್ದಾನೆ. ಜೀವವು ಜನ್ಮಮರಣಗಳಿಂದ ಮುಕ್ತವಾಗುವದೇ ಜೀವದ ಪರಮಧ್ಯೇಯವು.

ಭಾಸ್ಕರಾಚಾರ್ಯನು ತನ್ನ ಭಾಷ್ಯದಲ್ಲಿ ಬ್ರಹ್ಮಸೂತ್ರಗಳ ಧ್ಯೇಯವನ್ನು ಅಂದವಾಗಿ ವಿವರಿಸಿದ್ದಾನೆ. "ಜನ್ಮಬಂಧನಿವೃತ್ತಿಕಾರಣಂ ಬ್ರಹ್ಮಸೂತ್ರಮುದ ಮುದ್ಬಭೌಯತ: । ಶ್ರೋತೃಚಿತ್ತಕಮಲೈಕ ಭಾಸ್ಕರಂ ಬಾದರಾಯಣಂ ಋಷಿಂ ನಮಾಮಿ ತಂ ॥

ಜನನ ಮರಣಗಳಿಂದ ಬಿಡುಗಡೆಹೊಂದಲು ಕಾರಣವಾದ ಬ್ರಹ್ಮಸೂತ್ರಗಳನ್ನು ಬರೆದ ಹಾಗೂ ಕೇಳುವವರ ಚಿತ್ತವೆಂಬ ಕಮಲಕ್ಕೆ ಸೂರ್ಯನಂತಿರುವ ವ್ಯಾಸ ಋಷಿಯನ್ನು ನಮಸ್ಕಾರ ಮಾಡುವೆನೆಂದು ಹೇಳಿದ್ದಾರೆ. ಇಂತಹ ವಿಷಯಜ್ಞಾನವು ಗಹನವೂ ಮನುಷ್ಯನ ಪರಮ ಪುರುಷಾರ್ಥವನ್ನು ಸಾಧಿಸಲಿಕ್ಕೂ ಆದುದರಿಂದ ಅಂತಹ ಬ್ರಹ್ಮಸೂತ್ರಗಳ ಮೇಲೆ ಭಾಷ್ಯಬರೆಯುವದೆಂದರೆ ಅಸಾಧಾರಣವಾದ ಪಾಂಡಿತ್ಯವೂ, ವೇದ, ತರ್ಕ, ನ್ಯಾಯ, ವೇದಾಂತ, ಸಾಂಖ್ಯ ಮೊದಲಾದ ಶಾಸ್ತ್ರಗಳ ಪೂರ್ಣ ಪರಿಣತೆಯೂ ಬೇಕಾಗುವದು. ಆದ್ದರಿಂದ ಜಾಗತಿಕ ಸಂಸ್ಕೃತಿಯಲ್ಲಿ ಭಾಷ್ಯಕಾರರಿಗೆ ಪ್ರಥಮಸ್ಥಾನವು ದೊರಕಿದೆ. ಪಾಶ್ಚಾತ್ಯ ಪಂಡಿತರು ಸಹ ಭಾಷ್ಯಕಾರರ ಪಾಂಡಿತ್ಯಕ್ಕೆ ಬೆರಗಾಗಿದ್ದಾರೆ. ವೀರಶೈವಪರವಾದ ಭಾಷ್ಯವೆಂದರೆ ಶ್ರೀಕರ ಭಾಷ್ಯವೊಂದೇ ಈಗ ಲಭ್ಯವಾಗಿದೆ. ನೀಲಕಂಠ ಭಾಷ್ಯವು ಅದ್ವೈತಪರವಾಗಿದ್ದು ಶಿವನೇ ಎಲ್ಲ ದೇವತೆಗಳಲ್ಲಿ ಶ್ರೇಷ್ಠನೆಂದು ಹೇಳುತ್ತದೆ.

ಶ್ರೀಪತಿಪಂಡಿತರಿಂದ ರಚಿಸಲ್ಪಟ್ಟ ಶ್ರೀಕರ ಭಾಷ್ಯವು ಬ್ರಹ್ಮಸೂತ್ರಗಳನ್ನು ವೀರಶೈವ ಪರವಾಗಿ ಪ್ರತಿಪಾದಿಸಿದಂಥ ಒಂದು ಅತ್ಯುತ್ತಮವಾದ ಭಾಷ್ಯವಾಗಿದೆ. ಶ್ರೀಪತಿಯು ವೀರಶೈವರಲ್ಲಿ ಪ್ರಸಿದ್ಧರಾದ ಮೂರು ಮಂದಿ ಪಂಡಿತರಲ್ಲಿ ಒಬ್ಬನು. ಉಳಿದ ಇಬ್ಬರು ಶಿವಲೆಂಕ ಮಂಚಣ್ಣ ಮತ್ತು ಮಲ್ಲಿಕಾರ್ಜುನ ಪಂಡಿತರು. ಈ ಪಂಡಿತ ತ್ರಯರನ್ನು ಪಾಲ್ಕುರಿಕೆ ಸೋಮನು ಹೊಗಳಿದ್ದಾನೆ. ಗುಬ್ಬಿಯ ಮಲ್ಲಣಾರ್ಯನು ತನ್ನ ಭಾವಚಿಂತಾರತ್ನದಲ್ಲಿ ಬಾಯ್ತುಂಬ ಹೊಗಳಿದ್ದಾನೆ. ಶಿವಲೆಂಕ ಮಂಚಣನು ಕಾಶೀಪಟ್ಟಣದ ಶೈವ ಬ್ರಾಹ್ಮಣನಿದ್ದು ವೀರಶೈವ ದೀಕ್ಷೆಹೊಂದಿ ಕಲ್ಯಾಣದ ಅನುಭವ ಮಂಟಪದಲ್ಲಿ ಸೇರಿದನು. ಇವನ ಚರಿತ್ರೆಯು ಶಿವಕಥಾಸಾಗರ, ಶಿಂಗಿರಾಜಪುರಾಣ, ಭೈರವೇಶ್ವರಕಾವ್ಯ ಮತ್ತು ಬಸವಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಮಲ್ಲಿಕಾರ್ಜುನ ಪಂಡಿತನು ಪರಮತವಾದಿಗಳನ್ನು ವೆಲುನಾಡ ಚೋಳನ ಆಸ್ಥಾನದಲ್ಲಿ ಸೋಲಿಸಿ ಆಂಧ್ರದೇಶದಲ್ಲಿ ಪ್ರಸಿದ್ಧನಾದನು. ಅವನು ಬಸವನನ್ನು ಕಾಣಲು ಕಲ್ಯಾಣಕ್ಕೆ ಹೊರಟಿರಲು ಪೋಟಲಪಾದ ಎಂಬ ಗ್ರಾಮಕ್ಕೆ ಬಂದಾಗ ಬಸವನು ಕೂಡಲಸಂಗಮನಲ್ಲಿ ಐಕ್ಯವಾದನೆಂಬ ಸುದ್ದಿಯನ್ನು ಕೇಳಿ ಮರಳಿ ಶ್ರೀಶೈಲಕ್ಕೆ ಹೋಗಿ ಅಲ್ಲಿ ನಿರ್ವಯಲ ಸಮಾಧಿಯನ್ನು ಹೊಂದಿದನು. ಈತನು ಕ್ರಿ. ಶ. ೧೧೬೦ ರಲ್ಲಿ ಇದ್ದವನಿದ್ದು ಬಸವನಿಗಿಂತ ಹಿರಿಯನು.

ಚಾಲುಕ್ಯರ ೬ ನೇ ವಿಕ್ರಮಾದಿತ್ಯರಾಜನ ಸಾಮಂತ ಅರಸನಾದ ಅನಂತಭೂಪಾಲನಿಗೆ ಶ್ರೀಪತಿಯು ಗುರುವಾಗಿದ್ದನೆಂದು ಆಂಧ್ರ ಬಸವಪುರಾಣವು ಹೇಳುತ್ತದೆ. ಅನಂತಭೂಪಾಲನ ರಾಜಧಾನಿಯು ಬಿಜವಾಡ ( ವಿಜಯವಾಟಿಕಾ ) ಪಟ್ಟಣವು. ಅವನು ಕ್ರಿ. ಶ. ೧೦೯೫ ರಿಂದ ೧೧೧೮ ರ ವರೆಗೆ ಆಳಿದನು. ಒಂದು ಸಲ ಬಿಜವಾಡದ ಉತ್ತಮ ವರ್ಣದವರು ಶ್ರೀಪತಿಯು ಅಂತ್ಯಜನಾದ ಮಲ್ಲಯ್ಯನ ಮನೆಯಲ್ಲಿ ಊಟ ಮಾಡಿದ್ದರಿಂದ ತನ್ನ ಆಚಾರಭಂಗವಾಗಿಲ್ಲವೆಂತಲೂ ವಾದಿಸಿದನು. ಪರವಾದಿಗಳು ಆ ಮಾತನ್ನು ನಂಬದ್ದರಿಂದ ಶ್ರೀಪತಿಯು ಬೆಂಕಿಯನ್ನು ವಸ್ತ್ರದಲ್ಲಿ ಕಟ್ಟಿ ಏಳುದಿನ ಗಿಡಕ್ಕೆ ತೂಗಹಾಕಿದನು. ಪರವಾದಿಗಳ ಅಡಿಗೆಗೆ ಬೆಂಕಿ ಲಭಿಸದ್ದರಿಂದ ಅವರು ಶ್ರೀಪತಿಗೆ ಕ್ಷಮೆ ಬೇಡಿ ಬೆಂಕಿ

ಯನ್ನು ದೊರಕಿಸಿಕೊಂಡರು. ಆಗ ಅನಂತಭೂಪಾಲನೂ ಉಳಿದ ಪಟ್ಟಣದ ಪರಮತಿಗಳೂ ಶ್ರೀಪತಿಯ ಶಿಷ್ಯರಾದರು. ಈ ಸಂಗತಿಯು ಬಿಜವಾಡದ ಮಲ್ಲೇಶ್ವರ ದೇವಾಲಯದಲ್ಲಿರುವ ಶಿಲಾಶಾಸನದಲ್ಲಿ ಬರೆಯಲ್ಪಟ್ಟಿದೆ. ಈ ಶಾಸನದ ಲೇಖವನ್ನು ರಾ|| ಬ|| ಕೃಷ್ಣಶಾಸ್ತ್ರಿಗಳು ಪ್ರಸಿದ್ಧಿಸಿದ್ದಾರೆ. ಈ ಪವಾಡದ, ಸಂಗತಿಯು ಬಸವ ಪುರಾಣದ ೫೫ ನೆಯ ಸಂಧಿಯಲ್ಲಿಯೂ ಹೇಳಲ್ಪಟ್ಟಿದೆ. ಶ್ರೀಪತಿಯು ತನ್ನ ಭಾಷ್ಯದಲ್ಲಿ ವೇದ, ಉಪನಿಷತ್, ಶಂಕರ, ರಾಮಾನುಜ, ವಲ್ಲಭ ಮುಂತಾದವರ ಭಾಷ್ಯ ಹಾಗು ಆಗ ಉಪಲಬ್ಧವಿದ್ದ ಅನೇಕ ಗ್ರಂಥಗಳಲ್ಲಿ ಉಲ್ಲೇಖಿಸಿರುವದಲ್ಲದೆ ಆ ಗ್ರಂಥಗಳಲ್ಲಿಯ ವಿಷಯ ಖಂಡನೆಯನ್ನು ಸಮಂಜಸವಾಗಿಯೂ, ತಾರ್ಕಿಕರೀತಿಯಿಂದಲೂ ಮಾಡಿರುವದು ಅಗಾಧವಾಗಿದೆ. ಶ್ರೀಪತಿಯು ತನ್ನ ಭಾಷ್ಯದಲ್ಲಿ ಆಗಮ, ಸಿದ್ಧಾಂತಶಿಖಾಮಣಿ ಮುಂತಾದ ವೀರಶೈವ ಗ್ರಂಥಗಳ ಆಧಾರವನ್ನೂ ವೇದಗಳನ್ನೂ ಉದ್ಧರಿಸಿ ವೀರಶೈವದ ಶ್ರೇಷ್ಠತ್ವವನ್ನು ಸಿದ್ಧಮಾಡಿರುವದನ್ನು ನೋಡಿದರೆ ಹಾಗೆ ಮತ್ತಾವ ವೀರಶೈವ ಪಂಡಿತರೂ ಅಷ್ಟು ಅಭಿಮಾನ ಮತ್ತು ಉತ್ಸಾಹವನ್ನು ತೋರಿಸಿಲ್ಲವೆಂದು ಖಂಡಿತವಾಗಿ ಹೇಳಬಹುದು.

ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಮಾಸಿಕದಲ್ಲಿ ( ಲಿಟರರಿ ಜರ್ನಲ್ಲ ) ಶಿವಸುತರೆಂಬವರು ಶ್ರೀಕರ ಭಾಷ್ಯವು ವೀರಶೈವ ಪರವಾದದ್ದಲ್ಲವೆಂತಲೂ ಶ್ರೀಪತಿಯು ಆರಾಧ್ಯಬ್ರಾಹ್ಮಣನೆಂತಲೂ ಮುಂತಾಗಿ ಲೇಖಗಳನ್ನು ಬರೆದಿದ್ದಾರೆ. ಈ ಭಾಷ್ಯವು ಶ್ರೀಪತಿಯ ಹೆಸರಿನಲ್ಲಿ ೫೦ ವರ್ಷಗಳಹಿಂದೆ ಬೇರೊಬ್ಬರಿಂದ ಬರೆಯಲ್ಪಟ್ಟಿದೆಯೆಂದು ಇವರು ಬರೆದಿದ್ದಾರೆ. ಈ ಅನುಮಾನಗಳು ನಿರಾಧಾರವಾದವುಗಳೆಂಬುದನ್ನು ನಾನು ಆಧಾರಪೂರ್ವಕವಾಗಿ ತೋರಿಸಲು ಬಯಸುತ್ತೇನೆ. ಭಾಷ್ಯಬರೆಯಲು ಸಾಮಾನ್ಯರ ಸಾಹಸ ಸಾಲದು. ಒಬ್ಬನು ತನ್ನ ಪಾಂಡಿತ್ಯದ ಯಶಸ್ಸನ್ನು ಮತ್ತೊಬ್ಬನಿಗೆ ಕೊಟ್ಟು ತನ್ನ ಹೆಸರನ್ನು ಮರೆಮಾಜಿಕೊಳ್ಳುವದು ಅಸಹಜವಾದ ಸಂಗತಿಯಾಗಿದೆ. ಕ್ರಿ. ಶ. ೧೯೩೬ ರಲ್ಲಿ ಮೈಸೂರ ವಿದ್ಯಾಭಿವೃದ್ಧಿ ಸಂಘದ ಆಶ್ರಯದಿಂದ ಮುದ್ರಣವಾದ ಶ್ರೀಕರ ಭಾಷ್ಯದ ಮುನ್ನುಡಿಯಲ್ಲಿ ಶ್ರೀ ಸಿ. ಹಯವದನರಾಯರು ಶ್ರೀ ಪತಿಯು ಅಸಾಧಾರಣವಾದ ಪಂಡಿತನೆಂದು ಹೊಗಳಿ

ದ್ದಾರೆ. ಶ್ರೀಪತಿಯು ಕ್ರಿ. ಶ. ೧೧ ನೇ ಶತಮಾನದ ಉತ್ತರಭಾಗದ ಯೂ ೧೨ ನೇ ಶತಮಾನದ ಪೂರ್ವಭಾಗದಲ್ಲಿಯೂ ಇದ್ದನೆಂಬುದಕ್ಕೆ ಸಾಕಷ್ಟು ಆಧಾರಗಳಿವೆ. ಆದರೆ ಮಧ್ವಾಚಾರ್ಯರ ತತ್ವ ಖಂಡನೆಯ ವಿಷಯವು ಹಿಂದಿನಿಂದ ಈ ಭಾಷ್ಯದಲ್ಲಿ ಸೇರಿಸಲ್ಪಟ್ಟಿರುವದೆಂಬದು ಒಪ್ಪತಕ್ಕ ಮಾತಾಗಿದೆ. ಆದರೆ ವಿಶೇಷವಾಗಿ ಲಕ್ಷ್ಯದಲ್ಲಿಡಬೇಕಾದ ವಿಷಯವೇನೆಂದರೆ ಈ ಭಾಷ್ಯದಲ್ಲಿ ಬಸವಣ್ಣನವರ ಅಥವಾ ಅವರ ಸಮಕಾಲಿಕ ಶರಣರ ಯಾವ ಹೆಸರೂ ಬಂದಿರುವದಿಲ್ಲ. ಭಾಷ್ಯದಲ್ಲಿ ರೇಣುಕ, ಮರುಳಸಿದ್ಧ, ಏಕೋರಾಮರೆಂಬ ಮೂರುಜನ ಆಚಾರ್ಯರ ಹೆಸರುಗಳು ಮಾತ್ರ ಉಲ್ಲೇಖವಾಗಿವೆ. ವಿಶ್ವಾರಾಧ್ಯ, ದಾರುಕರೆಂಬ ಉಳಿದ ಎರಡು ವೀರಶೈವಾಚಾರ್ಯರ ಹೆಸರು ಬಂದಿರುವದಿಲ್ಲ. ಆದ್ದರಿಂದ ಶ್ರೀಪತಿಯ ಕಾಲಕ್ಕೆ ಮೂವರೇ ಆಚಾರ್ಯರಿದ್ದರೆಂಬದೂ ಉಳಿದ ಇಬ್ಬರು ಅವನ ತರುವಾಯ ಆಗಿಹೋದರೆಂಬದೂ ಸಿದ್ಧವಾಗುತ್ತದೆ.

ಶಂಕರಾರಾಧ್ಯರು ತಮ್ಮ ಬಸವೇಶ ವಿಜಯದಲ್ಲಿ ಶ್ರೀಪತಿಯ ಹೆಸರನು ಹೇಳಿದ್ದಾರೆ. ಶ್ರೀಪತಿಯ ಸಂತತಿಯವನಾದ ನಾಗಲಿಂಗ ಕವಿಯು ತನ್ನ ಗ್ರಂಥವಾದ ಪಟ್ಟಾಭಿರಾಮ ವಿಲಾಸದಲ್ಲಿ ಶ್ರೀಪತಿಯ ಚರಿತ್ರೆ ನಿವರಿಸಿದ್ದಾನೆ. ಶ್ರೀಪತಿಯು ತನ್ನ ಭಾಷ್ಯವನ್ನು ಕೇವಲ ವೀರಶೈವರ ಸಲುವಾಗಿ ರಚಿಸಿದ್ದೇನೆಂದು ಹೇಳಿದ್ದಾನೆ. ಹಯವದನ ರಾಯರು ಪ್ರಕಟಿಸಿದ ಭಾಷ್ಯಸಾರ ೨ನೆಯ ಭಾಗ ಪುಟ ೧೮ರಲ್ಲಿ ಲಿಂಗದೀಕ್ಷಾ ವಿಶಿಷ್ಟ ವೀರಶೈವ ಮಾರ್ಗಾವಲಂಬಿ ಮುಮುಕ್ಷುಭಿಃ— ಶಿವಃಭಕ್ತ್ಯಾದರೇಣ ಉಪಾಸನೀಯಃ ” ಎಂದು ಹೇಳಲ್ಪಟ್ಟಿದೆ. ವೀರಶೈವರು ವೈದಿಕ ಮತ ಶಿಷ್ಟಾಚಾರರೆಂತಲೂ, ಲಿಂಗದೀಕ್ಷಾಯುಕ್ತರೆಂತಲೂ, ಪುನರ್ಜನ್ಮವಿಲ್ಲದವರೆಂತಲೂ ವೀರಶೈವ ತತ್ವದ ತಿರುಳನ್ನೇ ವಿವರಿಸಿ ಈ ಭಾಷ್ಯವು ಕೇವಲ ವೀರಶೈವ ಪರವಾದದ್ದೆಂದು ಶ್ರೀಪತಿಯು ವ್ಯಕ್ತಮಾಡಿದ್ದಾನೆ. ಭಾಷ್ಯಸಾರದ ಕೊನೆಯಲ್ಲಿ ಶ್ರೀಪತಿಯು ವೀರಶೈವದ ಮುಖ್ಯ ಧೇಯವಾದ ಲಿಂಗಧಾರಣ ದೀಕ್ಷೆ, ಭಕ್ತಿ, ಜ್ಞಾನ, ಕ್ರಿಯಾಮಾರ್ಗಾವಲಂಬನ, ಶಿವಸಾಕ್ಷಾತ್ಕಾರ ಮತ್ತು ಸಾಮರಸ್ಯಗಳಿಗೆ ಸಾಧನಗಳಾದ ಪಂಚಾಚಾರ, ಅಷ್ಟಾವರಣ ಮತ್ತು ಷಟ್ಸ್ಥಳಗಳ ಆಚರಣೆಯು ಅವಶ್ಯಕತೆಯನ್ನು ಹೇಳಿ

ದ್ದಾನೆ. ( ಸರ್ವೈಃ ವೀರಶೈವೈಃ ಶಕ್ತಿ ಜ್ಞಾನ ಕ್ರಿಯಾಕಾಂಡ ವಿಹಿತೈಃ। ಷಟ್ಸ್ಥಲ ಪರಶಿವ ಸಾಕ್ಷಾತ್ಕಾರಕಾರಣ, ಮಲತ್ರಯ ಧ್ವಂಸಕ—ಕೈವಲ್ಯ ಪ್ರದಾಯಕ ಅಷ್ಟಾವರಣ, ಪಂಚಾಚಾರ ಸದ್ಗುರು ಕರುಣಾಕಟಾಕ್ಷಾ ಲ್ಲಬ್ಧ ವೈರಾಗ್ಯ ಮಾರ್ಗೇಣ ಪರಶಿವತ್ವ ಪ್ರಾಪ್ತಿರ್ಭವತಿ ) ಭಾಷ್ಯದ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಶ್ರೀಪತಿಯು ತಾನು ನಿರಾ ಭಾರ ವೀರಶೈವನೆಂದೂ, ಯತಿರಾಜ, ದ್ವೈತಾದ್ವೈತಾಭಿಧಾನ ವಿಶೇಷಾ ದ್ವೈತ ಸ್ಥಾಪಕನೆಂದೂ ಹೇಳಿಕೊಂಡಿದ್ದಾನೆ. “ ಶ್ರೀ ಮನ್ನಿರಾಭಾರ ವೀರಶೈವ ಯತಿವ್ರಜ ” ಎಂಬ ಅಂಕಿತವು ಮತ್ತಾವ ಧರ್ಮಗುರುವಿಗೂ ಅನ್ವಯಿಸಲಾರದು. ಈ ಅಂಕಿತದಿಂದ ಶ್ರೀಪತಿಯು ವಿರಕ್ತನೆಂದು ಸ್ಪಷ್ಟ ವಾಗುತ್ತದೆ.

ಶ್ರೀಪತಿಯು ಷಟ್ಸ್ಥಲದ ಧ್ಯೇಯವನ್ನು ಭಾಷ್ಯದ ೩೭ನೆಯ ಪುಟ ದಲ್ಲಿಯೂ, ವೀರಶೈವರು ಅತ್ಯಾಶ್ರಮಿಗಳೆಂದು ೯ನೆಯ ಪುಟವಲ್ಲಿಯೂ ಹೇಳಿದ್ದು ಅದರ ಸಮರ್ಥನೆಗಾಗಿ ಅಥರ್ವಣ ವೇದ ಕೈವಲ್ಯ ಮತ್ತು ಮುಂಡಕೋಪನಿಷತ್ತುಗಳ ಆಧಾರ ಕೊಟ್ಟಿದ್ದಾನೆ. ಲಿಂಗಾಂಗಿಗಳಿಗೆ ಪುನರ್ಜನ್ಮವಿಲ್ಲೆಂಬುದಕ್ಕೆ ಶಂಕರಸಂಹಿತೆಯ ಆಧಾರ ಕೊಟ್ಟಿದ್ದಾನೆ. ಯಾವನು ಲಿಂಗವನ್ನು ದೀಕ್ಷಾಪೂರ್ವಕವಾಗಿ ದೇಹದ ಮೇಲೆ ಧರಿಸು ವನೋ ಅವನು ಅತ್ಯಾಶ್ರಮಿಯೆಂದು ಶ್ರೀಪತಿಯು ವ್ಯಾಖ್ಯೆ ಹೇಳಿದ್ದಾನೆ. ( ತಸ್ಮಾಲ್ಲಿಂಗಾಂಗ ಸಂಯುಕ್ತೋ ಯೋಪಿಸೋ ಅತ್ಯಾಶ್ರಮೀಭವೇತ್ ।) ಇದಕ್ಕೆ ವ್ಯಾಸ ರಚಿತ ಲಿಂಗ, ಸ್ಕಾಂದ ಮತ್ತು ಕೂರ್ಮ ಪುರಾಣಗಳ ಆಧಾರ ಹೇಳಿದ್ದಾನೆ. ಲಿಂಗಧಾರಣ ವಿಧಿಗೆ, ಋಗ್ವೇದ, ಸಾಮ, ಯಜು ರ್ವೇದ, ಸಿದ್ಧಾಂತ ಶಿಖಾಮಣಿಗಳ ಆಧಾರ ಕೊಟ್ಟಿದ್ದಾನೆ. (ಭಾಷ್ಯ ಪು. ೧೦) ಬ್ರಹ್ಮೇತಿ ಲಿಂಗ ಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ । ಪವಿತ್ರಂ ವಿತತಂ ಬ್ರಹ್ಮಣಸ್ಪತೆ । ತಸ್ಮಾತ್ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವ ಮನಾಮಯಂ । ) ಬ್ರಹ್ಮ, ವಿಷ್ಣು, ಅಗಸ್ತ್ಯ ಮುಂತಾದವರು ತಲೆಯಲ್ಲಿ ಲಿಂಗ ಧರಿಸಿದ್ದಾರೆಂಬುದಕ್ಕೆ ಸ್ಕಂದ ಪುರಾಣ, ಶಂಕರ ಸಂಹಿತೆ ಗಳ ಆಧಾರ ಹೇಳಿದ್ದಾನೆ. (ಪುಟ ೧೩) “ ಬ್ರಹ್ಮ, ವಿಷ್ಣ್ವಾದಿ ದೇವಾಶ್ಚ ಮುನಯೋ ಗೌತಮಾದಯಃ । ಧಾರಯಂತಿ ಸದಾಲಿಂಗಂ ಉತ್ತಮಾಂಗೆ ವಿಶೇಷತಃ ॥ ಬ್ರಾಹ್ಮಣರಿಗೂ ಸಹ ಲಿಂಗಧಾರಣವು ಅವಶ್ಯವೆಂದು ಗೌತಮ

ಸ್ಮೃತಿಯ ಆಧಾರ ಹೇಳಿದ್ದಾನೆ. ( ಭಾ. ಪು. ೧೩ ) "ಮುಖೇಮಂತ್ರಂ ಹೃದಿಧ್ಯಾನಂ ಮಸ್ತಕೆ ಲಿಂಗಧಾರಣಂ | ರುದ್ರಾಕ್ಷಂಚ ಶಿಖಾಭಸ್ಮ ಚೈತ ದ್ಬ್ರಾಹ್ಮಣ ಲಕ್ಷಣಂ|" ಅನೇಕರು ಈ ಶ್ಲೋಕದ ಅರ್ಥ ತಪ್ಪು ತಿಳಿದು ಕೊಂಡು ವೀರಶೈವರು ಬ್ರಾಹ್ಮಣರಿರುವರೆಂದು ವಾದಿಸುತ್ತಾರೆ. ಶಿವ ಸುತರ ಅಭಿಪ್ರಾಯವಾದರೂ ಹೀಗೆಯೇ ಇರಬಹುದೇ ?

ಶ್ರೀಪತಿಯು ಬ್ರಹ್ಮ ಸೂತ್ರಗಳನ್ನು ವೀರಶೈವದ ಪರವಾಗಿ ಪ್ರತಿ ಪಾದಿಸುವದನ್ನು ಪಾಲಿಸಿರುವರೇ ಹೊರತು ವೀರಶೈವ ಧರ್ಮ ತತ್ವಗಳ ನ್ನೆಲ್ಲ ವಿವರಿಸುವದಕ್ಕೆ ಹೊರಟಿಲ್ಲವೆಂಬುದನ್ನು ಓದುಗರು ಲಕ್ಷದಲ್ಲಿಡ ಬೇಕು. ಸೂತ್ರಗಳಲ್ಲಿ ಯಾವ ವಿಷಯವು ಬ ದಿರುವದೋ ಅದನ್ನೇ ವೀರಶೈವ ಪರವಾಗಿ ಸಮರ್ಥಿಸಿ ಅರ್ಥ ಮಾಡುವದು ಶ್ರೀಪತಿಯ ಮುಖ್ಯ ಧ್ಯೇಯವಾಗಿದೆ. ಭಾಷ್ಯದ ಪು. ೯೧-೯೬ ಅಧ್ಯಾಯ ೧ ಭಾಗ ೧ರ ೩೨ನೇ ಸೂತ್ರ—"ಜೀವ ಮುಖ್ಯ ಪ್ರಾಣಲಿಂಗಾನ್ನೆತಿ ಚೇನ್ನೋಪಾತ್ರೈ ವಿಧ್ಯಾ ದಾಶ್ರಿತತ್ವಾದಿಹತದ್ಯೋಗಾತ್॥" ಇದು ಇಷ್ಟ, ಪ್ರಾಣ ಮತ್ತು ಭಾವ ಲಿಂಗಗಳ ಪೂಜೆಯನ್ನು ವಿಧಿಸುತ್ತದೆಂದು ಸಿದ್ಧ ಮಾಡಿದ್ದಾನೆ. ಈ ಸಿದ್ಧಾಂತದ ಪುಷ್ಟಿಗಾಗಿ ಶ್ರೀಪತಿಯು ವಾತುಲಾಗಮ, ಸಿದ್ಧಾಂತ ಶಿಖಾ ಮಣಿಗಳ ಆಧಾರವನ್ನು ಹೇಳಿದ್ದಾನೆ. ( ಭಾ. ಪು. ೯೨ ) "ಪೀಠಸ ಶಿವಲಿಂಗೇತು ಶಿಷ್ಯಪ್ರಾಣಂ ನಿಧಾಯತು ಲಿಂಗ ಸಂಸ್ಥಾಪ್ಯ ತತ್ಪ್ರಾಣಿ ಪ್ರಾಣಲಿಂಗಂ ಭವೇತ್ತತಃ | ಪುನರ್ಭವೋ ತ ವತ್ಸ ವಿದ್ಯತೆ ಮಾತ್ರ ಯೋನಿಷು |" ಶಿವಲಿಂಗದಲ್ಲಿ ಶಿಷ್ಯನ ಪ್ರಾಣವನ್ನಿರಿಸಿ ಅವನ ಪ್ರಾಣ ದಲ್ಲಿ ಲಿಂಗವನ್ನು ಸ್ಥಾಪಿಸಿದಾಗ ಅದು ಪ್ರಾಣಲಿಂಗವಾಗುತ್ತದೆ. ಆದರಿಂದ ಪುನರ್ಜನ್ಮವಿಲ್ಲವಂತಾಗುವದು. ಯಜುರ್ವೇದ ಸೂತ್ರವಾದ ' ಸರ್ವ ಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ | ಎಂಬದನ್ನು ಗುರುವು ಶಿಷ್ಯನ ಕೈಯಲ್ಲಿ ದೀಕ್ಷೆಯ ಕಾಲದಲ್ಲಿ ಲಿಂಗವನ್ನಿಟ್ಟು ಮಂತ್ರ ಹೇಳುವ ದಕ್ಕೆ ಅನ್ವಯಿಸುವದೆಂದು ಬಹು ಸಮಂಜಸವಾಗಿ ಹೇಳಿದ್ದಾನೆ. ( ಪು. ೯೫ ) ಇದನ್ನು ಶ್ರೀಪತಿಯು ವಾತುಲಾಗಮದ ಶ್ಲೋಕ "ಪ್ರಾಣ ಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾಲೆ ಗುರುಶ್ಶಿವಂ | ಯೇನ ಸ್ಮರತಿ ತನ್ಮಂತ್ರಂ ವದಂತಿಹಿ| ತಸ್ಮಾತ್ಸರ್ವೇಷು ಕಾಲೇಷು ಧಾರಯೇ ಲ್ಲಿಂಗ ಮುತ್ತಮಮ್" ಎಂಬುದರಿಂದ ಪುಷ್ಟೀಕರಿಸಿ ಯಜು ರ್ವೇದದ ಸೂತ್ರದ ಅರ್ಥವೇ ವಾತು

ಲಾಗನದಲ್ಲಿ ಸ್ಪಷ್ಟವಾಗಿರುವದನ್ನು ತೋರಿಸಿದ್ದಾನೆ. ( ಪು. ೯೫ ) ಶ್ರೀಪತಿಯು ಭಾಷ್ಯದ ೧೦೫, ೧೦೬, ೧೬೮ ನೇ ಪುಟಗಳಲ್ಲಿ ವೀರಶೈವ ತತ್ವಜ್ಞಾನದ ಅಡಿಗಲ್ಲಾದ ೩೬ ತತ್ವಗಳನ್ನು ವಿವರಿಸಿದ್ದಾನೆ. ಲಿಂಗ ವೆಂದರೆ ಯಾವದರಲ್ಲಿ ಲಯಕಾಲದಲ್ಲಿ ಯಾವತ್ತು ಚರಾಚರ ಜಗತ್ತು ಲಯ ಹೊಂದುವದೋ ಮತ್ತು ಸೃಷ್ಟಿ ಕಾಲದಲ್ಲಿ ಯಾವದರಿಂದ ಜಗತ್ತು ಹುಟ್ಟುವದೋ ಅಂಥ ವಸ್ತುವೇ ಲಿಂಗವಾಗಿದೆಯೆಂದು ಲಿಂಗದ ವ್ಯಾಖ್ಯೆ ಮಾಡಿದ್ದಾನೆ. ( ಪು. ೧೦೦ ) "ಲೀಯತೇ ಸ್ಮಿನ್ ಜಗತ್ಸರ್ವಂ ಸ್ಥಾವರ ಜಂಗಮಾತ್ಮಕಂ ( ಗಮ್ಯತೇ ಸೃಷ್ಟಿಕಾಲೇತು ತಲ್ಲಿಂಗಂ ಬ್ರಹ್ಮಶಾಶ್ವತಂ|" ವೀರಶೈವನು ಎಲ್ಲರಿಗಿಂತ ಶ್ರೇಷ್ಠನೆಂಬದಕ್ಕೆ ಅವನು ಶಂಕರ ಸಂಹಿತೆ ಮತ್ತು ಸ್ಕಂದ ಪುರಾಣಗಳ ಆಧಾರ ಕೊಟ್ಟಿದ್ದಾನೆ. ( ಪು ೧೦೩) "ಲಿಂಗಾಂಗ ಸಂಗಿಷ್ವಧಿಕಾ ಷಟ್‌ಸ್ಥಲ ಜ್ಞಾನವಾನ್ಸ್ಮೃತಾನ್ | ತಸ್ಮಾ ದಪ್ಯಧಿಕೋ ನಾಸ್ತಿ ಸಏವಾಹಂ ನಸಂಶಯಃ|" ಲಿಂಗಾಂಗಿಗಳಲ್ಲಿ ಷಟ್ ಸ್ಥಲ ಜ್ಞಾನಿ ಶ್ರೇಷ್ಠನು. ಅವನಿಗಿಂತ ಅಧಿಕನು ಯಾವನೂ ಇಲ್ಲ. ಅವನೇ ನಾನೆಂದು ಶಿವನ ವಾಕ್ಯವುಂಟು.

೨೮ ಆಗಮಗಳಲ್ಲಿ ಪ್ರತಿಪಾದಿಸಲ್ಪಟ್ಟ ವೀರಶೈವವು ಆಚರಿಸಲು ಯೋಗ್ಯವಾದ ಒಂದೇ ಮಾರ್ಗವೆಂತಲೂ, ಮುಮುಕ್ಷುಗಳು ಅದನ್ನೇ ಅನು ಸರಿಸಬೇಕೆಂತಲೂ ಶ್ರೀಪತಿಯು ಸಿದ್ಧಾಂತಾಗಮದ ಆಧಾರವನ್ನು ಹೇಳಿ ದ್ದಾನೆ. ( ಪು. ೨೩೩ ) "ಸರ್ವವೇದ ಧರ್ಮಾನುಕೂಲ ಕಾಮಿಕಾ ದ್ಯಷ್ಟಾ ವಿಂಶತ್ಯಾಗಮ ಸಿದ್ಧ ಸಿದ್ಧಾಂತಾಭಿಧಾನ ವೀರಶೈವಮೇವಂ ಮುಮುಕ್ಷುಭಿ ರುಪಾಧೇಯಂ |" "ಲಿಂಗಂ ಬ್ರಹ್ಮೈವ ಕೇವಲಂ" ಲಿಂಗವು ಕೇವಲ ಬ್ರಹ್ಮವಿದ್ಯೆಯೆಂದು ಸಾಮವೇದ ರುದ್ರ ಸೂಕ್ತದ ಆಧಾರ ಕೊಟ್ಟಿ ದ್ದಾನೆ. ( ಪು. ೩೨೪ ) ಆಗಮಗಳು ವೇದ ಸಮ್ಮತವಾಗಿರುವವೆಂದು ಸಿದ್ಧಾಂತ ಶಿಖಾಮಣಿಯ ಹೇಳಿಕೆಯನ್ನು ಮನ್ನಿಸಿದ್ದಾನೆ. (ಪು. ೩೨೭) "ಸರ್ವವೇದಾನು ಸಾರಿತ್ವಾ ಚ್ಛೈವ ತಂತ್ರ ವಿಶಿಷ್ಯತೆ" ಷಡ್ದರ್ಶನ ಗಳಲ್ಲೊಂದಾದ ಪೂರ್ವ ಮೀಮಾಂಸದ ಕರ್ತೃವಾದ ಜೈಮಿನಿಯು "ಈಶ್ವರನನ್ನೂ ಆತನ ಚಿನ್ಹವಾದ ಲಿಂಗವನ್ನೂ ಪೂಜಿಸುತ್ತೇನೆ" ಎಂಬ ಮಾತನ್ನು ಶ್ರೀಪತಿಯು ಉದಾಹರಿಸಿದ್ದಾನೆ. ( ಪು ೩೪೩ ) "ಈಶ್ವರಂ ತಮಹಂ ವಂದೆಯಸ್ಯ ಲಿಂಗ ಮಹರ್ನಿಶಂ |" ಶಿವಸಾಯುಜ್ಯಕ್ಕೆ ಕಾರಣ

ಗಳಾದ ಷಟ್ಸ್ಥಲ ಮತ್ತು ಆಣವಮಲ, ಮಾಯಾಮಲ, ಕಾರ್ಮಿಕಮಲ ಗಳನ್ನು ನಾಶಮಾಡುವ ಅಷ್ಟಾವರಣ, ಪಂಚಾಚಾರಗಳನ್ನು ದೃಢವಾಗಿ ಆಚರಿಸಬೇಕೆಂದು ಹೇಳಿದ್ದಾನೆ. ವೀರಶೈವರಿಗೆ ಜನನ, ಮರಣ, ರಜೋ ಉಚ್ಛಿಷ್ಟ ಮತ್ತು ಜಾತಿಗಳ ಪಂಚಸೂತಕಗಳಿಲ್ಲೆಂದು ಹೇಳಿದ್ದಾನೆ. ( ಪು. ೮ )

ಶ್ರೀಕರ ಭಾಷ್ಯವು ವೀರಶೈವರ ಪರವಾದದ್ದಲ್ಲವೆಂದು ಹೇಳುವ ಶಿವಸುತರ ಆಕ್ಷೇಪಗಳನ್ನು ಒಂದೊಂದಾಗಿ ಪರೀಕ್ಷಿಸುವಾ. ಶ್ರೀಪತಿಯು ಲಿಂಗಧಾರಣದ ಸಂಗಡ ಯಜ್ಞೋಪವೀತವನ್ನು ( ಜನಿವಾರ ) ಧರಿಸಬೇಕೆಂದು ಹೇಳುತ್ತಾನೆಂಬುದು ಶಿವಸುತರ ಮೊದಲನೆಯ ಆಕ್ಷೇಪ. ಶಿವಸುತರು ಇಲ್ಲಿ ಭಾಷ್ಯದ ವಾಕ್ಯವನ್ನು ಚನ್ನಾಗಿ ತಿಳಿದುಕೊಂಡಿಲ್ಲ ಬೇರೆ ಮತದವರು ಜನ್ನಿವಾರವನ್ನು ಧರಿಸುವಂತೆ ವೀರಶೈವರು ಲಿಂಗ ಧರಿಸಬೇಕೆಂದು ಶ್ರೀಪತಿಯು ಸ್ಪಷ್ಟವಾಗಿ ಹೇಳಿದ್ದಾನೆ. (ಪು. ೯೫ ) "ಲಿಂಗ ವಿಶೇಷಾತ್ಪ್ರಾಣ್ಯಾದೌ ತದ್ಧಾರಣಂ ವಿಧೀಯತೆ । ಯಜ್ಞೋಪವೀತಂ ಪರಮಂ ಪವಿತ್ರಂ ಇತಿವತ್ ।" ಇಲ್ಲಿ ' ವತ್ ' ಎಂಬ ಸಂಸ್ಕೃತ ಶಬ್ದವು ಉದ್ದೇಶಪೂರ್ವಕವಾಗಿ ಉಪಯೋಗಿಸಲ್ಪಟ್ಟದ್ದು ಅದರ ಅರ್ಥವು 'ಅಂತೆ, ಹಾಗೆ ' ಎಂದು ಆಗುತ್ತದೆ ಇತರರಿಗೆ ಜನಿವಾರವು ಪವಿತ್ರವಿರುವಂತೆ ಲಿಂಗವು ವೀರಶೈವರಿಗೆ ಪವಿತ್ರವೆಂಬದು ಶ್ರೀಪತಿಯ ಮತವು. ' ವತ್ ' ಶಬ್ದ ಪ್ರಯೋಗವಿರುವದರಿಂದ ಹೋಲಿಕೆ ಇದೆಯೇ ಹೊರತು ಲಿಂಗ ಜನಿವಾರವೆರಡನ್ನು ಧರಿಸಬೇಕೆಂದು ಹೇಳಿದೆಯೆಂದು ತಿಳಿಯುವದು ತೀರ, ಹಾಸ್ಯಾಸ್ಪದವು. ಶಿವಸುತರ ೨ ನೆಯ ಆಕ್ಷೇಪವೆಂದರೆ ಶ್ರೀಪತಿಯು ಜುಟ್ಟವನ್ನು ಧರಿಸಬೇಕೆಂದು ಹೇಳಿದ್ದಾನೆಂಬದು. ಇದಾದರೂ ತಪ್ಪು ತಿಳುವಳಿಕೆ ವ್ಯಾಸರ ಬ್ರಹ್ಮಸೂತ್ರಗಳಲ್ಲಿ ಅನೇಕ ಪಂಥಗಳ ಅಂದರೆ ಬೌದ್ಧ, ಜೈನ, ಚಾರ್ವಾಕರ ತತ್ವಗಳ ಖಂಡನೆ ಇದೆ. ಇಂಥ ಪಂಥಗಳ ತತ್ವಗಳನ್ನು ಚರ್ಚಿಸುತ್ತ ವೀರಶೈವದ ಶ್ರೇಷ್ಠತ್ವವನ್ನು ಸಿದ್ಧಮಾಡುತ್ತ ಹೊರಟಿದ್ದಾನೆ. ಬ್ರಾಹ್ಮಣರು ಜುಟ್ಟು, ಜನಿವಾರ, ಲಿಂಗ ಸಹ ಧರಿಸಬೇಕೆಂದು ಲಿಂಗ ಪುರಾಣದ ಆಧಾರ ಕೊಟ್ಟಿದ್ದಾನೆ. ( ಪು ೨೩೮) "ಬ್ರಾಹ್ಮಣಾನಾಂ ಶಿವೋಕ್ತ ನಿಗಮಾಗಮ ಶಾಸ್ತ್ರಾನುಸರಣ ಲಿಂಗ, ಭಸ್ಮ, ಶಿಖಾ, ಮಂತ್ರಧ್ಯಾನಾಕ್ಷ ಮಾಲಿಕಾಧಾರಣಪೂರ್ವಕ ಶಿವೋಪಾಸನಮೇವ ನಿಃಶ್ರೇಯಸ ಫಲಹೇತುಕಂ । ( ಪು. ೨೩೮ )

ಶಿವಸುತರ ೩ ನೆಯ ಆಕ್ಷೇಪವು ಶ್ರೀಪತಿಯು ಗಾಯತ್ರಿ ಮಂತ್ರವನ್ನು ಪಂಚಾಕ್ಷರಿ ಮಂತ್ರದ ಜೊತೆಯಲ್ಲಿ ಜಪಿಸಬೇಕೆಂದು ಹೇಳಿದ್ದಾನೆಂಬದು. ಗಾಯತ್ರಿ ಮಂತ್ರವು ಶಿವನೊಬ್ಬನನ್ನೇ ಕುರಿತು ಅರ್ಥವಾಗುತ್ತದೆಂದು ಶ್ರೀಪತಿಯು ಸಿದ್ಧಮಾಡಿದ್ದಾನೆ. ( ಪುಟ ೧—೮೨ )" ಯೋ ದೇವಸ್ಸವಿತಾಸ್ಮಾಕಂ ಧಿಯೋ ಧರ್ಮಾರ್ಥ ಗೋಚರಾಃ। ಪ್ರೇರಯೇದಸ್ಯಯದ್ಭರ್ಗಸ್ತದ್ವರೇಣ್ಯ ಮುಪಾಸ್ಮಹೆ " ಇಲ್ಲಿ ಭರ್ಗಶಬ್ದವಿರುವದರಿಂದ ಶಿವಸ್ತುತಿಯೇ ಮುಖ್ಯವಾಗಿದ್ದು ಸೂರ್ಯ ಪ್ರಾರ್ಥನೆಯಲ್ಲವೆಂದು ಶ್ರೀಪತಿಯು ಸಮರ್ಥಿಸಿದ್ದಾನೆ ಶಿವಸುತರ ೪ ನೆಯ ಆಕ್ಷೇಪವು ಶ್ರೀಪತಿಯು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವೆಂಬ ನಾಲ್ಕು ವರ್ಣಗಳನ್ನು ಒಪ್ಪಿಕೊಂಡಿದ್ದಾನೆಂಬುದು. ಇದಾದರೂ ತಪ್ಪು ತಿಳುವಿಕೆಯೇ. ಶ್ರೀಪತಿಯು ವೀರಶೈವದ ಮೇಲ್ಮೆಯನ್ನು ತೋರಿಸಲು ನಾಲ್ಕುವರ್ಣಗಳ ಆಚಾರ ವಿಚಾರಗಳನ್ನು ವಿವರಿಸಿ ಅವುಗಳನ್ನು ಖಂಡಿಸಿದ್ದಾನೆ. ವೀರಶೈವರು ಈ ನಾಲ್ಕುವರ್ಣಗಳನ್ನು ಮೀರಿದವರಾದ್ದರಿಂದ ಅವರಿಗೆ ಅತ್ಯಾಶ್ರಮಿಗಳೆಂಬ ಹೆಸರುಂಟಾಗಿದೆಯೆಂದು ಮೇಲಿಂದ ಮೇಲೆ ಹೇಳಿದ್ದಾನೆ.

ಶಿವಸುತರ ೫ ನೆಯ ಆಕ್ಷೇಪವು ವೀರಶೈವರು ಉಪನಯನವನ್ನು ( ಮುಂಜಿ ) ಪಾಲಿಸಬೇಕೆಂದು ಶ್ರೀಪತಿಯು ಹೇಳಿರುವನೆಂಬದು. ಇದೂ ಸಹ ವಿಷಯ ವಿಪರ್ಯಾಸದ ಪರಿಣಾಮವು. ಉಪನಯನ ಶಬ್ದಕ್ಕೆ ಶ್ರೀಪತಿಯು " ಮೇಲ್ಭಾಗದಲ್ಲಿ ಕಣ್ಣುಳ್ಳಂಥ ಯಾವ ಶಿವನಿರುವನೋ ಅಂಥ ಮುಕ್ಕಣ್ಣನಾದ ಶಿವನಲ್ಲಿ ಬೆರೆಯುವಹಾಗೆ ಮಾಡುವ ವಿಧಾನವೇ ಉಪನಯನ— ( ಉಪರಿ+ ನಯನಂ+ ಯಸ್ಯ ) ಎಂದು ಅರ್ಥವಿವರಿಸಿ ಉಪನಯನವೆಂದರೆ ಶಿವದೀಕ್ಷೆ ಎಂದು ಹೇಳಿದ್ದಾನೆ. ( ಪುಟ ೮೪ ) " ಉಪರಿನಯನಂ ಯಸ್ಯತ್ರಿಲೋಚನೆ ಪರಮ ಶಿವೆವಿನಿಯೋಗ ದರ್ಶನಾತ್. "

ಶಿವಸುತರ ೬ ನೆಯ ಆಕ್ಷೇಪವು ಶ್ರೀಪತಿಯು ನಾಲ್ಕು ವರ್ಣಗಳನ್ನು ಒಪ್ಪಿಕೊಂಡು ಬ್ರಾಹ್ಮಣರನ್ನು ಉಳಿದ ಮೂರುವರ್ಣಗಳ ಗುರುಗಳೆಂದು ತಿಳಿದಿದ್ದಾನೆಂಬದು ಇದು ಸಹ ತಪ್ಪು ಗ್ರಹಿಕೆ. ಶ್ರೀಪತಿಯು ವಿಷ್ಣುವನ್ನೇ ಕ್ಷತ್ರಿಯನೆಂತಲೂ, ಬ್ರಹ್ಮನನ್ನು ವೈಶ್ಯನೆಂತಲೂ, ಇಂದ್ರನನ್ನು ಶೂದ್ರನೆಂತಲೂ, ಈಶ್ವರನನ್ನು ಬ್ರಾಹ್ಮಣನೆಂತಲೂ ವಿವರಿಸಿದ್ದಾನೆ. ಹೀಗೆ ವಿವರಿಸುವದರಲ್ಲಿ ನಾಲ್ಕು ವರ್ಣಗಳ ಹಾಸ್ಯಮಾಡುವದೇ ಶ್ರೀಪ

ತಿಯು ಉದ್ದೇಶವಾಗಿದೆ. ಶಿವನು ಎಲ್ಲ ದೇವತೆಗಳಲ್ಲಿ ಹಾಗು ವರ್ಣಗಳಲ್ಲಿ ಶ್ರೇಷ್ಠನೆಂಬುದಕ್ಕೆ ಶ್ರೀಪತಿಯು ಪರಾಶರ ಪುರಾಣದ ಆಧಾರ ಹೇಳಿದ್ದಾನೆ. ( ಭಾ ಪು. ೨೪೧ ) " ಸರ್ವೇಷಾಮೇವ ವರ್ಣಾನಾಂ ವರಿಷ್ಠಃ ಪರಮೇಶ್ವರಃ। " ವೀರಶೈವರು ನಾಲ್ಕು ವರ್ಣದವರಿಗಿಂತ ಶ್ರೇಷ್ಠರೆಂಬುದಕ್ಕೆ ಈ ಸಾಮ್ಯವನ್ನು ಉದಾಹರಿಸಲಾಗಿದೆ. ವಿಷ್ಣುವೇ ಶ್ರೇಷ್ಠ ದೈವವೆಂದು ವ್ಯಾಸನು ಕೈ ಎತ್ತಿ ಹೊಗಳಿದಾಗ ನಂದಿಯು ವ್ಯಾಸನ ತೋಳನ್ನು ಕತ್ತರಿಸಲು ಆಗ ವಿಷ್ಣುವು ವ್ಯಾಸನನ್ನು ಕುರಿತು ' ನಾನು ಜಗತ್ಕರ್ತನು ನನ್ನ ಕರ್ತನು ಮಹೇಶ್ವರನು.' [ ಅಹಮೇವ ಜಗತ್ಕರ್ತಾ ಮಮಕರ್ತಾ ಮಹೇಶ್ವರಃ ] ಎಂದು ಸ್ಕಂದ ಪುರಾಣದ ವಚನಗಳನ್ನು ಶ್ರೀಪತಿಯು ಉದಾಹರಿಸಿದ್ದಾನೆ. ( ಭಾ ಪು ೨೪೩ ) ಹಾಗು ಶಿವನು ಬ್ರಹ್ಮ, ವಿಷ್ಣು ಮುಂತಾದವರ ಉತ್ಪಾದಕನೆಂಬ ಅಥರ್ವವೇದದ ಆಧಾರ ಹೇಳಿದ್ದಾನೆ. ( ಭಾ. ಪು. ೨೪೨ ) " ಧ್ಯಾಯಿತೇಶಾನಂ ಸರ್ವಮಿದಂ ಬ್ರಹ್ಮ ವಿಷ್ಣು ರುದ್ರಾಸ್ತೆ ಸಂಪ್ರಸೂಯಂತೆ. " ಶ್ರೀಪತಿಯು ಮಧ್ವ ಪಂಥಿ ಬ್ರಾಹ್ಮಣರು ಮುದ್ರೆಯ ಬರೆಯನ್ನು ಮೈಮೇಲೆ ಹಾಕಿಕೊಳ್ಳುವ ರೂಢಿಯನ್ನು ನಿಂದಿಸಿ ಮೋಕ್ಷಕ್ಕೆ ಕಾರಣವಾದ ವಿಭೂತಿಯನ್ನು ಧರಿಸಬೇಕೆಂದು ವಿಧಿಸಿದ್ದಾನೆ. ಹಾಗು ವರ್ಣಾಶ್ರಮಿಗಳು ಯಜ್ಞಗಳನ್ನು ಮಾಡಿ ಸ್ವರ್ಗದಲ್ಲಿ ಕ್ಷಣಿಕಫಲವನ್ನನುಭೋಗಿಸಿ ಪುನಃ ಭೂಮಿಗೆ ಬರುವದನ್ನು ಅಲ್ಪಫಲವೆಂದೂ ವೀರಶೈವನು ಷಟ್ಸ್ಥಲಗಳನ್ನು ಸಾಧಿಸಿ ಶಿವನಲ್ಲಿ ಸಾಮರಸ್ಯ ಹೊಂದ.ವದು ಶ್ರೇಷ್ಠಫಲವೆಂತಲೂ ಶ್ರೀಪತಿಯು ಸಾರಿ ಹೇಳಿದ್ದಾನೆ. ( ಭಾ. ಪು. ೩೦೧ ) " ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ " " ಶಿವೈಕ ನಿಷ್ಠಾನಾಂ ಸ್ವರ್ಗನರಕ ಪ್ರಾಪ್ತಿರ್ನ ಸಂಭವತಿ ( ಭಾ. ಪು. ೩೦೬ ) ಆಗಮಗಳು ಸಾಮಾನ್ಯಶೈವ, ಮಿಶ್ರಶೈವ, ವೀರಶೈವ ಮುಂತಾದ ಶೈವಪ್ರಭೇದಗಳನ್ನು ವಿವರಿಸುವಂತೆ ಶ್ರೀಪತಿಯು ವಿಷಯಗಳ ಸ್ಪಷ್ಟೀಕರಣಕ್ಕಾಗಿ ನಾಲ್ಕು ವರ್ಣಗಳ ಮಾತನ್ನು ತೆಗೆದುಕೊಂಡಿದ್ದಾನೆಯೇ ಹೊರತು ಅವುಗಳನ್ನು ಮಾನ್ಯಮಾಡಿರುವದಿಲ್ಲ. ಬ್ರಾಹ್ಮಣರಿಗೂ ಲಿಂಗಧಾರಣವು ಅವಶ್ಯವೆಂಬ ಶ್ರೀಪತಿಯ ಹೇಳಿಕೆಯು ಲಿಂಗಧಾರಣದ ಮಹತ್ವವನ್ನು ಹೇಗೆ ತಿಳಿಸಿದೆ ಎಂಬದು ವ್ಯಕ್ತವಾಗುತ್ತದೆ.

ಶಿವಸುತರ ೬ ನೆಯ ಆಕ್ಷೇಪವು ಶ್ರೀಪತಿಯು ಸೂತಕಗಳನ್ನು ಮಾನ್ಯಮಾಡಿದ್ದಾನೆಂಬದು ಇದಾದರೂ ಅಗಾಧ ಪ್ರಮಾದ ಶ್ರೀಪತಿಯು

ದೀಕ್ಷೆಹೊಂದಿದವನಿಗೆ ಸೂತಕಗಳಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾನೆ. "ದೀಕ್ಷಿತಸ್ಯ ಸೂತಕಾದಿ ನಿಷೇಧ ದರ್ಶನಾತ್" (ಭಾ. ಪು. ೮) ಶಿವಸುತರ ಆಕ್ಷೇಪಗಳು ಭಾಷ್ಯದ ಅವಲೋಕನವಿಲ್ಲದೆ ಉತ್ಪನ್ನವಾಗಿವೆ ಯೆಂದು ಸ್ಪಷ್ಟವಾಗುತ್ತಿದೆ. ಶ್ರೀಹಯವದನರಾಯರು ಶ್ರೀಪತಿಯನ್ನು ವೀರಶೈವದ ಮಹಾ ಬೋಧಕನೆಂದು ಕರೆದಿದ್ದಾರೆ. ಮಹಾ ಪಂಡಿತ ಹಾಗೂ ಸೂಕ್ಷ್ಮ ವಿಚಾರಿಯಿದ್ದಾನೆಂದು ಹೊಗಳಿದ್ದಾರೆ. (ಭಾ ಭಾಗ ೧ ಪು. ೯,೩೫) ಶ್ರೀಪತಿಯ ತತ್ವಜ್ಞಾನವು ಅಗಾಧವಾಗಿದೆ. "ಅತೊ ಅನಂತೇನ ತಥಾಹಿ ಲಿಂಗಮ್" ಎಂಬ ಬ್ರಹ್ಮಸೂತ್ರವು ದೀಕ್ಷೆಯಿಂದ ಲಿಂಗಧರಿಸಬೇಕೆಂದು ವಿಧಿಸುತ್ತದೆಂದು ಪ್ರತಿಪಾದಿಸಿದ್ದಾನೆ. (ಅಧ್ಯಾಯ ೩ ಪಾದ ೨ ಸೂ ೨೫) "ಸರ್ವತಾಪಿ ತ ಏವೋಭಯಲಿಂಗಾತ್" ಸೂತ್ರವು ಇಷ್ಟ, ಪ್ರಾಣಲಿಂಗೋಪಾಸನೆಯನ್ನು ಬೋಧಿಸುತ್ತದೆಂದು ಸಿದ್ಧಮಾಡಿದ್ದಾನೆ. (ಅ. ೩ ಪಾ. ೪ ಸೂ ೩೪) ಇದೇ ೩ ನೇ ಅಧ್ಯಾಯದ ೩೫ ನೇ ಸೂತ್ರವು. ಜೀವವು ಬದ್ಧಸ್ವರೂಪವೆಂದೂ ಬ್ರಹ್ಮವು ಸ್ವತಂತ್ರವೆಂದೂ ಅರ್ಥಮಾಡಿರುವನು. ಆದರೆ ಈ ಜೀವವು ಕ್ಷಣಮಾತ್ರ ಬದ್ಧವಾಗಿದ್ದು ಪ್ರಾಪಂಚಿಕ ಬಂಧನವು ಕಳಚಿಹೋದಾಗ ಜೀವವು ಬ್ರಹ್ಮತ್ವ ಹೊಂದಿ ಭೇದವಿಲ್ಲದಂತಾಗುವದು. ಶ್ರೀಪತಿಯು ದ್ವೈತಾದ್ವೈತಗಳ ಕಲಹವನ್ನು ನಿಲ್ಲಿಸಿ ಅವೆರಡರ ಸಮನ್ವಯಮಾಡಿ ಶಿವಾದ್ವೈತವನ್ನು ಸಮರ್ಥಿಸಿದ್ದಾನೆ. ದ್ವೈತವು ಅಸ್ಮರಥಿ ಎಂಬವನಿಂದ ಪ್ರಾರಂಭವಾಯಿತು. ಹಾಲು ಮೊಸರುಗಳಲ್ಲಿ ಭೇದವಿರುವಂತೆ ಜೀವ, ಪರಮಾತ್ಮರಲ್ಲಿ ಭೇದವಿದೆಯೆಂದು ಅವನು ಹೇಳಿದನು. ಶ್ರೀಪತಿಯು ನದಿಗಳು ಅನೇಕ ಸ್ಥಳಗಳಲ್ಲಿ ಹುಟ್ಟಿದರೂ ಸಮುದ್ರಕ್ಕೆ ಸೇರಿ ಒಂದಾಗುವವೆಂದು ಹೇಳಿ ದ್ವೈತವನ್ನು ಖಂಡಿಸಿದ್ದಾನೆ.

ಅದ್ವೈತವು ಸಗುಣ ಪರಮಾತ್ಮನನ್ನು ಮಾಯಾಸ್ವರೂಪವೆಂದು ಭಾವಿಸುತ್ತದೆ. ಇದಕ್ಕೆ ಅದ್ವೈತವು ಕತ್ತಲೆಯಲ್ಲಿ ಹಗ್ಗವು ಹಾವಾಗಿ ತೋರುವ ದೃಷ್ಟಾಂತ ಕೊಡುತ್ತದೆ. ಇದನ್ನು ಖಂಡಿಸುವಾಗ ಶ್ರೀಪತಿಯು ಹಾವು ಇಲ್ಲದೇ ಇರುವಾಗ ಹಗ್ಗವನ್ನು ಹಾವೆಂದು ಭಾವಿಸುವದರಲ್ಲಿಯೇ ದೋಷವಿದೆಯೆಂದು ಹೇಳಿದ್ದಾನೆ. ಅದ್ವೈತದಲ್ಲಿ ಬ್ರಹ್ಮನೊಬ್ಬನೇ ಸತ್ಯ ಜಗತ್ತು ಮಿಥ್ಯ ಜಗತ್ತು ದೇವರ ಸೃಷ್ಟಿಸಿದ ವಸ್ತುವಾದ್ದರಿಂದ ಅದು ಮಿಥ್ಯವಲ್ಲವೆಂದು ಶ್ರೀಪತಿಯು ಸಿದ್ಧಮಾಡಿದ್ದಾನೆ, "ಬಹು

ಸ್ಯಾಂಪ್ರಜಾಯೇಯ " ಎಂಬ ವೇದವಾಕ್ಯವನ್ನು ಉದಾಹರಿಸಿ ಸೃಷ್ಟಿ ಕಾರ್ಯಕ್ಕಾಗಿ ಅನೇಕರೂಪಗಳನ್ನು ಪರಮಾತ್ಮನು ತಾಳುತ್ತಾನೆಂದು ಹೇಳಿದ್ದಾನೆ. ಕಾರಣವಿಲ್ಲದೆ ಕಾರ್ಯವಾಗದು ( *There can be no effect without a cause* ) ಎಂದು ಹೇಳಿ ಶಂಕರಾಚಾರ್ಯರ ಮಾಯಾವಾದವನ್ನು ಪ್ರತಿಭಟಿಸಿದ್ದಾನೆ. ವೈಯಕ್ತಿಕ ಆತ್ಮಗಳು ಪರಮಾತ್ಮನಿಗೆ ಸರಿಸಮಾನವಲ್ಲವೆಂದು ಹೇಳುವ ರಾಮಾನುಜಾಚಾರ್ಯರ ಸಿದ್ಧಾಂತವನ್ನು ಶ್ರೀಪತಿಯು ಖಂಡಿಸಿದ್ದಾನೆ. ವಿಶೇಷಾದ್ವೈತ ( ವೀರಶೈವ ಸಿದ್ಧಾಂತ) ದಲ್ಲಿ ಆತ್ಮ ಪರಮಾತ್ಮರಲ್ಲಿ ಐಕ್ಯವು ಸಾಧ್ಯವೆಂದು ಸಿದ್ಧ ಮಾಡಿದ್ದಾನೆ. " ಅಥಾತೋ ಬ್ರಹ್ಮಜಿಜ್ಞಾಸಾ " ಈ ಸೂತ್ರದಿಂದ ಅಂತಿಮ ಧ್ಯೇಯವು ಪೂರ್ಣವಾಗುವ " ಪರಮ ಶಿವಸಾಕ್ಷಾತ್ಕಾರೆ ತಾದಾತ್ಮ್ಯ ಪರಮ ಕಾರಣಂ " ಶಿವಸಾಕ್ಷಾತ್ಕಾರದಿಂದಲೇ ಅದು ಸಫಲವಾಗುವದೆಂದು ಶ್ರೀಪತಿಯ ಮತವು ( ಭಾ ಪು. ೧೦೧ )

ಷಟ್‌ಸ್ಥಲಗಳ ಧ್ಯೇಯವು ಬ್ರಹ್ಮನನ್ನು ಅರಿತುಕೊಳ್ಳುವದೂ ಮತ್ತು ಬ್ರಹ್ಮನೇ ಆಗುವದೂ ಇದೆ ಶ್ರೀಪತಿಯು ಸಾಂಖ್ಯದರ್ಶನದ ಕರ್ತೃವಾದ ಕಪಿಲನ ಹಾಗು ವೈಶೇಷಿಕದ ಕರ್ತೃವಾದ ಕಣಾದನ ಮತವೆಂದರೆ ಜಡದಿಂದ ಜೀವ ಹುಟ್ಟುವದೆಂಬದನ್ನು ಖಂಡಿಸುತ್ತ ಚೇತನಾ ರಹಿತವಾದ ಜಡವಸ್ತುವಿನಿಂದ ಜ್ಞಾನಯುಕ್ತವಾದ ಜೀವವು ಹುಟ್ಟಿಸಲ್ಪಡಲಾರದೆಂದು ತಾರ್ಕಿಕ ಪದ್ಧತಿಯಿಂದ ಸಿದ್ಧಮಾಡಿದ್ದಾನೆ ಶ್ರುತಿಗಳಲ್ಲಿ ಮಾಯೆಯೆಂಬ ವಸ್ತುವಿನ ಹೆಸರೇ ಇಲ್ಲ ಶಿವಶಕ್ತಿಯೇ ಮಾಯೆ ಸಗುಣ ಪರಮಾತ್ಮನು ಸಾಕ್ಷಾತ್ಕಾರಕ್ಕೆ ಸಾಧ್ಯನು. ಶಂಕರಾಚಾರ್ಯರ ನಿರ್ಗುಣ ಪರಮಾತ್ಮನು ವಿಚಾರಕ್ಕೆ ನಿಲುಕದವನು. ಭಕ್ತಸ್ಥಳದಲ್ಲಿಯ ದಾಸೋಹಂ ಭಾವನೆಯಲ್ಲಿ ಕೊನೆಗಾಣುತ್ತದೆ. ಆತ್ಮಗಳು ಅಸಂಖ್ಯ ಹಾಗು ಪರಸ್ಪರ ಭಿನ್ನವಾದವು. ಆತ್ಮವು ಪರಶಿವನ ಅಂಶವಿರುವಂತೆ ವಿಭುವೂ ಸಹ ಇರುವದು. ಗೌತಮನ ನ್ಯಾಯ ಸಿದ್ಧಾಂತದಲ್ಲಿಯ ಅಣುಗಳು ಕ್ಷಣಿಕ ಹಾಗು ಅಚೇತನವಾಗಿದ್ದು ಜಗತ್ತಿನ ನಿರ್ಮಾಣಕ್ಕೆ ಅಣುಗಳು ಕಾರಣವಿರಲಾರವೆಂದು ಹೇಳಿ ಶ್ರೀಪತಿಯು ನ್ಯಾಯಸಿದ್ಧಾಂತವನ್ನು ಖಂಡಿಸಿದ್ದಾನೆ. ಬೌದ್ಧ ಸಿದ್ಧಾಂತದಲ್ಲಿರುವ ಮರಣಾಧೀನ ಆತ್ಮ ಮತ್ತು ಅಜ್ಞೇಯ ಪರಮಾತ್ಮ ಕಲ್ಪನೆಗಳನ್ನೂ, ಜೈನರ ಸ್ಯಾದ್ವಾದ ಅಂದರೆ ಏಕಕಾಲದಲ್ಲಿ ಒಂದು ವಸ್ತುವಿನ ಇರುವಿಕೆ ಮತ್ತು ಇಲ್ಲದಿರುವಿಕೆಯು

ಅಸಂಗತ ತತ್ತ್ವವನ್ನು ಶ್ರೀಪತಿಯು ಖಂಡಿಸಿದ್ದಾನೆ. ಬೇಕು ಕತ್ತಲೆಗಳು ಒಂದೇ ಸ್ಥಳದಲ್ಲಿ ಒಂದೇಕಾಲದಲ್ಲಿರಲಾರವೆಂದು ಹೇಳಿದ್ದಾನೆ. ಹೀಗೆ ಎಲ್ಲ ಸಿದ್ಧಾಂತಗಳನ್ನು ಖಂಡಿಸಿ ಶ್ರೀಪತಿಯು ವೀರಶೈವ ಸಿದ್ಧಾಂತವನ್ನು ಸ್ಥಾಪಿಸಿದ್ದಾನೆ. ದ್ವೈತಾದ್ವೈತ ಸಮನ್ವಯ ಮಾಡುವದರಲ್ಲಿ ಅಗಾಧ ಪಾಂಡಿತ್ಯ ತೋರಿಸಿದ್ದಾನೆ. ಈ ದ್ವೈತಾದ್ವೈತ ಸಮನ್ವಯ ಮಾಡಿದವರಲ್ಲಿ ಆಾಸ್ಯಕೃಷ್ಣ, ಭಟ್ಟ ಭಾಸ್ಕರ ಮುಂತಾದವರೂ ಇದ್ದಾರೆ. ಪಾಶ್ಚಾತ್ಯರಲ್ಲಿಯೂ ಸ್ಪಿನೋಜಾ ಎಂಬವನು ದೇವನೊಬ್ಬನೇಸ್ವಯಂಭು, ಪ್ರಕೃತಿ ಮತ್ತು ಪುರುಷರು ಆತನ ಗುಣವಿಶೇಷಗಳೆಂದು ಹೇಳಿದ್ದಾನೆ. ಪ್ಲೋಟಿನಸ್ ಎಂಬವನು ವಿಶ್ವದ ಅನಂತ ವಸ್ತುಗಳಲ್ಲಿ ದೇವನು ಅಂತರ್ಯಾಮಿಯಾಗಿದ್ದಾನೆಂದೂ ಹೇಳಿದ್ದಾನೆ. ಹೆಗೆಲ್ ಎಂಬವನು ದೇವನು ಪ್ರಕೃತಿ ಪುರುಷರೆಡರಲ್ಲಿಯೂ ವ್ಯಕ್ತವಾಗುತ್ತಾನೆಂದು ಹೇಳಿ ಪರಮಾತ್ಮನ ಹಾಗು ಜಗತ್ತಿನ ಸತ್ಯತ್ವವನ್ನು ಒಪ್ಪಿದ್ದಾನೆ. ಈ ಮತವು ಶ್ರೀಪತಿಯು ಭೇದಾಭೇದ ತತ್ವಕ್ಕೆ ಒಪ್ಪಿಗೆ ಕೊಟ್ಟಿದೆ ಟಿ. ಎಚ್. ಗ್ರೀನನು ದೇವನು ಸರ್ವಜ್ಞನೂ ಚಿನ್ಮಯನೂ ಇದ್ದು ಮನುಷ್ಯನು ಆ ದೈವೀ ಜ್ಞಾನದಲ್ಲಿ ಭಾಗಿಯಾಗಿದ್ದಾನೆಂದು ಹೇಳಿದ್ದಾನೆ. ಜಗತ್ತು ದೇವರಿಂದ ಭಿನ್ನವಲ್ಲವೆಂದು ಹೇಳಿದ್ದಾನೆ. ಬ್ರಾಡ್ಲೆ ಎಂಬವನು ಜಗತ್ತಿನ ಅಥವಾ ಸೃಷ್ಟಿಯ ಅನೇಕತ್ವವು ದೇವರ ಏಕತ್ವದಲ್ಲಿ ಬೆರೆಯುವದೆಂದು ಹೇಳಿದ್ದಾನೆ. ಹೆನ್ರಿಬರ್ಗಸನ್ನನು ದೇವನು ಜಗತ್ತಿನ ಸರ್ವ ವಸ್ತುಗಳಲ್ಲಿ ಅಡಗಿದ್ದಾನೆಂತಲೂ ಜೀವಾತ್ಮರ ಪ್ರೇರಕನಾಗಿರುವನೆಂತಲೂ ಭೇದಾಭೇದ ಸಿದ್ಧಾಂತವನ್ನೇ ಎತ್ತಿ ಹಿಡಿದಿದ್ದಾನೆ.

ಆದ್ದರಿಂದ ಶ್ರೀಪತಿಯು ತತ್ವ ಸಿದ್ಧಾಂತವು ಆಧುನಿಕ ತತ್ವವೇತ್ತರಿಗೂ ಮಾನ್ಯವಾಗಿದ್ದು ಭೇದಭಾವವನ್ನು ನಿಲ್ಲಿಸಿ ಅಭೇದ ಸ್ಥಾಪಿಸುವ ಮಹತ್ವವಾದ ತತ್ವವಾಗಿದೆ. ಆತನು ವೀರಶೈವ ಸಿದ್ಧಾಂತವನ್ನು ಭಾಷ್ಯರೂಪದಲ್ಲಿ ಅಗಾಧ ರೀತಿಯಿಂದ ಸಿದ್ಧಮಾಡಿರುವದೆಂದರೆ ವೀರಶೈವಕ್ಕೆ ಅವನು ಮಹದುಪಕಾರ ಮಾಡಿದ ಮಹಾ ವ್ಯಕ್ತಿ. ವೀರಶೈವ ಪಂಡಿತರ ತ್ರಯರಲ್ಲೊಬ್ಬ ಹಾಗು ವೀರಶೈವರಲ್ಲಿ ಮೊದಲನೆಯ ಶ್ರೇಷ್ಠ ಭಾಷ್ಯಕಾರ. ಈತನಿಗೆ ವೀರಶೈವ ಸಮಾಜವು ಋಣಿಯಾಗಿದೆಯೆಂದು ಹೇಳಲು ನನಗೆ ತುಂಬಾ ಆನಂದವೆನಿಸುತ್ತದೆ.

# ಷಟ್ ಸ್ಥಲಗಳೂ ಏಕೋತ್ತರ ಶತಸ್ಥಲಗಳೂ

## ಪ್ರಸಾದಿಸ್ಥಳ

( ಲೇಖಾಂಕ ೪ )

(ಲೇ:- ಶ್ರೀಯುತ ಬಸವಪ್ಪಾ ಚನ್ನಪ್ಪಾ ಪಟ್ಟೇದ ಮಂಟಮುರಿ ಬೆಳಗಾಂವ)



ಇದು ಷಟ್‌ಸ್ಥಲಗಳಲ್ಲಿ ಮೂರನೆಯ ಸ್ಥಳವು. ಪ್ರಸಾದ+ಇ= ಪ್ರಸಾದಿ ಎಂದಾಗಿದೆ. ಇದರ ಅರ್ಥವು ಪ್ರಸಾದ ಸ್ವರೂಪವಾದವನು ಇಲ್ಲವೆ ಪ್ರಸಾದ ಪಡೆಯಲಿಕ್ಕೆ ಆರಂಭಿಸಿದವನು ಎಂದಾಗುವದು. ಈ ಮೂರನೆಯ ಸ್ಥಳದಲ್ಲಿ ಪ್ರಸಾದ ಪಡೆಯಲುಜ್ಜುಗಿಸುವವನು ಎಂದರ್ಥ ಮಾಡುವದೇ ವಿಹಿತವಾಗಿದೆ. ಆಚಾರತ್ರಯ (ಧರ್ಮಾಚಾರ ಭಾವಾಚಾರ ಜ್ಞಾನಾಚಾರ ) ಗಳು ನೆಲೆಗೊಂಡ ಮಹೇಶ್ವರನೇ ಮುಂದೆ ಪ್ರಸಾದಿಯಾಗುವನು ಪ್ರಸಾದವೆಂದರೆ ಶಿವ, ಲಿಂಗ, ಜಂಗಮ, ಪರಮಾತ್ಮ, ಈ ಸ್ಥಿತಿಯನ್ನು ಹೊಂದಲು ಅಪೇಕ್ಷಿಸಿದರೆ, ಪ್ರಸಾದಿಯಾಗಬೇಕೆಂದು ಇಷ್ಟಪಟ್ಟಂತೆ ಆಯಿತು. ಇಂತಹ ಪ್ರಸಾದಿಯಾಗಬೇಕಾದರೆ ಆತನು ಏನೇನು ಸಂಪಾದಿಸಬೇಕೆಂಬುದನ್ನು ಆಲೋಚಿಸುವದು ಉಚಿತವು.

ಸಿದ್ಧಾಂತ ಶಿಖಾಮಣಿಯಲ್ಲಿ—“ ನಿರ್ಮಲೋ ಮನಸೊ ಲಿಂಗಂ ಪ್ರಸಾದ ಇತಿ ಕಥ್ಯತೆ ।” ಎಂದು ಹೇಳಿದೆ. ಮನಸ್ಸು ನಿರ್ಮಲವಾಗುದರ ಚಿನ್ಹವೇ ಪ್ರಸಾದವು ಎಂದು ಇದರ ಅರ್ಥ. ನಿರ್ಮಲವಾಗುವದೆಂದರೆ ಅಜ್ಞಾನವನ್ನು ಬಿಟ್ಟುಕೊಡುವದು. ಮನವು ಸಂಸಾರದ ವಿಷಯಗಳತ್ತ ಹೊರಳಿ, ಅವನ್ನು ಅತೀವವಾಗಿ ಇಚ್ಛಿಸುವದೇ ಅಜ್ಞಾನವು. ಅವುಗಳಲ್ಲಿ ತೀರ ಸಿಕ್ಕುಬೀಳುವದೇ ಮರುಳುತನವು. ಈ ಮಲವು ಆಣವ ಮಾಯಾ ಕಾರ್ಮಿಕವೆಂದು ಮೂರು ತೆರನಾಗಿದೆ. ತಾನು ಅಲ್ಪನು. ಶಿವನು ದೊಡ್ಡವನು. ತನಗೂ ಅವನಿಗೂ ಮಹದಂತರ. ಅವನ ಕೃಪೆ

ಯಿಂದಲೇ ನಾನು ಬಾಳುವದು." ಇತ್ಯಾದಿ ಹೀನತ್ವದ ಕಲ್ಪನೆಯು ನಮ್ಮಲ್ಲಿ ಮನೆಮಾಡಿಕೊಂಡಿದೆ. ಇದು ಮೊದಲು ದೂರಾಗಬೇಕು. ಇದೇ ಆಣವ ಮಲವು.

ಮಾಯಾಮಲವೆಂದರೆ ವಿಷಯಗಳಲ್ಲಿಯೇ ಸುಖವಿದೆ. ಅವನ್ನು ಹೆಚ್ಚೆಚ್ಚು ಪಡೆದು ಭೋಗಿಸಿದಷ್ಟು ನಮಗೆ ಅಧಿಕ ಸುಖವಿದೆ ಎಂಬ ಅಜ್ಞಾನವೇ ಮಾಯಾ ಮಲವು. ಹೊನ್ನು ಹೆಣ್ಣು ಮಣ್ಣು ಮಂತಾದವುಗಳ ಬಲೆಯಲ್ಲಿ ಸಿಕ್ಕು ಮನುಷ್ಯನು ಚೂರು ಚೂರಾಗುವನು. ಅವು ಸುಖದ ಅಭಾಸನನ್ನು ತೋರಿ ಲಯವಾಗುವವು. ಈ ಹೆತ್ತತನವನ್ನು ದೂರ ಮಾಡದಿದ್ದರೆ ಮನುಷ್ಯನಿಗೆ ನಿಜವಾದ ಸುಖವು ದೊರೆಯಲಾರದು

ಕಾರ್ಮಿಕ ಮಲವೆಂದರೆ ಕರ್ಮಯೋಗದಿಂದ ನಾವು ಪದರದಲ್ಲಿ ಕಟ್ಟಿಕೊಳ್ಳುವ ದೋಷ. ನಾವು ಮಾಡುವ ಪ್ರತಿಯೊಂದು ಕಾರ್ಯದಲ್ಲಿ ಒಳಿತು ಕೆಡಕುಗಳನ್ನು ಕಲ್ಪಿಸುತ್ತೇವೆ. ಈ ಪಾಪ ಪುಣ್ಯಗಳೇ ಜೀವನನ್ನು ಪುನಃ ಪುನಃ ತರುತ್ತವೆ. ಒಮ್ಮೆ ಜನ್ಮಿಸಿದೊಡನೆ ಪರಿಪರಿಯ ಕಷ್ಟಗಳೆಲ್ಲ ಬೆನ್ನು ಹತ್ತುವವು. ಇವೇ ಕಾರ್ಮಿಕ ಮಲವೆಂದು ಹೇಳಲ್ಪಡುವವು. ಇದೇ ಅತ್ಯಂತ ಅಗಾಧವಾದ ದುಷ್ಟ ಮಲವಾಗಿದೆ. ತ್ರಿಪುಟಿ ಸಂಧಿಸದೆ ಇದು ಹೊಂಟು ಹೋಗಲಾರದು. ತ್ರಿಪುಟಿಯೋಗವಾಗುವದೆಂದರೆ, ಕೊಡುವವನೂ, ಪಡೆಯುವವನೂ ಕೊಡಲ್ಪಡುವ ವಸ್ತುವೂ ಈ ಮೂರೂ ಶಿವರೂಪವೇ ಎಂದರಿಯುವದು.

ಈ ಮೂರು ತೆರನಾದ ಮಲಗಳಿಂದ ಮನವು ದೂರವಿರಬೇಕೆದಂರೆ ಅಂದು ಲಿಂಗದಲ್ಲಿ ನಿರತವಾಗಬೇಕು. ನಿರ್ಮಲವಾಗುವದೆಂದರೂ ಒಂದೇ ಲಿಂಗದಲ್ಲಿ ನಿರತವಾಗುವದೆಂದರೂ ಒಂದೇ.

ಬಸವಣ್ಣನವರ ಸೂತ್ರ:—"ಆಧಿ ವ್ಯಾಧಿಗಳು ನಷ್ಟವಾಗದನ್ನಕ್ಕ ಪ್ರಸಾದಿ ಎಂತೆಂಬೆ?" ಆಧಿ ಎಂದರೆ ಮನಸ್ತಾಪ. ವ್ಯಾಧಿ ಎಂದರೆ ಶಾರೀರಿಕ ತಾಪ, ಇಲ್ಲವೆ ಬೇನೆ ಬೇಸರಿಕೆಗಳು. ಇವು ಇರುವತನಕ ಭಕ್ತನು ಪ್ರಸಾದಿಯಾಗಲಾರನು. ಪ್ರಸಾದಿಯಾಗಬೇಕಾದರೆ ತನ್ನಲ್ಲಿ ನಿಜವಾಗಿ

ಶಿವನೇ ವಾಸಿಸುತ್ತಿದ್ದು ಅಲ್ಲಿ ಬೇರೆ ಯಾವ ವಸ್ತುವೂ ಇಲ್ಲ. ಹೀಗಿದ್ದರೂ ನಾವು ಅಹಂಕರಿಸಿ, ಯಾವಾಗಲೂ "ನಾನು ನಾನು" ಎಂದು ಬಡಕೊಳ್ಳುತ್ತೇವೆ. ಆದರೆ ಈ "ನಾನು" ಎಂಬುದು ಇಲ್ಲೇ ಇಲ್ಲ. ದೇಹವನ್ನೇ ನಾನು ಎಂದು, ಅಜ್ಞಾನದಿಂದ ಪ್ರೇರಿತರಾಗಿ ನಾವು ವರ್ತಿಸುತ್ತೇವೆ. ಇದನ್ನು ಪ್ರೇರಿತರಾಗಿ ನಾವು ವರ್ತಿಸುತ್ತೇವೆ. ಇದನ್ನು ಪ್ರಸಾದಿಯು ಶಿವನಿಗೆ ಅರ್ಪಿಸಿಬಿಡಬೇಕು. ಕಾಯಾರ್ಪಿತವೆಂದರೂ ಇದೇ. ಜೀವ, ದೇಹ, ಮನ ಇಂದ್ರಿಯ ಮೊದಲಾದುವೆಲ್ಲ ಒಳಗಿನ ಶಿವನವೇ ಆಗಿರುತ್ತವೆ. ಈ ದೇಹವೇ ನನ್ನದಲ್ಲವಾದಮೇಲೆ ಅದಕ್ಕೆ ಬರುವ ವಿವಿಧ ವ್ಯಾಧಿಗಳಿಗೂ ನನಗೂ ಸಂಬಂಧವಿರುವ ಕಾರಣವಿಲ್ಲ. ಮನಕ್ಕೆ ಆಧಿಗಳುಂಟಾದರೂ ಅವು ನನಗೇಕೆ ತಗಲುವವು.? ಎಲ್ಲ ಶಿವನವೇ. ಈ ತೆರದ ಭಾವನೆಯು ಪ್ರಸಾದಿಯಲ್ಲಿರದಿದ್ದರೆ ಅವನು ಪ್ರಸಾದಿಯೇ ಅಲ್ಲವೆಂದು ಅಣ್ಣನ ಮೇಲಿನ ಸೂತ್ರದ ಸಾರಾಂಶವು.

ಅಕ್ಕನವರ ಮಾತು — "ನಾನು ಅಚ್ಚ ಪ್ರಸಾದಿ ನಿಚ್ಚ ಪ್ರಸಾದಿ ಎಂದು ಹೇಳುತ್ತ ಜಲಕ್ಕೆ ಕನ್ನವನಿಕ್ಕುವರನೇನೆಂಬೆ ಚನ್ನ ಮಲ್ಲಿಕಾರ್ಜುನ" ಅಚ್ಚ ಪ್ರಸಾದಿ = ಶುದ್ಧ ಶಿವಸ್ವರೂಪಿ; ನಿಚ್ಚ ಪ್ರಸಾದಿ = ಶಾಶ್ವತ ಶಿವಸ್ವರೂಪಿ; ಹೀಗೆ ಬಾಯಿಂದ ಹೇಳಿಕೊಳ್ಳುತ್ತ ತಿರುಗಾಡುವ ಪ್ರಸಾದಿಗಳು ತುಂಬಿದ್ದಾರೆ ಆದರೆ ಅವರಿಗೆ ಪ್ರಸಾದವೆಂದರೆ ಶಿವನು ಸದಾ ಪವಿತ್ರನು. ಎಂಬುದರ ಅರಿವು ತಿಲಮಾತ್ರವೂ ಇರುವದಿಲ್ಲ. ನೀರಿಲ್ಲದೆ ಅವರ ಯಾವ ಕ್ರಿಯಯೂ ಸಾಗುವದಿಲ್ಲ. ಇದನ್ನೇ ಜಲಕ್ಕೆ ಕನ್ನವನಿಕ್ಕಿ ಎಂದು ಹೇಳಿದ್ದಾರೆ. ಈ ಶಿವರೂಪಿಗಳು ಹೊಳೆ, ಹಳ್ಳ, ಬಾವಿ, ಕುಂಡ, ಒರತೆ ಮೊದಲಾದ ಜಲಾಶಯದೊಳಗಣ ನೀರನ್ನು ಬಲಾತ್ಕಾರದಿಂದ ಎತ್ತಿ ತಮ್ಮ ವಶಕ್ಕೆ ತಕ್ಕೊಳ್ಳುವರು. ಇದು ಆ ಜಲಾಶಯಗಳ ಮೇಲೆ ಕನ್ನವಿಕ್ಕಿದಂತೆಯೇ ಸರಿ. ಆ ನೀರಿನಿಂದಲೇ ತಾವು ಮಡಿಯಾಗುವರು. ಆ ನೀರಾದರೂ ಎಲ್ಲಿ ಪವಿತ್ರವಿರುವದು? ಜಲಚರಾದಿ ಅನೇಕ ಪ್ರಾಣಗಳ ಮಲಮೂತ್ರದಿಂದ ಅಶುದ್ಧವಾಗಿರುವವು. ಇಂಥ ಹೇಯವಾದ ನೀರಿಲ್ಲದಿದ್ದರೆ ಈ ಶಿವರೂಪಿಗಳಿಗೆ ನಿರ್ವಾಹವೇ ಇಲ್ಲ. ತಾವು ಸ್ವತಃ ಎಂದೂ ಅಳಿಯದಂತಹ ಪವಿತ್ರ ಸ್ವರೂಪ ತಾಳಿ

ದುದು ಇವರ ಗಮನಕ್ಕೆ ಬಾರದಿರುವದು ಅತ್ಯಂತ ಶೋಚನೀಯವೆಂದು ಅಕ್ಕನವರು ವ್ಯಸನಪಟ್ಟಿರುವರು. ಪಂಚ ಸೂತಕಗಳನ್ನು ಕಳೆಯಲಿಕ್ಕೆ ಇವರಾದರೂ ಭವಿಗಳಂತೆ ನೀರನ್ನೇ ಬಳಸುತ್ತಿರುವರು. ತಾವೇ ಪರಮ ಪುತ್ರರಾಗಿರುವಾಗ ಈ ನೀರು ತಮ್ಮನ್ನೇನು ಪಾವನಗೊಳಿಸುವದು ? ನೀರು ಮೇಲೆ ಹತ್ತಿದ ಹೊಲಸು ಕಳೆಯಲು ಮಾತ್ರ ಉಪಯೋಗಿ. ಆದರೆ ಒಳಕ್ಕೆ ಮನಕ್ಕೆ ತಗಲಿದ ಸೂತಕಗಳನ್ನೆಂತು ಕಳೆಯುವದು ? ಮುಡಿತಂ ನಿರ್ಮಲ ಚಿತ್ತವೆ !" ಎಂದು ಸೋಮೇಶ್ವರ ಶತಕ ಕರ್ತರು ಸಾರಿ ಸಾರಿ ಹೇಳಿದ್ದಾರೆ.

ಚನ್ನಬಸವಣ್ಣನವರು ಏಕೋತ್ತರ ಶತಸ್ಥಲಗಳಲ್ಲಿ ಪ್ರಸಾದಿಯ ಬಗ್ಗೆ ಏನು ನಿರೂಪಿಸಿರುವರೆಂಬುದನ್ನು ಮುಖ್ಯವಾಗಿ ನೋಡುವದಕ್ಕೆ.

ಪ್ರಸಾದಿಯ ಅಂಗಸ್ಥಲಗಳು ಒಂಬತ್ತು ಎಂದು ಹೇಳಲ್ಪಟ್ಟಿವೆ. ಅಂಗಸ್ಥಲದ ಮೊದಲನೆಯ ಸ್ಥಳವೇ ಪ್ರಸಾದಿಸ್ಥಲವು. ಇದರಲ್ಲಿ ಪ್ರಸಾದಿಯು ಅನುಸರಿಸತಕ್ಕ ರೀತಿ ನೀತಿಗಳು ಬಂದಿವೆ. ಅವುಗಳ ಸಾರಾಂಶವು ಮೇಲೆ ಬಂದು ಹೋಗಿವೆ. ಅದರ ತರುವಾಯ ಗುರು ಮಹಾತ್ಮ್ಯಾದಿ ೬ಮಹಾತ್ಮ್ಯಗಳು ಬಂದಿವೆ. ಮಹಾತ್ಮ್ಯ ಎಂದರೆ = ಮಹಾತ್ಮ್ಯ (ಮಹಾತ್ಮತ್ವ ಇಲ್ಲವೆ ಮಹಾತ್ಮತನ) ಈಗ ಗಾಂಧೀಜಿಯವರ ಯೋಗ ದಿಂದ ಮಹಾತ್ಮಶಬ್ಧವು ಎಲ್ಲರ ಪರಿಚಯದ್ದಾಗಿದೆ. ಅನುಯಾಯಿಗಳು ಅವರವರ ಮಹಾತ್ಮ್ಯವನ್ನರಿಯುವದರಿಂದ ಅವರಮೇಲೆ ಒಂದು ಬಗೆಯ ಹೊಣೆಗಾರಿಕೆಯು ಪ್ರಸ್ಥಾಪಿತವಾಗುವದು. ಆದುದರಿಂದ ಇಲ್ಲಿ ಮಹಾತ್ಮ್ಯವೆಂದರೆ ಹೊಣೆಗಾರಿಕೆ ಎಂದು ಗ್ರಹಿಸುವದೇ ಯುಕ್ತವಾಗಿದೆ.

ಗುರು ಮಹಾತ್ಮ್ಯ — ಮನುಷ್ಯನು ಜಗತ್ತನ್ನೆಲ್ಲ ನಿರೀಕ್ಷಿಸಿ, ಅದರ ಜ್ಞಾನ ಮಾಡಿಕೊಂಡಿದ್ದರೂ ಬಹುಶಃ ನಿಜವಾಗಿ ತಾನು ಯಾರು ? ಎಂಬುದನ್ನು ಮಾತ್ರ ಅರಿತಿರುವದಿಲ್ಲ. ಈ ಅರಿವು ಸರಿಯಾಗಿ ಉಳ್ಳ ವ್ಯಕ್ತಿಯೇ ಗುರುವಾಗಲು ಯೋಗ್ಯನು. ಸಂಸಾರದಲ್ಲಿ ತರತರದ ಕಷ್ಟ ನಷ್ಟಗಳನ್ನೂ ದುಃಖವನ್ನೂ ಸೋಸಿ ಅದರ ಅನುಭವ ಪಡೆದಿರುವ ಮನುಷ್ಯನಿಗೆ ಅದರ ವಿಷಯವಾಗಿ ಹೈಯ ಬುದ್ಧಿಯು ಹುಟ್ಟಿ ತನಗೆ ನಿಜವಾದ ಸುಖದ ಮಾರ್ಗವನ್ನು ತೋರಿಸುವ ಗುರುವನ್ನು ಆತನು

ತಾಂಡುಕಹತ್ತುವನು. ಅಂಥವನಿಗೆ ತನ್ನ ಸ್ವರೂಪವನರಿತು, ಆ ಮಾರ್ಗ ವನ್ನು ಶಿಷ್ಯನಿಗೂ ತೋರಿಸುವ ಗುರು ಮಹಾತ್ಮನು ದೊರೆಯುವದು. ಕಠಿಣ. ಇಂತಹ ಗುರುಗಳು ಕೀರ ವಿರಳ. ಇವರ ಯೋಗ್ಯತೆಯನ್ನು ಅಷ್ಟಿಷ್ಟೆಂದು ಬಣ್ಣಿಸುವದು ಶಕ್ಯವಿಲ್ಲ. ಹೀಗೆ ಆತನ ಮಹಾತ್ಮ್ಯವಿರು ವದು. ಇದನ್ನರಿಯುವದರಿಂದ ಭಕ್ತನ ಮೇಲೆ ಒಂದು ದೊಡ್ಡ ಹೊಣೆ ಗಾರಿಕೆಯು ಬೀಳುವದು. ಆ ಗುರುವು ಹೇಳಿದಂತೆ ನಡೆಯುವದು ಶಿಷ್ಯೋದ್ಧಾರಕ್ಕೆ ಕಾರಣವಾಗಿದೆ. ನಡೆಯುವದಾಗದಿದ್ದರೆ ಗುರುವನ್ನು ಸ್ವೀಕರಿಸುವ ಗದ್ದಲಕ್ಕೆ ಹೋಗಬಾರದು. ಇರಲಿ, ಗುರುವಿನ ಆಜ್ಞೆಯಂತೆ ಅನಿಷ್ಟ ಕ್ರಿಯೆಗಳನ್ನೆಲ್ಲ ತೊರೆದು ಜನ್ಮನೀಗುವವರೆಗೆ ಇಷ್ಟಕಾರ್ಯಗ ಳನ್ನೇ ಮಾಡುತ್ತಿರಬೇಕು.

ಲಿಂಗ ಮಹಾತ್ಮ್ಯ :- ಲಿಂಗವೆಂದರೆ ಸುಜ್ಞಾನವು ಇದು ಪ್ರಾಣ ಲಿಂಗದ ಅರ್ಥವು. ಪ್ರಾಣಲಿಂಗವೇ ಹೊರಗೆ ಶಿಷ್ಯನ ಕೈಗೆ ಗುರುವಿ ನಿಂದ ಪ್ರಾಪ್ತವಾಗಿ ಇಷ್ಟಲಿಂಗವೆನಿಸುತ್ತದೆ. ಇವೆರಡೂ ಲಿಂಗಗಳಿಗೆ ಆಧಾರವಾಗಿ, ಭಾವಲಿಂಗವೆಂಬ ಶಿವಚಿತ್ಕಳಾಲಿಂಗವು, ಮಸ್ತಕದಲ್ಲಿರು ವದು. ಮೇಲೆ ಹೇಳಿದ ಗುರುವು ಶಿಷ್ಯನಿಗೆ ಈ ಲಿಂಗತ್ರಯವನ್ನು ಪೂಜಿ ಸಲಿಕ್ಕೆ ಹೇಳುವನು. ಆದರಿಂದ ಸದಾಚಾರ ಸುಜ್ಞಾನ ಸಮ್ಯಗ್ ಜ್ಞಾನಗಳು ಉಂಟಾಗುವದರಿಂದ ಶಿಷ್ಯನ ಉದ್ಧಾರವಾಗುವದು. ಆದುದ ರಿಂದ ಲಿಂಗಮಹಾತ್ಮ್ಯವು ಅಧಿಕವಾದದು. ಲಿಂಗಪಡೆದು ಅದನ್ನು ಧರಿಸಿ ಪೂಜಿಸಹತ್ತಿದಮೇಲೆ ಸುಜ್ಞಾನಹೊಂದಿ ಆ ಮೇರೆಗೆ ನಡೆಯುವ ಹೊಣೆಯು ಭಕ್ತನನ್ನು ಬಿಟ್ಟದ್ದಲ್ಲ.

ಜಂಗಮ ಮಹಾತ್ಮ್ಯ :— ಜಂಗಮವು ಅನುಭವಜ್ಞಾನವಾಗಿದೆ ಜೀವ ಶಿವ ಜಗತ್ತು ಈ ಮೂರರ ಸತ್ಯಜ್ಞಾನವೇ ಅನುಭವಜ್ಞಾನವು. ಜಂಗಮನು ಭಕ್ತನಿಗೆ ಆವನು ಯಾರು, ಎಂಬುದರ ಅರಿವನ್ನು ಮಾಡಿ ಕೊಡುವನು. ಇದರಿಂದ ಮಾನವನ ದುಃಖಗಳೆಲ್ಲ ನಿರ್ವರ್ತನೆಹೊಂದಿ ಅವನು ಲಿಂಗಾಂಗ ಸಾಮರಸ್ಯಹೊಂದುವನು. ಆದುದರಿಂದ ಜಂಗಮ ಮಹಾತ್ಮ್ಯವು ಮಿಗಿಲಾದುದೆಂದು ಬೇರೆ ಹೇಳುವ ಕಾರಣವೇ ಇಲ್ಲ.

ಲಿಂಗಧಾರಿಯು ಜಂಗಮನನ್ನು ಹೊಂದಬೇಕು. ಆತನ ಯೋಗದಿಂದ ತಾನಾರೆಂಬುದನ್ನರಿತು, ಶಿವಾನುಭಾವಿಯಾಗುವದು, ಆತನ ಮೇಲೆ ಬರುವ ಭಾರವೆಂದರಿಯಬೇಕು.

ಶರಣಸ್ಥಿತಿಗೆ ಮುಟ್ಟಿದವನೇ ಜಂಗಮನು. ಅವನು ಭಕ್ತೋದ್ಧಾರಾರ್ಥವಾಗಿಯೇ ಜನ್ಮವೆತ್ತಿರುವನು. ಮೊದಲು ಅವನಿಗೆ ದೀಕ್ಷೆಯನ್ನು ಮಾಡಿ, ಬಳಿಕ ಶಿವಮಾರ್ಗವನ್ನೆಲ್ಲ ಸಾಂಗವಾಗಿ ತಿಳಿಸಿಕೊಟ್ಟು ಕೊನೆಗೆ ಅವನು ತಾನಾರೆಂಬುದನ್ನರಿಯುವಂತೆ, ಅವನಿಗೆ ಮಹಾವಾಕ್ಯದ್ವಾರವಾಗಿ 'ಅರಿವೇ ನೀನಿರುವೆ' ಎಂಬುದನ್ನು ಬೋಧಿಸಿ, ಶಿಷ್ಯನನ್ನು ಪ್ರತಿ ಜಂಗಮನನ್ನೇ ಮಾಡಿ ಬಿಡುವನು. ಇಂತಹ ಗುರುಜಂಗಮರ ಮಹಾತ್ಮ್ಯವನ್ನು ವಾಚಕರೇ ತಮ್ಮಲ್ಲಿ ಊಹಿಸಿನೋಡಿದರೆ, ತಾನೇ ಹೊಳೆಯುವದು.

ಪ್ರಸಾದ ಮಹಾತ್ಮ್ಯ :— ಪರಮಾತ್ಮ ಸ್ವರೂಪವೇ ಪ್ರಸಾದವು. ಪ್ರಕೃಷ್ಟವಾಗಿ ಪರಮಾವಧಿ ಸೂಕ್ಷ್ಮಸ್ಥಿತಿಗೆ ಮುಟ್ಟಿದ, ಸತ್ ಸ್ವರೂಪವೇ ಪ್ರಸಾದವು. 'ತತ್' ಎಂಬುದು ಪರವಸ್ತುವೇ 'ಸತ್' ಎಂದು ಹೇಳಲ್ಪಟ್ಟಿದೆ. ಇಂತಹ ಪ್ರಸಾದಕ್ಕೆ ಸರಿಯಾದುದು ಜಗದಲ್ಲಿ ಇನ್ನೊಂದಿಲ್ಲ. ಗುರು, ಲಿಂಗ, ಜಂಗಮಗಳೆಲ್ಲ ಪ್ರಸಾದದಲ್ಲಿಯೇ ಪರ್ಯವಸಾನ ಗೊಳ್ಳುವವು. ಪ್ರಸಾದವೆಂಬ ಮಹಾಗ್ನಿಯ ತುಷಾರಗಳಿಂದಲೇ ಮನುಷ್ಯನೂ ಜಗದೊಳಗಿನ ಪ್ರತಿಯೊಂದು ವಸ್ತುವೂ, ಉದ್ಭವಿಸಿದವು ಮಾನವನ ಪ್ರಾಣಲಿಂಗವು ಇಂತಹದೊಂದು ಕಿಡಿಯಿಂದಲೇ ಆಗಿರುವದು. ಅದನ್ನು ಅಂತರಾತ್ಮವೆಂದು ಕರೆಯುವರು. ಪರಮಾತ್ಮವಸ್ತುವಿನಿಂದ ಈ ಅಂತರಾತ್ಮನು ಹೊರಟು ಬಂದಿರುವದರಿಂದ, ಅದೇ ಜಂಗಮವೆಂದು ಹೇಳಲ್ಪಡುವದು. ಇದು ತೀರ ಜ್ಞಾನ ಸ್ವರೂಪವು. ಹೀಗೆ ಇವಕ್ಕೆಲ್ಲ ಆಧಾರವಾಗಿರುವ ಪ್ರಸಾದದ ಹೆಚ್ಚಳತನವನ್ನು ಯಾರು ತಾನೇ ವರ್ಣಿಸುವರು ? ಪ್ರಸಾದದ ಸ್ಥಿತಿರೂಪವನ್ನು ಒಳಿತಾಗಿ ಗಮನಿಸಿದ ಭಕ್ತನು ತಾನು ಆ ಪರಮಾತ್ಮಸ್ವರೂಪನೇ ಆಗಿ, ಮಹಾನುಭಾವಿ ಎನಿಸಲು ಆದಷ್ಟು ಹೆಣಗಾಡುವದು ಆತನ ಮೇಲಿನ ಹೊಣೆಗಾರಿಕೆಯೇ ಆಗಿದೆ.

ಶರಣ ಮಹಾತ್ಮ್ಯ : ಪ್ರಸಾದಲಿಂಗಕ್ಕೆ ಸಂಪೂರ್ಣ ಶರಣು ಹೋದ ಭಕ್ತನೇ ಶರಣನು. ಷಡಂಗದಲ್ಲಿ ಐದನೆಯ ಅಂತಸ್ತನ್ನೇರಿದ ಅಂಗನೇ ಶರಣನು. ಅಂಗ ಸತಿ ಲಿಂಗ ಪತಿ ಎಂಬ ದೃಢವಾದ ಭಾವನೆಯಿಂದ, ಲಿಂಗಪತಿಯಲ್ಲಿ ಬೇರಿಲ್ಲದಂತೆ ಬೆರೆದುಹೋದ ಸದ್ಭಕ್ತನೇ ಈ ಶರಣನು. ಈತನ ಕ್ರಿಯಾಭಾವ ಜ್ಞಾನಗಳೆಲ್ಲ ನಿಷ್ಪತ್ತಿಯಾಗಿ, ಆಕಾಶದಂತೆ ಸಹಜ ಪ್ರಕಾಶ ಗುಡುತ್ತಿರುವವು. ಈತನೇ ಮೀರಿದ ಸತ್ಪುರುಷನು. ಈತನು ನಿಂತಸ್ಥಲವೇ ಮಹಾಕ್ಷೇತ್ರವೆನ್ನಿಸುವದು, ಮುಟ್ಟಿದ ಜಲವೇ ಮಹತ್ತರ ತೀರ್ಥವೆನ್ನಿಸುವದು. ಅವನು ಆಡಿದುದೇ ಜ್ಞಾನ, ಮಾಡಿದುದೇ ಪ್ರಮಾಣ, ಈತನೇ ಪ್ರತ್ಯಕ್ಷ ಶಿವನು. ಈತನಿಂದಲೇ ಲೋಕವೆಲ್ಲ ಪಾವನವಾಗುವದು. ಈ ವಿಧವಾಗಿ ಶರಣನ ಮಹಾತ್ಮ್ಯವೇ ಹೇಳಲಸದಳವಾಗಿದೆ. ಶರಣನ ಮಹಾತ್ಮ್ಯದ ಅಲೌಕಿಕತ್ವಕ್ಕೆ ಬೆರಗಾಗಿ ತನ್ನಲ್ಲಿ ಅಂತಹ ಮಹಾತ್ಮ್ಯವು ಶಕ್ಯವಿದ್ದಷ್ಟಾದರೂ ಬರಬೇಕೆಂದು ಭಕ್ತನು ಪ್ರಯತ್ನಪಟ್ಟು ಶರಣಸಂಪ್ರದಾಯವನ್ನು ಸಾಗಿಸಿಕೊಂಡು ಹೋಗುವದು ಅವನ ಕರ್ತವ್ಯವು.

ಭಕ್ತ ಮಹಾತ್ಮ್ಯ:— ನೂರೊಂದು ಸ್ಥಲಗಳಲ್ಲಿ ಮೊದಲಿನ ಎಂಟು ಸ್ಥಲಗಳನ್ನು ಏರಿದ ಈಶ್ವರನಿಂದಲೇ ಭಕ್ತತ್ವಕ್ಕೆ ಆರಂಭವಾಗುವದು. ಮುಂದೆ ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಎಂಬ ಬೇರೆ ಬೇರೆ ಹೆಸರಿನಿಂದ, ಆ ಭಕ್ತನು ಷಡಂಗ ಭಕ್ತನಾಗುವನು. ಕೊನೆಗೆ ಲಿಂಗಾಂಗ ಸಾಮರಸ್ಯ ಹೊಂದಿ ಜನ್ಮೋದ್ಧಾರ ಸಾಧಿಸುವನು ಮೊದಲು ಮೊದಲು ಭಕ್ತತ್ವಪಡೆದು ತದನುಸಾರವಾಗಿ ಉತ್ತರೋತ್ತರ ಅಭಿವೃದ್ಧಿ ಪಡೆಯುವದರಿಂದಲೇ ಭವಪಾಶ ವಿಮುಕ್ತನಾಗುವನು. ಈ ಭಕ್ತತ್ವವೇ ಎಲ್ಲಕ್ಕೂ ಕಾರಣವಾಗಿರುವದರಿಂದ, ಭಕ್ತ ಮಹಾತ್ಮ್ಯವನ್ನು ಅಧಿಕವೆಂದು ಹೇಳಿದ್ದರೆ, ನಿವಾರ್ಯವೇ ಇಲ್ಲ.

ಭಕ್ತರೇ ಪ್ರಮಥರ ಅನುಯಾಯಿಗಳು. ಪ್ರಮಥರು ಸಂಶೋಧನ ಪೂರ್ವಕ ನಿರ್ದಿಷ್ಟ ಮತವನ್ನು ನಿರ್ಣಯಿಸಿಟ್ಟಿರುವರು. ಅದನ್ನು ಕಾಯ್ದುಕೊಂಡು ಹೋಗುವದಲ್ಲದೆ, ಬೆಳೆಯುವಂತೆ ಯತ್ನಮಾಡುವದು ಅವರ ಮೇಲಿನ ಹೊಣೆಯು. "एकेन जन्मना मुक्तिः" ಎಂಬುದನ್ನು ಅವರು ಪ್ರತ್ಯಕ್ಷ ಪಡೆಯಬೇಕು.

ಪ್ರಸಾದಿಯು ಈ ಮೇರೆಗೆ ಅಂಗಸ್ಥಲಗಳನ್ನು ಸಂಪಾದಿಸಿ ಮಹತ್ವವನರಿಯಬೇಕು. ಬಳಿಕ ಶಿವಲಿಂಗದಲ್ಲಿ ಬೆರೆಯತಕ್ಕ ೯ ಲಿಂಗಸ್ಥಳಗಳಲ್ಲಿ ಆಚರಿಸುವದದೆ. ಅವು ಯಾವವೆಂದರೆ :—

(೧) ಕಾಯಾನುಗ್ರಹ :— ಮನುಷ್ಯದೇಹವು ಸುಮ್ಮನೇ ಪ್ರಾಪ್ತವಾದುದಲ್ಲ. ಬಹು ಹೆಚ್ಚಾದ ಬೆಲೆಕೊಟ್ಟು ಈ ಕಾಯವೆಂಬ ಹಡಗವು ಕೊಳ್ಳಲ್ಪಟ್ಟಿದೆ. ಆದುದರಿಂದ ಭವಸಾಗರವೆಂಬ ಅಪರಿಮಿತ ದುಃಖಸಮುದ್ರವನ್ನು ದಾಟಲಿಕ್ಕೆ ಅದರ ಸಹಾಯದಿಂದ ಜನ್ಮವಿರುವವರೆಗೆ ಶಕ್ಯವಿದ್ದ ರೀತಿಯಿಂದ ಸಾಹಸ ಪಡುವದು ಅವಶ್ಯವಾಗಿದೆ. ಆದಕಾರಣ ಮನಬಂದಂತೆ ನಡೆದು ಆ ಕಾಯ ನೌಕೆಯನ್ನು ಹಾಳು ಮಾಡಕೂಡದು. ಅದರ ಅನುಗ್ರಹವನ್ನು ಪಡೆದು, ಅಂದರೆ ಅದನ್ನು ತನ್ನ ಉದ್ಧಾರಕ್ಕೆ ಅನುಕೂಲ ಪಡಿಸಿಕೊಂಡು ಹೋಗುವದು ಜ್ಞಾನಿಯಾದ ಮನುಷ್ಯ ಪ್ರಾಣಿಯ ಕರ್ತವ್ಯವು. ದುಷ್ಕೃತ ಕಾರ್ಯಗಳಿಂದ ದೂರವಿದ್ದು, ಸುಕೃತ ಕಾರ್ಯಗಳತ್ತ ಹೊರಳಿ, ಬಲು ಎಚ್ಚರದಿಂದ ನಡೆಯುವಂತೆ, ಅದನ್ನು ತಿದ್ದಬೇಕು. ಇದನ್ನೇ ನಮ್ಮವರು ಅನಿಷ್ಟಕಾರ್ಯಗಳನ್ನು ತ್ಯಜಿಸಿ ಇಷ್ಟಕಾರ್ಯಗಳನ್ನೇ ಮಾಡುತ್ತಿರಬೇಕೆಂದು ಹೇಳಿದ್ದಾರೆ.

(೨) ಇಂದ್ರಿಯಾನುಗ್ರಹ :— ಪಂಚ ಜ್ಞಾನೇಂದ್ರಿಯಗಳೂ ಪಂಚ ಕರ್ಮೇಂದ್ರಿಯಗಳೂ. ಕೂಡಿ ದಶೇಂದ್ರಿಯಗಳಿರುತ್ತವೆ. ಅವನ್ನು ಅಲ್ಲದ ವಿಷಯಗಳನ್ನು ಬಯಸದಂತೆ, ಹಾಗೂ ಅವುಗಳತ್ತ ಸಾಗದಂತೆ, ಆಧೀನ ಪಡಿಸಿಕೊಳ್ಳುವದೇ ಇಂದ್ರಿಯಾನ ಗ್ರಹವು. ಇಲ್ಲಿ ಮುಖ್ಯವಾಗಿ ಮನೋನಿಗ್ರಹವು ಬೇಕಾಗಿರುತ್ತದೆ. ಮನವನ್ನು ಲಿಂಗಕ್ಕೆ ನೀಡುವದೆಂದರೂ, ಇದೇ।

(೩) ಪ್ರಾಣಾನುಗ್ರಹಃ— ಇಲ್ಲಿ ಪ್ರಾಣವೆಂದರೆ ಪಂಚ ಪ್ರಾಣಗಳೆಂದೂ ಇಲ್ಲವೆ, ಪ್ರಾಣಲಿಂಗವೆಂದೂ ಅರ್ಥಮಾಡಬಹುದು. ಇದು ಪ್ರಾಣದಲ್ಲಿ ಲಿಂಗವನ್ನು ಅರಿಯುವದಾಗಿದೆ. ಹೀಗೆತಿಳಿದರೆ, ಆ ಸುಜ್ಞಾನವನ್ನು ನಿಷ್ಕಲಂಕವಾಗಿ, ಹೊಂದಬೇಕು. ಇನ್ನು ಪಂಚ ಪ್ರಾಣಗಳೆಂದರೆ, ಆ ಪ್ರಾಣವಾಯುದಲ್ಲಿಯೇ ಮನೋಮಯವು ಉದ್ಭವಿಸುವದೆಂಬುದು

ಸ್ಪಷ್ಟವೇ ಇದೆ. ಈ ಮನೋಮಯತ್ವದಲ್ಲಿಯೇ ವಿಜ್ಞಾನ ಮಯತ್ವವು ಪ್ರಕಟವಾಗುವದು. ಆದುದರಿಂದ ಪ್ರಾಣಾನುಗ್ರಹ ಪಡೆವುದೆಂದರೆ, ತನ್ನಲ್ಲಿ ಹುಟ್ಟುವ ಮನವನ್ನು ಅದರಲ್ಲಿ ಜನಿಸುವ ವಿಜ್ಞಾನಕ್ಕೆ ವಶವರ್ತಿಯಾಗಿ ಮಾಡುವದೆಂದು ತಿಳಿಯಬೇಕು.

(೪) ಕಾಯಾರ್ಪಿತ:— ಕಾಯಾನುಗ್ರಹವನ್ನು ಪಡೆದ ನಂತರ, ಅದನ್ನು ತನ್ನಲ್ಲಿರುವ ಶಿವಲಿಂಗಕ್ಕೆ ಅರ್ಪಿಸಬೇಕು. ಹೊರಕಾಯವು ಒಳಗಿನ ಲಿಂಗ ಶರೀರವೇ ಬೆಳೆದು ಉಂಟಾದುದಿರುತ್ತದೆ. ಈ ಲಿಂಗ ಶರೀರವನ್ನೇ ಲಿಂಗವೆಂದು ಬಗೆದಿದ್ದರೆ ಮನಬುದ್ಧಿಗಳ ಸಮಾವೇಶ ವಾದರೂ ಲಿಂಗತನುವಿನಲ್ಲಿದೆ ಎಂಬುದನ್ನು ಲಕ್ಷಿಸಬೇಕು. ಈ ಲಿಂಗ ವನ್ನೇ ತನ್ನಲ್ಲಿರುವ ಶಿವಲಿಂಗವೆಂದು ತಿಳಿದಿರುವದರಿಂದ ಸ್ಥೂಲ ದೇಹ ವನ್ನು ಶಿವಲಿಂಗಾರ್ಪಿತ ಮಾಡುವದೇ ಸ್ವಾಭಾವಿಕವಾಗುವದು.

(೫) ಕರಣಾರ್ಪಿತ:— ಇಂದ್ರಿಯಗಳಿಗೆ ಕರಣಗಳೆಂತಲೂ ಹೆಸ ರಿರುವದು ಕಾಯಾರ್ಪಿತ ವಾದಮೇಲೆ ಅದರಲ್ಲಿಯೇ ಅಡಕವಾಗಿರುವ ಜ್ಞಾನೇಂದ್ರಿಯಗಳಾದರೂ ಶಿವಲಿಂಗಕ್ಕೆ ಸಲ್ಲುವದು ಯೋಗ್ಯವೇ ಆಗಿ ರುವದು. ಇವು ಬಹಿರಿಂದ್ರಿಯಗಳಿದ್ದಂತೆ ಅಂತರಿಂದ್ರಿಯಗಳಾಗಿಯೂ ವ್ಯವಹರಿಸುವವು. ಇವೆಲ್ಲ ಲಿಂಗಮುಖವಾಗಿರುವದೇ ಸಮಂಜಸವು. ಹೀಗಿರುವದೇ ಕರಣಾರ್ಪಿತವೆನ್ನಿಸುವದು.

(೬) ಭಾವಾರ್ಪಿತ:— ಭಾವವೆಂದರೆ ಭಾವನೆ. ಇದು ಮನಕ್ಕೆ ಸಂಬಂಧಿಸಿದುದು. ಅದರಲ್ಲಿ ಸದ್ಭಾವನೆಗಳೆಂದು ದ್ವಿವಿಧವಾಗಿರುವದು. ಸ್ವಾರ್ಥ ಮೂಲಕವಾಗಿ ಮನುಷ್ಯನಲ್ಲಿ ದುರ್ಭಾವನೆಗಳು ಉದಯಿಸುತ್ತವೆ. ಅದು ಸರಿಯಾದುದಲ್ಲ. ಭಾವನೆಗಳು ಲಿಂಗ ಮುಖವಾಗಿ ವರ್ತಿಸಹತ್ತಿ ದರೆ ಅವು ಸದ್ಭಾವನೆಗಳಾಗುವವು. ಆದುದರಿಂದ ಅವು ಲಿಂಗಾರ್ಪಿತ ವಾಗುವಂತೆ ಭಕ್ತನು ಮಾಡಲೇಬೇಕು.

(೭) ಶಿಷ್ಯ:— ಕಾಯಾರ್ಪಿತವಾದಮೇಲೆ ಅದು ಲಿಂಗದೇವನ ಆಳಾಯಿತು. ಆಗ ಅದು ಶಿವಲಿಂಗದ ಇಚ್ಛೆಯ ವಿರುದ್ಧ ನಡೆಯಕೂಡದು ಯಾವಾಗಲೂ ಆತನ ಶಿಷ್ಯನಾಗಿ ಅವನಿಗೆ ವಿಹಿತವೆನಿಸುವಂತೆ ದೇಹವು ಆಜ್ಞಾಂಕಿತವಾಗಬೇಕು.

(೮) ಶುಶ್ರೂಷಾ :— ದಶೇಂದ್ರಿಯಗಳೆಲ್ಲ ಅರ್ಪಿತವಾಗಿರುವ ದರಿಂದ, ಅವಾದರೂ ಲಿಂಗದೇವನ ಶುಶ್ರೂಷೆಯನ್ನು ಮನಃಪೂರ್ವಕ ವಾಗಿ ಮಾಡಬೇಕು. ಹೀಗೆ ಆಚರಿಸಿದಾಗಲೇ ಅವು ಅರ್ಪಿತವಾದುದು ಸಾರ್ಥಕವಾದುದು.

(೯) ಸೇವ್ಯ :— ಈ ವಿಧವಾಗಿ ಕಾಯ, ಕರಣ ಭಾವಗಳೆಲ್ಲ ಜ್ಞಾನಾರ್ಪಿತವಾಗಿ ಅವು ಭಕ್ತೋದ್ಧಾರಾರ್ಥವಾಗಿ, ವರ್ತಿಸಹತ್ತಿದರೆ ಆತನು ಸರ್ವರಿಗೂ ಪೂಜ್ಯನೂ ಅನುಕರಣೀಯನೂ ಆಗಿ ಸೇವ್ಯನಾ ಗುವನು.

ಈ ಮೇರೆಗೆ ಲಿಂಗಸ್ಥಳಗಳೆನ್ನಿಸುವವು. ಇನ್ನು ಮೊದಲುಕೊಟ್ಟ ಗುರು ಮಹಾತ್ಮ್ಯಾದಿ ಸ್ಥಳಗಳಿಂದ ಈ ಲಿಂಗ ಸ್ಥಳಗಳಂತೆ ಆಚರಿಸಲಿಕ್ಕೆ ಅದು ಹೇಗೆ ಸಹಾಯವಾಗುವದೆಂಬುದನ್ನು ನೋಡುವಾ

ತನು ಜ್ಞಾನೇಂದ್ರಿಯ ಪ್ರಾಣಮನಗಳು ಆರು ತರದ ಮಹಾತ್ಮ್ಯ ವರಿತು ಹೊಣೆಗೊಳಗಾದ ಮೇಲೆ ಅವುಗಳ ಅನುಗ್ರಹ ದೊರೆಯುವದ ರಲ್ಲಿ ಸಂದೇಹವೇ ಇಲ್ಲ. ದೊರೆತೇ ದೊರೆಯುವದು. ತರುವಾಯ ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತ ಮಾಡಿದರೆ, ಅವು ಶಿವಲಿಂಗದ ಶಿಶ್ರೂಷವಾಗಿ, ಭಕ್ತನು(ಪ್ರಸಾದಿಯು)ಸಮಾಜಕ್ಕೆ ಅನುಕರಣೀಯ ನಾಗುವನು.

ಹೀಗೆ ಪ್ರಸಾದಿತ್ವವಿಡಿದವನು ತನ್ನಲ್ಲಿರುವ ಶಿವಲಿಂಗವನ್ನು ನಿರ ಹಂಕಾರ ಹಸ್ತದಲ್ಲಿ ಧರಿಸಿ ಪೂಜಿಸಬೇಕು ಆಗ ಅವನು 'ನಾನು' ಎಂಬು ದನ್ನೂ ಪೂರಾ ಕಳೆದು ಬಿಟ್ಟಿರುವದರಿಂದ, ಲಿಂಗಾರ್ಪಿತ ಮಾಡದೆ ಅಂಗಕ್ಕೆ ಯಾವ ಪದಾರ್ಥವನ್ನೂ ಸ್ವೀಕರಿಸಬಾರದೆಂಬುದು ಸಾಹಜಿಕ. ಈ ಅರ್ಪಣೆಗೆ ಸಹಾಯವಾಗಲೆಂದು ಕೊನೆಗೆ, ಷಡ್ಲಿಂಗಾರ್ಪಿತ ಪಟ ವನ್ನು ಕೊಟ್ಟಿದೆ. ಇದಲ್ಲದೆ ಪ್ರಸಾದಿಯು ಆ ಕಾಲದಲ್ಲಿ ವಿದ್ಯಾ ಕಲೆ ಯನ್ನು ಹಸ್ತಗತಮಾಡಿಕೊಳ್ಳುವದಾದರೂ ಅವಶ್ಯ. (ಶಿವಲಿಂಗದ ಶಕ್ತಿಯು ಇಚ್ಛಾಶಕ್ತಿಯು. ಈ ಇಚ್ಛೆಯೆಲ್ಲ ವಿಷಯ ವಿಮುಖವಾಗಿ ಆತ್ಮ ವಿದ್ಯಾಸಂಪಾದನೆಯಲ್ಲಿ ರೂಪಾಂತರಗೊಳ್ಳಬೇಕು. ಆತ್ಮ ವಿದ್ಯೆ ಯಜ್ಞಾನವಿಲ್ಲದೆ ನಿರಹಂಕಾರಿಯಾಗಿ ವರ್ತಿಸುವದು ಶಕ್ಯವಿಲ್ಲ. ನಿರ

ಹಂಕಾರ ಹಸ್ತಕ್ಕೂ ವಿದ್ಯಾಕಲೆಗೂ ನಿಕಟವಾದ ಸಂಬಂಧ ಉಂಟು. ಇಲ್ಲಿ ವಿದ್ಯೆಯೆಂದರೆ ಹೊಟ್ಟೆ ಹೊರಕೊಳ್ಳುವ ತರತರದ ಲೌಕಿಕ ವಿದ್ಯೆಗಳಲ್ಲ, ಆತ್ಮದ ವಿದ್ಯೆಯು. ಆತ್ಮಜ್ಞಾನವನ್ನು ಸರಿಯಾಗಿ ಪಡೆದು ಭಕ್ತನು ವೀರ (ವಿದ್ಯೆಯಲ್ಲಿ ರಮಿಸುವವ) ನಾಗಬೇಕು. ಇಂತಹರು ಕ್ರಿಯಾ ಜ್ಞಾನಗಳೆರಡನ್ನೂ ಸಮತೂಕದಲ್ಲಿಟ್ಟುಕೊಂಡು ನಡೆಯುವರು. ಬರಿಯ ಜ್ಞಾನದಿಂದಲೇ ಮೋಕ್ಷವಾಗುವದೆಂದು ಮರುಳು ವೇದಾಂತಿಗಳು ತಿಳಿಯುವರು. ಅದನ್ನು ಶಿವಶ್ರಪ್ರಮಥರು ಅಲ್ಲಗಳೆದಿದ್ದಾರೆ. ಪಕ್ಷಿ ಹಾರಲಿಕ್ಕೆ ಹೇಗೆ ಎರಡು ರೆಕ್ಕೆಗಳು ಅವಶ್ಯವಿರುವವೋ ಅದರಂತೆ ಭಕ್ತನಿಗೆ ಭವಸಾಗರವನ್ನು ಹಾರಿ ಹೋಗಲಿಕ್ಕೆ ಈ ಕ್ರಿಯಾ ಜ್ಞಾನಗಳೆಂಬೆರಡು ರೆಕ್ಕೆಗಳು ಬೇಕೆಂಬುದು ಅವರ ದೃಢವಾದ ಮತವುಂಟು.

ಇದೇ ಮೇರೆಗೆ ಮತ್ತು ಬಗೆಬಗೆಯ ರೀತಿಯಿಂದ ಪ್ರಸಾದಿಯು ಸುಸಿದ್ಧನಾಗಬೇಕು. ಏಕೆಂದರೆ ಮುಂದಿನ ಸ್ಥಳಗಳಿಗೆಲ್ಲ ಅವನೇ ತಳಹದಿಯಾಗಿರುವನು.

ಪ್ರಸಾದಿತ್ವದ ವಿಡಂಬನೆ:— ಈ ರೀತಿಯಾಗಿ ಅದೆಷ್ಟು ಜನ ಪ್ರಸಾದಿಗಳು ವರ್ತಿಸುವರೋ ತಿಳಿಯದ ವಿಷಯವಾಗಿದೆ. ಅಪರೂಪವಾಗಿ ತೀರ ಸ್ವಲ್ಪಜನರು ಇಂತಹರಿರಬಹುದು. ಉಳಿದವರೆಲ್ಲ ಬರೇ 'ನಾವು ಪ್ರಸಾದಿಗಳು' ಎಂದು ಹೇಳಿಕೊಳ್ಳುತ್ತ ಕರದಿಷ್ಟಲಿಂಗದ ಪೂಜೆ ಸ್ನಾನಾಡಂಬರ, ಪಾದೋದಕ ಪ್ರಸಾದಗಳ ಅರ್ಥಹೀನ, ಔಪಚಾರಿಕ ಕ್ರಿಯೆ ಮುಂತಾದವುಗಳಲ್ಲಿಯೇ ವ್ಯವಹರಿಸಿ ಬಳಲುತ್ತಿರುವರು. ಇವುಗಳಿಂದ ಸೇವೆ, ಅನುನಯ, ಸಮತ್ವ ಸತ್ಯಗಳು ತಲೆದೋರದಿದ್ದರೆ ಇದೆಲ್ಲ ವ್ಯರ್ಥವೇ ಸರಿ. ಪ್ರಸಾದವೆಂದು ಮುಂದಿನ ಎಡೆಯನ್ನು ಅಭಿಮಂತ್ರಿಸಿ ಹಸ್ತ ಸ್ಪರ್ಶಮಾಡಿ, ಇಲ್ಲವೆ ಜಂಗಮನೆಂಬ ಮತ್ತೊಬ್ಬ ವ್ಯಕ್ತಿಯಿಂದ ಮಾಡಿಸಿ ಯಥೇಚ್ಛವಾಗಿ ಇಲ್ಲವೆ ಮಿತಿಯಿಂದ ಭೋಗಿಸಿ ಮನಬಂದಂತೆ ನಡೆಯುವರು. ಅವರ ಆದಾವ ಆಶೆ ಆಕಾಂಕ್ಷೆಗಳೂ, ಲಯವಾಗುವದಂತಿರಲಿ, ತುಸು ಮಟ್ಟಿಗಾದರೂ ಕಡಿಮೆಯಾಗಿರುವದಿಲ್ಲ. ಬೇಕಾದ ಅಲ್ಲದ ಕಾರ್ಯಗಳಿಗೆಸಹ, ಇವರು ಕೈ ಹಾಕುವರು ಇಂತಹರನ್ನು ಜನರು ವಿಭೂತಿಗಳ್ಳರು ಎಂದು ಜರೆದು ನುಡಿಯುತ್ತಿರುವರು.

## ಸ್ಥಳಕೂಡುವಿಕೆ

ಇದೊಂದು ವಿರಕ್ತರಿಗೆ ಆಗತಕ್ಕ ಸಂಸ್ಕಾರವು. ಇದ ದಮೇಲೆಯೇ ಅವರು ತಮ್ಮ ಬಳಗದಲ್ಲಿ ಸೇರುವರು. ತನ್ನಲ್ಲಿ ತಾನೇ ಸ್ವಸ್ಥನಾಗಿ ಯಾವ ವಿಚಾರಾಚಾರಗಳಿಲ್ಲದೆ ಸುಮ್ಮನಿರುವನ ಪರಲಿಂಗಕ್ಕೆ ಇಲ್ಲವೆ ಪರಶಿವನಿಗೆ ಸ್ಥಳವೆನ್ನುವರು. ಇದನ್ನೇ ವೇದಾಂತಿಗಳು ಪರಬ್ರಹ್ಮವೆಂದು ಕರೆದಿರುವರು. ಇಂತಹ ಸ್ಥಳವನ್ನು ಕೂಡುವದೆಂದರೆ ವಿರಕ್ತಸ್ವಾಮಿಗಳು, ಅದರೊಡನೆ ಸಮರಸಹೊಂದುವದು ಇಲ್ಲವೆ ಲೀನವಾಗುವದು ಎಂದರಿಯಬೇಕು. ಬರಿಯ ಸಂಸ್ಕಾರವನ್ನು ಹೊಂದಿದಾಕ್ಷಣಕ್ಕೇ ಇದು ತನ್ನಿಂದ ತಾನೇ ಸಿದ್ಧಿಸಲಾರದು. ಉದಾಹರಣಾರ್ಥವಾಗಿ ಒಕ್ಕಲಿಗನನ್ನು ತಕ್ಕೊಳ್ಳುವಾ. ಅವನೇನು ಭೂಮಿಯಲ್ಲಿ ಬರಿಯ ಕಾಳು ಬಿತ್ತಿದೊಡನೆಯೇ ಬೆಳೆ ಪಡೆಯುವದಿಲ್ಲ. ಅದರ ಜೋಪಾನೆಗಾಗಿ ಅವನು ಅನೇಕತರದ ಕಷ್ಟನಷ್ಟಗಳನ್ನು ಸೋಸಬೇಕಾಗುವದು. ಕಾವಲು ಮಾಡುವದು, ಕಸ ತೆಗೆಯುವದು, ಎಡೆ ಹೊಡೆಯುವದು. ನೆಲ ಪೊಳ್ಳುಮಾಡುವದು ರೋಗಗಳು ತಟ್ಟದಂತೆ ಎಚ್ಚರ ಪಡುವದು, ಪ್ರಾಣಿಗಳು ತಿಂದು ಕಡಿದು ನಾಶಮಾಡದಂತೆ ನೋಡಿಕೊಳ್ಳುವದು, ಹಕ್ಕಿ ಕಾಯುವದು, ಮಾಗಿ ಬಂದಮೇಲೆ ಕೊಯ್ದು ಗೂಡುಬಡಿದು ರಾಶಿಮಾಡುವದು, ಮುಂತಾದ ಕಾರ್ಯಗಳನ್ನೆಲ್ಲ ಬಹು ಎಚ್ಚರದಿಂದ ಮಾಡಿದಾಗ ಮಾತ್ರ ಆ ಬಿತ್ತಿದುದರ ಫಲ ಸಿಕ್ಕುವದು. ಈ ಸಂಗತಿಯನ್ನು ಸಂಸ್ಕಾರಹೊಂದತಕ್ಕ ಪ್ರತಿಯೊಬ್ಬನು ಒಳಿತಾಗಿ ಗಮನಿಸಬೇಕು. ಸ್ಥಳಕೂಡಿಸುವ ಸಂಸ್ಕಾರ ಜರುಗಿಸಿದಮೇಲೆ ಆ ಜರುಗಿಸಿದವರು ಸಂಸ್ಕಾರಹೊಂದಿದವನು ಓದಿ ಅಭ್ಯಸಿಸಿ ಮನನ ಮಾಡಿಕೊಂಡು ಜ್ಞಾನಯುಕ್ತರಾಗಿ ನಿಜವಾಗಿಯೇ ಸ್ಥಳದೊಡನೆ ಕೂಡಿ ವಿಲೀನವಾಗಲೆಂದು ಅವರಿಗೆ ಶ್ರೀ ಬಸವೇಶ್ವರ ವಚನ, ಶ್ರೀ- ಪ್ರಭುದೇವರ ವಚನ ಮುಂತಾದ ಗ್ರಂಥಗಳನ್ನು ಕೊಡುವರು. ಇದರ ಉದ್ದೇಶವು ಅವರು ಗ್ರಂಥಾಭಿರುಚಿಯನ್ನು ಹಚ್ಚಿಕೊಂಡು, ಮಹಾ ಜ್ಞಾನಿಗಳಾಗಲೆಂಬುದೇ ಇರುತ್ತದೆ.

ಇದರಂತೆಯೇ ಮಹೇಶ್ವರನು ಪ್ರಸಾದಿತ್ವದ ಸಂಸ್ಕಾರ ಹೊಂದಿದಮೇಲೆ ಅವನಿಗೆ ಅದು ಒಮ್ಮೆಲೇ ಪ್ರಾಪ್ತವಾಗುವದಿಲ್ಲ. ಆ ಬಗ್ಗೆ ಅವನೇನೇನು ಮಾಡಬೇಕೆಂಬುದನ್ನು ಮೇಲೆ ವಿಶದವಾಗಿ ಹೇಳಿರುತ್ತದೆ.

ಎಲ್ಲಕ್ಕೂ ಮೊದಲು ಅವನು ಆಚಾರ ಸಂಪನ್ನನೂ ಶಿವಮಾರ್ಗವನ್ನು ಸರಿಯಾಗಿ ಬಲ್ಲವನೂ ಆಗಿ, ಅಲಿಪ್ತ ಸಂಸಾರವನ್ನು ಅದು ಹೇಗೆ ಪಡೆಯಬೇಕೆಂಬುದನ್ನು ಚನ್ನಾಗಿ ಕಲಿಯಬೇಕು. ಅಂದರೆ ತನ್ನಲ್ಲಿ ಶಿವಲಿಂಗವೇ ಒಳಹೊರಗೆಲ್ಲ ವಾಸವಾಗಿದ್ದು ಅದೇ ಎಲ್ಲ ಬಗೆಯ ವ್ಯವಹಾರ ಮಾಡುವದು. ಈ ಗೃಹ ಸಂಸಾರವೂ ಸಹ ಅವನದೇ ಇರುವದು. ದೇಹ ಮನ ಕರಣೇಂದ್ರಿಯಗಳಾವವೂ ನನ್ನವಲ್ಲ. ಎಲ್ಲವೂ ಶಿವನವೇ ಇರುವವು. ನನ್ನದಾಗಲೀ ನಾನೆಂಬುದಾಗಲೀ ಅಲ್ಲಿ ಏನೇನೂ ಇಲ್ಲ. ಹೀಗಿದ್ದು ವಿನಾಕಾರಣ ನಾನು ಅಹಂಕಾರ ಮಮಕಾರಗಳಿಗೆ ಒಳಗಾಗಿ ಕ್ಲೇಶ ಪಡುತ್ತಿರುವೆನು ಆದಕಾರಣ ಈ ಎಲ್ಲ ಶಿವನ ಸೊನ್ನು ಅವನಿಗೇ ಸಲ್ಲಿಸಿ ತಾನು ಕೇವಲ ಆತನ ಶಿಷ್ಯನಾಗಿ ಸೇವಾ ಶುಶ್ರೂಷೆಯನ್ನು ಕೈಕೊಂಡು ನಿಶ್ಚಿಂತನಾಗಿರಬೇಕು. ಏನು ಕೆಟ್ಟರೂ ಹಾಳಾದರೂ ಅದಕ್ಕೆ ಶೋಕಿಸಬಾರದು. ಏಕೆಂದರೆ ಅವು ತನ್ನವು ಅಲ್ಲವೇ ಅಲ್ಲ. ಈ ವಿಧದ ವಿಚಾರಗಳನ್ನು ಅಳವಡಿಸಿಕೊಂಡು ಹಾಗೆ ನಡೆಯುವದು ಅವಶ್ಯವಿದೆ. ಇಲ್ಲದರೆ ಅವನು ಪ್ರಸಾದಿಯಾಗಲಾರನು.

ವಿರಕ್ತರು ಮೊದಲೇ ನಿಷ್ಪ್ರಪಂಚಿಗಳು ವೈರಾಗ್ಯಶೀಲರು. ಆ ಕಾರಣ ಅವರು ಕೂಡಲೆ ಮೀರಿದ (ಆಂತರಿಕ) ಕ್ರಿಯೆಗಳನ್ನು ಕೈಕೊಳ್ಳುವರು. ಪ್ರಸಾದಿಗಳು ಸಂಸಾರಿಗಳಾದರೂ ಅಲಿಪ್ತತೆಯನ್ನು ಸಾಧಿಸಿ ಅವೇ ಕ್ರಿಯೆಗಳನ್ನು ಆಶ್ರಯಿಸುವರು. ಇದರಿಂದ ಸ್ಥಳ ಕೂಡುವನು ಪ್ರಸಾದಿತ್ವದಂತಹದೊಂದು ಸಂಸ್ಕಾರವಿರುವದೆಂದು ಸ್ಪಷ್ಟವಿದೆ. ಪ್ರಾಣಲಿಂಗಿತ್ವವನ್ನು ಅವರು ಧರಿಸಲೇ ಬೇಕು. ಜಂಗಮ ಲಿಂಗದಲ್ಲಿ ಬೆರೆದಮೇಲೆ ವಿರಕ್ತರು ಸ್ವಯಜಂಗಮರಾಗುವರು. ಮುಂದೆ ಪ್ರಸಾದಲಿಂಗವನ್ನು ಆರಾಧಿಸಿ ಚರಜಂಗಮತ್ವವನ್ನು ಗಳಿಸುವರು. ಕಡೆಗೆ ಮಹಾಲಿಂಗದ ಪೂಜೆಯಿಂದ ಐಕ್ಯತ್ವ ಪಡೆದು ಪರಜಂಗಮರೆನ್ನಿಸುವರು. ಇದು ಜಂಗಮರ ಪರಿಯಾಯಿತು. ಇನ್ನು ಪ್ರಸಾದಿಯನ್ನು ನೋಡಿರಿ.

ಪ್ರಸಾದಿಯು ಜಂಗಮಲಿಂಗದ ಪೂಜೆಯಿಂದ ಕೊನೆಗೆ ಆದಿ ಪ್ರಸಾದಿ ಅಂತ್ಯ ಪ್ರಸಾದಿ, ಸೇವ್ಯ ಪ್ರಸಾದಿಯಾಗುವನು. ಇದೇ ಸ್ವಯಜಂಗಮತ್ವದ ಸ್ಥಿತಿಯು. ಇಲ್ಲಿ ಜಂಗಮತ್ವವೆಂದರೆ ಜ್ಞಾನಂತ್ಯತಿಶಯಾದ್ಯೇತು।

ಶಿವಪ್ರಕಾಶಕಂ । ಸ್ವಸ್ವರೂಪಶಯಾತೀತು। ಜಂಗಮಾ ಇತಿ ಕೀರ್ತಿತಾಃ ॥
ಎಂದು ಅರಿಯಬೇಕು ಏನಾ ಜೇರೆಯಿಂದನ್ನು ಗ್ರಹಿಸಕೂಡದು.

ತರುವಾಯ ಪ್ರಸಾದಲಿಂಗವನ್ನು ಪೂಜಿಸಿ ಒಲಿಸಿ ಅದರಲ್ಲಿ ಬೆರೆದು ಶರಣನಾಗುವನು. ಇದೇ ಚರಜಂಗಮತ್ವವಾಯಿತು. ಪ್ರಸಾದಲಿಂಗದಲ್ಲಿ ಬೆರೆದಮೇಲೆ ಮಹಾಲಿಂಗದಲ್ಲಿ ಬೆರೆಯುವದೇನೂ ಬೇರೆ ಹೊರಗಿರುವದಿಲ್ಲ. ಬಹುಶಃ ಎಲ್ಲವೂ ಅದರಲ್ಲಿಯೇ ಅಡಕವಾಗಿರುವದು. ಆದುದರಿಂದ ಶರಣನು ಸಹಜವಾಗಿಯೇ ಐಕ್ಯನೆನಿಸುವನು. ಇದೇ ಪರಜಂಗಮತ್ವದ ಸ್ಥಿತಿಯು. ಈ ರೀತಿಯಾಗಿ ಮುಂದೆ ವಿರಕ್ತ ಮೂರ್ತಿಯೂ ಪ್ರಸಾದಿಯೂ ಮುಂದುವರಿದು ಮಹಾಲಿಂಗದಲ್ಲಿ ಐಕ್ಯರಾಗುವರು. ಅದನ್ನು ವಿರಕ್ತರು ಸ್ಥಳ ಕೂಡುವದೆಂದೂ ಉಳಿದವರು ಅಂಗ ಲಿಂಗ ಸಾಮರಸ್ಯವೆಂದೂ ರೂಢಿಯಲ್ಲಿ ಹೇಳುವರು. ಷಟ್ ಸ್ಥಲ ಜ್ಞಾನವೇ ಎಲ್ಲರಿಗೂ ಉಕ್ತವಾಗಿದೆ. ಅದಕ್ಕೆ ಮೀರಿ ಮತ್ತಾವ ಜ್ಞಾನವೂ ಇಲ್ಲ, ಸ್ಥಳವೂ ಇಲ್ಲ. ಹೀಗಿದ್ದಮೇಲೆ ಮೇಲೆ ಕೊಟ್ಟಂತೆ ಹೆಸರುಗಳೇಕೆ ಭಿನ್ನ ಭಿನ್ನ ವಿರಾಪವೆಂದು ಶಂಕಿಸಬಹುದು. ವಿರಕ್ತರು ವೈರಾಗ್ಯಶೀಲರು ಇತರರು ಸಂಸಾರಿಗಳು. ಅವರು ಮೂರಕ್ಕೆ ಹೊರಗಾದವರು ಇವರು ಒಳಗಾದವರು ಅಂದರೆ ಅನುರಕ್ತರು. ಅಧರೂ ಅರಿಸ್ತರು. ಈ ತಾಂತಪ್ಯದ ಮೂಲಕವಾಗಿಯೇ ಬರಿಯ ಶಬ್ದಾಡಂಬರವನ್ನು ಮಾಡಿರುವರು. ನಿತ್ಯದ ವ್ಯವಹಾರದಲ್ಲಿ ಇಂತಹ ಅನೇಕ ಶಬ್ದಗಳಿರುತ್ತವೆ. ಇತರರು ತೀರಿದರೆ ಅವರು 'ದೇಹ ಬಿಟ್ಟರು' ಎಂದು ಅನ್ನುತ್ತಾರೆ. ಆದರೆ ಜಂಗಮರಿಗೆ ಹಾಗೆನ್ನದೆ ಅವರು ಲಿಂಗದೊಳಗಾದರು ಎನ್ನುತ್ತಾರೆ.

ಮೊದಲೇ ಮಹಾಲಿಂಗವು ಆಚಾರಾದಿ ಪಂಚಲಿಂಗಗಳ ಕೂಟವು; ತೀರ ಸೂಕ್ಷ್ಮವಾದುದು. ಅದರಮೇಲೆ ಶಿರಃಸ್ಥ ಚಂದ್ರಮಂಡಲ ಗತವಾದ ನಿಷ್ಕಲ ಲಿಂಗ, ನಿಃಶೂನ್ಯಲಿಂಗ, ನಿರಂಜನಲಿಂಗ, ಸ್ವಸ್ಥ (ನಿರ್ಬೈಲ) ಲಿಂಗವೆಂದು ನಾಲ್ಕು ಲಿಂಗಗಳಿರುವವೆಂದು ತಿಳಿಯುವರು. ಇವು ಕ್ರಮವಾಗಿ ಉನ್ಮನಿ (ಬ್ರಹ್ಮರಂಧ್ರ,) ಶಿಖಾ, ಪಶ್ಚಿಮ, ಅಣುಚಕ್ರಗಳಲ್ಲಿರುವವು. ನಿರ್ವಯಲ ಲಿಂಗವೇ ಸ್ಥಳವೆಂದು ವೀರಶೈವರು ಹೇಳಿದ್ದಾರೆ. ಇವು ಶೂನ್ಯ ಗರ್ಭ ನಿವಾಸಸ್ಥವಾದವುಗಳು. ಅಂದಮೇಲೆ ಅದಂತೂ ವಾಙ್ಮ

ನೋತೀತವಾಗುವಷ್ಟು ಸೂಕ್ಷ್ಮತರ, ಆಕಾರಣ ಅವನ್ನು ಪರಮಾಪಧಿ ಚಿತ್ಪ್ರಕಾಶದ ಬೆಳಕಿನಲ್ಲಿಯೇ ಆಪಲನ ಮಾಡಿಕೊಂಡು ವಿವರವಾಗಿ ಕಾಣುವದಿರುತ್ತದೆ. ಅವೇ ಅವುಗಳಲ್ಲಿ ಬೆರೆಯೋಣವು. ಇವೇ ಚಿನ್ನಾದ ಚಿದ್ಬಿಂದು ಚಿತ್ಕಲಾತ್ಮಕ ನಿರಂಜನ ಪ್ರಣವಸ್ವರೂಪ ಹೊಂದುವದು.

ಸ್ಥಳ ಕೂಡಿದ ವಿರಕ್ತರು ಹೆಸರಿಗೆ ಸೂತ್ರವಿರಕ್ತರಾಗಿರುವದರಿಂದ ಅವರಿಗೆ ಸಮಾಜದಲ್ಲಿ ಅದಾವ ಸ್ಥಾನ ಮಾನಗಳೂ ಇರುವದಿಲ್ಲ. ಅಲ್ಲದೆ ವಿರಕ್ತರ ಬಳಗದಲ್ಲಿ ಪಾದೋದಕ ಪ್ರಸಾದಕ್ರಿಯೆ ನಡೆದಾಗ, ಅಲ್ಲಿ ಸಾಮಾನ್ಯ ಭಕ್ತ ಪ್ರಸಾದಿಗಳಿಗೆ ಪ್ರವೇಶವಿದ್ದು ಪೂಜೆಗೊಂಡ ಮಹಾಸ್ವಾಮಿಗಳಿಂದ, ಪ್ರಸಾದದೆಡೆ ಪಡೆದು, ಅವರ ಪಂಕ್ತಿಯಲ್ಲಿ ಕುಳಿತು ಲಿಂಗಾರ್ಪಿತದೊಡನೆ ಮಾಗಿಯುವ ಬಾಧ್ಯತೆ ಇರುವದು. ಆದರೆ ಸ್ಥಳ ಕೂಡದ ವಿರಕ್ತರಿಗೆ ಇದಂತೂ ಒತ್ತಟ್ಟಿಗಿರಲಿ, ಒಳಗೆ ಬರಲು ಸಹ ಬಹಿಷ್ಕಾರವಿರುವದು. ಇದೇನು ಅಲಕ್ಷಿಸತಕ್ಕ ಅಪಮಾನವಲ್ಲ. ಹೀಗೆ ಬರಿಯ ಆ ಒಣ ಸಂಸ್ಕಾರ ಹೊಂದಿದ ಮಾತ್ರಕ್ಕೆ ಮಹತ್ವ ಬರುತ್ತಿರಲು ಆ ಸಂಸ್ಕಾರವನ್ನು ಪೂರ್ಣ ವೈಭವಯುಣಿಸಿಕೊಂಡು, ಸ್ಥಳದಲ್ಲಿ ಪ್ರತ್ಯಕ್ಷ ಕೂಡಿದರೆ, ಅದೆಂತಹ ಘನವಾದ ಆನಂದವೂ, ಯೋಗ್ಯತೆಯೂ ಒದಗುವದೆಂಬುದನ್ನು ಹೇಳಲು ಶಕ್ಯವೇ ಇಲ್ಲ. ತಮಗದಾವ ಸಂಸಾರದ ಉಪಾಧಿಯೂ ಇರದೆ, ವಿರಕ್ತರೆನ್ನಿಸಿಕೊಂಡ ಮೂರ್ತಿಗಳೂ ಸಹ, ತಮ್ಮ ಆಶ್ರಮವನ್ನು ಸಾರ್ಥಕಗೊಳಿಸದಿರುವದು, ಲಿಂಗಾಯತ ಸಮಾಜದ ದುರ್ದೈವವಲ್ಲವೇ ?

ಭಕ್ತರ ಪರಮ ಗುರಿಯು ಜಂಗಮತ್ವವೇ ಆಗಿರುವದೆಂದು, ನೂರೊಂದು ಸ್ಥಳಗಳಲ್ಲಿ ಭಕ್ತನ ಲಿಂಗಸ್ಥಳಗಳನ್ನು ಹೇಳುವಾಗ ನಿರೂಪಿಸಲ್ಪಟ್ಟಿದೆ. ಅದನ್ನು ಅಳವಡಿಸಿಕೊಂಡರೆ ಅದರಲ್ಲಿಯೇ ಸ್ಥಳೈಕ್ಯವೂ, ಮಹಾಲಿಂಗೈಕ್ಯವೂ ಅಭಿನ್ನತೆಯಿಂದ ಸೇರ್ಪಡೆಹೊಂದುವವು. ಐಕ್ಯಸ್ಥಳದಲ್ಲಿ ಕೊನೆಯದಾದ ನೂರೊಂದನೆಯ ಸ್ಥಳವು ಜ್ಞಾನ ಶೂನ್ಯ ಸ್ಥಳವೆಂದು ಅದೆ. ಇದು ಶಿವ ಚಿತ್ಕಳೆಯಲಿ ( ನಿರಂಜನ ಪ್ರಣವವು ) ತನ್ನಲ್ಲಿ ತನ್ನ ಪ್ರಸಾದವನ್ನೆಲ್ಲ ಐಕ್ಯಮಾಡಿಕೊಂಡು ಕೊನೆಯಲ್ಲಿ ತಾನು ತನ್ನ ಉಗಮ ಸ್ಥಾನವಾದ ಅಣುಚಕ್ರಗತ ಸ್ಥಳದಲ್ಲಿ ( ಸ್ವಸ್ಥಲಿಂಗದಲ್ಲಿ ) ಏಕೀಕರಿಸಿದಂತೆಯೇ ಇರುವದು.

## ೬:-- ಷಡ್ವಿಧ ಲಿಂಗ

| ಕ್ರಮಾಂಕ | ತತ್ವ ಸಂಬಂಧವಾಗಿ | ಪದಾರ್ಥಗಳನ್ನು | | | |
|---|---|---|---|---|---|
| | | ಸ್ವರೂಪ | ದ್ರವ್ಯ (ಸ್ಥಿತಿ) | ಪದಾರ್ಥ (ವಿಷಯ) | ಸ್ಥಾನ (ಇಡುವ) |
| ೧ | ೨ | ೩ | | | |
| ೧ | ಪೃಥ್ವಿ | ಭೋಜ್ಯ | ಕಠಿಣ | ಗಂಧ | ಶರ್ಕರ |
| ೨ | ಜಲ | ಪಾನ್ಯ | ಮೃದು | ರಸ | ಮಧು |
| ೩ | ಅಗ್ನಿ | ಭಕ್ಷ್ಯ | ಉಷ್ಣ | ರೂಪ | ಘೃತ |
| ೪ | ವಾಯು | ಚೋಹ್ಯ | ಶೀತ | ಸ್ಪರ್ಶ | ದಧಿ |
| ೫ | ಆಕಾಶ | ಲೇಹ್ಯ | ಮಿಶ್ರ | ಶಬ್ದ | ಕ್ಷೀರ |
| ೬ | ಅರಿವೆಂಬ ಆತ್ಮತತ್ವ | ಐದು | ಐದು | ಐದು | ಐದು |

## ತೃಪ್ತಿಯ ಕ್ರಮವು :—

| ಮಂತ್ರ ಪೂರ್ವಕವಾಗಿ | | | | ಇಷ್ಟಲಿಂಗಸ್ಥ | | |
|---|---|---|---|---|---|---|
| ಏಕತ್ವ | ಬಹುತ್ವ | ಪ್ರಸಾದ ಷಡಕ್ಷರಿ | ಶಿವ ಪಂಚಾಕ್ಷರಿ | ಶಕ್ತಿ | ಲಿಂಗಕ್ಕೆ | |
| | | ೪ | | ೫ | | ೬ |
| ಓಂ | ನ | ಹ್ರಾಂ | ನಮಃ ಶಿವಾಯ | ಪೀಠಸ್ಥಾನ ಗತ | ಆಚಾರ | ಇಷ್ಟಲಿಂಗದ ಮುಖದಲ್ಲಿಯೇ ಸಮರ್ಪಿಸಿ, ಅಂಗದ ಸಂತೃಪ್ತಿಯಲ್ಲಿಯೇ ಭಕ್ತನು ಸಂತುಷ್ಟಿಸುವನು. |
| ಓಂ | ಮ | ಹ್ರೀಂ | ನಮಃ ಶಿವಾಯ | ಕಂಠಸ್ಥಾನ ಗತ | ಗುರು | |
| ಓಂ | ಶಿ | ಹ್ರೂಂ | ನಮಃ ಶಿವಾಯ | ವರ್ತುಳ ಸ್ಥಾನ ಗತ | ಶಿವ | |
| ಓಂ | ವಾ | ಹ್ರೈಂ | ನಮಃ ಶಿವಾಯ | ಗೋಮುಖ ಸ್ಥಾನ ಗತ | ಜಂಗಮ | |
| ಓಂ | ಯ | ಹ್ರೌಂ | ನಮಃ ಶಿವಾಯ | ನಾಳಸ್ಥಾನ ಗತ | ಪ್ರಸಾದ | |
| ಓಂ | ಓಂ | ಹ್ರಃ | ನಮಃ ಶಿವಾಯ | ಗೋಮುಖ ಸ್ಥಾನ ಗತ | ಮಹಾ | |

# ಅರ್ಪಣ ಮಂತ್ರಾರ್ಥ ವಿವರಣೆ

"ಮನನಾತ್ ಗಾಯತೆ ಇತಿ ಮಂತ್ರಃ" ಅಂದರೆ ಮನನ ಮಾಡುವದರಿಂದ ರಕ್ಷಿಸುತ್ತದೆ ಎಂಬುದೇ ಮಂತ್ರ ಶಬ್ದದ ಅರ್ಥವು. ಆದುದರಿಂದ ಮೇಲೆ ಮಂತ್ರದಲ್ಲಿ ಬಂದಿರುವ ಎಲ್ಲ ಶಬ್ದಗಳ ಅರ್ಥ ವನ್ನು ಸರಿಯಾಗಿ ತಿಳಿದುಕೊಂಡು ತಾತ್ಪರ್ಯವನ್ನು ಗ್ರಹಿಸದಿದ್ದರೆ, ಆ ಮಂತ್ರವೇನೂ ತೋರಿಸಲಾರದು. ಬರಿಯ ಫೋನೋ ಗ್ರಾಫವಂತೆ ಉಚ್ಚರಿಸಿಬಿಟ್ಟರೆ ಆ ಮಂತ್ರದಿಂದೇನೂ ಉಪಯೋಗವಿಲ್ಲ. ಆದ ಕಾರಣ ಕೆಳಗೆ ಅರ್ಪಣ ಮಂತ್ರದ ಅರ್ಥವನ್ನು ಸ್ಪಷ್ಟೀಕರಿಸುವದು ಅವಶ್ಯವದೆ.

ಓಂ ಎಂಬ ಏಕತ್ವದೊಳಗಿಂದ ಅವರ ಷಟ್‌ಪ್ರಣವಗಳೆನ್ನಿ ಸುವ, "ನ, ಮ, ಶಿ, ವಾ, ಯ, ಓಂ" ಎಂಬ ಬಹುತ್ವವು ಜನಿ ಸಿತು. ಅವನ್ನು ಪುನಃ 'ಹ್ರಾಂ' ಮುಂತಾದ ಪ್ರಸಾದ ಷಡಕ್ಷರಿ ಯಿಂದ, ಅವುಗಳ ನಾಮ-ರೂಪ-ಗುಣಗಳನ್ನು ಹೋಗಲಾಡಿಸಿ, ಸತ್ ಚಿತ್ ಆನಂದ ಸ್ವರೂಪಕ್ಕಿಳಿಸಿ, ಬಳಿಕ ನಮಃಶಿವಾಯ ಎಂಬ ಪಂಚಾ ಕ್ಷರಿಯ ಯೋಗದಿಂದ, ನಾದ (ಅ) ಬಿಂದು (ಉ) ಕಲೆ (ಮ್) ಗಳ ಸ್ವರೂಪದಲ್ಲಿ ಪರ್ಯವಸಾನಗೊಳಿಸಿ, ಅವುಗಳ ಸಂಯೋಗದಿಂದ 'ಓಂ' ಎಂಬ ಏಕ ಮೇವಾದ್ವಿತೀಯ ಸ್ವರೂಪಕ್ಕೆ ತರಬೇಕು ಎಂಬುದೇ ಈ ಮಂತ್ರದ ಅರ್ಥವಿರುತ್ತದೆ. ಇದಲ್ಲದೆ ಶಿವಪಂಚಾಕ್ಷರಿಯೂ ಇಲ್ಲಿ ಬಂದಿರುವದರಿಂದ, ಪ್ರತಿಯೊಂದು ಪ್ರಣವದಲ್ಲಿಯೂ ಐವೂ ಪ್ರಣವ ಗಳು ಸಮಾವಿಷ್ಟವಾಗಿವೆಯೆಂದೂ, ತಸ್ಮಾತ್ ಅವು ಸ್ವಯಮೇಲೆ ಪ್ರಸಾದ (ಪರಮಾತ್ಮ) ವಿರುವವೆಂದೂ ಸಹ ಅರಿಯಲು ಅವಕಾಶವುಂಟು.

ಪ್ರಸಾದ ಮಂತ್ರ: - 'ಹರ' ಶಬ್ದವು ನರನ ಭವಚಕ್ರವನ್ನು ನಾಶಪಡಿಸಿದಂತೆ 'ಹ್ರಾಂ' ಇತ್ಯಾದಿ ಪ್ರಸಾದ ಮಂತ್ರವು ಪದಾರ್ಥದ ನಾಮ ರೂಪ ಗುಣಗಳನ್ನು ನಷ್ಟಮಾಡುವದು 'ಹರ' ಶಬ್ದದಲ್ಲಿರುವ 'ಹ್' 'ರ್' ಎಂಬ ವ್ಯಂಜನಗಳೇ (ಎಂದರೆ ಹ್ರ ಎಂಬ ಸಂಯು ಕ್ತಾಕ್ಷರವೇ—ಸಂಯುಕ್ತವ್ಯಂಜನವೇ) ಪ್ರಸಾದ ಮಂತ್ರದಲ್ಲಿ ಮುಖ್ಯವಾ ಗಿದೆ. ವ್ಯಂಜನೋಚ್ಚಾರಕ್ಕೆ ಸ್ವರದ ಸಹಾಯವು ಬೇಕೇ ಬೇಕು. ಇಲ್ಲಿ

ಅ, ಆ; ಇ, ಈ, ಉ, ಊ; ಏ ಐ; ಓ, ಔ; ಅಂ, ಅಃ; ಈ ಆರು ಜೋಡಿಗಳಲ್ಲಿರುವ ಕೊನೆಯ ಅಕ್ಷರಗಳನ್ನೇ ( ಆ, ಈ, ಊ, ಐ, ಔ, ಅಃ ಎಂಬವನ್ನೇ ) ಹ್ ದ ಕೊನೆಯಲ್ಲಿ ಕ್ರಮವಾಗಿ ಜೋಡಿಸಿ, ಈ ಪ್ರಸಾದ ಷಡಕ್ಷರಿಯನ್ನು ವ್ಯವಸ್ಥಿತ ಗೊಳಿಸಿದ್ದು ಕಂಡುಬರುತ್ತದೆ. ಇದು ಪ್ರಸಾದಗಳ ನಾಮ ರೂಪ ಗುಣಗಳನ್ನು ಕಳೆದುಬಿಡುವದರಿಂದ ಅಲ್ಲಿ ಸತ್ ಚಿತ್ ಆನಂದ ಸ್ವರೂಪವೇ ಉಳಿಯುವದು. ಇದೇ ಪ್ರಸಾದ ಮಂತ್ರದ ಅರ್ಥವು.

ಓಂಕಾರದ ಉತ್ಪತ್ತಿಯನ್ನು ಕುರಿತು ಸಿದ್ಧಾಂತ ಶಿಖಾಮಣಿ ಮೊದಲಾದ ಗ್ರಂಥಗಳಲ್ಲಿ ಸವಿಸ್ತಾರ ವಿವೇಚನೆ ಬಂದಿರುವದೆಂಬದು ಅನೇಕರಿಗೆ ಗೊತ್ತಿರಲು ಸಾಕು. ಆದುದರಿಂದ ಈಗ ಅದನ್ನು ಕೊಡುವ ಕಾರಣವಿಲ್ಲ.



# ಶಾಲ್ಯದ ಅರಸಿನವರ ವಚನ.

( ಸಂಗ್ರಾಹಕ:— ಬಿ. ನಂಜುಂಡಪ್ಪ ಕಾನಕನಹಳ್ಳಿ )

೧

ರಾಗ — ಕಾಂಭೋದಿ.

ಶಿವ ಶಿವಾಗಿ ನಿನ್ನೊಳಿರಲೆನ್ನ ಚಿತ್ತಂ
ಮರೆದು ಮರೆದರಿದರಿದು ಚಂಚಲನವರತಂ ॥ ಪ ॥

ಯಾನೊಲ್ಲದಳೋರ್ವ ಗೇಲಿದಂತೆ ನಿನ್ನನೇ
ಹಾರೈಸಿ ನಿನ್ನೊಳಿರುತಲೆ ಶಂಭುವೆ
ಆರು ರಸದೊಳಗೋರ್ವ ನೊಂದೆಳೆಸ ದಂತೆನ್ನ
ಚಾರುಮತಿ ನಿನ್ನ ನೆಳಸುವದಾಗಲಿ ।
ಪ್ರಾರಬ್ಧವೆನ್ನ ದಿತರರ ಸಮಯ ದೊಳ್ಪೊಗಿಸ
ದಾರೂಢವಾಗಲಿ ಭವನ್ಮತದೊಳು
ಪೌರಾಣಿಕರ ಮುಖದಿ ನಿನ್ನ ಮಹಿಮೆಯ ಕೇಳ
ದಾರುಚಿಗೆ ಮಿಕ್ಕಕಥೆ ಬೇವಿನಂತಿರಲಿ ॥ ೧ ॥

ವಿರಸವಾದೀ ಲೋಕವೃತ್ತಿಯೊಳ್ಸಿಕ್ಕಿ ವೈ
ಮರೆದರೆಚ್ಚರಿಸುವರ ನೆರೆಯಾಗಲಿ;
ಮರೆದೊಂದು ಮಾಡಿದರದಂ ಕಂಡು ನಿಂದಿಸುವ
ಹುರುಡಿಗರ ವಾಗ್ವಜ್ರವೊಂದಿ ಸುಡಲಿ;
ನರಜನ್ಮವಾದ ಪುಣ್ಯದಿ ಬಂದುದೋ ಕೆಡಿಸ
ದಿರು 'ಹರನ ನೆನೆ' ಎಂಬ ಗುರುವಾಗಲಿ;
ಅರಿಯುದ್ದೈದಿದರಾ ಬಳಿಯ ಶಂಕರನಮಂ
ದಿರವಿದುರ್ದೃಷ್ಟಿಗೆ ಗೋಚರ ವಾಗಲಭವ ॥ ೨ ॥

ಭೂತಿ ಭೂಷಿತ ದೇಹವಾದ ಗಾರ್ದಭವೆನ್ನ
ನೋಕೊರಸಿಕೊಂಡು ಪೋಗುವದಾಗಲಿ;
ಜಾತಿಯೊಳು ನೀಚನಾದರೂ ಶಿವಾಕ್ಷರವ ನುಡಿ
ವಾತನೊಳಗೆನ್ನ ಬಂಧುತ್ವವಿರಲಿ;
ಪ್ರೇತ ಮೊಂತೆಂದಧಮರಾದವರ ಧನವಕೈ
[illegible] ತಾಗೊಂಬುದಕೆ ಹೇಸಿಕೆಯಾಗಲಿ;
ಚೇತೋಭವಾಂತಕ ಭವಂಗಳು ಬರುವ ಬಹು
ಭೀತಿ ನಿನ್ನನ್ನರಿಯದಂದೇ ತೋರುತಿರಲಿ ॥ ೩ ॥

ಅಂದಿಗಂದಿಗೆ ನಿನ್ನ ಗುಣಪರಿಮಳಂ ಮತಿಗೆ
ಬಂದು ಮನವಳ್ಳಿರಿದು ನೆಲೆಗೊಳ್ಳಲಿ;
ಇಂದು ಶೇಖರನೇ, ಕಾರ್ಯಾಂತರದಿ ತೊಳಲುತಿರು
ವಂದು ನಿನ್ನಯ ವಿರಹ ತಾಪವಿರಲಿ;
ಸುಂದರೇಶ್ವರ ನೆಂಬ ಕೇಳ್ಕೆಯಿಂ ಬಿಟ್ಟಿತರ
ಬೃಂದಮಂ ನಿನ್ನ ನೋಡಲ್ಕೆಳಸಲಿ;
ಕಂದುಗೊರಳನ್ನೆ, ನಿನ್ನ ಮಾನಸಂ ಮಾನಸದ
ಮದಿಂರವೆ ನಿನ್ನ ಶಾಂಭವ ವಾಗಲೀಶ ॥ ೪ ॥

ಹೇಗೆ ನಿನಗಿನಿಯಳಗ ಜಾತೆಯೋ ನಂದನರು
ಮಾರ್ಗೈಯ್ಯ ನರುಮಗಂ, ಭೃತ್ಯರೊಳಗೆ
ಹೇಗೆ ರೇಣುಕ ದಾರುಕಾದಿಗಳೊ ಪ್ರಿಯತಮ
ನರ್ಗ ಕಂಕಣ ನಿನ್ನ ನಂಬದವರು
ಹಾಗೆಂದೆ ನಂಬಿ, "ನಂಬಿದರಿಂಬು ಶಂಭವೆಂ"
ಬಾಗಮೋಕ್ತಿಗೆ ಮತಿ ತನು ಪ್ರಾಣವ
ನೀಗ ಲೆಳಸಿದೆ ವಿದಕೆ ನಿಜವ ನಾರಯ್ಯೆ ಹೃ
ದ್ಭಾಗ ದೊಳಗಿರುವ ನೀನೇ ಸಾಕ್ಷಿ ಗೌರೀಶ ॥ ೫ ॥

---

ಟೀಪು — ಕಾಮಗೆರೆ ಶ್ರೀ॥ ಮಹಾಂತಸ್ವಾಮಿಗಳ ಕೃಪೆಯಿಂದ ದೊರೆತುದು.

# ಅಂದು --- ಇಂದು

ಅಂದಿನಾ ವೈಭವವ, ಅಂದಿನಾ ಐಸಿರಿಯನೇನೆಂತು ಬಣ್ಣಿಸಲಿ
ಬಾನೊಳಗೆ ಚೆಲುವ ಚಂದಿರನು ನಗುತಿರೆ
ಬಿಳಿಯ ಬೆಳದಿಂಗಳು ಎಲ್ಲೆಲ್ಲು ಚೆಲ್ಲಾಡುತಿರೆ,
ತಂಗಾಳಿ ಮೆಲಮೆಲನೆ ಹೊಂಚಹಾಕಿ ಸುಳಿದಾಡುತಿರೆ,
ಕೊಳದ ಅಂಚಿನಲಿ ಎಲ್ಲವನು ಮರೆತು ನಾವೀರ್ವರೆ
ಕುಳಿತಿರೆ,
ಇನಿಯನ ಮೊಗವ ಮನದಣಿಯ ನೋಡುತಿರೆ,
" ಚಿನ್ನಾ! ಚಂದಿರಾ, ಎಲ್ಲವನು ನಾ ಮಾಡುವೆ,
ನನ್ನ ಕೈಲಾಗುದದೇನಿದೆ, ನಾ ಎಲ್ಲವನು ನಗುತ ಮಾಡುವೆ
ನೀ ಚಿಂತಿಸಬೇಡ "
ಎಂದು ನಾ ಭರವಸೆಯ ನೀಡುತಿರೆ,
ಚಿನ್ನೆ ಹಾಗೆನ್ನದಿರು ನಾನು ಎಂದು ಎಂದಿಗೂ ಅನ್ನದಿರು
ನಮ್ಮೀರ್ವರ ಒಂಟಿ ಜೀವನ ಅಂದಿಗೇ ಮುಗಿಯಿತು,
ಮುಂದೆ ಬರುವ ಎಲ್ಲ ಸುಖದುಃಖಕು ನಾವೀರ್ವರು
ಸಮಭಾಗಿಗಳು
'ನಾನು' ಎಂಬ ದರ್ಪದ ಮಾತಬಿಡು "ನಾವು"ಎನ್ನು
ಎಂದು ಪ್ರೇಮದಲಿ ನುಡಿಯುತಿರೆ,
"ಚಂದಿರಾ, ಸರಿ, ನೀ ಹೇಳುವುದು ದಿಟ,
ಆದರೂ ನನದೊಂದು ಹರಕೆ, ನನದೊಂದು ಹಟ
ಸುಖವೆಲ್ಲ ನಿನಗಿರಲಿ ದುಃಖವೆಲ್ಲ ನನಗಿರಲಿ,
ನಗುವೆಲ್ಲ ನಿನಗಿರಲಿ ಅಳುವೆಲ್ಲ ನನಗಿರಲಿ,
ಸಿಹಿ ಎಲ್ಲ ನಿನಗಿರಲಿ ಕಹಿ ಎಲ್ಲ ನನಗಿರಲಿ"
ಎಂದು ನಾ ನುಡಿಯುತಿರ, ಅಂದಿನಾ ಸಿರಿಯ ನೇನೆಂತು
ಹೇಳಲಿ?

\+ + + ×

ಇಂದು ಅಂದಿನ ವೈಭವವಿಲ್ಲ, ಅಂದಿನ ಐಸಿರಿಯಿಲ್ಲ.
ಅದೇ ಆಗಸದಲಿ ಅದೇ ಚಂದಿರನು ನಿಂದಿಹನು,
ನಗುತಿಹನೊ, ನಲಿಯುತಿಹನೋ ಅದರ ಅರಿವು
ನನಗಿಲ್ಲ,

ಬೆಳದಿಂಗಳಲಿ ಸೊಂಪಿಲ್ಲ, ತಂಗಾಳಿಯಲಿ ಕಂಪಿಲ್ಲ,
ನೋಡೆ ಹೆಚ್ಚಿನ ವಹಾರ್ಯಯಿಲ್ಲ, ಆಲಿಸೆ ನಚ್ಚಿನ ದನಿ ಕೇಳಿ
ಬರುತಿಲ್ಲ।

"ನಾನೆನ್ನದಿರು, ನಾವೆನ್ನು" ಅನ್ನುವಾ ಸವಿನುಡಿಯು
ನಾಡುವರಿಲ್ಲ!

ದೂರದಲಿ ಯಾರೊ "ನಾವೆನ್ನದಿರು ನಾನೆನ್ನು" ಎನ್ನುವಾ
ಕರ್ಕಶದ ಕೂಗು ಕೇಳಿಬರುತಿದೆ.

ಯಾರ ಮೇಲೂ ನನಗೆ ಹಗೆ ಇನಿತಿಲ್ಲ,
ಬೇಡಿದುದ ನೀಡುವ ದೈವದಮೇಲೂ ನಾ ಬಗೆ ಎಣಿಸುತಿಲ್ಲ,
ದುಃಖವೆಲ್ಲ ಎನಗಾಯ್ತು, ಅಳುವೆಲ್ಲ ಎನಗಾಯ್ತು,
ಕಹಿ ಎಲ್ಲ ಎನಗಾಯ್ತು, ನನ್ನ ಅಂದಿನ ಹರಕೆ ಇಂದು
ಕೈಗೂಡಿಸು "ಚಂದಿರಾ"



# ಶರಣಮಾರ್ಗ

— —

ಲೇ :— ಅನ್ನದಾನೀಶ್ವರ ವಿರಕ್ತ ಮಠ.
ಶಿಕ್ಷಕರು :— ಶ್ರೀ. ಬಸವೇಶ್ವರ ಟ್ರೇನಿಂಗ ಕಾಲೇಜ,
ಬಾಗಲಕೋಟ.

(೧) **ಬಂಧವಿಮೋಚನೆ :—** ಆತ್ಮಸ್ವಾತಂತ್ರ್ಯವು ಸತ್ಯ, ಪ್ರೇಮ, ಜ್ಞಾನ, ಆನಂದಗಳ ಉಗಮಸ್ಥಾನವು. ವಿಧಿನಿಷೇಧಗಳೆಂಬ ಸಂಕೋಲೆಗಳಿಂದ ಬಂಧಿಸಲ್ಪಟ್ಟ ಆತ್ಮವು, ಸಚ್ಚಿದಾನಂದ ಸ್ವರೂಪವನ್ನರಿಯಲಾರದು. ವ್ಯಕ್ತಿಯ ಪ್ರಗತಿಯಾಗಲೀ ರಾಷ್ಟ್ರದ ಪ್ರಗತಿಯಾಗಲೀ, ಜಗತ್ತಿನ ಪ್ರಗತಿಯಾಗಲೀ ಆತ್ಮಸ್ವಾತಂತ್ರ್ಯವನ್ನೇ ಅವಲಂಬಿಸಿವೆ. ವರ್ಣ, ಕುಲ, ಗೋತ್ರ, ವಂಶ, ಜಾತಿ, ಜನ್ಮಮೂಲಕವಾದ ವಿಧಿನಿಷೇಧಗಳು ಪ್ರತಿಗಾಮಿ ದುಷ್ಟಶಕ್ತಿಗಳೇ ಸರಿ. ಸಂಕುಚಿತತನವನ್ನೇ, ಪುಷ್ಟೀಕರಿಸುವ ತರ್ಕವಿದ್ಯೆಯಾಗಲಿ ಪಾಂಡಿತ್ಯವಾಗಲಿ, ಧರ್ಮಗ್ರಂಥಗಳ ಪ್ರಮಾಣಗಳಾಗಲಿ ಆತ್ಮೋನ್ನತಿಗೆ ಸಾಧನಗಳಲ್ಲ. ರಾಷ್ಟ್ರೀಯ ಐಕ್ಯಕ್ಕೆ ಮಾರಕಗಳಾಗಿಯೂ, ವಿಶ್ವಸಾಮರಸ್ಯಕ್ಕೆ ಬಾಧಕಗಳಾಗಿಯೂ ಅವು ಪರಿಣಮಿಸುತ್ತವೆ ಆದಕಾರಣ ಶರಣರು ವಿಧಿನಿಷೇಧ, ಜಾತಿ-ವರ್ಣ, ತರ್ಕಪಾಂಡಿತ್ಯದ ಸಂಕುಚಿತತನ ಮುಂತಾದವುಗಳನ್ನು ತಮ್ಮ ಅಮರ ವಚನಗಳಲ್ಲಿ ಬಲವಾಗಿ ಖಂಡಿಸಿ; ಪ್ರಗತಿಯ, ಸ್ವಾತಂತ್ರ್ಯದ, ಶಾಂತಿಯ, ವೈರಿಗಳಾಗಿರುವ ಮೂಢ ಧಾರ್ಮಿಕ ಕರ್ಮ ಜಾಲದಿಂದ ಆತ್ಮನನ್ನು ಬಿಡುಗಡೆ ಮಾಡಿಸಿ, — ಆತ್ಮಸ್ವಾತಂತ್ರ್ಯದ ಸುಂದರ ಗೀತೆಗಳನ್ನು ಹಾಡಿದ್ದಾರೆ ಆತ್ಮಸ್ವಾತಂತ್ರ್ಯದ ರಸಭರಿತ ಗೀತೆಗಳೇ ವಚನಗಳು.

(೨) **ಸಂಸ್ಕೃತಿಯ ರಹಸ್ಯ :—** ಶರಣ ಸಂಸ್ಕೃತಿಯು ಆತ್ಮಸ್ವಾತಂತ್ರ್ಯದಿಂದ ಮುಂದೆ ಮುಂದೆ ಪ್ರವಹಿಸುತ್ತಿದೆ. ಆತ್ಮವು ದೈವೀ ಶಕ್ತಿಯಿಂದ ಬೆಳಗುತ್ತಿರುವದು. ಅದೇ ಶಿವಶಕ್ತಿ. ಮಾನವರು ಅಂದರೆ

ಜೀವಾತ್ಮರು ಭಕ್ತಿ ಜ್ಞಾನ ಕ್ರಿಯೆಗಳಿಂದ, ಶಕ್ತಿಸ್ವರೂಪರಾದ ಶರಣರಾಗಿ ಶಿವಸಾಮರಸ್ಯವನ್ನು ಹೊಂದಿ ವಿಶ್ವೈಕ್ಯದ ಬಾನಾದಿಯುಸ್ಸ ಸಾಕ್ಷಾತ್ಕಾರ್ರೆ ಆಗ ಶರಣರ ದೃಷ್ಟಿಗೆ ಸರ್ವವೂ ಶಿವಮಯವಾಗಿ ಕಾಣುತ್ತದೆ. ಜೀವ, ಜಗತ್ತು, ಈಶ್ವರ ಬೇರೆ ಎಂಬ ಭೇದಜ್ಞಾನವು ನಾಶವಾಗುತ್ತದೆ. ಇಂಥ ಅಭೇದ ಜ್ಞಾನದೃಷ್ಟಿಯೇ ಲಿಂಗದೃಷ್ಟಿಯು. ಈ ಲಿಂಗದೃಷ್ಟಿಯು ವಿಶ್ವ ಶಾಂತಿಯ ತಳಹದಿಯು. ಈ ದಿವ್ಯದೃಷ್ಟಿಯು ಸಾಧ್ಯವಾಗಬೇಕಾದರೆ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಅಂತಃಕರಣ ಚತುಷ್ಟಯ ಮತ್ತು ಜೀವಾತ್ಮ ಹೀಗೆ ಎಲ್ಲವೂ ಸಾತ್ವಿಕ ತೇಜದಿಂದ ಪ್ರಕಾಶಿಸಲಿಕ್ಕೆ ಬೇಕು. ಅವುಗಳಿಗೆ ಆಧ್ಯಾತ್ಮಿಕ ಶಿಕ್ಷಣ ಸಿಗಲಿಕ್ಕೆ ಬೇಕು. ಆಧ್ಯಾತ್ಮದ ದೀಕ್ಷೆ ಕೊಡಲಿಕ್ಕೆ ಬೇಕು. ಅವು ಶಿವ ಶಕ್ತಿಯ ಪ್ರತಿಬಿಂಬವಾಗಬೇಕು. ಆಗ ಜಗದೋದ್ಧಾರದ ಸಂಸ್ಕೃತಿಯು ಉದಯವಾಗುವದು. ಇದೇ ಶರಣರ ಸಂಸ್ಕೃತಿಯ ರಹಸ್ಯ.

(೩) ದೈವೀಶಕ್ತಿಯ ಅರಿವು :— ಜಗತ್ತಿನ ಜನರಲ್ಲಿ ದೈವೀ ಶಕ್ತಿಯ ಅರಿವನ್ನು ಜಾಗ್ರತಗೊಳಿಸಲಿಕ್ಕೆ ಬೇಕು. ಅಲ್ಪತನ, ಕ್ಷುದ್ರತನ, ಸಂಕುಚಿತತನ, ನನ್ನತನ, ಇದೆಲ್ಲ ಆಗ ಮಾಯವಾಗುತ್ತದೆ. ತನ್ನೊಳಗೆ ಜಗದೊಳಗೆ ದೇವನನ್ನು ಕಂಡು, ತನ್ನ ವಿಚಾರ, ಭಾವನೆ, ಕೃತಿಗಳನ್ನು ದೈವೀಮಯವಾಗಿ ರೂಪಾಂತರಿಸಲಿಕ್ಕೆ ಬೇಕು. ಇದೇ ಅಂಗವು ಲಿಂಗವಾಗುವಿಕೆ.

ಈ ಜಗತ್ತು ಶಿವಲೀಲೆಯಾಗಿದೆ. ಈ ಲೀಲಾಮೃತವನ್ನು ಪಾನಮಾಡಿ ಅಂಗವಿಸಿಕೊಳ್ಳುವದೇ ಆಶಾವಾದದ ಉಗಮಸ್ಥಾನವು. ನಿರಾಶೆ, ಚಿಂತೆ, ಸಂತಾಪ, ತಾಪತ್ರಯಗಳನ್ನು ಪುಷ್ಟೀಕರಿಸುತ್ತ, ಜಗತ್ತು ಮಿಥ್ಯವೆಂದೂ ನಿಸ್ಸಾರವೆಂದೂ ಧಿಕ್ಕರಿಸುತ್ತ, ನಾನಷ್ಟೇ ಬ್ರಹ್ಮವೆಂದು ಹೇಳುತ್ತ ಸಾಗುವದರಿಂದ ಆಶಾವಾದದ ಪ್ರಗತಿಯಾದಂತಾಗಲಿಲ್ಲ. ದ್ವೈತವಾದ ಅಥವಾ ನಿಷ್ಕ್ರಿಯವಾದಕ್ಕಿಂತಲೂ ಕ್ರಿಯಾಫಲಗೂಡಿ ಆತ್ಮನೈವೇದ್ಯವ ಮಾಡಿ ಪರಮಾನಂದದಲ್ಲಿರುವದೇ ಆಶಾವಾದದ ಪ್ರಗತಿಗೆ ಸಾಧನವಾಗವದು. ದೈವೀಶಕ್ತಿಯ ಅರಿವಿನಿಂದ ಆಶಾವಾದಿಯಾಗಿ, ಕ್ರಿಯೆಗಳನ್ನು ಮಾಡಿ ಜಗತ್ತನ್ನು ಮೇಲ್ಮಟ್ಟಕ್ಕೆ ಒಯ್ಯಲಿಕ್ಕೆ ಬರುವದು ಶರಣರ ಇಂಗಿತವಾದರೂ ಇದೇ.

**ಸಬಲ ಧರ್ಮ:**— ಧರ್ಮವು ಜನರನ್ನು ನಿರ್ಬಲರನ್ನಾಗಿಯೂ ನಿರುತ್ಸಾಹಿಗಳನ್ನಾಗಿಯೂ, ಅವಿಶ್ವಾಸಿಗಳನ್ನಾಗಿಯೂ, ಭಯಭೀತರನ್ನಾಗಿಯೂ, ಸಂಕುಚಿತರನ್ನಾಗಿಯೂ ಮಾಡಿದರೆ, ಅದು ಅಬಲ ಧರ್ಮವಾಗಿರಬಹುದು. ಸಬಲ ಧರ್ಮವು ಎಡರುಗಳನ್ನು ಧೈರ್ಯದಿಂದ ಎದುರಿಸುವ ಮತ್ತು ಸಮಸ್ಯೆಗಳನ್ನು ಪರಿಹರಿಸುವ ಶಕ್ತಿಯನ್ನು ಕರುಣಿಸಬಲ್ಲದು. ಕರ್ತವ್ಯಪರಾಙ್ಮುಖನನ್ನಾಗಿ ಮಾಡಿ ಅಡವಿ ಸೇರಿಸುವ ಸನ್ಯಾಸ ಮಾರ್ಗವು ಸಬಲ ಧರ್ಮವಲ್ಲ. ಆತ್ಮಸ್ವಾತಂತ್ರ್ಯ, ಆತ್ಮಜ್ಞಾನ, ಆತ್ಮವಿಶ್ವಾಸಗಳಿಂದಲೂ, ವಿಶ್ವಾತ್ಮಸಾಮರಸ್ಯವನ್ನು ಹೊಂದಿ ಜಗತ್ತನ್ನು ಸುಂದರ ಸ್ಥಾನವನ್ನಾಗಿ ಪರಿವರ್ತಿಸುವ ಶಕ್ತಿಯನ್ನೀಯುವ ಧರ್ಮವೇ ಇಂದು ಬೇಕು. ಅದುವೇ ಸಬಲ ಧರ್ಮ. ಅದೇ ಅಧ್ಯಾತ್ಮಾನುಭಾವ. ಶರಣರ ಅಧ್ಯಾತ್ಮಾನುಭವವು ನವ ಸಮಾಜ ರಚನೆಯನ್ನು ಮಾಡಬಲ್ಲುದು. ಸ್ವಾರ್ಥೈಕ ದೃಷ್ಟಿಯಿಂದ ಎಷ್ಟೇ ಧರ್ಮವಂತನೆನಿಸಿಕೊಂಡರೂ ಅವನು ಧರ್ಮವಂತನಲ್ಲ ಶರಣರ ತ್ರಿವಿಧ ದಾಸೋಹ ತತ್ವವು ಅಧ್ಯಾತ್ಮಾನುಭವದಿಂದ ಯೋಗ್ಯ ಸಮಾಜವನ್ನು ಜಗದಲ್ಲಿ ಕಟ್ಟಲು ಬೋಧಿಸುತ್ತದೆ.

ಈ ತ್ರಿವಿಧ ದಾಸೋಹವು ವ್ಯಕ್ತಿಯನ್ನು ಸಮಾಜ ಸೇವಕನನ್ನಾಗಿಯೂ, ವೈಯಕ್ತಿಕ ಧರ್ಮವನ್ನು ಸಮಾಜೋಪಯೋಗಿಯಾಗಿಯೂ, ಆತ್ಮಜ್ಞಾನಿಯನ್ನು ಭಕ್ತಿವಂತನನ್ನಾಗಿಯೂ ಮಾಡುತ್ತದೆ

ಈ ತ್ರಿವಿಧ ದಾಸೋಹವು ಸಬಲ ಧರ್ಮವು ವ್ಯಾವಹಾರಿಕ ವೇದಾಂತವು. ಇದರಂತೆ ನಡೆದರೆ ಇಡೀ ಜೀವಿತವೇ ಧರ್ಮಸ್ವರೂಪವಾಗುವದು. ಆದ್ದರಿಂದಲೇ ಶರಣಬಸವಣ್ಣನು ಧರ್ಮಸ್ವರೂಪನೆಂದು ಅನೇಕ ಶರಣ-ಶರಣೆಯರಿಂದ ಕರೆಯಲ್ಪಟ್ಟಿದ್ದಾನೆ. ಈ ಪ್ರಕಾರ ಬೋಧ ವಿಮೋಚನೆ ಮಾಡಿ, ಸಂಸ್ಕೃತಿಯ ರಹಸ್ಯ ತಿಳಿಸಿ, ದೈವೀ ಶಕ್ತಿಯನ್ನು ಜಾಗ್ರತ ಮಾಡಿ, ದಾಸೋಹಂಭಾವದಿಂದ ಕ್ರಿಯೆಗಳನ್ನು ಮಾಡಿ ಧರ್ಮಸ್ವರೂಪರಾಗಿ ಸತ್ಯ, ಪ್ರೇಮ, ಸೌಂದರ್ಯ, ಆನಂದಗಳ ನೆಲೆಯಾಗೆಂದೇ ಜಗಕ್ಕೆ ಶರಣಮಾರ್ಗವು ತಿಳಿಸುತ್ತದೆ.

## ಸ್ತ್ರೀಯರುಳು ಸನ್ಮಾರ್ಗಿಯಾಗಿರುವದು.

ಮೇಲೆ ಮೇಲೆ ಪತಿಯ ಮಾತಿಗಡ್ಡವು ಬರ್ಪ ।
ಳವಳು ಸತಿಯಳಲ್ಲ ದೊಡ್ಡ ಡೋಲು ॥
ಅಂಥ ಸತಿಯ ಬಿಟ್ಟು ಅಡವಿ ಸೇರ್ಪುದೆ ಮೇಲು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೪೨ ॥

ಪತಿಯ ಮಾತು ಕೇಳಿ ಸೋದರರನು ಬಿಟ್ಟು ।
ಬೇರೆ ಹೋಗುವವನು ಹ ಚ್ಚು ಮನುಜ ॥
ನಾಯಿಬಾಲ ಪಿಡಿದು ನದಿಯ ನುತ್ತರಿಪನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೪೩ ॥

ಪತಿಯು ಮಾಳ್ಪ ಕೆಡಕು ಪತಿಗೆ ತಪ್ಪದೆ ಬರ್ಕುಂ ।
ಪತಿಯು ಮಾಳ್ಪವೊಳಿತು ಸತಿಗೆ ಅರ್ಧ ॥
ಪತಿಯು ಮಾಳ್ಪ ಕಡಕು ಸತಿಗದೇತಕೆ ಬರದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೪೪ ॥

ನರರು ಸಹಜ ದುರ್ಗಣಗಳನ್ನು ಮಾಣರ್ರೈ ।
ನಾಯಿ ಬಾಲ ಡೊಂಕು ತಿದ್ದಲಹುದೆ ॥
ಮೀರಿದವಳು ಗಂಡನಂ ಮಾರದಿರುವಳೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೪೫ ॥

ಕೈಕೆ ಹುಟ್ಟಿ ಕೆಡಿಸಿದಳು ರಾಮಪಟ್ಟವಂ ।
ಸೀತೆ ಹುಟ್ಟಿ ನಾಶವಾಯ್ತು ಲಂಕೆ ॥
ಹೇಳಲಾಗದೈಯ್ಯ ಚಿತ್ರಾಂಗಿ ಕೆಡಿಸಿದಳ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೪೬ ॥

ಸುಳ್ಳುಗಾರನನ್ನು ಗ್ರಾಮಾಧಿಪತಿ ಬಲ್ಲ ।
ಸತ್ಯಮಾಡುವವನ ಸ್ವಾಮಿ ಬಲ್ಲ ॥

ಮಿಕ್ಕು ತಿಂಬ ಪತಿಯು ಹೆಂಡತಿ ಬಲ್ಲಳೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೪೭ ॥

ಅಲ್ಲದ ಸತಿ ಬಲ್ಲಿದ ಸತಿ ।
ನಲ್ಲನ ಪರಿಗಣಿಸದವಳ ಬಿಡದಿರ್ಪವನೇ ॥
ಗೊಲ್ಲನುಮಲ್ಲವೆ ಧರೆಯೊಳ್ ।
ಗೊಲ್ಲನಿಗಿನ್ನಿಹವೆ ಬೇರೆ ಕೋಡುಗಳ್ಳೆವೆಮಾ ॥ ೧೪೮ ॥

## ಸ್ತ್ರೀಯುಳು ಪತಿವ್ರತೆಯಾಗಿರುವಳು.

ಪತಿಯು ಮಾನಸದೊಳು ಪರಮಾತ್ಮನೆನ್ನುತ ।
ನುತಿಪ ಸತಿಗೆ ಪರವು ಲಭಿಸುವೆಂಬರ್ ॥
ಪತಿಯು ದೂರುತಿರ್ಪ ಸುದತಿಗೆ ದುರ್ಗತಿ ।
ಸತತ ಬಾಧಿಸುವುದು ಕೇಳು ವೇಮಾ ॥ ೧೪೯ ॥

ಪುರುಷನರಿಯೆ ಕೊಲ್ವ ಭೂಪ ಕೇಳ್ಕೊಡೆ ಗೆಲ್ವ
ಅಖಿಳ ನಿಂದೆಗಳಿಗೆ ಆಲಯವದು ॥
ಪರ ಪುರುಷಗಮನವು ಪ್ರತ್ಯಕ್ಷ ನರಕವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೫೦ ॥

ಊರ ಹಂದಿ ಅರಿಯದುತ್ತರ ಪೂರ್ವವ ।
ಕೆಟ್ಟ ನರಕವನ್ನು ಕೆದರುತಿಹುದು ॥
ಪತ್ನಿ ಧರ್ಮ ಮಹಿಮೆ ಕಾಕ ತಾನರಿವನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೫೧ ॥

## ಸ್ತ್ರೀಲಂಪಟತನ ಬಿಡುವುದು.

ಸ್ತ್ರೀತಲೆಯೊಳು ರುದ್ರವಿಗುಂ ।
ಸ್ತ್ರೀಬಾಯೊಳು ಬ್ರಹ್ಮಗನಿಶಮಾಲೋಚಿಸಲಾ ॥

ಸ್ತ್ರೀವಕ್ಷದೊಳಂ ಹರಿಗಂ ।
ಸ್ತ್ರೀಯರನಂ ತ್ಯಜಿಸರವರು ಚಿನ್ಮಯ ವೇಮಾ ॥ ೧೫೨ ॥

ತನ್ನ ಪಡೆದ ತಾಯಿಯಂದದೊಳಿರ್ದರು ।
ಅನ್ಯ ಕಾಂತೆಯರೆಲ್ಲರನು ಬೆದಕಿ ನೋಡೆ ॥
ಹೆತ್ತ ತಾಯಿಯ ಮೊಲೆಗಳನು ಕಂಡರಿಯರೇನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೫೩ ॥

ಸಂಧ್ಯ ಮಾಡಿದರೇನು ಜಪವ ಮಾಡಿದರೇನು
ವೇದ ಶಾಸ್ತ್ರಗಳನು ಓದಲೇನು ॥
ಸುದತಿ ಕೂಡಿದವನು ಬ್ರಾಹ್ಮಣನಲ್ಲವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೫೪ ॥

ಹುಚ್ಚು ನರನಿಗಂತೆ ವೇಷಧಾರಿಗುಮಂತೆ ।
ರೋಗಿಗಂತೆ ಪರಮ ಯೋಗಿಗಂತೆ ।
ಸ್ತ್ರೀಯರನೀಕ್ಷಿಸೆ ಚಿತ್ತವು ಕೆಡುವುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೫೫ ॥

ಮೊಲೆಯ ಕುಡಿದು ಬೆಳೆದು ಮೊಲೆಗೆ ತಾನಾಶಿಸಿ ।
ಮೊಲೆಯ ಕತದಿ ಮುಕ್ತಿ ಮಂದವಾಯ್ತು ॥
ಮೊಲೆಯನು ತೊರೆದವನೆ ಸರ್ವಜ್ಞನಹ ಯೋಗಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೫೬ ॥

ಕಚವು, ಕಕ್ಷವು, ಬಾಯಿಯು, ಕಣ್ಣು, ತನುವು ।
ನಾಭಿಯಿವು ಮಾರಗೇಹವು ನಾರಿಗನಿಶ ॥
ಸಹಿಸಲಾರದ ಕವಿಗಳು ಹೊಗಳ್ದರಿಂತು ।
ವಿಮಲಗುಣ ರಾಜಯೋಗೀಂದ್ರ ವೇಮನಾರ್ಯಾ ॥ ೧೫೭ ॥

ಹಿಂದೆ ನೋಡಲೆಣಿಸೆ ಕಷ್ಟಬ ಕುಂಟೆಯು ।
ಮುಂದೆ ನೋಡಲೆಣಿಸೆ ಕೊಳಕು ಕುಂಟೆ ॥

ಸುಂದರಿಯನು ನೋಡುತಾನಂದ ಪಡುವರು ||
ವಿಶ್ವತೋಭಿರಾಮ ಕೇಳೊ ವೇಮಾ || ೧೫೮ ||

ಯೋನಿಯಲ್ಲಿ ಹುಟ್ಟಿ ಯೋನಿಯ ಕೆಡಿಪುದು |
ಮೊಲೆಯ ಕುಡಿದು ಬೆಳೆದು ಮೊಲೆಯ ಪಿಡಿವ ||
ಸೃಷ್ಟಿಯಲ್ಲಿ ಪ್ರಾಣಿಗಿಲ್ಲವು ನಾಚಿಕೆ |
ವಿಶ್ವತೋಭಿರಾಮ ಕೇಳೊ ವೇಮಾ || ೧೫೯ ||

ಕುಚಗಳ ಕುಡಿದಿಹ ಮನುಜರು |
ಕುಚಗಳ ಮೇಲಾಸೆ ಪಟ್ಟು ಗತಿಸುವರಿಳೆಯೊಳ್ ||
ಕುಚಗಳ್ ಮಾಂಸದ ಮುದ್ದೆಗಳ್ |
ಕುಚಗಳೊಳೇನಿಹುದು ಸಾರ ಪೇಳ್ವೆ ವೇಮಾ || ೧೬೦ ||

ಕುಚಗಳಲ್ಪರ ಸತಿಗೊಪ್ಪಿದ |
ಕುಚಗಳ ಮೇಲ್ಪಾಪದ ದೃಷ್ಟಿ ಬೀಳದ ಮೊದಲೇ ||
ಕುಚಗಳಿವು ಮೊದಲು ಕುಡಿದಿಹ |
ಕುಚಗಳ್ನಿಜವೆಂದು ತಿಳಿವುದೈ ವರ ವೇಮಾ || ೧೬೧ ||

ಹಲಸು ತೊಳೆಗಳಿಗಿಂತ ಸಕ್ಕರೆಯ ಸವಿಗಿಂತ |
ಸಣ್ಣ ಜೇನಿನ ರುಚಿಗು ಗಿಣ್ಣಕ್ಕಿಂತ ||
ಕಬ್ಬು ರಸಕ್ಕಿಂತ ಕನ್ನೆಯ ನುಡಿ ಸಿಹಿಯೆ |
ವಿಶ್ವತೋಭಿರಾಮ ಕೇಳೊ ವೇಮಾ || ೧೬೨ ||

ಜೇನು ಶರ್ಕರೆಯದು ಸಿಹಿಯ ಮಾವಿನ ಹಣ್ಣು |
ತಿಂದ ಹೊರತು ಸಿಹಿಯು ತಿಳಿವುದಿಲ್ಲ ||
ನೋಡಿದೊಡನೆ ಹುಟ್ಟುವುದು ಸ್ತ್ರೀಯೊಳ್ವ್ಯಾಮೋಹ |
ವಿಶ್ವತೋಭಿರಾಮ ಕೇಳೊ ವೇಮಾ || ೧೬೩ ||

ರಾಜರಾಜರ್ಗೆಲ್ಲ ಯುದ್ಧರಂಗದ ಚಿಂತೆ |
ಪರಮ ಮೌನಿಗಳಿಗೆ ಪದದ ಚಿಂತೆ ||

ಅಲ್ಪನರರಿಗೆಲ್ಲ ಸ್ತ್ರೀಯರ ಚಿಂತೆಯು ।
ವಿಶ್ವತೋಭಿರಾಮು ಕೇಳೊ ವೇಮಾ ॥ ೧೬೪ ॥

ಆಧರಾಮೃತವ ನೋಡಿ ಸಕಲವಂ ಮರೆಯುವನು ।
ತರುಣಿ ರೂಪವ ನೋಡಿ ತನ್ನ ಮರೆವ ।
ಯೋಗಿಯು ನೋಡಿ ತಾಂ ಯೋಗವನು ಮರೆವನೈ ।
ವಿಶ್ವತೋಭಿರಾಮು ಕೇಳೊ ವೇಮಾ ॥ ೧೬೫ ॥

ತೊಗಲು ತೊಗಲೊಳಿಟ್ಟು ಮರ್ದಿಸೆ ಮರ್ದಿಸೆ ।
ಕೊಳಕು ಸೋರಿ ಮುದ್ದೆಗಟ್ಟುತಿಹುದು ॥
ಮುದ್ದೆ ಟೊಂಕದಿಟ್ಟು ಮುದ್ದಾಡಲಾದುವೇ ।
ವಿಶ್ವತೋಭಿರಾಮು ಕೇಳೊ ವೇಮಾ ॥ ೧೬೬ ॥

ಸುಗ್ಣ್ಯವೆಲ್ಲವು ಸೇರಿ ಪುರುಷನಾಗುದಿಪನು ।
ನಾಶನವಶದೊಳು ಸ್ತ್ರೀಯು ಜನಿಸು ತಿಹಳು ॥
ಕಷ್ಟವಾಸತಿಯೊಂದು ಕಂಡು ಕುಗ್ಗರು ಮಾತ್ರೆ ।
ವಿಶ್ವತೋಭಿರಾಮು ಕೇಳೊ ವೇಮಾ ॥ ೧೬೭ ॥

---

## ಜಾರತನ ಬಿಡುವುದು.

ಪರಸತಿಗಮನವು ಪ್ರತ್ಯಕ್ಷ ನರಕವು ।
ತಿಳಿಯೆ ದೂಷಣೆಗೆ ಮಹಾಲಯವದು ॥
ಪುರುಷ ಕೇಳಿ ಕೊಲ್ವ ಭೂಪತಿ ನೋಯಿಪ ॥
ವಿಶ್ವತೋಭಿರಾಮು ಕೇಳೊ ವೇಮಾ ॥ ೧೬೮ ॥

ತನ್ನ ಸವತಿಯೊಡನೆ ತನ್ನ ಆಯುಧದೊಡನೆ ।
ಅಗ್ನಿಯೊಡನೆ ಅನ್ಯ ಯುವತಿಯೊಡನೆ ॥
ಹಾಸ್ಯ ಮಾಡುವುದೆಲ್ಲ ಹಾನಿಯು ಪ್ರಾಣಕ್ಕೆ ।
ವಿಶ್ವತೋಭಿರಾಮು ಕೇಳೊ ವೇಮಾ ॥ ೧೬೯ ॥

ಕೃತುವ ಪಾಳ್ಪೆವೆಂದು ಬಿಕ್ರನೆ ಬೀಗುತಿ ।
ರಂಡೆಯೊಡನೆ ಕೂಡಿ ರತಿಯು ವಾಳ್ಪ ।
ಮುಂಡೆಯ ಮಗನನು ಮೆಚ್ಚರು ಸಭೆಯೊಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೦ ॥

ವಿಟನ ಕೂಡಿ ಬಿಟ್ಟ ಸೂಳೆಯ ಮೋಹದಿ ।
ದೀನ ವಿಟನದೋರ್ಷ ತಿರುಗುತಿರ್ಪ ।
ಕೆರದ ಗುಂಪನು ನಾಯಿ ಕಂಡವೊಲಾಗುವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೧ ॥

ಮನೆಯ ಸತಿಯ ಬಿಟ್ಟು ಸೂಳೆಯ ಬೆನ್ನತಿ ।
ತಿರುಗುತಿರ್ಪನವನು ಹುಚ್ಚು ನರನು ॥
ಪೈರು ಕೋಲನ ಬಿಟ್ಟು ಅಂಕಲಾಗುವಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೨ ॥

ಬೇಗ ಹಾಲನೊಯ್ದು ಪ್ರೇಮದಿ ಸಾಕಲು
ವಿಷವು ತೊಲಗಿ ಸಿಹಿಯನೊಂದವೆಂದುಂ ॥
ವಿಟನು ವಿಟನೆ ಹೊರತು ಧರ್ಮಜ್ಞನಪ್ಪನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೩ ॥

ತೊತ್ತ ಕೂತ ತಾಳಿಯೊಳ್ದೋಷವು ದೋಷವು ।
ಸೂಳೆಯನ್ನು ಕೂಡೆ ಲಜ್ಜೆ ಕೆಡುಗು ॥
ಜಾರೆಯನ್ನು ಸೇರೆ ಸಾವಿಗ ಮೂಲವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೪ ॥

ಸತಿಯು ರಂಭೆಯಾಗಿ ಶೀಲವತಿಯಾದರುಂ ।
ಜಾರ ಪುರುಷನೇಕೆ ಜಾರು ಬಿಡನ ॥
ಕಸ್ತೂರಿ ಮೂಳೆಯನ್ನು ನಾಯಿ ಕಡಿದಂದದಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೫ ॥

ತಿಂಗು ಕಲಿತ ಸೂಳೆ ಬಂಗಾರವಾಸಿಪಳ್ ।
ಅಲ್ಪಸ್ವಲ್ಪದಿಂದ ತೃಪ್ತಳಹಳೆ ।
ಬಟ್ಟೆ ಮೇದ ಎಮ್ಮೆ ಕೂಗಲು ಪೋಪದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೬ ॥

---

## ಸಂಸಾರ ಸುಖವು ಅಸ್ಥಿರವು.

ಅಲ್ಪಸೌಖ್ಯಕಾಸೆ ಮಾಡುವ ಮನುಜನು ।
ಬಹಳ ದುಃಖದಿಂದ ಬಾಧೆ ಪಡುವ ॥
ಪರಸುಖವರಿತು ತಾಂ ಬದುಕಲು ಬೇಕಯ್ಯ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೭ ॥

ದಾರುವಿನೋಳ್ಬೆಂಕಿ ತಾನಿರಲಪ್ಪುದು ।
ಬೆಂಕಿಯಲ್ಲಿ ದಾರುವಿರದು ಜಗದಿ ॥
ದಾರುವಿನೊಳು ಬೆಂಕಿಯಂದದಿ ಸಂಸಾರ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೮ ॥

ಇಹದೊಳ್ಳಿದೆ ಸುಖವು ಇನಿತಾದರಿಲ್ಲವು ।
ಪರದಿ ಸುಖವದೆಲ್ಲಿ ದೊರೆವುದರಿಯೆ ॥
ಜನನವಿಲ್ಲದೆಂತು ಮರಣವು ಬರ್ಪುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೭೯ ॥

ಕಾಡು ಗಿಡವ ಕಡಿದು ಕಡು ರಮ್ಯವಾಗಿಹ ।
ಉನ್ನತೋನ್ನತದ ವಿಶಾಲವೆನಿಪ ॥
ಮನೆಯ ಕಟ್ಟಿ ನೋಡಲಾಶ್ಚರ್ಯಗೊಳ್ಳುವ ।
ಕೇಡನರಿಯನವನು ನೋಡು ವೇಮಾ ॥ ೧೮೦ ॥

ಏನು ತಂದ ಮತ್ತೆ ತಾನೇನು ಕೊಂಡೊಯ್ದ ।
ಹುಟ್ಟಿದಾಗ ಸತ್ತು ಹೋಗುವಾಗ ॥

ಧನವು ಪೋಗುವುದೆಲ್ಲಿ ತಾಂ ಪೋಗುವನದೆಲ್ಲಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೮೧ ॥

ತಂದೆತಾಯ್ಗಳೆಷ್ಟೋ ತನ್ನ ಜನ್ಮಗಳೆಷ್ಟೋ ।
ತಿರುಗಿ ಕಾಣದಿರ್ಪ ದಿಸೆಗಳೆಷ್ಟೋ ॥
ಸ್ಥಿರವಿದಸ್ಥಿರವೆಂದು ತಿಳಿಯನಜ್ಞಾನಿಯು।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೮೨ ॥

ಕ್ರಿಮಿಯು ಹುಣ್ಣು, ಬೆಂಕಿ, ಗೃಧ್ರವು ನಾಯಿಯು ।
ನರಿಯುವಿವುಗಳೆಲ್ಲ ವಸೆಯಾಗಿ ॥
ಕಿತ್ತು ತಿನ್ನುತಿರುವ ತನುವ ಬೆಳೆಸುವರಲ್ಲ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೮೩ ॥

ನನ್ನದು ಮನೆ ನನ್ನದು ಹೊಲ ।
ನನ್ನದು ತನುವೆಂದು ಕಾಮಿಯಾಗುತೆ ಧರೆಯೊಳ್ ॥
ಉನ್ನತ ಪದವಿಯು ಕೋರದೆ ।
ಮುನ್ನಂ ದಾಯಾದಿಗಳಿಗೆ ಯೊವುದೆ ವೇಮಾ ॥ ೧೮೪ ॥

ಸತಿಯ ಹೊಂದಲು ಸಲ್ಲ ಸುತರ ಹೊಂದಲು ಸಲ್ಲ ।
ವ್ಯಥೆಯಪಡುತಿಹನವನು ಹುಚ್ಚ ನರನು ।
ನೆಲದೊಳಿದ್ದ ಕಲ್ಲು ತಲೆಯಲ್ಲಿ ಹೊತ್ತಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೮೫ ॥

ಅಸ್ಥಿರವಿದು ಕಾಯವಧಿಕ ಸಂಕಟಪಟ್ಟು ।
ಹಲವು ವಿಧಗಳಿಂದ ಬೆಳಸಿ ಬೆಳಸಿ ॥
ಅಗ್ನಿಗೀವರಂತೆ ಅಡವಿ ನರಿಗೀವರೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೮೬ ॥
ಅನೃತವಾಡಲಾರದಾ ಹರಿಶ್ಚಂದ್ರನು ।
ಸತಿಯ ಸುತರ ಮಾರಿ ತಾನು ಸಹಿತ ॥
ಹೊಲೆಯದಾಸನಾಗಿ ವರ್ತಿಸಲಿಲ್ಲವೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೮೭ ॥

# ಶಿವಾನುಭವ

ವರ್ಷ ೨೪ | ಜನವರಿ ೧೯೫೦ | ಸಂಚಿಕೆ ೪

## ಸಮಾಜ ಸೇವಾ ಕಾಯಕ

(ಲೇ: — ವಿಶ್ವ ಪ್ರೇಮಿ ಧಾರವಾಡ)

ಕನ್ನಡ ಗ್ರಂಥ ಭಾಂಡಾರವನ್ನು ಬೈಲಿಗೆಳೆದ ಪಂ|| ಆರ್. ನರಸಿಂಹಾಚಾರ್ಯರಂತೆ ರಾವಬಹಾದ್ದೂರ ಪಿ. ಜಿ ಹಳಕಟ್ಟಿ ವಿಜಾಪುರ ಇವರು ಶಿವಶರಣರ ಕಾಯಕವನ್ನು ಕೈಕೊಂಡು ಸರಸೇವೆಯೇ ಹರಸೇವೆಯೆಂದು ಭಾವಿಸಿ ತಮ್ಮ ಶಿವಾನುಭವ ಮಾಸಪತ್ರಿಕೆಯ ದ್ವಾರಾ ವಚನವಾಙ್ಮಯಾತ್ಮಕ ಹಾಗು ಐತಿಹಾಸಿಕ, ಸಾಮಾಜಿಕ, ವೀರಶೈವ ಸಂಸ್ಕೃತಿಯನ್ನು ಸಾರುತ್ತ ಬಂದಿದ್ದಾರೆ. ಬಸವಾದಿ ಪ್ರಮಥರಂತೆ ಶಿವಾನುಭವ ಮಂಟಪಗಳನ್ನು ಕರ್ನಾಟಕದ ಭಾಗಗಳಲ್ಲಿ ಸ್ಥಾಪಿಸಿ, ಶಿವಾನುಭವವು ಸ್ಥಿರವಾಗಿ ಆಯಾ ಗ್ರಾಮುಗಳಲ್ಲಿ ನಡೆಯುವಂತೆ ಯೋಜಿಸಿದ್ದಾರೆ. ಶಿವಶರಣರ ಬೀಡಾದ ಈ ಕರ್ನಾಟಕದಲ್ಲಿಯು ಮುಸಿಗಡಿದು ಮುಗ್ಗಾಗುತ್ತಿರುವ ನೂರೊಂದು ಸ್ಥಲಾಂತರ್ಗತ ಷಟ್‌ಸ್ಥಲ ಸಿದ್ಧಾಂತಪೂರಿತ ಶಿವಶರಣರ ವಚನಗಳು ಒತ್ತಟ್ಟಿಗೆ ಗ್ರಂಥರೂಪವಾಗಿ ಸಿಕ್ಕದಿದ್ದರೂ ಸೋವುತ್ತ ಆಯುತ್ತ ತೀವುತ್ತ ಅವಿಶ್ರಾಂತ ಶ್ರಮದಿಂದ ೬೩ ಗ್ರಂಥಗಳನ್ನು ಸಿದ್ಧಗೊಳಿಸಿ ಓದುಗರ ಕರತಳಾಮಳಕವಾಗಿರಿಸಿದ್ದಲ್ಲದೆ ಅವುಗಳನ್ನು ಆಚರಿಸಿ ಆನಂದಗೊಳ್ಳುವಂತೆ ಮಾಡಿದ್ದಾರೆ. ಇವರು ಬರೆದ ಗ್ರಂಥಗಳನ್ನು ಸನ್ಮಾನ್ಯ ದಿವಾಕರರು ಅರಿದು ಆನಂದಿಸಿ "ವಚನ ವಾಙ್ಮಯ ರಹಸ್ಯ" ಎಂಬ ಗ್ರಂಥದಿಂದ ತಮ್ಮ ಸದ್ಭಾವವನ್ನು ಸಂದರ್ಶಿಸಿದ ಉದಾಹರಣೆಯೇ ಸಾಕು. ಇವರಂತೆ ಅನೇಕ ಮಹನೀಯರು ಈ ಗ್ರಂಥಗಳ ವಿಚಾರ ವಿಕಾಸವನ್ನು ವಿಶದೀಕರಿಸುತ್ತ

ಲಿದ್ದಾರೆ. ಹಾಗು ಸರಕಾರದವರು ವಚನವಾಙ್ಮಯದ ಮಹತ್ವವನ್ನರಿತು ಉಚ್ಚ ಶಿಕ್ಷಣಾಲಯಗಳಲ್ಲಿ ಇವುಗಳನ್ನು ಬಳಿಕೆಯಲ್ಲಿ ತರುತ್ತಲಿದ್ದಾರೆ.

ರಾವಬಹಾದ್ದೂರರವರು ವಚನಗಳನ್ನು ಸಂಗ್ರಹಿಸಿ "ವಚನಶಾಸ್ತ್ರ ಸಾರ" ಎಂಬ ಮೂರು ಭಾಗಗಳನ್ನು ಮುದ್ರಿಸಿದ್ದಾರೆ. ಇವುಗಳಲ್ಲಿ ಸೃಷ್ಟಿಯ ಸ್ವರೂಪವೂ ಆ ಸೃಷ್ಟಿಕರ್ತನ ವ್ಯಾಪಕತ್ವವೂ ವಿಶ್ವಧರ್ಮದ ತತ್ವಗಳೂ ಆಚರಣೆಗಳೂ ಕ್ರಿಯೆಗಳೂ ಆವರಣಗಳೂ ಸಿದ್ಧಾಂತಗಳೂ ಸ್ಥಲಸ್ಥಲಾಂತರಗಳ ಸಂಬಂಧಗಳೂ ಸಕೀಲುಗಳೂ ವಿಶದವಾಗಿ ವಿವರಿಸಲ್ಪಟ್ಟಿವೆ. ಇವುಗಳ ಗೂಢವು ಓದುಗರಿಗೆ ಗಾಢವಾಗಬಾರದೆಂದು ಶಿವಾನುಭವ ಶಬ್ದಕೋಶವೆಂಬ ಗ್ರಂಥವನ್ನು ತಮ್ಮ ಅನುಭಾವದೊಡನೆ ಅಚ್ಚು ಹಾಕಿರುವದು ಮಹತ್ವದ್ದು. ನಿರಾಕಾರವಾದ ದಿವ್ಯಲಿಂಗವು ವಿಶ್ವವನ್ನು ವ್ಯಾಪಿಸಿದಂತೆ ಜ್ಯೋತಿರೂಪಾಗಿ ಮಾನವನ ಶರೀರವನ್ನು ವ್ಯಾಪಿಸಿದೆಯೆಂಬ ಅನುಭವಾಮೃತವನ್ನು ನೀಡುವ ಶೂನ್ಯ ಸಂಪಾದನೆಯೆಂಬ ಗ್ರಂಥವು ಇವರಿಂದ ಹೊರಹೊಮ್ಮಿದ ಗ್ರಂಥಗಳಲ್ಲಿ ಮಾನವ ಕೋಟಿಯನ್ನೇ ಮರುಳುಗೊಳಿಸುವಂತಿದೆ. ಮೊದಲು ಶೂನ್ಯಸಂಪಾದನೆ ಎಂಬ ಗ್ರಂಥವಿದ್ದುದೇ ಜನರಿಗೆ ಗೊತ್ತಿರಲಿಲ್ಲ. ಅದು ಇವರಿಂದಲೇ ಪ್ರಕಾಶಿತವಾಯಿತು.

ಮಾನವನ ಶಾರೀರಕ ಮಾನಸಿಕ ಭಾವಿಕ ಪ್ರವೃತ್ತಿಗಳನ್ನು ನಿವೃತ್ತಿಗೊಳಿಸಿ ನಿಜಾನಂದದಲ್ಲಿ ನಿಲ್ಲುವ ಸುಗಮವಾದ ಮಾರ್ಗಗಳನ್ನು ಗೊತ್ತುಹಚ್ಚಿ ಆಚರಿಸ್ಸಿದ ಅಂಗಲಿಂಗಾನುಭವವುಳ್ಳ ಈ ವಚನ ಗ್ರಂಥಗಳನ್ನು ಪರಿಶೀಲಿಸಿದರೆ ಪ್ರಕೃತಿ (ನೈಸರ್ಗಿಕ) ಧರ್ಮವೇ ದೇಹಧರ್ಮ, ದೇಹಧರ್ಮವೇ ಸಮಾಜಧರ್ಮ, ಸಮಾಜಧರ್ಮವೇ ವಿಶ್ವಧರ್ಮವೆಂಬ ಸಿದ್ಧಾಂತವು ಸ್ಪಷ್ಟವಾಗುತ್ತದೆ. ಮತ್ತು ವ್ಯಷ್ಟಿರೂಪಾದ ಆತ್ಮನಲ್ಲಿಯೂ ಸಮಷ್ಟಿರೂಪಾದ ಸಮಾಜದಲ್ಲಿಯೂ ಶಾಂತಿಯು ಸ್ಥಿರಗೊಳ್ಳುವ ಸಿದ್ಧಾಂತಗಳು ಒಡೆದು ಕಾಣುತ್ತವೆ.

ಇವುಗಳಲ್ಲಿ ಶಿರಃಪ್ರಧಾನವಾದ ಬ್ರಹ್ಮ, ಶಿಖಾ, ಪಶ್ಚಿಮ ಸ್ಥಾನಗಳೆಂತಿರ್ಪ ಬಸವೇಶ್ವರ ವಚನ, ಚನ್ನಬಸವ ವಚನ, ಪ್ರಭುದೇವರ ವಚನಗಳು, ಆಧಾರಾದಿ ಷಟ್‌ಸ್ಥಲಾಂತರ್ಗತವಾದ ಮಹಾದೇವಿಯಕ್ಕಗಳ ವಚನ, ಹಡಪದ ಲಿಂಗಮ್ಮನ ವಚನ, ದೇವರದಾಸಿಮಯ್ಯನ ವಚನ, ಸಿದ್ಧರಾಮಯ್ಯನ ವಚನ, ಮಡಿವಾಳಮಾಚಿದೇವನ ವಚನ, ಅಂಬಿಗರ

ಚೌಡಯ್ಯಗಳ ವಚನ, ಉರುಲಿಂಗಪೆದ್ದಿಗಳ ವಚನ, ಸಂಗನಬಸವಣ್ಣನ ವಚನ, ಹಡಪದಪ್ಪಣ್ಣಗಳ ವಚನ, ಆದಯ್ಯನ ವಚನ, ಸಕಲೇಶಮಾದರಸರ ವಚನ, ಗಣದಾಸಿ ವೀರಣ್ಣನ ವಚನ, ಘನಲಿಂಗಿಯ ವಚನ, ಸಂಕೀರ್ಣ ವಚನಗಳ ಭಾಗಗಳು ೨, ಮಹಾನುಭಾವ ಪ್ರಕಾಶಿಕೆ, ಶಿವಾನುಭವ ಸೃಷ್ಟಿಯ ವಚನ, ಭಕ್ತಿಯ ವಚನ, ಪರಮಾತ್ಮನ ಸ್ವರೂಪ ವಚನ, ಮೆರೆಮಿಂಡದೇವನ ವಚನ, ಮಾನವಕೋಟಿಗೆ ಆದರ್ಶಗಳಾಗಿವೆ. ಶಿವಶರಣರು ತಮ್ಮ ಅನುಭವದಿಂದ ಕಂಡುಹಿಡಿದ ಅಚ್ಚಳಿಯದ ನೈತಿಕ ಪಾರಮಾರ್ಥಿಕ ತತ್ವಗಳನ್ನು ವಿಸ್ತೃತವಾಗಿ ಇವುಗಳಲ್ಲಿ ವಿವರಿಸಿದ್ದಾರೆ. ಇದಲ್ಲದೆ ನೂರೊಂದು ಸ್ಥಲಗಳನ್ನು ವಿಸ್ತರಿಸುವ ಏಕೋತ್ತರ ಶತಸ್ಥಲವೆಂಬ ಗ್ರಂಥವು ವೇದಾಂತವನ್ನು ವೀರಶೈವ ಮಾರ್ಗದಿಂದ ರೂಪಗೊಳಿಸಿ ತಾನೇ ತಾನಾಗುವ ಬ್ರಹ್ಮಾನಂದ ವೃತ್ತಿಯನ್ನು ಲಿಂಗಾಂಗ ಸಾಮರಸ್ಯದಿಂದ ಒಡಮೂಡಿಸಿದ್ದಾರೆ

ಶಿವಶರಣರು ಕೈಕೊಂಡ ಕಾರ್ಯವನ್ನೂ ಅವರ ವೀರವೃತ್ತಿ ಭೂತದಯಾದಿ ಧರ್ಮಶೀಲಗಳನ್ನೂ ವಿವರಿಸುವ ಹಂಪೆಯ ಹರಿಹರಕೃತ ರಗಳೆಗಳು ೭ ಭಾಗಗಳಾಗಿ ಕಂಗೊಳಿಸುತ್ತವೆ. ಇವುಗಳಂತೆ ತೋಂಟದಾರ್ಯರಗಳೆ ವೀರಶೈವ ರಗಳೆಗಳು ವಿರಾಜಿಸುತ್ತಲಿವೆ. ಹಾಗು ಸ್ತೋತ್ರ ಮತ್ತು ಪದ್ಯಗಳಿಂದೊಡಗೂಡಿದ ಶಿವಾನುಭವದರ್ಪಣ, ಸೋಮೇಕಟ್ಟೆ ಕರಿವೃಕ್ಷಭೇಂದ್ರರ ಕೈವಲ್ಯಪದಗಳು, ಮಹಿಮ್ನಸ್ತೋತ್ರ ( ಶ್ರೀಶಂಭುಲಿಂಗ ಸ್ವಾಮಿಗಳು ವಿದ್ಯಾವಾಚಸ್ಪತಿಯವರ ಟೀಕೆ ) ಹರಳಯ್ಯನ ತ್ರಿಪದಿ, ಶಿವಶರಣರ ಪದಗಳು ಭಾಗ ೧, ಎಂಬವುಗಳು ಮನನೀಯವಾಗಿವೆ. ಕಾವ್ಯಗ್ರಂಥಗಳಾದ ವರದಾನಿ ಗುಡ್ಡಮ್ಮ ಚರಿತ್ರೆ, ಆದಿಶೆಟ್ಟಿ ಪುರಾಣ (ರಾಘವಾಂಕಕೃತ), ಬೀಳಗಿ ಅರಸರ ವಂಶಾವಳಿ (ಪುರಾತನ ಕಾವ್ಯ,) ಅವಧೂತಗೀತೆ, (ಗುರುಬಸವ ಕವಿಕೃತ) ಗಳು ಮನೋಹರವಾಗಿವೆ. ಗದ್ಯಗ್ರಂಥಗಳಾದ ಶಿವಾನುಭವ ಸೂತ್ರಸಾರ, ಲಿಂಗಪೂಜೆಯ ತತ್ವಗಳು, ನಿರಂಜನವಂಶರತ್ನಾಕರ, ಕಾಲಜ್ಞಾನದ ವಚನಗಳು, ಬಸವೇಶ್ವರನ ಷಟ್‌ಸ್ಥಲ ವಚನದ ಕಥಾಸಾರ, ಶಿಕ್ಷಣ ಪ್ರಸಾರಿಯಾದ ಚನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆ, ಕೃಷಿಜ್ಞಾನ ಪ್ರದೀಪಿಕೆ, ಕೊಡಗ ಸಂಸ್ಥಾನದ ಇತಿಹಾಸ, ಕೆಳದಿ ಸಂಸ್ಥಾನದ ರಾಯರ ವಂಶಾವಳಿ, ಶಿವಶರಣರ ಚರಿತ್ರೆಗಳು ಭಾಗ ೧, ೨ ಇವೆಲ್ಲವುಗಳು ವೀರಶೈವರ ಸಂಸ್ಕೃತಿಯನ್ನೂ ಅವರ ಇತಿಹಾಸವನ್ನೂ ಪ್ರಕಾಶಪಡಿಸುತ್ತಲಿವೆ.

ಸತ್ಯ, ಅಹಿಂಸೆ, ಪ್ರೇಮ, ಶಾಂತಿ, ಸಹಾನುಭೂತಿ, ಸಹಕಾರಗಳ ಸದ್ವರ್ತನವೂ ಭಕ್ತಿಭಾವದಿಂದೊಡಗೂಡಿದ ಭೃತ್ಯಾಚಾರವೂ ದಯವೇ ಧರ್ಮದ ಬೀಜವಾದ ವಿಶ್ವಧರ್ಮದ ವಿಶಾಲವೃಕ್ಷದ ಆಶ್ರಯವೂ ಸತ್ಕಾಯಕ ಸದಾಚಾರ ಸವಿನಯಗಳಿಂದೊಡಗೂಡಿದ ಸಂಸ್ಕೃತಿಯೂ ಮಾನವ ಕೋಟಿಯಲ್ಲಿ ನೆಲೆಗೊಂಡ, "ಆಚಾರವೇ ಸ್ವರ್ಗ, ಅನಾಚಾರವೇ ನರಕ" ವೆಂಬ ನುಡಿಯನ್ನು ಅರಿದು ಲೌಕಿಕ ಪಾರಮಾರ್ಥಿಕವೆರಡನ್ನೂ ಸದಾಚಾರದಿಂದ ಸಾಧಿಸಿ, ನಿತ್ಯಸುಖಶಾಂತಿ ಸೌಭಾಗ್ಯಗಳನ್ನನುಭವಿಸಿ ಆನಂದಿಸುವ ಶಿವಶರಣರ ಎರಡೆಂಭತ್ತುಕೋಟಿ ವಚನ ಭಾಂಡಾರದಿಂದ ವಚನ ವಾಙ್ಮಯ ಜ್ಞಾನ ಪ್ರಕಾಶಕ ರತ್ನಗಳನ್ನು ಆಯ್ದಿಟ್ಟ ರಾವಬಹಾದ್ದೂರ ಪಿ. ಜಿ. ಹಳಕಟ್ಟಿಯವರಿಗೆ ಮಾನವಕೋಟಿಯೇ ಋಣಿಯಾಗದೆ ಇರದೆಂದು ನಾವು ಭಾವಿಸುತ್ತೇವೆ.

---

# ವೀರಶೈವ ಪ್ರಭೇದಗಳು.

(ಲೇಖಕರು—ಶ್ರೀಯುತ ಕಲ್ಯಾಣಪ್ಪ ಬ್ಯಾಳಿ ವಿಜಾಪುರ)

ವೀರಶೈವರಲ್ಲಿ ಕ್ರಿಯಾಭೇದದಿಂದ ಸಾಮಾನ್ಯ ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವ ಎಂದು ಮೂರು ವಿಧವುಂಟೆಂದು ನಿಜಗುಣಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ ಹೇಳಿದ್ದಾರೆ. ಸಾಮಾನ್ಯ ವೀರಶೈವರೆಂದರೆ ಯಾವದಾದರೊಂದು ಪವಿತ್ರ ಕಾರ್ಯವನ್ನು ಕೈಕೊಂಡು ಗುರುಲಿಂಗಜಂಗಮಸೇವಾರ್ಥವಾಗಿ ದುಡಿಯುವವರು. ಇವರಿಗೆ ಸಾಮಾನ್ಯವಾಗಿ ಭಕ್ತರೆಂಬ ಹೆಸರು. ಭಕ್ತರು ಭಿನ್ನ ಭಿನ್ನ ಕಾಯಕಗಳನ್ನು ಮಾಡಿದರೂ ಎಲ್ಲರೂ ಲಿಂಗಧಾರಿಗಳಾದ್ದರಿಂದ ಪರಸ್ಪರ ಅನ್ನೋದಕ ಶರೀರ ಸಂಬಂಧಗಳನ್ನು ಮಾಡಲು ಯಾವ ಅಭ್ಯಂತರವೂ ಇಲ್ಲ. ಆದರೆ ವೀರಶೈವರಲ್ಲಿ ಆರ್ಯವರ್ಣದ ಎಷ್ಟೋ ಜನಗಳು ಸೇರಿಕೊಂಡದ್ದರಿಂದ ಅವರು ತಮ್ಮ ಪರಂಪರೆಗನುಸರಿಸಿ ಇತರರೊಡನೆ ವಿವಾಹ ಸಂಬಂಧವನ್ನು ಬೆಳೆಲು ಹಿಂಜರಿದರು. ಆದರೆ ಅನ್ನೋದಕ ವ್ಯವಹಾರವು ಮಾತ್ರ ಬಳಿಕೆಯಲ್ಲಿ ಬಂದಿತು. ಆದರೆ ಇತ್ತೀಚೆಗೆ ಪರಸ್ಪರ ಭಕ್ತವರ್ಗಗಳಲ್ಲಿ ಶರೀರ ಸಂಬಂಧಗಳೂ ಆಗತೊಡಗಿವೆ.

ಇನ್ನು ವಿಶೇಷ ವೀರಶೈವರೆಂದರೆ ಮಾಹೇಶ್ವರರು. ಅವರು ಸಾಮಾನ್ಯ ವೀರಶೈವ ವರ್ಗದವರಿಗೆ ಲಿಂಗಧಾರಣೆ, ನಾಮಕರಣ, ದೀಕ್ಷೆ, ವಿದ್ಯಾ ವ್ಯಾಸಂಗ, ವಿವಾಹ, ಗೃಹವ್ಯಾಜ್ಯ ನಿರ್ಣಯ, ಅಂತ್ಯವಿಧಿ ಮುಂತಾದ ಕಾರ್ಯಗಳನ್ನು ಜರಗಿಸುವಂಥವರು. ಇದಲ್ಲದೆ ಇವರು ಅನ್ಯಮತೀಯರನ್ನು ಮತಾಂತರಗೊಳಿಸಿ ವೀರಶೈವ ಮತದಲ್ಲಿ ತೆಗೆದುಕೊಳ್ಳುವರು. ವೀರಶೈವರಲ್ಲಿ ಯಾರಾದರೂ ಅನಾಚಾರ ಅಧರ್ಮದಿಂದ ನಡೆದು ಕುಲಗೆಟ್ಟರೆ ಅಂಥವರಿಗೆ ಇವರು ಬಹಿಷ್ಕಾರ ಹಾಕುವರು. ಭಕ್ತರ ಆಚಾರ ವಿಚಾರಗಳನ್ನು ಪರೀಕ್ಷಿಸಿ ಒಳ್ಳೇ ಹಾದಿಗೆ ಹಚ್ಚತಕ್ಕವರು. ಒಟ್ಟಿನ ಮೇಲೆ ಇವರ ಕಾರ್ಯಕ್ಷೇತ್ರವು ಪ್ರಾಪಂಚಿಕ ಹಾಗೂ ಸಾಮಾಜಿಕ ವಿಷಯಗಳಿಗೆ ವಿಶೇಷವಾಗಿ ಮರ್ಯಾದಿತವಾಗಿರುತ್ತದೆ.

ಈ ವಿಶೇಷ ವೀರಶೈವರಲ್ಲಿ ಹಿರೇಮಠ, ಚರಪಟ್ಟ, ಪಂಚಸಿಂಹಾಸನ ಈ ಪ್ರಕಾರ ಕ್ರಿಯಾಭೇದದಿಂದ ತರಗತಿಗಳುಂಟಾಗಿರುತ್ತವೆ. ಆದರೆ ಈ ತರಗತಿಗಳು ಜಾತಿ ವಿಶಿಷ್ಟವಾದವುಗಳಲ್ಲ, ಗುಣಕ್ರಿಯಾ ವಿಶಿಷ್ಟವಾದವುಗಳೆಂಬದನ್ನು ಯಾರೂ ಮರೆಯಲಾಗದು. ಭಕ್ತವರ್ಗದವರು ತಮಗೆ ಪೂಜ್ಯ ಕಂಡ ವ್ಯಕ್ತಿಗಳನ್ನು ಆಯಾಯ ಸ್ಥಾನಗಳಿಗೆ ಆರಿಸುವದುಂಟು. ಆದರೆ ಮಾಹೇಶ್ವರ ಜಾತಿಯವರೇ ಆ ಸ್ಥಾನಗಳಿಗೆ ಪಾತ್ರರು, ಉಳಿದವರು ಅಲ್ಲ ಎಂಬ ಮಾತು ನಿರರ್ಥಕವಾದುದು. ಎಷ್ಟೋ ಭಕ್ತ ಮನೆತನದವರಲ್ಲಿ ಪಟ್ಟ ಹಾಗೂ ಸಿಂಹಾಸನಾಧಿಕಾರಿಗಳಾದ ಸಾಂಪ್ರದಾಯಗಳುಂಟು. ಮೊದಲು ಮಾಹೇಶ್ವರ ಎಂಬ ಜಾತಿಯಿದ್ದಿಲ್ಲ. ಆದರೆ ಆಯಾಯ ಪೂಜ್ಯ ವ್ಯಕ್ತಿಗಳ ಮನೆತನದವರು ತಮ್ಮ ಗುರುತ್ವವನ್ನು ಕಾಪಾಡಿಕೊಳ್ಳಲಿಕ್ಕೆ ಇತರ ಮಾಹೇಶ್ವರರೊಡನೆ ಶರೀರ ಸಂಬಂಧ ಬೆಳೆಯಿಸಿ ಮಧ್ಯಂತರದಲ್ಲಿ ಮಾಹೇಶ್ವರ ಎಂಬದೊಂದು ಜಾತಿಯನ್ನು ನಿರ್ಮಿಸಿಕೊಂಡಂತೆ ಕಾಣುತ್ತದೆ. ಇದಲ್ಲದೆ ಆರ್ಯ (ಅಯ್ಯ) ಜಾತಿಯ ಬ್ರಾಹ್ಮಣರು ವೀರಶೈವ ಮತದಲ್ಲಿ ಸೇರಿಕೊಂಡು ಇಲ್ಲಿಯ ಬ್ರಾಹ್ಮಣ್ಯವನ್ನು ಸಾಧಿಸಲಿಕ್ಕೆ ಇತರ ವೀರಶೈವರಿಗಿಂತ ಹೆಚ್ಚಿನವರೆಂದು ಸಾಧಿಸಿರಬಹುದು. ಅದು ಏನೇ ಇರಲಿ, ಅಯ್ಯನವರೆಂಬ ಜಾತಿಯು ಮೊದಲಿಗೆ ಇದ್ದಿದ್ದಿಲ್ಲ. ಭಕ್ತರ ಮಕ್ಕಳೇ ಅಯ್ಯನವರಾಗುತ್ತಿದ್ದರು.

ಮಾಹೇಶ್ವರರ ಮಕ್ಕಳೇ ಗುರುಗಳೂ ಸ್ವಾಮಿಗಳೂ ಆಗಬೇಕೆಂಬ ನೇಮವಿದ್ದರೆ ಈಗ ಎಷ್ಟೋ ಗುರುಗಳೂ ವಿರಕ್ತರೂ ಭಕ್ತವರ್ಗದವರಿದ್ದು

ಅವರಿಗೆಲ್ಲ ಪೂಜ್ಯವೆನಿಸುವ ಮಾಹೇಶ್ವರ ವರ್ಗವು ಸಾಷ್ಟಾಂಗ ಹಾಕುತ್ತಿರು ವುದೇಕೆ ? ಅಂದ ಬಳಿಕ ಗುರುತ್ವವು ಅಥವಾ ಸ್ವಾಮಿತ್ವವು ಜಾತಿ ವಿಶಿಷ್ಟ ವಲ್ಲ, ಗುಣ ವಿಶಿಷ್ಟವೆಂಬದನ್ನು ಮರೆಯಲಾಗದು. ಈಗ ಮಠಸ್ಥರು ಸಾಂಪ್ರ ದಾಯದಂತೆ ಲಿಂಗಧಾರಣ, ದೀಕ್ಷೆ, ವಿವಾಹ, ಅಂತ್ಯನಿಧಿ ಇಷ್ಟೇ ಕಾರ್ಯ ಗಳನ್ನು ಮಾಡುತ್ತಿದ್ದಾರೆ. ಉಳಿದ ಸಾಮಾಜಿಕ ಶೈಕ್ಷಣಿಕ, ನ್ಯಾಯ ವಿಚಾರಣೆ ಮೊದಲಾದ ಕಾರ್ಯಗಳು ಸರಕಾರದ ಕೈ ಸೇರಿವೆ. ಪಂಚಪೀಠದ ಗುರುಗಳಿಗೆ ಅನೇಕ ಶಾಖಾ ಮಠಗಳೂ ಶಿಷ್ಯಪ್ರಶಿಷ್ಯರೂ ಊರೂರಲ್ಲಿ ನೆಲಿ ಸಿರುವದರಿಂದ ಅವರ ಪ್ರತಿನಿಧಿಗಳು ಪಂಚಾಚಾರ್ಯರೆಂಬ ಹೆಸರಿನಿಂದ ಊರೂರಲ್ಲಿ ವಿವಾಹಾದಿ ಕಾರ್ಯಗಳನ್ನು ಜರುಗಿಸುತ್ತಿದ್ದಾರೆ.

ಹಿರೇಮಠದವರು ವಿವಾಹಿತರಾಗಿರುತ್ತಾರೆ. ಚರಪಟ್ಟದವರು ಬ್ರಹ್ಮ ಚಾರಿಗಳೇ ಆಗಿರಬೇಕೆಂಬ ನೇಮವಿಲ್ಲ. ಕೆಲವರು ಲಗ್ನಮಾಡಿಕೊಳ್ಳುತ್ತಾರೆ. ಆದರೆ ಪಂಚ ಪೀಠದವರು ಮಾತ್ರ ಅವಿವಾಹಿತರಾಗಿರಬೇಕೆಂಬ ನೇಮವಿದೆ. ಹಾಗೆ ಸಾಂಪ್ರದಾಯವೂ ಉಂಟು. ಈಗ ಪಂಚಪೀಠದವರ ಮುಖ್ಯ ಕೆಲಸ ವೆಂದರೆ ಊರೂರಲ್ಲಿ ಸಂಚರಿಸಿ ಮೇಣೆ ಪಲ್ಲಕ್ಕಿಗಳಲ್ಲಿ ಮೆರೆದು ಶಿಷ್ಯರ ಕಡೆಯಿಂದ ಭಿಕ್ಷೆಯೆತ್ತಿಕೊಂಡು ಹೋಗಿ ಮಠಗಳಲ್ಲಿ ಸುಖಸಂತೋಷದಿಂದ ಕಾಲಕಳೆಯುವದಾಗಿರುತ್ತದೆ.

ಇನ್ನು ನಿರಾಭಾರಿ ವೀರಶೈವರೆಂದರೆ ಶ್ರೋತ್ರಿಯ ಬ್ರಹ್ಮನಿಷ್ಠರಾದ ವಿರಕ್ತ ಸ್ವಾಮಿಗಳು. ಮೋಕ್ಷಪ್ರತಿಪಾದನ ಮಾಡುವ ಷಟ್‌ಸ್ಥಲ ಸಿದ್ಧಾಂತ ವನ್ನು ಮುಮುಕ್ಷುಗಳಿಗೆ ಹೇಳಿಕೊಡುವಂಥವರು. ಇವರಿಗೆ ಪ್ರಾಪಂಚಿಕ ವ್ಯವಹಾರದ ಸೋಂಕಿಲ್ಲ. ಆದಾಗ್ಯೂ ಅನೇಕರು ಮಠ, ಹೊಲ, ಗಿರಣಿ, ಕಾರಖಾನೆ ಮುಂತಾದ ಲೌಕಿಕ ವ್ಯವಹಾರಗಳಲ್ಲಿ ಸಿಲುಕಿಕೊಂಡಿದಾರೆ. ಇವರು ಅವಿವಾಹಿತರಾಗಿರಬೇಕೆಂಬ ಕಟುವಾದ ನೇಮವುಂಟು. ಅದರಂತೆ ಅವರು ಬ್ರಹ್ಮಚಾರಿಗಳೂ ಇರಬೇಕೆಂಬದನ್ನು ಬೇರೆ ಹೇಳಬೇಕಾಗಿಲ್ಲ. ವಿರಕ್ತರಲ್ಲಿ ಮುರುಘಾ, ಕುಮಾರ, ಚಿಲಾಳ, ಇತ್ಯಾದಿ ಸಮಯ ಭೇದಗಳು ಮಧ್ಯಂತರದಲ್ಲಿ ಹುಟ್ಟಿದವು. ವಿರಕ್ತರು ಊರೂರಲ್ಲಿ ತಮ್ಮ ಶಾಖಾ ಮಠ ಗಳನ್ನು ಹಬ್ಬಿಸಿ ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನೂ ಶರಣರ ವಚನ ಗಳನ್ನೂ ಪ್ರಸಾರ ಮಾಡಿದರು. ಸಮಸ್ತ ಭಕ್ತಾದಿಗಳಲ್ಲಿ ನೈತಿಕ ಹಾಗೂ ಧಾರ್ಮಿಕ ಮಟ್ಟವನ್ನು ಹೆಚ್ಚಿಸಿದರು. ಎಷ್ಟೋ ವಾಙ್ಮಯ ಸೇವೆಯನ್ನು ಮಾಡಿ ಕನ್ನಡ ನಾಡಿಗೆ ಮಹದುಪಕಾರ ಮಾಡಿರುವರು. ಇವರು ಪ್ರಾಮು

ಖ್ಯವಾಗಿ ಬಸವಾದಿ ಶರಣರ ತತ್ವಗಳನ್ನು ಅರಿತು ಆಚರಿಸಿ ಅವುಗಳನ್ನು ಜನತೆಯುಲ್ಲಿ ಹರಡಿಸಿದರು. ಈ ವಿರಕ್ತ ಪೀಠಗಳಿಗೆ ಮಾಹೇಶ್ವರ ಜಾತಿ ಯವರೇ ಅಧಿಕಾರಿಗಳಾಗಬೇಕೆಂಬ ನೇಮವಿಲ್ಲ. ಷಟ್‌ಸ್ಥಲ ಜ್ಞಾನ ಸಂಪನ್ನರಾದ ಭಕ್ತರನ್ನು ಸಹ ಸಮಾಜವು ಆಯಾಯಾ ಸ್ಥಾನಗಳಿಗೆ ಆರಿಸ ಬಹುದು. ಹಾಗೆ ಸಾಂಪ್ರದಾಯುಗಳೂ ಉಂಟು.

ಅಷ್ಟಾವರಣಾಂತರ್ಗತವಾದ 'ಜಂಗಮ' ಎಂಬ ಶಬ್ದವು ನಿರಾಭಾರಿ ವೀರಶೈವರಿಗೆ ಸಮನ್ವಯಿಸುತ್ತದೆ. ಅದರಂತೆ "ಗುರು" ಶಬ್ದವು ಹಿರೇಮಠ ದಿಂದ ಹಿಡಿದು ಪಂಚಪೀಠದವರೆಗೂ ಇರುವ ಅಧಿಕಾರಿಗಳಿಗೆ ಸಮನ್ವಯಿ ಸುವದು. ಒಟ್ಟಿನ ಮೇಲೆ ವೀರಶೈವರಲ್ಲಿ ಜಾತಿಭೇದಗಳಿಲ್ಲ. ಅಂದರೆ ಪರಸ್ಪರ ಅನ್ನೋದಕ ವಿವಾಹಕ್ಕೆ ಪ್ರತಿಬಂಧವಿಲ್ಲ. ಆದರೆ ವೀರಶೈವರಲ್ಲಿ ಕ್ರಿಯಾಭೇದದಿಂದ ತರಗತಿಗಳುಂಟು. ಅಂದರೆ ಭಕ್ತರಿಗಿಂತ ಗುರುಗಳೂ ಗುರುಗಳಿಗಿಂತ ನಿರಾಭಾರಿ ಜಂಗಮರೂ ಅಧಿಕರೆಂದು ಲೋಕಸಂಪ್ರ ದಾಯವುಂಟು. ವೀರಶೈವರಲ್ಲಿ ಯಾರು ಬೇಕಾದವರು ಪೂಜ್ಯತೆಯಿಂದ ಗುರುಗಳಾಗಬಹುದು, ಜಂಗಮರಾಗಬಹುದು. ಆದಕ್ಕೆ ಇಂಥ ಕುಲದವರೇ ಇರಬೇಕೆಂಬುದು ಸಂಕುಚಿತ ವಿಚಾರ, ಸ್ವಾರ್ಥ ಪರಾಯಣತೆ.

ವೀರಶೈವ ಮತವು ಜಾತಿ ವಿಶಿಷ್ಟವಲ್ಲ. ಗುಣಕ್ರಿಯಾ ವಿಶಿಷ್ಟವೆಂಬು ದಕ್ಕೆ ಆಗಮಗಳೂ ವಚನಗಳೂ ಸಾಂಪ್ರದಾಯಗಳೂ ಸಾಕ್ಷಿಯಾಗಿವೆ. "ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ" ಎಂದು ಶ್ರೀಕೃಷ್ಣನು ಭಗವದ್ಗೀತೆಯುಲ್ಲಿ ಹೇಳಿದಂತೆ ವೀರಶೈವರಲ್ಲಿ ಭೇದತ್ರಯ ಗಳು ಹುಟ್ಟಿವೆ. ಆದರೆ ಮನುಮಹರ್ಷಿಯು ಕಾಯದೆಯಿಂದ ಚಾತುರ್ವರ್ಣ್ಯ ಗಳನ್ನು ಜಾತಿ ವಿಶಿಷ್ಟವಾಗ್ಗಿ ಮಾಡಿದಂದಿನಿಂದ ಭಗವದ್ಗೀತೆಯ ಚಾತು ರ್ವರ್ಣ್ಯವು ಮೂಲೆಗುಂಪಾಯಿತು "ಬ್ರಹ್ಮಜಾನಾತಿ ಬ್ರಾಹ್ಮಣಃ" ಎಂಬ ಉಪನಿಷತ್ಕಾರರ ದಿವ್ಯವಾಣಿಯೂ ಆಚಾರವೂ ಎತ್ತೋ ಅಡಗಿಬಿಟ್ಟವು. ಎತ್ತ ನೋಡಿದತ್ತ ಜಾತಿ ಭೇದಗಳೇ ತಲೆಯೆತ್ತಿ ಮೆರೆಯಲಾರಂಭಿಸಿದವು. ಈ ಮನುನಿರ್ಮಿತ ಚಾತುರ್ವರ್ಣ್ಯದ ವಿರುದ್ಧವಾಗಿ ಕಾಲಕಾಲಕ್ಕೆ ಕ್ರಾಂತಿ ಹೂಡಿದವರಲ್ಲಿ ಭಗವಾನ್ ಬುದ್ಧ, ವೃಷಭದೇವ, ಮತ್ತು ಬಸವೇಶ್ವರ ಇವರು ಮುಖ್ಯರಾಗಿದ್ದಾರೆ. ಚಾತುರ್ವರ್ಣ್ಯದ ಸೋಂಕು ವೀರಶೈವ ಮತಕ್ಕೆ ಏನಾದರೂ ತಗಲಿದ್ದರೆ ಅದು ಬಸವಣ್ಣನವರಿಗಿಂತಲೂ ಪೂರ್ವದಲ್ಲಿ.

ಆದರೆ ಬಸವಣ್ಣನವರ ನಂತರ ಜಾತಿ ಪಂಥಗಳ ಕಸುವು ಕುಗ್ಗಿ ವೀರಶೈವ ಮತವು ಗುಣಕ್ರಿಯಾ ವಿಶಿಷ್ಟವೆಂದು ಸಾರಲಿಕ್ಕೆ ರೂಢಿ ಸಾಂಪ್ರದಾಯಗಳು ಸಾಕ್ಷಿಯಾಗಿವೆ.

ಪೂಜ್ಯರಾದ ಎಷ್ಟೋ ಗುರುವಿರಕ್ತಪೀಠದ ಸ್ವಾಮಿಗಳು ಕಡಿಮೆ ಕುಲದವರಿದ್ದರೆಂದು ಐತಿಹಾಸಿಕ ಸಂಶೋಧನೆಯಿಂದ ತಿಳಿಯ ಬರುತ್ತಿದೆ. ಪೂಜ್ಯರಿಗೆ ಗುಣಕ್ರಿಯೆಗಳೇ ಮಹತ್ವವಲ್ಲದೆ ಕುಲವೇನೂ ಮಹತ್ವವಲ್ಲ. ಉಚ್ಚಪೀಠದ ಗುರುವಿರಕ್ತರೆಲ್ಲ ಮಾಹೇಶ್ವರ ಜಾತಿಯವರೇ ಇರಲಿಲ್ಲ. ಇರಬೇಕೆಂಬ ನೇಮವೂ ಇಲ್ಲ. ಉದಾಹರಣಾರ್ಥ ಶ್ರೀ ರೇವಣಸಿದ್ಧರು ಕೃಷ್ಣಾತೀರದ ಸೇಗುಣಸಿ ಪಂಚಮಸಾಲಿಯ ಗೌಡರ ಹೊಟ್ಟೆಯಲ್ಲಿ ಹುಟ್ಟಿದರೆಂದು ಕೆಲವರ ಮತ. ರೇವಣಸಿದ್ಧರ ಶಿಷ್ಯರಾದ ಶ್ರೀ ಮರುಳಸಿದ್ಧರು ಹಾನಗಲ್ಲ ತಾಲೂಕಿನಲ್ಲಿ ಅಕ್ಕಿ ಆಲೂರ ಹತ್ತರಿದ್ದ ಮುಡೂರಲ್ಲಿ ಕುಡ ಒಕ್ಕಲಿಗ ಅಥವಾ ಯಾವದೋ ಜಾತಿಯ ದಂಪತಿಗಳ ಒಡಲಲ್ಲಿ ಜನಿಸಿದವರೆಂಬುದಕ್ಕೆ ಗ್ರಂಥಾಧಾರಗಳುಂಟು. ಮರುಳಸಿದ್ಧರ ಶಿಷ್ಯರಾದ ಶ್ರೀ ಏಕೋರಾಮರು ದೇವರ ದಾಸಿಮಯ್ಯ ಸುಗ್ಗಲೆಯೆಂಬ ಜೇಡರ ಜಾತಿಯವರ ಗರ್ಭದಲ್ಲುದಿಸಿದರು. ರೇವಣಸಿದ್ಧರ ಸುಪುತ್ರ ಕೋಟಿಪಲ್ಲಾರಾಧ್ಯರಿಂದ ದೀಕ್ಷೆಪಡೆದ ಶ್ರೀ ಪಂಡಿತಾರಾಧ್ಯರು ತೆಲಗುದೇಶದ ದ್ರಾಕ್ಷಾರಾಮ ಎಂಬ ಗ್ರಾಮದಲ್ಲಿ ಭೀಮ ಪಂಡಿತ ಗೌರಾಂಬೆಯೆಂಬ ಆರಾಧ್ಯ ಬ್ರಾಹ್ಮಣ ಪೂಜಾರಿಗಳ ಹೊಟ್ಟೆಯಲ್ಲಿ ಹುಟ್ಟಿದರು. ವನಿಪುರ ಎಂಬಲ್ಲಿ ಪಂಡಿತಾರಾಧ್ಯರಿಂದ ದೀಕ್ಷೆಪಡೆದ ಶ್ರೀ ಕಾಶೀವಿಶ್ವರಾಧ್ಯರು ಸ್ಮಾರ್ತ ಬ್ರಾಹ್ಮಣರಿದ್ದರು.

ಆದುದರಿಂದ ಪಂಚಪೀಠಾಧಿಕಾರಿಗಳಾದ ಶ್ರೀ ರೇವಣಸಿದ್ಧಾದಿಗಳು ಲಿಂಗೋದ್ಭವರೆಂಬ ಮಾತು ಪುಸಿಯಾದದ್ದು. "ಕರ್ಣದಲ್ಲಿ ಜನಿಸಿದವರುಂಟೇ ಜಗದಲ್ಲಿ ?" ಎಂಬಂತೆ "ಶಿಲೆಯಲ್ಲಿ ಹುಟ್ಟಿದವರುಂಟೇ ಲೋಕದಲ್ಲಿ ?" ಎಂದಂತಾದೀತು. ತಂದೆ ತಾಯಿಗಳ ಗರ್ಭದಲ್ಲಿ ಜನಿಸಿ ಕಡಿಮೆ ಕುಲದವರಿದ್ದರೂ ತಮ್ಮ ಗುಣ ಕ್ರಿಯೆಗಳಿಂದ ಪೂಜ್ಯರಾದರೆಂದು ಹೇಳಿದರೆ ಯಾವ ಮತಕ್ಕೂ ಚ್ಯುತಿ ಬರಲಾರದು. ಆ ವ್ಯಕ್ತಿಗಳ ಪೂಜ್ಯತೆಗೂ ಗೌರವ, ಅವರು ಬೆಳಗಿದ ಮತಕ್ಕೂ ಗೌರವ, ಎಂಬದನ್ನು ಮರೆಯಲಾಗದು.

ಅದೇ ಮೇರೆಗೆ ಎಷ್ಟೋ ವಿರಕ್ತ ಸ್ವಾಮಿಗಳು ಶಿವಶರಣರು ಕಡಿಮೆ ಕುಲದಲ್ಲಿ ಜನಿಸಿದ್ದಾರೆ. ಉದಾಹರಣಾರ್ಥ. ಶ್ರೀ ಪ್ರಭುದೇವರು ಗೊರವರ

ಮಗನು. ಶ್ರೀ ಅಕ್ಕಮಹಾದೇವಿಯು ಬಣಜಿಗರ ಮಗಳು ಶ್ರೀ ಸಿದ್ಧರಾಮನು ಕುಡಒಕ್ಕಲಿಗರ ಹೊಟ್ಟೆಯಲ್ಲಿ ಹುಟ್ಟಿದನು ಮಡಿವಾಳ ಮಾಚಿದೇವ, ಹಡಪದ ಅಪ್ಪಣ್ಣ, ಮೇದಾರ ಕೇತಯ್ಯ, ಮಾದಿಗರ ಹರಳಯ್ಯ, ಢೋಹರ ಕಕ್ಕಯ್ಯ ಮುಂತಾದ ಶಬ್ದಗಳು ಅವರವರ ಕಾಯಕದ ಜಾತಿಯನ್ನು ಸೂಚಿಸಿದರೂ ಅವರೆಲ್ಲರೂ ವೀರಶೈವರೇ ಆಗಿದ್ದಾರೆ. ಅವರ ನಾಮಸ್ಮರಣೆಯನ್ನು ಇಂದಿಗೂ ವೀರಶೈವರು ಮಾಡುತ್ತಿದ್ದಾರೆ ಉಚ್ಚಕುಲದಲ್ಲಿ ಪಾಪಿಗಳು ಹುಟ್ಟಿದರೆ ಆ ಕುಲಕ್ಕೆ ಕಲಂಕವಲ್ಲ, ಆ ವ್ಯಕ್ತಿಗಳಿಗೆ ಮಾತ್ರ ಕಲಂಕ. ಅದರಂತೆ ಪೂಜ್ಯರು ಕೀಳು ಕುಲದಲ್ಲಿ ಹುಟ್ಟಿದರೆ, ಆ ಕುಲಕ್ಕೆ ಹೆಚ್ಚಳವಲ್ಲ, ಆದರೆ ಆಯಾ ವ್ಯಕ್ತಿಗಳಿಗೆ ಹೆಚ್ಚಳ. "ಆವ ಕುಲವಾದೊಡೇನು ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು" ಎಂಬ ಮಾತನ್ನು ನಾವು ನೆನಪಿನಲ್ಲಿಡತಕ್ಕದ್ದು

ಮಹೇಶ್ವರ ಜಾತಿಯವರೇ ಗುರು ವಿರಕ್ತರೂ ಶರಣರೂ ಇರಬೇಕೆಂದು ಕಲುಷಿತ ವಾತಾವರಣವನ್ನು ಸಮಾಜದಲ್ಲಿ ಹುಟ್ಟಿಸುವಂಥವರು ಕಣ್ಣುತೆರೆದು ಸ್ವಲ್ಪ ಸಾಂಪ್ರದಾಯಗಳ ಕಡೆಗೆ ಗಮನಿಸಬೇಕು. "ರೂಢಿಃಶಾಸ್ತ್ರಾದ್ಬಲೀಯಸೀ" ಎಂಬಂತೆ ಪರಂಪರಾಗತವಾಗಿ ಎಷ್ಟೋ ಪಟ್ಟಾಧ್ಯಕ್ಷರೂ ವಿರಕ್ತ ಸ್ವಾಮಿಗಳೂ ಸಿಂಹಾಸನಾಧಿಕಾರಿಗಳೂ ಪಂಚಮಸಾಲಿಯವರ ಹಾಗು ಬಣಜಿಗರ ಮಕ್ಕಳಿದ್ದಾರೆ. ಅವರಿಗೆ ಮಾಹೇಶ್ವರ ಜಾತಿಯವರು ಸಾಷ್ಟಾಂಗ ಹಾಕುತ್ತ ಬಂದಿದ್ದಾರೆ ಹುನಗುಂದ ತಾಲೂಕಿನ ಸರಹದ್ದಿನಲ್ಲಿ ಸಜ್ಜಲಗುಡ್ಡವೆಂಬ ಊರಲ್ಲಿದ್ದ ಹಾಲುಮತದ (ಕುರುಬ) ಶರಣಮ್ಮನವರನ್ನು ಸಕಲ ವೀರಶೈವರು ಪೂಜ್ಯತೆಯಿಂದ ಕಾಣುತ್ತಾರೆ ವೀರಶೈವ ಮತವು ಕ್ರಿಯಾ ಭಕ್ತಿ ಜ್ಞಾನಗಳಿಗೆ ತಲೆ ಬಾಗುವದೇ ವಿನಾ ಜಾತಿಗಲ್ಲ ಪೂಜ್ಯರಲ್ಲಿ ಜಾತಿಯನ್ನರಸಬಾರದೆಂಬ ಮಾತನ್ನೇ ಪ್ರಾಚೀನರು ಋಷಿಮೂಲವನ್ನೆಣಿಸಬಾರದೆಂದು ಹೇಳಿರುವರು.

ಋಷಿಮೂಲವನ್ನೆಣಿಸಿದರೆ ಬ್ರಾಹ್ಮಣರಾದವರಿಗೆ ಜಾತಿಯುಕ್ತ ಬ್ರಾಹ್ಮಣ್ಯವೆಂದಿಗೂ ಸಾಧಿಸಲಾರದು. ಅದು ಹೇಗೆಂದರೆ " ವ್ಯಾಸ ಬೆಸ್ತಯಿತಿಯ ಮಗ, ಕಶ್ಯಪ ಕಮ್ಮಾರ, ಮಾರ್ಕಂಡೇಯ ಮಾತಂಗಿ

ಯ ಮಗ, ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಲಿಗ, ದುರ್ವಾಸ ಮೋಚಿಗ ದಧೀಚಿ ಕೀಲಿಗ, ರೋಮಜ ಕಂಚುಗಾರ, ಕೌಂಡಿಲ್ಯ ನಾವಿಂದ ಕಾಣಿರೋ. ಶ್ವಪಚನಾದರೇನು? ಶಿವಭಕ್ತನಾದವನೇ ಕುಲಜನೆಂದಿತ್ತು ಕೂಡಲ ಸಂಗನ ವಚನ" ಅಂದಮೇಲೆ ಈ ಋಷಿಗಳ ಸೂತ್ರ ಗೋತ್ರ ಗಳನ್ನು ಹೇಳುವ ಬ್ರಾಹ್ಮಣ ಜಾತಿಯವರಿಗೆ ಬ್ರಾಹ್ಮಣ್ಯವು ಸಲ್ಲುವದೇ? ಅದುದರಿಂದ ಜಾತಿ ಮಹತ್ವವಲ್ಲ ಗುಣಕ್ರಿಯೆಗಳೇ ಮಹತ್ವ ಅದು ದರಿಂದಲೇ ಸರ್ವಜ್ಞನು ಎಲ್ಲರಿಗೂ ಕಿವಿ ಹಿಂಡಿ ಬುದ್ಧಿ ಹೇಳಿರುವ ದೇನಂದರೆ "ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ? । ಜಾತಿ ವಿಜಾತಿ ಯೆನಬೇಡ । ದೇವನೊಲಿದಾತನೇ ಜಾತ ಸರ್ವಜ್ಞ ''

ಬಸವಾದಿ ಪ್ರಮಥರ ನಂತರ ವೀರಶೈವ ಮತವು ಹೆಚ್ಚು ವಿಕಾ ಸವಾಗತೊಡಗಿತು ಅದರಲ್ಲಿ ಅನೇಕ ಸುಜ್ಞರೂ ಅಜ್ಞರೂ ಕೂಡಿಯೇ ಸೇರಿರಬಹುದು. ಆದರೆ ಅವರು ತಮ್ಮನ್ನುದ್ಧಾರ ಮಾಡಿಕೊಳ್ಳಬೇ ಕೆಂಬಾಶೆಯಿಂದಲೇ ಸೇರಿರುವದರಿಂದ ಅದು ದೋಷವಲ್ಲ. ಅದರ ತತ್ವಗಳಂತೆ ಆಚರಿಸಿ ಎಷ್ಟೋ ದಿವ್ಯ ಜ್ಞಾನಿಗಳಾಗಿದ್ದುದು ವೀರಶೈವ ಮತಕ್ಕೆ ಭೂಷಣವೇ ಹೊರತು ಕಲಂಕವಲ್ಲ ಕೊಲ್ಲಾಪೂರ ಸಂಸ್ಥಾನದ ಸಿದ್ಧಗಿರಿ ಮಠದ ಕಾಡಸಿದ್ಧೇಶ್ವರ ಸಾಂಪ್ರದಾಯದ ಗುರುಗಳೊಬ್ಬರು ವಿಜಾಪೂರ ಜಿಲ್ಲೆಯ ನಿಂಬರಗಿ ಗ್ರಾಮದ ನೀಲಗಾರ ಜಾತಿಯ ಶಿಷ್ಯ ರೊಬ್ಬರಿಗೆ ಉಪದೇಶ ಕೊಟ್ಟದ್ದರಿಂದ ಆ ಶಿಷ್ಯರು ಗುರು ಲಿಂಗ ಜಂಗ ಮ ಮಹಾರಾಜರೆಂಬ ಹೆಸರಿನಿಂದ ಬೆಳಕಿಗೆ ಬಂದರು. ಆ ಗುರು ಲಿಂಗ ಜಂಗಮ ಮಹಾರಾಜರಿಂದ ಭಾವೂಸಾಹೇಬ ಮಹಾರಾಜರು ಅನುಗ್ರಹ ಹೊಂದಿ ಮುಂದೆ ಅವರು ಗಿರಿಮಲ್ಲಪ್ಪ ಮಹಾರಾಜ, ಮ್ರಾ ರಾನಡೆ ಮಹಾರಾಜ, ರಾಮ ರಾವ ಮಹಾರಾಜ, ವೆಂಕಟರಾವ ಮಹಾ ರಾಜರಿಗೆ ಅನುಗ್ರಹವನ್ನು ದಯಪಾಲಿಸಿದ್ದರಿಂದ ಅನೇಕ ಜ್ಞಾನಿಗಳು ಪ್ರಕಾಶಕ್ಕೆ ಬಂದರು. ಅವರಂತೆ ಗದಗದ ಮಡಿವಾಳಪ್ಪ ಸ್ವಾಮಿ ಗಳಿಂದ ಅನುಗ್ರಹ ಹೊಂದಿದ ಹುಬ್ಬಳ್ಳಿ ಶ್ರೀ ಸಿದ್ಧಾರೂಢ ಸ್ವಾಮಿಗಳು ಪ್ರಸಿದ್ಧಿ ಹೊಂದಿ ಅನೇಕ ಶಿಷ್ಯರಿಗೆ ಅನುಗ್ರಹ ಮಾಡಿ ಕೈಲಾಸವಾಸಿ ಗಳಾದರು. ಅದೇ ವೇಳೆಗೆ ಸುಕ್ಷೇತ್ರ ಬಂಥನಾಳದ ಶ್ರೀ ವೃಷಭಲಿಂಗ ಮಹಾಸ್ವಾಮಿಗಳವರಿಂದ ಅನುಗ್ರಹ ಪಡೆದ ಲಚ್ಯಾಣದ ಶ್ರೀ ಸಿದ್ದಪ್ಪ

ಮಹಾರಾಜರು ಕರ್ನಾಟಕ ಮಹಾರಾಷ್ಟ್ರಗಳಲ್ಲಿ ಖ್ಯಾತಿ ಪಡೆದು, ತಮ್ಮ ಹಿಂದೆ ಕ್ಷೀರಾನಂದ ಮಹಾ ಸ್ವಾಮಿಗಳಂಥ ದಿವ್ಯ ವ್ಯಕ್ತಿಗಳನ್ನು ಬಿಟ್ಟು ತೆರಳಿದ್ದಾರೆ.

ಈ ರೀತಿಯಾಗಿ ವೀರಶೈವ ಆಧ್ಯಾತ್ಮಿಕ ತೇಜಸ್ಸಿನ ಕಿಡಿಗಳು ಅನ್ಯ ಮತದವರಲ್ಲಿಯೂ ಹಬ್ಬಿ ಸ್ವಲ್ಪ ಮಾರ್ಪಾಟ ಹೊಂದಿ ಇಂಚಗಿರಿ ಸಂಘ ಆರೂಢ ಪಂಥ, ಲಚ್ಯಾಣ ಸಂಘ ಎಂಬ ಹೆಸರಿನಿಂದ ಈಗಲೂ ವಿರಾಜಿಸತ್ತವೆ. ಈ ಮಾರ್ಗಗಳು ವೀರಶೈವ ಮತದ ಭಕ್ತಿ, ಧ್ಯಾನ, ಜ್ಞಾನ ಮಾರ್ಗಗಳನ್ನು ಅಂಗೀಕರಿಸಿದರೂ ಅದರ ವೈಶಿಷ್ಟವೇ ಬೇರೆ.

ವೀರಶೈವರಿಗೆ ಆಚಾರವು ಪ್ರಥಮ ಧರ್ಮವು ಅಂಗ ಲಿಂಗ ಸಾಮರಸ್ಯವು ಅರ್ಥಾತ್ ಮೋಕ್ಷ ಸಾಧನವು ದ್ವಿತೀಯ ಧರ್ಮವು. ಇವೆರಡೂ ಇಷ್ಟಲಿಂಗದ ಪೂಜೆ ಆರಾಧನೆಗಳಿಂದಲೇ ಸಿದ್ಧಿಸುತ್ತವೆ ಅಂಗದ ಮೇಲೆ ಲಿಂಗವಿದ್ದವರು ಸದಾ ಶುಚಿಯಾಗಿರಬೇಕು. ತ್ರಿಕಾಲ ಸ್ನಾನ ಪೂಜೆಗಳನ್ನು ಮಾಡಬೇಕು. ಅಪಾನಪೇಯ, ಅಭಕ್ಷ್ಯ ಭಕ್ಷಣಗಳನ್ನು ಮಾಡಬಾರದು ಪರಸ್ತ್ರೀ ಪರ ದ್ರವ್ಯಗಳಿಗಾಶೆ ಮಾಡಬಾರದು. ಪರಹಿಂಸೆ ಪರ ವಂಚನೆ ಮಾಡಕೂಡದು. ಅಸತ್ಯವ ನುಡಿಯಲಾಗದು. ಇವೆಲ್ಲ ಆಚಾರಗಳಲ್ಲಿ ಸಮಾವೇಶವಾಗುತ್ತವೆ. ಲಿಂಗದಲ್ಲಿ ಭಕ್ತಿ, ಭಕ್ತಿಯಿಂದ ಅನುಷ್ಠಾನ (ಯೋಗ), ಯೋಗದಿಂದ ಜ್ಞಾನ, ಜ್ಞಾನದಿಂದ ಮೋಕ್ಷ. ಈ ಪ್ರಕಾರ ಲಿಂಗ ಪೂಜೆಯ ಸಹಾಯದಿಂದ ಮೋಕ್ಷ ಸಾಧನ ಮಾರ್ಗವನ್ನು ಷಟ್‌ಸ್ಥಲಗಳ ಮುಖಾಂತರವಾಗಿ ಗೊತ್ತುಪಡಿಸಿದ್ದಾರೆ ಆದ್ದರಿಂದ ವೀರಶೈವರಿಗೆ ಲಿಂಗ ಪೂಜೆಯು ವೈಶಿಷ್ಟ್ಯವೇ ವೈಶಿಷ್ಟ್ಯ

ಲಿಂಗಪೂಜೆಯು ನೀತಿ, ಭಕ್ತಿ, ಯೋಗ, ಜ್ಞಾನ, ವೈರಾಗ್ಯಗಳನ್ನು ಹೆಚ್ಚಿಸುತ್ತದೆ. ಲಿಂಗ ಪೂಜೆಯಲ್ಲಿ ಕೆಲವು ಕಟ್ಟು ಪಾಡುಗಳನ್ನೇ ಹಾಕಿದ್ದರಿಂದ ಮನುಷ್ಯನು ಅನಾಚಾರ ದುರಾಚಾರಗಳಿಗಂಜಿ ನೀತಿಪರನಾಗಿ ವರ್ತಿಸಬೇಕಾಗುತ್ತದೆ. ಲಿಂಗವೇ ಸಾಕಾರರೂಪಿ ಪರಬ್ರಹ್ಮವೆಂದುದರಿಂದ ಭಕ್ತನು ಭಕ್ತಿಪರವಶನಾಗಿ ಪೂಜೆ ಮಾಡಿ ಅದರಲ್ಲಿ ತಲ್ಲೀನನಾಗಬೇಕಾಗುತ್ತದೆ. ಆ ಭಕ್ತಿಯ ಸಾಧನದಿಂದ ಆಯಾಯ ಚಕ್ರಗಳಲ್ಲಿ ಜೀವಾತ್ಮನನ್ನು ತಿರುಗಿಸುವ ಪ್ರಾಣಲಿಂಗಾನುಸಂಧಾನವು

ಯೋಗವೆನಿಸಿಕೊಳ್ಳುತ್ತದೆ. ಏಕಾಗ್ರತಾ ಧ್ಯಾನವು ಲಿಂಗಪೂಜೆಯಲ್ಲಿ ಅಡಕವಾಗಿರುವುದರಿಂದ ದಿವ್ಯತತ್ವಗಳು ತಾವಾಗಿಯೇ ಹೊರಹೊಮ್ಮು ವವು ಅರ್ಥಾತ್ ದಿವ್ಯಜ್ಞಾನವು ಅವುರಿಗೆ ದೊರಕೊಳ್ಳುವದು. ಸು ಜ್ಞಾನಿಯಾದ ಮನುಷ್ಯನೇ ನಿಜವಾಗಿ ವೈರಾಗ್ಯಶಾಲಿ

ಏಕಕಾಲಕ್ಕೆ ಭಕ್ತಿ, ಯೋಗ, ಜ್ಞಾನಗಳನ್ನು ಓತಪ್ರೋತ ವಾಗಿ ಸಾಧಿಸುವ ಮಾರ್ಗವು ಲಿಂಗಪೂಜೆಯೊಂದೇ ಎಂದು ಹೇಳ ಬಹುದು ಆದುದರಿಂದ ವೀರಶೈವರಲ್ಲಿ ಲಿಂಗಪೂಜೆಗೆ ಅತ್ಯಂತ ಪ್ರಶಸ್ತಿಯುಂಟು. ಕಾರಣ ಲಿಂಗಪೂಜಾಸಂಪನ್ನರಾಗಿ ಘನತೆವಡೆದ ಗುರುಗಳೂ, ವಿರಕ್ತರೂ, ಶರಣರೂ ನಮಗೆ ಪೂಜ್ಯರು. ಅಂಥ ವಿಭೂತಿಗಳ ದೋಷಾರೋಪಣೆ ಮಾಡುವದು ಪಾಮರರಾದ ನಮಗೆ ತಕ್ಕದ್ದಲ್ಲ. ಘನತೆಪಡೆದ ವಸ್ತುಗಳಲ್ಲಿ ತಾರತಮ್ಯವನ್ನೆಣಿಸುವದು ಮಹಾ ಪಾಪ. ಭಕ್ತಿ ಭಾವದಿಂದ ನಾವು ಎಲ್ಲರನ್ನು ಕೊಂಡಾಡಿ ಧನ್ಯರಾಗ ಬೇಕು. ಕ್ರಿಯೆಯಿಂದ ವೀರಶೈವರಲ್ಲಿ ಪ್ರಭೇದಗಳುಂಟೇ ವಿನಾ ಪರ ಶಿವನ ಸ್ವರೂಪಿಗಳೇ ತಾವಾದ ಮಹಸೀಯರಲ್ಲಿ ಪ್ರಭೇದಗಳುಂಟೇ? ಚಿನ್ಮಯನ ಸ್ವರೂಪಿಗಳಾದ ಗುರು ವಿರಕ್ತ ಶರಣರೆತ್ತ? ಅವರನ್ನು ನಿಂದಿಸಿ ನಮ್ಮ ಕುಹಕತನವನ್ನು ತೋರ್ಪಡಿಸುವ ಪಾಮರರಾದ ನಾವೆತ್ತ?

ಓಂ.

# ವೇಮಣ್ಣಯೋಗಿಯ ಜ್ಞಾನಮಾರ್ಗದ ಪದ್ಯಗಳು.

—:*:—

ಕಂ|| ಶಿವಕವಿಗಳ್ಗಂ ಮುಕ್ತಂ |
ನವ ಕವಿಗಳ್ಗೆಲ್ಲದೆ ಭಕ್ತಿ ತತ್ವಂಗಳಿಗುಂ ||
ಶಿವಲೋಕ ಪ್ರಮಥರಿಗುಂ |
ಶಿವನಿಗು ಗುರುವಿಂಗು ಶರಣು ಮಾಳ್ಪುದು ವೇಮಾ ||೧||

ಕಂ|| ಅರಿಯಲ್ ಮನವೇ ಕಾರಣ |
ನಿರುವನ್ನೆಗಮಾತ್ಮ ಶರೀರವೊಳ್ ಸುಖದುಃಖಂ ||
ನೆರೆ ಮೋಕ್ಷಮಾದೊಡೊಂದಂ |
ಭರಿಸಲ್ಬೇಕಿದುವೆ ಸತ್ಯವಹುದೈ ವೇಮಾ ||೨||

ಕಂ|| ಸರ್ವವು ತಾನೆಂದರಿತಿಹ |
ನಿರ್ವೈರಿಗೆ ಹೊರತು ಮುಕ್ತಿ ದೊರೆವುದೆ ಪರದೊಳ್
ಉರ್ವಿಯೊಳೆಲ್ಲೆಡೆ ಚರಿಸಲ್ |
ಪರ್ವತ ಗುಹೆ ಜಲಧಿಗಳೊಳು ನೆಲಸಲ್ ವೇಮಾ ||೩||

ಕಂ|| ಓದುಗಳೆಸಿತೋದಿದೊಡಂ |
ಸಾಧಿಸರಾ ಪರಮ ಪದವನೆಂದಿಗುಮದರಿಂ ||
ಈ ಧರೆಯ ಭೋಗಮುಳಿದಾ |
ರಾಧಿಸೆ ಕೈವಲ್ಯಪದವಿ ಲಭಿಪುದು ವೇಮಾ ||೪||

ಗೀ|| ಎಲೆಯ ಮರೆಯೊಳಗಿರ್ಪವಖಿಳ ಲೋಕಂಗಳುಂ |
ಶಾಖೆ ಕಾಣದಾ ವಿಧಾತಗರಿದು ||
ಶಾಖೆ ಕಾಣಿಸಿದೊಡೆ ಹೊಗಳಲು ಬಪ್ಪುದು |
ವಿಶ್ವತೋಭಿರಾಮ ಕೇಳೋ ವೇಮಾ ||೫||

ಕಂ|| ವಿಷಯಾಸಕ್ತಿಯೊಳಿರ್ದರು ।
ವಿಶಯುಗಳಂ ಸ್ಮರಿಸದಿರ್ಪನನಿಶಂ ಮನದೊಳ್ ॥
ವಿಷ ಸಂಸಾರವಿದೆನ್ನುತೆ ।
ವಿಷಯುಗಳಿಲ್ಲವನು ಗೆಲ್ವ ವೇಮಣ್ಣನು ತಾಂ ||೬||

ಕಂ|| ಸಲ್ಲದಿದೆಂದಾರೊ ಒಳ್ ತವೆ ।
ನಿಲ್ಲದೆ ವಾದವನುಗೈಯ್ಯುದಿರ್ಪಂ ಜಡನೋಲ್ ॥
ಸಿಲ್ಲಸೆ ಭೇದಾಭೇದವ ।
ಸಲ್ಲಿಯೆ ವೇದಾಂತ ಸಾರವರಿದನು ವೇಮಾ ||೭||

ಗೀ|| ದೇವನೆನಲು ಬೇರೆ ದೇಶದೊಳಿರ್ಪನೆ ।
ದೇವಿಯೊಡನೆ ಸತತ ದೇಹದೊಳಿಗೆ ॥
ವಾಹನಂಗಳೇರಿ ಹೊಡೆಯುತಲಿರ್ಪನು।
ವಿಶ್ವತೋಭಿರಾಮ ಕೇಳೊ ವೇಮಾ ||೮||

ಗೀ|| ವಸ್ತು ದೊರೆವ ವರೆಗು ದೀಪವವಶ್ಯಕ ।
ವಸ್ತು ದೊರೆತ ಮೇಲೆ ದೀಪವೇತಕೆ ? ॥
ದೇವನಾದ ಮೇಲೆ ದೇಹವಿನ್ನೇತಕ್ಕೆ ।
ವಿಶ್ವತೋಭಿರಾಮ ಕೇಳೊ ವೇಮಾ । ||೯||

ಗೀ|| ಗುರು ಚರಣವಂ ಪಿಡಿಯೆ ಶುನಕ ತಾಂ ಕಡಿವುವೇ ।
ಗುರು ಚರಣವನು ಬಿಡಲ್ ಕಡಿವುದಸವೆ ॥
ಶುನಕ ತಿಂದವನೆ ಶ್ರೀಗುರುಲಿಂಗವೆನಿಪನು ।
ವಿಶ್ವತೋಭಿರಾಮ ಕೇಳೊ ವೇಮಾ ||೧೦||

ಗೀ|| ಬೆಕ್ಕು ಇಲಿಯ ಪಿಡಿದು ಪ್ರೀತಿಯೊಳಿರದದು ।
ಮತ್ತೆ ಕೋಳಿ ಪಿಡಿಯುತೆತ್ತಿಸುವುದು ।
ಮಮತೆಯೊಳಲ್ಲವೆ ಮೂಡುಪವೆಲ್ಲವು ।
ವಿಶ್ವತೋಭಿರಾಮ ಕೇಳೊ ವೇಮಾ ||೧೧||

ಗೀ|| ಅರಿಯೆ ದಧಿಯೊಳ್ ಘೃತವು ಮರದೊಳು ಬೆಂಕಿಯು ।
ಸುಮದಿ ಪರಿಮಳಮದು ವ್ಯಾಪಿಸಿಹುದು ॥

ತಿಳಿದಿ ಕ್ಕೈಲದಂತೆ ತಾನಿರ್ಪುದು ಚಿದಾತ್ಮ ।
ವಿಶ್ವತೋಭಿರಾಮ ಕೇಳೊ ವೇಮಾ ॥೧೨॥

ಗೀ॥ ಮೋಘವಡ್ಡವಾಗೆ ಮಿಹಿರನ ತಡೆವುದು ।
ಚಿತ್ತ ಅಡ್ಡ ವಾಗೆ ಸ್ಥಿರವು ಕೆಡುಗುಂ ॥
ಮರವೆಯಡ್ಡವಾಗೆ ವರ ಮುಕ್ತಿ ಕೆಡುವುದು ।
ವಿಶ್ವತೋಭಿರಾಮ ಕೇಳೊ ವೇಮಾ ॥೧೩॥

ಗೀ॥ ವಾಕ್ಕಿನಲ್ಲಿ ಗುರುವು ವಾಕ್ತತ್ವದೊಳ್ಗುರುವು ।
ಕತ್ತಲಲ್ಲಿ ಗುರುವು ಕಾಣಿಸುವನು ॥
ಸಕಲ ಜಗಕೆ ಗುರುವೆ ಮೂಧಾರವಾಗಿರ್ಪ ।
ವಿಶ್ವತೋಭಿರಾಮ ಕೇಳೊ ವೇಮಾ ॥೧೪॥

ಗೀ॥ ಈಷಣ ತ್ರಯಂಗಳನು ಗೆಲಲಾರದೆ ।
ಮೋಹರಾಶಿಯಲ್ಲಿ ಮುಳುಗುತಿರ್ಪ ॥
ನರರಿಗೆಂತು ಮೋಕ್ಷ ಸೌಖ್ಯವು ಲಭಿಪುದು ।
ವಿಶ್ವತೋಭಿರಾಮ ಕೇಳೊ ವೇಮಾ ॥೧೫॥

ಗೀ॥ ಆಸೆಯಳಿಯದಿರಲು ಪಾಶಮುಕ್ತನು ಸುಳ್ಳು ।
ಮುಕ್ತನಾಗದಿರಲು ಮುನಿಯು ಸುಳ್ಳು ॥
ಮುನಿಗೆ ಹೊರತು ಸರ್ವ ಮೋಹಗಳೊಲಗವು ।
ವಿಶ್ವತೋಭಿರಾಮ ಕೇಳೊ ವೇಮಾ ॥೧೬॥

ಗೀ॥ ಗುರುವು ಪೇಳ್ವ ವಿದ್ಯೆ ಗುರುವಿಗೆ ತಿಳಿಯುತೆ ।
ಗುರುತು ತಿಳಿಯದಿರಲು ಗುಣಮದಿಲ್ಲ ॥
ಗುರು ಮಹಿಮೆಯು ವರ ಗುರುವಿಗೆ ತಿಳಿವುದು ।
ವಿಶ್ವತೋಭಿರಾಮ ಕೇಳೊ ವೇಮಾ ॥೧೭॥

ಗೀ॥ ರಜ್ಜು ಸರ್ಪವೆಂದು ತಾ ನೋಡಿ ಭಯಪಟ್ಟು ।
ತಿಳಿಯೆ ಹಗ್ಗವೆಂದು ಭಯವು ಮಾಣ್ಗುಂ ॥
ಭಯವು ತೀರಿದೊಡನೆ ಬ್ರಹ್ಮವು ತಿಳಿವುದು ।
ವಿಶ್ವತೋಭಿರಾಮ ಕೇಳೊ ವೇಮಾ ॥೧೮॥

ಗೀ|| ತನುವಿದೆಂಬ ಗೃಹದಿ ಶತ್ರು ಮಿತ್ರರ್ಕಳನು |
ತಿಳಿಯದವನ ತಿಳಿವದೇತಕಿನ್ನು ||
ತಿಳಿದಿಹ ಮನುಜಗೆ ದಿವ್ಯಾಮೃತವಿದಯ್ಯ |
ವಿಶ್ವತೋಭಿರಾಮ ಕೇಳೊ ವೇಮಾ ||೨೯||

ಗೀ|| ಸತಿಯು ಸುತರು ಮಾಯೆ ಸಂಸಾರವಿದು ಮಾಯೆ |
ಧನವು ಘನವು ಮಾಯೆ ತನುವು ಮಾಯೆ ||
ಮಾಯೆ ಗೆಲ್ಲುವವನೆ ಮರ್ಮಜ್ಞ ಸಹ ಯೋಗಿ |
ವಿಶ್ವತೋಭಿರಾಮ ಕೇಳೊ ವೇಮಾ ||೩೦||

ಗೀ|| ಮಾಯೆ ಲೋಕವೆಲ್ಲ ಮನುಜನು ತಿಳಿಯನು |
ಮಾಯೆಯಿಂದ ತಾನು ಮಗ್ನ ಸಹನು ||
ಮಾಯೆ ತಿಳಿಯುವವನೆ ಮರ್ಮಜ್ಞ ಸಹ ಯೋಗಿ |
ವಿಶ್ವತೋಭಿರಾಮ ಕೇಳೊ ವೇಮಾ ||೩೧||

ಕಂ|| ಸತಿಯಿಂದಲೆ ಪತಿ ಜನಿಸಿದ |
ಪತಿಯಿಂದಲೆ ಸತಿಯು ಜನಿಸಿದಳು ಸತ್ಯವಿದಾ ||
ಸತಿ ಪತಿಗಳೆಂಬರಾರ್ಕೈ |
ಮತಿಯೊಳ್ ಚರ್ಚಿಸುತೆ ತಿಳಿವುದಿಳೆಯೊಳ್ ವೇಮಾ ||೩೨||

ಗೀ|| ಬೀಜವಿಲ್ಲದಿರುವ ವೃಕ್ಷವು ಪುಟ್ಟಿತು |
ಫಲವು ಪುಷ್ಪವೈದೆ ಪತ್ರೆಯಿಲ್ಲ ||
ನೋಡೆ ರುಚಿಯುಮಿಲ್ಲ ಸಂಕಟವೀವುದು |
ವಿಶ್ವತೋಭಿರಾಮ ಕೇಳೊ ವೇಮಾ ||೩೩||

ಕಂ|| ಹಗೆಯಳಿವುದಾಗ್ರಹವ ಬಿಡೆ |
ಹಗೆಯುಂ ಕಾಮಂಗಳಳಿದು ಪರಜನ್ಮಂಗಳ್ ||
ಮಿಗೆಯಳಿವುದಭೇದಂಬರೆ |
ತ್ರಿಗುಣಗಳಡಗಲ್ಕೆ ಮುಕ್ತಿಸ್ಥಿರವದು ವೇಮಾ ||೩೪||

ಗೀ|| ಪ್ರಣವವರಿಯದವನು ಭಕ್ತನು ತಾನಲ್ಲ |
ಜ್ಯೋತಿಯರಿಯದವನು ಯೋಗಿಯಲ್ಲ ||
ನಿತ್ಯವರಿಯದವನು ನಿರ್ವಾಣಿಯಾಗನು |
ವಿಶ್ವತೋಭಿರಾಮ ಕೇಳೊ ವೇಮಾ ||೩೫||

ಕಂ॥ ನವರಂಧ್ರಯುಕ್ತಚೀಲಕೆ ।
ನವಕುಂದನ ಭೂಷಣಂಗಳುಂ ಕುಲವೇಕೋ ॥
ತವೆ ನೋಡಲಸ್ಥಿರ ತನು ।
ಸುವಿವೇಕವೆ ಬೊಮ್ಮನಾನೆನುತ ತಿಳಿವೇಮಾ ॥೩೬॥

ಕಂ॥ ಅರಿಷಡ್ವರ್ಗಗಳಿಂದಂ ।
ನರರೆಲ್ಲರು ಸೊಕ್ಕಿ ಸಿಕ್ಕಿ ನಯು ಗತಿಯೆನುತಂ ॥
ಅರಿತಿಹರಲ್ಲವೆ ತತ್ವವ ।
ನರಿತದನಂ ಲೇಶ ತಿಳಿದು ನಡೆಯರು ವೇಮಾ ॥೩೭॥

ಗೀ॥ ಮೌನದಿರುವ ವರೆಗು ಮಂತ್ರವು ದೊರೆಯದು ।
ಮಂತ್ರವಡಗದಿರಲು ಮನವು ನಿಲದು ॥
ಮನವು ನಿಲ್ಲದಿರಲು ವರ ಮುಕ್ತಿ ದೊರೆಯದು ।
ವಿಶ್ವತೋಭಿರಾಮ ಕೇಳೊ ವೇಮಾ ॥೩೮॥

ಗೀ॥ ತನುವಿದಸ್ಥಿರವೆಂದು ಧನವಿದಸ್ಥಿರವೆಂದು ।
ತಿಳಿಸಬಲ್ಲ ತಾನು ತಿಳಿದು ಕಲತು ॥
ಪಾತ್ರನಾದ ಯೋಗಿ ವಸ್ತುವನರಿಯನು ।
ವಿಶ್ವತೋಭಿರಾಮ ಕೇಳೊ ವೇಮಾ ॥೩೯॥

ಗೀ॥ ಸತಿಯು ಮಾಳ್ಪ ಕೆಡುಕು ಪತಿಗೆ ತಪ್ಪದೆ ಬರ್ಕುಂ ।
ಪತಿಯು ಮಾಳ್ಪನಳಿತು ಸತಿಗ ಅರ್ಧ ॥
ಪತಿಯು ಮಾಳ್ಪ ಕೆಡಕು ಸತಿಗದೇತಕೆ ಬರದು ।
ವಿಶ್ವತೋಭಿರಾಮ ಕೇಳೊ ವೇಮಾ ॥೪೦॥

ಗೀ॥ ದರ್ಶನಂಗಳಲ್ಲಿ ನೆಗೆ ಷಣ್ಮತಗಳಲ್ಲಿ ।
ವರ್ಣಾಶ್ರಮಗಳಲ್ಲಿ ಬಿಡದೆ ಸತತ ॥
ತಿರುಗುತಿರ್ಪ ಮನುಜ ತಿಳಿವನೆ ಬ್ರಹ್ಮವ ।
ವಿಶ್ವತೋಭಿರಾಮ ಕೇಳೊ ವೇಮಾ ॥೪೧॥

ಗೀ॥ ಬ್ರಹ್ಮವೆಂಬ ವಸ್ತು ಪರದೇಶದೊಳಗಿಲ್ಲ ।
ಬ್ರಹ್ಮವೆನಲು ತಾನೆ ಬಟ್ಟ ಬಯಲು ॥
ತನ್ನ ತಾ ತಿಳಿನೊಡೆ ತಾನೆ ಸೈ ಬ್ರಹ್ಮವು ।
ವಿಶ್ವತೋಭಿರಾಮ ಕೇಳೊ ವೇಮಾ ॥೪೨॥

ಗೀ|| ಉಪ್ಪು ಹುಳಿಂಯು ಹಣ್ಣು ವೂರಿನೊಳಿರಲಾಗಿ |
ಬರವು ಬಂದಿತೆಂಮು ಅಳುವಿರೇಕೆ ||
ತಾಳಕವುಂಟೈದೆ ತವರವು ಮತ್ತುಂಟು |
ವಿಶ್ವತೋಭಿರಾಮ ಕೇಳೊ ವೇಮಾ ||೩೩||

ಕಂ|| ದೀನಗೆ ಕನ್ಯಾದಾನವ |
ಮಾನಪ ತಾನೊಮ್ಮೆ ಮಾಡಲತಿಶಯ ಸುಖದಿಂ ||
ದಾನಂದಿಸುವನು ಪರದೊಳ್ |
ಧ್ಯಾನಿಸು ವೇದಾಂತಸಾರವಿದು ನರ ವೇಮಾ ||೩೪||

ಗೀ|| ಪುರುಷ ಭಾಗ್ಯದಿ ಪುಣ್ಯವತಿ ದೊರೆವಳಿದು ನಿಜ
ಪುಣ್ಯವತಿಗುಮಂತೆ ಪುರುಷ ದೊರೆವ ||
ಈರ್ವರ ಪುಣ್ಯದಿ ಮಿತ್ರರು ಪುತ್ರರು |
ಅಷ್ಟಭೋಗ ದೊರೆವುದಯ್ಯ ವೇಮಾ ||೩೫||

ಕಂ|| ವೇಮಣ್ಣ ನುಡಿವ ವೇದವ |
ತಾಮಸದಿಂದಲ್ಲವೆಂಬ ಬಾಯಿಗೆ ಗಾಣಂ ||
ಪ್ರೇಮದಿ ಭೇದವ ತೊಲಗಿಸಿ |
ಸೌಮನದೀಕ್ಷಿಪಗೆ ಮುಕ್ತಿ ತಪ್ಪದು ವೇಮಾ ||೩೬||

ಆ|| ವೇಮಣ್ಣ ಯೋಗಿಯಿಂ ಪೆರೆತು ಯೋಗಿಯುಮಿಲ್ಲ
ರಾಮಚಂದ್ರನಿಗಿಂತ ರಾಜನಿಲ್ಲ ||
ಆಂಜನೇಯನಿಗಿಂತಲಮಿತ ಭಕ್ತನುಮಿಲ್ಲ
ವಿಶ್ವತೋಭಿರಾಮ ಕೇಳೊ ವೇಮಾ ||೩೭||

ಗೀ|| ಹೆಚ್ಚುಕಡಿಮೆಯೆನುತ ಮನದೊಳು ಭಾವಿಸಿ
ಕುತ್ಸಿತವರಿಯದ ಮೂರ್ಖ ಜನರ ||
ಮತ್ಸರದಿಂದಲಿ ಚಂಡಾಲರೆಂಬರು |
ವಿಶ್ವತೋಭಿರಾಮ ಕೇಳೊ ವೇಮಾ ||೩೮||

ಗೀ|| ವ್ರತಗಳೆಷ್ಟಾದರುಂ ನಿಜವದರೊಳಗಿಲ್ಲ |
ಸತ್ಯವರಿತ ನರನೆ ನಿತ್ಯಯೋಗಿ ||
ವ್ರತಗಳಲ್ಲಿ ಮುಕ್ತಿ ಬೆದಕಿದೊಡಿಲ್ಲವು |
ವಿಶ್ವತೋಭಿರಾಮ ಕೇಳೊ ವೇಮಾ ||೩೯||

ಗೀ॥ ಹುಚ್ಚು ನರಿಗಳಂತೆ ವಿಪ್ರರೆಲ್ಲರು ಸೇರಿ।
ವೇದವೆಂದು ವೋದಿ ನಿಗ್ರಹಗಳ ॥
ಪ್ರಾಣಪ್ರತಿಷ್ಠೆಯಂ ಮಾಳ್ಪೆವೆಂದೆಂಬರು ।
ಭ್ರಮೆಯಿದಲ್ಲವೆ ನು ಪೇಳೊ ವೇಮಾ ॥ ॥೪೦॥

ಗೀ॥ ಪ್ರಾಣಪ್ರತಿಷ್ಠೆಯೆನೆ ಪ್ರಪಂಚವೇ ಹೊರತು ।
ಬೇರೆಯುಂಟೆ ಭೂಮಿಯೊಳ್ಪೆದಕಿ ನೋಡೆ ॥
ಪ್ರಾಣಪ್ರತಿಷ್ಠೆಯಿಂ ಪ್ರತಿಮೆಗಳ್ನುಡಿವುವೇ ? ।
ವಿಶ್ವತೋಭಿರಾಮ ಕೇಳೊ ವೇಮಾ ॥ ॥೪೧॥

ಗೀ॥ ಆದಿ ಬ್ರಹ್ಮದಿಂದೆ ಮುವ್ವರು ಮೂರ್ತಿಗಳ್ ।
ಹುಟ್ಟಿ ಕೊನೆಗೆ ಸತ್ತು ಸತ್ತು ಹುಟ್ಟಿ ॥
ಮಾಯೆಯೊಳಗೆ ತೊಳಲಿ ಬಳಲುತಿರ್ಪರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ॥೪೨॥

ಗೀ॥ ಸ್ತ್ರೀತಲೆಯೊಳು ರುದ್ರನಿಗುಂ ।
ಸ್ತ್ರೀಬಾಯೊಳು ಬ್ರಹ್ಮನಿಗನಿಶಮಾಲೋಚಿಸಲಾ ॥
ಸ್ತ್ರೀವಕ್ಷದೊಳಾ ಹರಿಗುಂ ।
ಸ್ತ್ರೀಯುರನಂತ್ಯಜಿಸರವರು ಚಿನ್ಮಯ ವೇಮಾ ॥ ॥೪೩॥

ಗೀ॥ ಪಾಷಾಣಗಳ ತಂದು ಭರದಿಂದ ಗುಡಿ ಮಾಡಿ ।
ಬೇರೆ ಶಿಲೆಯ ನೆಟ್ಟು ದೇವರೆಂದು ।
ಪೂಜೆ ಮಾಡಲಾಗಿ ಪುಣ್ಯವು ಬರ್ಪುದೇ ॥
ವಿಶ್ವತೋಭಿರಾಮ ಕೇಳೊ ವೇಮಾ ॥ ॥೪೪॥

ಕಂ॥ ಕೈಲಾಸವು ವೈಕುಂಠವು ।
ಬಯಲಾಗಿರುವಲ್ಲಿ ಪ್ರಕೃತಿ ಭಾವದಿ ನೀಸ್ಗಳ್ ।
ಎಲ್ಲೆಲ್ಲಿಯು ಬೆದಕಿದರುಂ ।
ಕೈಲಾಸವ ನೋಡಲಾರಿರಿದು ದಿಟ ವೇಮಾ ॥ ॥೪೫॥

ಗೀ॥ ಅಂತರಂಗದೊಳಗೆ ಅಪಚಾರಗಳ ಮಾಡಿ ।
ಒಳ್ಳೆಯವನ ತೆರದಿ ಮಾತನಾಡೆ ।
ಇತರರರಿಯದಿರಲು ಈಶ್ವರನರಿಯನೇ ?
ವಿಶ್ವತೋಭಿರಾಮ ಕೇಳೊ ವೇಮಾ ॥೪೬॥

ಕಂ॥ ಧರ್ಮಾರ್ಥ ಕಾಮ ಮೋಕ್ಷವ ।
ನಿರ್ಮಲ ಮತಿಯರಿವನಲ್ಲದಿತರರಿಂಗಳವೇ ।
ಉರ್ವಿಯೊಳಿಲ್ಲೆಡೆ ಚರಿಸಲ್ ।
ಕರ್ಮಿಗಳಿಗೆ ಮುಕ್ತಿ ದೊರೆವುದೇನೈ ವೇಮಾ ॥೨೭॥

ಗೀ॥ ಕಾಗೆ ಪಕ್ಷಿಗಳೊಳು ಕಡುಹೀನ ವೆಂಬರು ।
ಕಾಗೆ ಭೋಗವರಿಯರಾರು ಧರೆಯೊಳ್ ।
ಕಾಗೆ ಗನ್ನವಿತ್ತು ಕಾಲಿಗೆ ಬೀಳುವರ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ॥೨೮॥

ಗೀ॥ ಇಹದೊಳೈದೆ ಸುಖವು ಇನಿತಾದರಿಲ್ಲವು ।
ಪರದಿ ಸುಖವದೆಲ್ಲಿ ದೊರೆವುದರಿಯೆ ।
ಜನನವಿಲ್ಲದೆಂತು ಮರಣವು ಬರ್ಪುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ॥೨೯॥

ಗೀ॥ ಅಸ್ಥಿರವಿದು ಕಾಯವಧಿಕ ಸಂಕಟಪಟ್ಟು ।
ಹಲವು ವಿಧಗಳಿಂದ ಬೆಳಸಿ ಬೆಳಸಿ ।
ಅಗ್ನಿಗೀವರಂತೆ ಅಡವಿ ನರಿಗೀವರೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ॥೩೦॥

ಗೀ॥ ಜಾತಿನೀತಿ ಬೇರೆ ಜನ್ಮಂಗಳೊಂದೆಯೇ ।
ಅರಿಯೆ ತಿಂಡಿ ಬೇರೆ ಹಸಿವು ಒಂದೇ ।
ಹಸುಗಳ್ಬಣ್ಣ ಬೇರೆ ಹಾಲೆಲ್ಲ ಒಂದೆಯೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ॥೩೧॥

ಗೀ॥ ಪೂಜೆ ಮಾಡಿ ಮಾಡಿ ಪೂಜಾರಿ ತಾನಾದ ।
ಪೂಜೆವಸ್ತುವರಿಯ ಭುವಿಯೊಳ್ತಾನು ।
ಎಲ್ಲಿ ಪೂಜೆಮಾಳ್ಪನೆಲ್ಲದಿಕ್ಕಿನೊಳ್ತಾನೆ ।
ತಾನೆ ನಾನು ನಾನೆ ತಾನೆ ವೇಮಾ ॥ ॥೩೨॥

ಗೀ॥ ಒಳಗೆ ನೋಡೆ ನೋಡೆ ಲೋಕಾಭಿರಾಮವು ।
ಹೊರಗೆ ನೋಡೆ ನೋಡೆ ಬಂಧನವದು ।
ತನ್ನ ನೋಡೆ ನೋಡೆ ತಾರಕ ಬ್ರಹ್ಮವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ॥೩೩॥

## ಬಸವಣ್ಣನವರ ಸಂಸಾರ

(ಲೇ:— ಶ್ರೀಯುತ ಶಿಂಪೀ ಲಿಂಗಣ್ಣ ಮು:- ಹಲಸಂಗಿ

(ಮುಂದೆಸಾಗಿದ್ದು

### ಇಷ್ಟ ದೈವತದೊಡನೆ ಸಲಗೆ.

ಬಸವಣ್ಣನವರ ಇಡಿಯ ಜೀವನ ನಡಿಸಿಕೊಂಡು ಹೋಗಲಿಕೆ ಬಸವನ ಸಂಗನಷ್ಟೇ ಅಲ್ಲ, ಸಂಗನ ಬಸವನೂ ಆಹುದು ಎನ್ನುವಷ್ಟರ ಮಟ್ಟಿಗೆ ಅವರಲ್ಲಿ ಸಂಬಂಧ ಸಲಿಗೆ ಬೆಳೆದಿತ್ತೆನ್ನುವದನ್ನೂ ನಾವು ಮರೆಯಲಾಗದು "ಇವನಾರವನಾರವನಾರೆಂದೆನಿಸದಿರಯ್ಯ ಇವನಮ್ಮವ ಇವ ನಮ್ಮವನೆಂದೆನಿಸಯ್ಯ" ಎಂದು ಹಾರಯಿಸುತ್ತಲಿದ್ದ ಬಸವಣ್ಣನವರ ಹೃದಯವನ್ನು ನಾವು ಅರಿಯೆವಾದರೂ ಕೂಡಲಸಂಗಮ ದೇವರೂ ಅರಿತಿದ್ದುದರಲ್ಲಿ ಸಂಶಯವಿರಲಾರದು. "ಅಯ್ಯಾ ಅಯ್ಯಾ ಎಂದು ಒರಲುತ್ತಿದ್ದೇನೆ. ಓ ಎನ್ನಲಾಗದೇ ಅಯ್ಯಾ?" ಎಂಬ ಹಂಬಲವು ಅವರಿಬ್ಬರಲ್ಲಿರುವ ಸಲಿಗೆಯ ಕುರುಹಾಗಿರುತ್ತದೆ. ಈ ಸಲಿಗೆಯನ್ನು ಅವರು ಸಾಧನದಿಂದ ಬೆಳೆಸಿಕೊಂಡಿದ್ದರು "ದೇವಪೂಜೆಯ ಮಾಟ ಶಂಭು ನಿಮ್ಮಯ ನೋಟ. ಸದಾ ಸನ್ನಿಹಿತನಾಗಿ ಶರಣೆಂಬುವುದು ಜಂಗಮಾರ್ಚನೆಯ ಮಾಟ ಕೂಡಲ ಸಂಗನ ಕೂಟ" ಈ ಕ್ರಮವನ್ನು ಸಾಧಿಸುತ್ತಿದ್ದರೆ ಸಲಿಗೆ ಬೆಳೆಯದಿರಲಾರದು. "ದೇವನೊಲ್ಲಿದನೆಂದು ಮಯ್ಯೊಲಲ ಬೇಡ. ತರಕಟ ಕಾಡಿಹ ನೊಲ್ಲಿದನೆ? ಅಳಿಸುವ ನಗಿಸುವ ನೊಲ್ಲಿದನೇ? ಬೆಚ್ಚದೆ ಬೆದರದೆ ತೊತ್ತು ತನವ ಮಾಡಲು ತನ್ನ ನೀವ ಕೂಡಲ ಸಂಗಮ ದೇವ" ದೇವನು ಮುದ್ದಿಸಿದರೇನು; ಕಾಡಿದರೇನು ಅಳಿಸಿದರೇನು ನಗಿಸಿದರೇನು? ಅವನ್ನೇನೂ ಲೆಕ್ಕಿಸದೆ ಆತನ ತೊತ್ತುತನ ಮಾಡಿದರೆ ದೇವ ದೇವನು ತನ್ನನ್ನೇ ಭಕ್ತನಿಗೀವನು "ದೇವನೊಬ್ಬ. ನಾಮ ಹಲವು ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದಡೆ ಕಿವಿ ಮೂಗ ಕೊಯ್ಯುವನು. ಹಲವು ದೈವದ ಎಂಜಲ ತಿಂಬವರ ನೇನೆಂಬೆನಯ್ಯ ಕೂಡಲ ಸಂಗಮದೇವಾ" ಪತಿವ್ರತೆ ತನ್ನ ಗಂಡನನ್ನು ನಂಬಿ ನೆಚ್ಚಿದಂತೆ ಭಕ್ತನು ಒಬ್ಬ ದೈವತವನ್ನು ನೆಚ್ಚಿದನೆಂದು ತಿಳಿಯುವ. ಭಕ್ತನು ಮಾತ್ರ ನೆಚ್ಚಿದರೆ ತೀರುವದಿಲ್ಲ ದೈವತವೂ ಒಲಿಯಬೇಕಲ್ಲ ಒಲಿಯಬೇಕಾದರೆ ಪರೀಕ್ಷಿಸಬೇಕಾಗುತ್ತದ. ಆ ಪರೀಕ್ಷೆಯಲ್ಲಿ ಉತ್ತೀರ್ಣನಾದ ಭಕ್ತನಿಗೇ ತನ್ನನ್ನು

ದೇವ ದೇವನು ಮಾಡುಗೊಡುವನು. "ನೆಟ್ಟಿದೆನೆಂದರೆ, ಮೆಚ್ಚಿದೆನೆಂದರೆ, ಕಲೆ ಮಾರು ಹೋದೆನೆಂದರೆ ತನುವನಲ್ಲಾಡಿಸಿ ನೋಡುವೆ ನೀನು. ಮನವನಲ್ಲಾಡಿಸಿ ನೋಡುವೆ ನೀನು. ಧನವನಲ್ಲಾಡಿಸಿ ನೋಡುವೆ ನೀನು. ಇವೆಲ್ಲಕ್ಕಂಜದಿದ್ದರೆ ಭಕ್ತಿಕಂಪಿತ ಕೂಡಲ ಸಂಗಮ ದೇವ" ಈ ಪರೀಕ್ಷೆಯು ಕಾಲದಲ್ಲಿ ಭಕ್ತನ ಅಹಂಕಾರವು ಪುಡಿ ಪುಡಿಯಾಗಿ ಹೋಗುವದರಿಂದ, ತಾನು ತೀರ ಅಬಲನೆಂದು ಪರಮಾತ್ಮನು ಬೆರಳು ಕೊಡದಿದ್ದರೆ ಒಂದು ಕಡ್ಡಿಯನ್ನೂ ಅಲುಗಿಸಲಿಕ್ಕಾಗದೆಂದೂ ಅವನಿಗೆ ದಟ್ಟವಾದ ಮನವರಿಕೆಯಾಗಿಬಿಟ್ಟಿರುತ್ತದೆ

ಆನು ಮಾಡಿದ ತಪ್ಪನೆಣಿಸಿಹೆನೆಂದರೆ ಗಣನೆಯಿಲ್ಲ ನಡೆದು ತಪ್ಪುವೆ, ಮಾಡಿ ತಪ್ಪುವೆ, ನುಡಿ ತಪ್ಪುವೆ ಅರಿದು ತಪ್ಪುವೆ, ಮರೆದು ತಪ್ಪುವೆ. ಎನ್ನ ತಪ್ಪನೊಪ್ಪಮಾಡಿಕೊಂಬುದಲ್ಲದೆ ಚಿತ್ತಕ್ಕೆ ತರಲಾಗದು ಕೂಡಲ ಸಂಗಮ ದೇವಾ" ತಾನು ಅತ್ಯಂತ ನಿರಪರಾಧಿಯಾಗಿಯೂ ಸುತ್ತಲಿನ ಜಗವೆಲ್ಲವೂ ಅಕ್ಷಮ್ಯ ಅಪರಾಧ ಮಾಡುತ್ತಿದೆ ಯೆಂಬುದಾಗಿಯೂ ಯಾರಿಗೆ ಕಾಣಿಸುವದೋ ಅವರು ದೇವನಿಂದ ದೂರದಲ್ಲಿಯೋ ಇದ್ದಾರೆಂದು ಸ್ಪಷ್ಟವಾಗಿ ತಿಳಿಯತಕ್ಕದ್ದು. ತನ್ನ ತಪ್ಪು ತನಗೆ ತಿಳಿದಂತೆ ದೇವನ ಹೊರತು ಇನ್ನಾರಿಗೂ ತಿಳಿಯಲಾರದು. ತಪ್ಪು ತಿಳಿಯಲಿಕ್ಕೂ ಅವನ್ನು ತೊಡೆಯಲಿಕ್ಕೆ ಸಮರ್ಥರಾರೆಂದರೆ ಸರ್ವಗುಣ ಸಂಪನ್ನನಾದ ದೇವನೇ ಸರಿ. ಅವನು ಅವಗುಣಗಳನ್ನು ಅರಸಲಿಕ್ಕೆ ನಿಂತರೆ ಅವಗುಣ ಅವಗುಣ ಎನ್ನಾವುದಿರುವದು? ತನುಮನ ಧನಗಳು ಅಸಂಖ್ಯ ಅವಗುಣಗಳನ್ನು ಹೆರುತ್ತವೆ. ತನುಮನ ಧನಗಳು ಬದಲಾದರೆ ಅವಗುಣಗಳೂ ಬದಲಾಗಿ ಸದ್ಗುಣಗಳ ಪ್ರಕಟವಾಗುತ್ತವೆ. ತನುಮನ ಧನಗಳು ಬದಲಾಗುವುದಕ್ಕೆ ಉಪಾಯವೇನು? ತನುಮನ ಧನಗಳನ್ನು ದೇವ ದೇವನ ಅನುಭಾವದಿಂದ ಮಾರ್ಪಡಿಸಬೇಕು. "ಅಯ್ಯಾ ನಿಮ್ಮ ಅನುಭಾವದಿಂದ ಎನ್ನ ತನು ಹಾಳಾಯಿತ್ತು. ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಮನ ಹಾಳಾಯಿತ್ತು ಅಯ್ಯಾ ನಿಮ್ಮ ಅನುಭಾವದಿಂದ ಎನ್ನ ಧನ ಹಾಳಾಯಿತ್ತು" ಎಂದು ಹೇಳುವ ಬಸವಣ್ಣನವರು ತನುಮನ ಧನಗಳ ಮೊದಲಿನ ಗುಣಗಳನ್ನು ಹಾಳುಗೊಳಿಸಿದ್ದರೆಂಬುದು ಸ್ಪಷ್ಟವಾಗುತ್ತದೆ.

"ತಂದೆ ನೀನು. ತಾಯಿ ನೀನು. ಬಂಧು ನೀನು. ಬಳಗ ನೀನು. ಎನಗೆ ನೀನಲ್ಲದೆ ಮತ್ತಾರೂ ಇಲ್ಲವಯ್ಯ. ಕೂಡಲ ಸಂಗಮ ದೇವಾ, ಹಾಲಲದ್ದು ನೀರಲದ್ದು" ಈ ಪ್ರಕಾರ ತೀವ್ರ ವಿಶ್ವಾಸದಿಂದ ಪರಮಾತ್ಮನಿಗೆ ಒಪ್ಪಿಸುವುದಾದರೂ ಏತಕ್ಕಾಗಿ ? ಬಸವಣ್ಣನವರಿಗೆ ಬೇಕಾದುದಾದರೂ ಏನು ? ಅವರಿಗೆ ಬ್ರಹ್ಮ ವಿಷ್ಣು ರುದ್ರಪದವಿಗಳಲ್ಲಿ ಯಾವ ಪದವಿಯೂ ಅವರಿಗೆ ಬೇಕಿರಲಿಲ್ಲ. ಇವನ್ನುಳಿದು ಬೇರಾವಪದವಿಯೂ ಬೇಕಿರಲಿಲ್ಲ. ನಿಮ್ಮ ಸತ್ಪುತ್ರರ ಪಾದವನರಿದಿಪ್ಪ ಮಹಾ ಪದವಿಯನೇ ಕರುಣಿಸೆಂದು ಅವರು ತಮ್ಮಿಷ್ಟದೈವತದಲ್ಲಿ ಪ್ರಾರ್ಥಿಸುತ್ತಿದ್ದರು.

ಸತ್ತು ಸ್ವರ್ಗಕ್ಕೆ ಹೋದಮೇಲೆ ಕೈಲಾಸನಾಥನು ಅಕ್ಕರತೆಯಿಂದ ಎದುರುಗೊಂಡು ಅಪ್ಪಿಕೊಳ್ಳುತ್ತ — "ಬಸವ ಬಾರಯ್ಯ! ಮರ್ತ್ಯಲೋಕದೊಳಗೆ ಭಕ್ತರುಂಟೇ ಹೇಳಯ್ಯ" ಎಂದು ಕೇಳಿದರೆ- "ಮತ್ತಾರೂ ಇಲ್ಲಯ್ಯ ನಾನೊಬ್ಬನೇ ಭಕ್ತನು. ಮರ್ತ್ಯಲೋಕದೊಳಗಣ ಭಕ್ತರೆಲ್ಲರು ಜಂಗಮ ಲಿಂಗ ನೀನೇ ಅಯ್ಯ ಕೂಡಲಸಂಗಮದೇವಾ" ಎಂದು ಹೇಳುವ ಮನಸ್ಸಿದ್ಧತೆಯು ಅವರದಿತ್ತು

ಸಂಗಮನಾಥನು ಮುಂದೆ ನಡೆದು "ಕಳ ಹೋದರೆ ಕಣ್ಣದುಳಿಯು ಹಿಡಿವೆ. ಬಂದಿವಿಡಿದರೆ ನಿಮ್ಮಿಂದ ಮುಂದೆ ನಡೆವೆ. ಮನಭೀತಿ ಮನಶಂಕೆಗೊಂಡೆನಾದರೆ ನಿಮ್ಮಾಣೆ, ನಿಮ್ಮ ಪುರಾತನರಾಣೆ" ಎಂದು ಆಣೆಯಿಟ್ಟುಕೊಂಡು ಡಂಗುರಿಸುತ್ತಾರೆ ಇಷ್ಟದೈವತದ ರಾಜತೇಜದಲ್ಲಿದ್ದರೂ ಅವರಿಗೆ ಆಂತರಿಕ-ಬಾಹ್ಯಕ ಸಂಕಟಗಳುಂಟಾಗದೆ ಇರುತ್ತಿರಲಿಲ್ಲ. ಭಕ್ತಿಯ ದಾರಿಗೆ ಅವು ಅನಿವಾರ್ಯವೆಂದೇ ಅವರು ಗ್ರಹಿಸಿದ್ದರು "ಭಕ್ತಿಯೆಂಬುದ ಮಾಡಬಾರದು. ಕರಗಸದಂತೆ ಹೋಗುತ್ತ ಕೊಯ್ವುತ್ತ, ಬರುತ್ತ ಕೊಯ್ವುದು" ಎಂಬುದನ್ನು ಮನಗಂಡಿದ್ದರು ಸಣ್ಣನಹುದ್ದಕ್ಕೆ ಅರೆದಡೂ, ಬಣ್ಣಗುಂದ್ದಕ್ಕೆ ಬರೆದರೂ. ಸಣ್ಣನಾಗಿ ಬಣ್ಣವಾದರೆ ಕೂಡಲಸಂಗಮದೇವ ನೊಲಿ ಒಲಿವನೆಂದು ಆತ್ಯಂತಿಕ ಧ್ಯೇಯ ಸ್ಥಿತಿಯ ಬಗ್ಗೆ ವಿಶ್ವಾಸವಿತ್ತು ಆದುದರಿಂದ ಬರುವ ಸಂಕಟಗಳು ಬಾರದಿರಲೆಂದು ಯೋಚಿಸದೆ ಬಂದೇ ತೀರಲೆಂದೂ, ಅದರೊಳಗಿಂದ ಪಾರಾಗುವ ಸಾಮರ್ಥ್ಯವೇ ಉಂಟಾಗಲೆಂದೂ ಆಶಿಸುತ್ತಿದ್ದರು ಸಂಕಟ ಬರುವದಾದರೆ ನಾಳೆ ಬಪ್ಪುದು ನಮಗಿಂದೇ ಬರಲೆಂದೂ ಇಂದು ಬಪ್ಪುದು ಈಗಲೇ ಬರಲೆಂದೂ ಕೆಚ್ಚಿನಿಂದ ಎಂತು ಅರುಹುವರು ಮುನಿಸು

ನನ್ನನೇನು ಮಾಡುವರೆಂದೂ ಬಿಂಕದಿಂದ ತನ್ನಿಷ್ಟದೈವತದ ಮೇಲೆ ಭರವಸೆಯಿನ್ನಿಟ್ಟಿದ್ದರು. ಅಂಥವರು ಎಣಿಸೆನಿಸೆಂದರೆ ಧೃತಿಗೆಡುವರೇ? ಎಲುದೋರಿ ನರಹರಿದು ಕರುಳ ಕುಪ್ಪಳಿಸಿದರೆ ಧೃತಿಗೆಡುವರೇ? ಶಿರಹರಿದು ಅಟ್ಟೆ ನೆಲಕ್ಕೆ ಬಿದ್ದರೆ ನಾಲಗೆ ಕೂಡಲಸಂಗ ಶರಣೆನ್ನದೆ ಸುಮ್ಮನಿರುವದೇ? ಒಣಗಿಸಿ ಎಲ್ಲ ಗಣಗಣನೆ ಮಾಡಿದರೂ ಹಣ್ಣ ಳ್ಳನಕ್ಕ ಚರಣನೆನೆವುದ ಮಾಣೆ ಮಾಣೆ ಎನ್ನದಿರ್ದರೆ ಕತಾರಂನು ತನ್ನ ಕಮ್ಮಟದಲ್ಲಿ ಕರಗಿಸಿದರೆ ಮನದ ಕಳಿಕೆ ಕಳೆಯುವದೆಂದು ಅವರ ನಂಬಿಕೆ.

ಈ ಎಲ್ಲ ಸ್ವಭಾವವು ಜೀವನದಲ್ಲಿ ಸಹಜದ ಮಾತುಗಳಾಗಬೇಕಾದರೆ ಇಷ್ಟದೈವತದೊಡನೆ ಸಲಿಗೆ ಬೆಳೆದು ಬರಲಿಕ್ಕೆ ಬೇಕು. ಬಳಿಕೆ ಕ್ಷಣಕ್ಷಣವೂ ಅನುಮಾಯನವಾಗಿರಬೇಕು. ದೇವನೊಡನೆ ಹುಸಿಮುನಿಸಿನಿಂದ ಹೋರಾಡುವುದೂ, ಅಲ್ಲಿಯಿಂದ ಕೆಡುನುಡಿಯಾಡುವುದೂ, ಅಂಥವರಿಗೇ ಸಾಧ್ಯ. ಬಸವಣ್ಣನವರು ಭಕ್ತಜೀವನವನ್ನು ನಡೆಯಿಸಿಕೊಂಡು ಬರಲಿಕ್ಕೆ ಈ ಸಲಿಗೆಯೇ ಕಾರಣವಾಗಿತ್ತು. ಸಮಾಜವು ಭದ್ರವಾಗುವಂತೆ ಧರ್ಮದೀಕ್ಷೆಯಿಂದ ಅದನ್ನು ಬದ್ಧಗೊಳಿಸಿದರು. ಸ್ತ್ರೀಯರನ್ನು ಮನ್ನಿಸಿದರು; ಕೀಳರನ್ನು ಉನ್ನತಿಸಿದರು; ಸಂಗನನಾಥನ ಪಾದತೀರ್ಥದಲ್ಲಿ ಎಲ್ಲ ಹೊಳೆ-ಹಳ್ಳಗಳ ನೀರು ಮೇಳವಿಸಿ ಪುನೀತವಾದವು; ಪಾವನವಾದವು; ಭಕ್ತಿಯು ಕೊಂಬು ಹಿಡಿಯಿತು; ಅನುಭವದ ಬಿಂಬವು ಬಿಂಬಿಸಿತು. ಜ್ಞಾನವು ಕಳೆಗೊಂಡಿತು; ವೈರಾಗ್ಯವು ಮೊಳೆಗೊಂಡಿತು. ನಿಚ್ಚವೂ ಶಿವರಾತ್ರಿಯೂ ನಂದಾದೀಪವನ್ನುರಿಸಿತು. ಈ ಎಲ್ಲ ಜೀವನೋತ್ಸಾಹದ ಉತ್ಸವದಲ್ಲಿ ಮರಣವೂ ಮಾನವಮಿಯಂತೆ ಗುಡಿಯೆತ್ತಿತು. ಕುಡಿಬಿಟ್ಟು ಮನೆ ಮನೆಯ ಹಂದರವನ್ನೇರಿತು; ಹೃದಯದಲ್ಲಿ ತನಿಗಂಪನ್ನು ತುಂಬಿತು. ಇದೀಗ ಬಸವಣ್ಣನ ಸಂಸಾರ. ಬಸವನಿಂದ ನಾಡು ಹೆಸರು ಪಡೆಯಿತು; ನಾಡಿನೇಳ್ಗೆಯಲ್ಲಿ ಬಸವನು ಅಮರತೆಯ ಸೌಧವನ್ನೇರಿ ನಿಂತನು. ಆಗ ಬಸವ ಭಕ್ತರು "ಶಿವನೇ ಬಸವ; ಬಸವ ಶಿವನೇ" ಎಂದು ಉಚ್ಚಸ್ವರದಲ್ಲಿ ಹಾಡಿ ತಣಿದರು. ಆ ನಾದವು ಇಂದಿಗೂ ನಾಡಿನ ಮುಗಿಲಿನಂಗಳದಲ್ಲಿ ನಿನದಿಸಿ ಇಂದಿಗೂ ಕನ್ನಡಿಗರ ಹೃತ್ತಂತ್ರಿಯನ್ನು ತನನನ ವೆನಿಸುತ್ತಿದ್ದರೆ ಆಶ್ಚರ್ಯವೇನು?

---

# ಅಫಗಾಣಿಸ್ತಾನದಲ್ಲಿಯು ಶಿವಶರಣರು

ಒಂದುಕಾಲವಲ್ಲಿ ಶೈವ ಸಂಸ್ಕೃತಿಯು ಸಿಂಧೂ ನದಿಯ ಆಚೆಗಿರುವ ಪ್ರದೇಶಗಳಲ್ಲಿ ಅಂದರೆ ಯಾವಲ್ಲಿ ಅಫಗಾಣಿಸ್ತಾನ ಮತ್ತು ಮೇರೆಯಪ್ರಾಂತಗಳು ಈಗ ಇರುತ್ತವೋ: ಅಲ್ಲಿಯೂ ಕೂಡ ಅದು ಪಸರಿಸಿತ್ತೆಂದು ಕಂಡುಬರುತ್ತದೆ. ಬಸವೇಶ್ವರನು ತನ್ನ ಒಂದು ವಚನದಲ್ಲಿ 'ಕಾಳಿದಾಸನವನಾನು, ಬಾಣನವ ನಾನು, ಮಯೂರನವ ನಾನು' ಎಂದು ಹೇಳಿಕೊಂಡಿದ್ದಾನೆ. ಹರಿಹರನು ಬಾಣಕವಿಯಮೇಲೆ ಒಂದು ರಗಳೆಯನ್ನು ರಚಿಸಿದ್ದಾನೆ ಅದರಲ್ಲಿ ಅವನು ಬಾಣನು ಕಂಧಾರವೆಂಬ ಪಟ್ಟಣದವನೆಂತಲೂ ಅವನೊಡನೆ ಕಾಳಿದಾಸ ಮಯೂರರಿದ್ದರೆಂತಲೂ ಹೇಳಿದ್ದಾನೆ. ಕಂಧಾರವು ಅಫಗಾಣಿಸ್ತಾನದಲ್ಲಿಯ ಪ್ರಸಿದ್ಧ ಪಟ್ಟಣವಾದ ಈಗಿನ ಕಂದಹಾರವಿರುತ್ತದೆ. ಈ ಮೂವರೂ ಕವಿಗಳು ಕೇವಲ ಶಿವಭಕ್ತಿಯುಳ್ಳವರೆಂದು ವೀರಶೈವ ಗ್ರಂಥಗಳಲ್ಲಿ ವರ್ಣನೆಗಳಿವೆ. ಇವರಲ್ಲಿ ಬಾಣನು ಒಬ್ಬ ಜಂಗಮನ ಭಕ್ತನಾಗಿ ಅವನಿಂದ ಅವನು ಶಿವಜ್ಞಾನ ಪಡೆದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಪುರಾತನ ಕಾಲದಲ್ಲಿ ಜಂಗಮರು ಇಡೀ ಹಿಂದುಸ್ತಾನವನ್ನು ಉತ್ತರಕ್ಕೆ ಕಾಶ್ಮೀರದಿಂದ ದಕ್ಷಿಣಕ್ಕೆ ರಾಮೇಶ್ವರದ ವರೆಗೂ ಮುಖ್ಯವಾಗಿ ಎಲ್ಲೆಲ್ಲಿ ಶಿವಕ್ಷೇತ್ರಗಳಿರುತ್ತವೆಯೋ ಅಲ್ಲಿಗೆ ಸಂಚರಿಸುತ್ತಿದ್ದರೆಂದು ಕಂಡುಬರುತ್ತದೆ. ಆದ್ದರಿಂದ ಅವರು ಅನೇಕ ಮಹತ್ವದ ಕ್ಷೇತ್ರಗಳಲ್ಲಿ ಈಗಲೂ ಅರ್ಚಕರಾಗಿದ್ದಾರೆ. ಅವರು ಈ ಕಾಲದಲ್ಲಿ ಜಟಾ ಭಸ್ಮಧಾರಿಗಳಾಗಿ ಲಿಂಗ ಚಿಹ್ನವುಳ್ಳವರಾಗಿ ಯೋಗಾಭ್ಯಾಸದಲ್ಲಿ ನಿರತರಾಗಿ ಸಿದ್ಧಿಗಳನ್ನು ಪಡೆದವರಾಗಿ ಔಷಧಿಗಳ ಜ್ಞಾನವನ್ನು ಹೊಂದಿ ಜನರಿಂದ ಬಹಳ ಮನ್ನಣೆಯನ್ನು ಹೊಂದಿದ್ದರು. ಅವರ ಸಂಖ್ಯೆಯು ಮುಖ್ಯವಾಗಿ ಕಾಶ್ಮೀರದಲ್ಲಿ ಬಹು ದೊಡ್ಡದಾಗಿತ್ತೆಂದು ವೀರಶೈವ ಗ್ರಂಥಗಳಿಂದ ತಿಳಿದುಬರುತ್ತದೆ.

ಹಿಂದುಸ್ತಾನವು ಪುರಾತನ ಕಾಲದಲ್ಲಿ ಈಗಿನ ಅಫಗಾಣಿಸ್ತಾನವನ್ನು ಸಹ ಒಳಕೊಂಡು ಭಾರತವರ್ಷವೆಂದು ಪ್ರಸಿದ್ಧವಾಗಿತ್ತು. ಅಫಗಾಣಿಸ್ತಾನ ಮತ್ತು ಕಾಶ್ಮೀರಗಳು ಅನೇಕ ವರ್ಷ ಕನಿಷ್ಕರಾಜನ ಅಧೀನದಲ್ಲಿದ್ದವು. ಈ ರಾಜ್ಯಗಳಲ್ಲಿ ಬೌದ್ಧ ಧರ್ಮವು ಆಗ ಹೆಚ್ಚಾಗಿ ಪ್ರಸಾರವಾಗಿತ್ತು. ಹಿಂದಿನ ಕಾಲದ ಅಫಗಾಣರೂ ಬೌದ್ಧಮತವನ್ನು ಪಾಲಿಸುವವರಾಗಿದ್ದರು. ಆದ್ದರಿಂದ ಅವರ ದೇಶದಲ್ಲಿ ಅನೇಕ ಬೌದ್ಧಾಲಯಗಳು ಉಂಟಾಗಿದ್ದವು. ಅವುಗಳ ಅವಶೇಷಗಳು ಈಗಲೂ ಕೂಡ ಅಲ್ಲಿ ದೊರೆಯುತ್ತಿವೆ.

ಮಹಾಭಾರತದ ಕಾಲದಲ್ಲಿ ಅಫಗಾಣಿಸ್ತಾನದಲ್ಲಿ ಆಳುತ್ತಿದ್ದ ರಾಜವಂಶಗಳು ಹಿಂದುಸ್ತಾನದಲ್ಲಿ ಆಳುತ್ತಿದ್ದ ರಾಜವಂಶಗಳೊಡನೆ ಶರೀರಸಂಬಂಧವನ್ನು ಮಾಡಿಕೊಂಡಿದ್ದವೆಂಬುದು ಕಂಡುಬರುತ್ತದೆ. ಪಾಂಡುರಾಜನಿಗೆ ಕುಂತೀ, ಗಾಂಧಾರೀ ಎಂಬ ಇಬ್ಬರು ಹೆಂಡರಿದ್ದು ಇವರಲ್ಲಿ ಗಾಂಧಾರಿಯು ಕಂದಹಾರದವಳಾಗಿದ್ದಳು. ಆದ್ದರಿಂದ ಅವಳಿಗೆ ಆ ಪಟ್ಟಣದ ಹೆಸರೇ ಉಂಟಾಗಿದೆ. ಗಾಂಧಾರೀ ಎಂದರೆ ಕಂದಹಾರದವಳೆಂಬ ಅರ್ಥವು.

ಅಫಗಾಣಿಸ್ತಾನವು ಪುರಾತನಕಾಲದಲ್ಲಿ ಈಗಿನಂತೆ ಹಿಂದುಸ್ತಾನಕ್ಕೆ ಸಂಬಂಧವಿಲ್ಲದ ಬೇರೊಂದು ದೇಶವಾಗಿರಲಿಲ್ಲ. ಅದು ಹಿಂದುಸ್ತಾನದ ಒಂದು ಭಾಗವಾಗಿತ್ತು. ಅದರೊಳಗಿಂದ ಹಿಂದೂ ವ್ಯಾಪಾರಸ್ಥರು ಹಾಯ್ದು ಮಧ್ಯ ಏಶಿಯದ ವರೆಗೂ ವ್ಯಾಪಾರವನ್ನು ನಡಿಸುತ್ತಿದ್ದರು.

ಹಿಂದೂ ಜನರ ಪುರಾತನ ಪುರಾಣಗಳಲ್ಲಿ ಉಲ್ಲೇಖವಾದ ಕಿಂಪುರುಷ, ಕುಬೇರ, ಯಮ ಮೊದಲಾದವರ ರಾಜ್ಯಗಳು ಮಧ್ಯ ಏಶಿಯದಲ್ಲಿದ್ದವು. ಈ ಲೋಕಗಳ ವಿಚಾರಗಳು ಪುರಾಣಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಇವು ಮಧ್ಯ ಏಶಿಯಕ್ಕೆ ಇದ್ದ ಹಿಂದೂಜನರ ಸಂಬಂಧವನ್ನು ತೋರಿಸುತ್ತವೆ.

ಅಫಗಾಣಿಸ್ತಾನದಲ್ಲಿ ಈಗ ಪುಷ್ಟು ಎಂಬ ಭಾಷೆಯು ಪ್ರಚಲಿತವದೆ. ಇದು ದ್ರವಿಡ ಭಾಷೆಗಳಿಗೆ ಬಹು ಸಮೀಪವರ್ತಿಯಾದ ಭಾಷೆಯು. ದ್ರಾವಿಡರು ಯಾವಾಗಲೂ ಶಿವಪೂಜಕರು ಆದ್ದರಿಂದ ಅವರ ಮೂಲಕ ಈ ಪ್ರದೇಶದಲ್ಲಿದ್ದ ಜನರು ಶಿವೋಪಾಸಕರಾಗಿರಬಹುದು.

ಈ ಕಾರಣದಿಂದಲೇ ಪಂಜಾಬ ಮತ್ತು ಸಿಂಧದೇಶಗಳಲ್ಲಿ ಶಿವೋಪಾಸನೆಯ ಚಿನ್ಹಗಳು ಕಂಡುಬಂದಿವೆ. ಈ ಸಂಗತಿಯು ಮಹೆಂಜೊದಾರೋ ಮುಂತಾದ ಕಡೆಗೆ ದೊರೆತ ಪುರಾತನ ಅವಶೇಷಗಳಿಂದ ಸ್ಪಷ್ಟವಾಗಿರುತ್ತದೆ. ಇವುಗಳು ಅಲ್ಲಿದ್ದ ಶೈವ ಸಂಸ್ಕೃತಿಯನ್ನು ತೋರಿಸುತ್ತವೆ.

ಈ ಭಾಗದಲ್ಲಿ ಬೌದ್ಧಧರ್ಮವು ಕೆಲಕಾಲದ ಮೇಲೆ ಅವನತಿಯನ್ನು ಹೊಂದಿತು. ಅದರ ತರುವಾಯ ಅದರ ಸ್ಥಾನದಲ್ಲಿ 'ತ್ರಿಕ'ವೆಂಬ ಶೈವ ಮತವು ಜನರಲ್ಲಿ ಬೆಳವಣಿಗೆಯನ್ನು ಹೊಂದಿತು. ಈ ಧರ್ಮವು ವೀರಶೈವ ಮತಕ್ಕೆ ಬಹು ಸಮೀಪವರ್ತಿಯಾದುದು. ಇದೇ ಕಾಲಕ್ಕೆಯೇ

ಕಾಶ್ಮೀರ ದೇಶದಲ್ಲಿ ಶಿವಶರಣರು ಉದಯವಾದರು. ಆದ್ದರಿಂದ ಅದಕ್ಕೆ ಸಮೀಪವರ್ತಿಯಾದ ಅಫಗಾಣಿಸ್ತಾನದಲ್ಲಿಯೂ ಕೂಡ ಶಿವಶರಣರು ಆಗಿ ಹೋಗಿರುವದು ಅಸಂಭಾವ್ಯವಲ್ಲ. ಹೇಗೆ ಕಾಶ್ಮೀರದಲ್ಲಿಯ ಈ ಕಾಲದ ಶಿವಶರಣರು ಬಸವೇಶ್ವರನ ತತ್ವಗಳನ್ನು ತಿಳಿಯಲು ಕಲ್ಯಾಣಕ್ಕೆ ಬರುತ್ತಿದ್ದರೋ ಹಾಗೆಯೇ ಅಫಗಾಣಿಸ್ತಾನದಲ್ಲಿಯ ಕೆಲವು ಶಿವಶರಣರು ಕರ್ನಾಟಕಕ್ಕೂ ಬಂದ ಹಾಗೆ ತಿಳಿದುಬರುತ್ತದೆ.

ಅಫಗಾಣಿಸ್ತಾನಕ್ಕೆ ಈ ಕಾಲದಲ್ಲಿ ಬರ್ಬರದೇಶವೆಂಬ ಹೆಸರಿತ್ತು. ಈ ಶಿವಶರಣರಲ್ಲಿ ಹಲಾಯುಧ ಮತ್ತು ಮರುಳುಶಂಕರದೇವ ಇವರು ಮುಖ್ಯರಾಗಿದ್ದಾರೆ. ಇವರಲ್ಲಿ ಮರುಳುಶಂಕರದೇವನು ಬಸವೇಶ್ವರನನ್ನು ಕಾಣಲಿಕ್ಕೆ ಕಲ್ಯಾಣಕ್ಕೆ ಬಂದು ಅವನಲ್ಲಿ ಅನೇಕ ವರ್ಷವಿದ್ದನು. ಇವರಿಬ್ಬರ ಚರಿತ್ರಗಳನ್ನು ನಾವಿಲ್ಲಿಕೊಡುತ್ತೇವೆ.

ಬಸವಾದಿಪ್ರಮಥರ ಮಾರ್ಗವು ಆಂಧ್ರ, ಕಾಶ್ಮೀರ, ಗುರ್ಜರ ಮೊದಲಾದ ದೇಶಗಳಲ್ಲಿಯ ಶೈವಮಾರ್ಗಗಳಿಗಿಂತ ಭಿನ್ನವಾಗಿ ತೋರಬಹುದು. ಆದರೆ ಶಿವಶರಣರ ಧರ್ಮವು ಎಲ್ಲಕ್ಕೂ ಉಚ್ಚತರದ್ದಾಗಿತ್ತು. ಇದು ಇತರ ಶೈವಧರ್ಮೀಯರಿಗೆ ಕಂಡು ಬರಲಾಗಿ ಅವರಲ್ಲಿ ಬಹುಜನರು ಕಲ್ಯಾಣಕ್ಕೆ ಬಂದು ಬಸವೇಶ್ವರನ ಸನ್ನಿಧಿಯಲ್ಲಿ ಆದರ ರೀತಿಯನ್ನು ತಿಳಿದುಕೊಳ್ಳಲು ಇಚ್ಛಿಸುತ್ತಿದ್ದರೆಂದು ಕಂಡು ಬರುತ್ತದೆ.

ಆದ್ದರಿಂದ ಅವರು ಬಸವಾದಿ ಪ್ರಮಥರಿಗೋಸ್ಕರ ಬಹು ಪೂಜ್ಯಭಾವವನ್ನು ತಾಳಿದವರಾಗಿದ್ದಾರೆ. ಬಸವಾದಿ ಪ್ರಮಥರೂ ಕೂಡ ಈ ಧರ್ಮೀಯರು ತಮ್ಮವರೆಂತಲೇ ಭಾವಿಸಿ ಅವರೊಡನೆ ವರ್ತಿಸಿದ್ದಾರೆ. ಆದ್ದರಿಂದ ಹಿಂದಿನ ಕಾಲದಲ್ಲಿ ಶೈವಧರ್ಮಗಳು ಆಯಾ ಪ್ರಾಂತಗಳ ಪ್ರಕಾರ ಭಿನ್ನ ಭಿನ್ನತೆರನಾಗಿ ತೋರಿದರೂ ಅವೆಲ್ಲವೂ ಒಂದೇ ಸಂಸ್ಕೃತಿಗೆ ಹೊಂದಿದವು ಎಂದು ಭಾವಿಸಿ ಅವುಗಳಿಗೆಲ್ಲ ನಾವು ಮಹತ್ವ ಕೊಡುವದು ಅವಶ್ಯವಾಗಿದೆ. ಬಸವೇಶ್ವರನ ಕೂಡ ಇದ್ದ ಶಿವಶರಣರು ಇಂಥವರೊಡನೆ ಉದಾರಭಾವದಿಂದ ವರ್ತಿಸಿದ್ದಾರೆ. ಆದರಿಂದ ಶರಣರ ವರ್ಚಸ್ಸು ಎಲ್ಲ ಕಡೆಗೂ ಬೆಳಿದಿರುವದು. ಇವರಿಂದ ವೀರಶೈವಮತವು ಬೆಳೆಯಲಿಕ್ಕೆ ಕಾರಣವಾಯಿತು.

---

# ಹಲಾಯುಧ

ಬರ್ಬರ ದೇಶದಲ್ಲಿ ನವಪುರವೆಂಬ ಪಟ್ಟಣವಿದ್ದು ಅಲ್ಲಿ ಹಲಾಯುಧನು ಶಿವಧರ್ಮ ನಿರತನೆಂದು ಪ್ರಸಿದ್ಧನಾಗಿದ್ದನು. ಈ ಪಟ್ಟಣದಲ್ಲಿ ಒಂಬತ್ತು ಉಪಗ್ರಾಮಗಳಿದ್ದು ಆ ಗ್ರಾಮಗಳ ಒಡೆಯರು ಸಹ ಶಿವಭಕ್ತಿಯುಳ್ಳವರಾಗಿ ಆಚರಿಸುತ್ತಿದ್ದರು.

ಹೀಗಿರುವಲ್ಲಿ ಸಿರಿಯಾಳನು ಕೈಲಾಸಕ್ಕೆ ಹೋದ ಬಳಿಕ ಅವನು ತಾನು ಕಾಂಚೀಪುರದಲ್ಲಿ ತನ್ನ ಪುತ್ರನನ್ನು ಹತಿಸಿ ಶಿವನಿಗಿಕ್ಕಿ ಕೈಲಾಸಕ್ಕೆ ಬಂದಿದ್ದೇನೆ, ನನ್ನಂಥವರು ಶಿವನೊಡ್ಡೋಲಗದಲ್ಲಿ ಯಾರೂ ಇಲ್ಲ, ಎಂದು ಎಲ್ಲರ ಕೂಡ ಅತ್ಯಂತ ಅಹಂಕಾರದಿಂದ ವರ್ತಿಸಹತ್ತಿದ್ದನು. ಇದು ಶಿವನ ಲಕ್ಷ್ಯಕ್ಕೆ ಬಂದು ಹನ್ಮೆಂಬುದು ಕರ್ಮಕ್ಕೆ ಮೊದಲು, ಅದು ಭವದ ಬೀಜವು, ಇದನ್ನು ಸಿರಿಯಾಳನು ಅರಿಯನು. ಇದನ್ನು ಅವನಲ್ಲಿ ಹೇಗೆ ದೂರ ಮಾಡಬೇಕೆಂಬುದನ್ನು ಚಿಂತಿಸುತ್ತ ಇದನ್ನು ಭಕ್ತರಿಂದಲೇ ದೂರ ಮಾಡಿಸಬೇಕೆಂದು ಯೋಚಿಸಿ ಒಂದು ಉಪಾಯವನ್ನು ನೆನೆದು ಭೂತಳಕ್ಕೆ ತನ್ನೊಡನೆ ಬರಬೇಕೆಂದು ಶಿರಿಯಾಳನಿಗೆ ಹೇಳಿದನು. ಆಗ ಉಭಯುತರು ಮಾಹೇಶ್ವರರ ವೇಷವನ್ನು ಧರಿಸಿಕೊಂಡು ನಾಡಿನಲ್ಲಿ ಶಿವಭಕ್ತರಿದ್ದ ಸ್ಥಾನಗಳನ್ನು ನೋಡಲಿಕ್ಕೆ ಹೊರಟರು.

ಅವರು ಮೊದಲು ಕೊಟ್ಟಣದ ನಿಂಬಿಯಕ್ಕನಿದ್ದ ಸ್ಥಾನಕ್ಕೆ ಹೋದರು. ಅವಳು ತನ್ನ ಮಗನನ್ನು ಹೇಗೆ ಶಿವನಿಗರ್ಪಿಸಿದಳೆಂಬುದನ್ನು ಶಿವನು ಶಿರಿಯಾಳನಿಗೆ ಹೇಳಿಕೊಟ್ಟನು. ಶಿರಿಯಾಳನು ಅದನ್ನು ಕೇಳಿ ಅಚ್ಚರಿಬಟ್ಟನು. ಹಾಗೆಯೇ ಶಿವನು ಚಾರಮಾರಾಯ, ಶ್ವಪಚಯ್ಯ, ಬಾಹೂರ ಬೊಮ್ಮಯ್ಯ, ದೇವರ ದಾಸಿಮಯ್ಯ ಇವರಿದ್ದ ಸ್ಥಾನಗಳನ್ನು ತೋರಿಸಿ ಅವರು ಮಾಡಿದ ಮಹತ್ತರ ಕಾರ್ಯಗಳನ್ನು ನಿವೇದಿಸಿದನು. ಕಡೆಗೆ ಉಭಯುತರು ಹಲಾಯುಧನಿದ್ದ ನವಪುರಕ್ಕೆ ಬಂದು ಅವನಿಗೆ ಭೆಟ್ಟಿಯಾದರು. ಹಲಾಯುಧನು ಅವರಿಗೆ— ನೀವಾರು, ನೀವೆಲ್ಲಿಂದ ಬಂದಿರೆಂದು ಕೇಳಲು ಅವರು — ನಾವು ಇದ್ದುದು ಸಿರಾಳಪುರ, ಮೇದಿನಿಯಲ್ಲಿದ್ದ ಶಿವಶರಣರ ಸ್ಥಾನಗಳನ್ನು ನೋಡುತ್ತ ಈ ದೂರ ದೇಶಕ್ಕೆ ಬಂದಿದ್ದೇವೆ, ಎಂದು ಹೇಳಿ, ಅಮ್ಮವ್ವೆಯು ತಾಯೋಪಾದಿಯಲ್ಲಿ ಶಿವನಿಗೆ ಹಾಲನೆರೆದಳು, ಪರಮಾತ್ಮನು ಚನ್ನಯ್ಯನೊಡನುಂಡನು, ದಾಸಿಮಯ್ಯನು ೧೨

ವರ್ಷ ನೆಯ್ದ ಬಟ್ಟೆಯನ್ನು ಜಂಗಮನಿಗೆ ಉಡಲು ಕೊಟ್ಟನು. ಹೀಗೆ ಶಿವಶರಣರ ಚರಿತ್ರೆಗಳನ್ನು ಹೇಳುತ್ತ ನಾವು ಮೊನ್ನೆ ಕಂಚಿಗೆ ಹೋದಾಗ ಅಲ್ಲಿ ಸಿರಿಯಾಳನು ತನ್ನ ಮಗನನ್ನು ವಧಿಸಿ ಶಿವನಿಗಿಕ್ಕಿ ಕಂಚಿಪುರ ಸಹಿತ ಕೈಲಾಸಕ್ಕೆ ಹೋದನು. ಬರಿಯ ಮಾತನಾಡಬಹುದು. ಆದರೆ ಸಿರಿಯಾಳನಂತೆ ಶಿವನಿಚ್ಛೆಯ ಪದಾರ್ಥವನ್ನು ಹೀಗ ಮಾಡುವದು, ಕೊಡುವುದು ಅರಿದು ಎಂದು ಅವರು ನುಡಿದರು.

ಹಲಾಯುಧನು ಸಿರಿಯಾಳನ ಈ ಚರಿತ್ರೆಯನ್ನು ಕೇಳಿದ ಕೂಡಲೆ ತನ್ನ ಕಿವಿಗಳನ್ನು ಮುಚ್ಚಿ 'ಶಾಂತಂ ಪಾಪಂ, ಶಾಂತಂ ಪಾಪಂ' ಎಂದು ಅನ್ನುತ್ತ- ಏನು ? ಶಿವನು ಮನುಜರನ್ನು ಭಕ್ಷಿಸಲು ರಾಕ್ಷಸನಾದನೇ ? ಸಿರಿಯಾಳನು ಹಸುಳನನ್ನು ವಧಿಸಿದನೇ ? ಮಗನನ್ನು ಕೊಲ್ಲುವನು ಅವನೆಂತಹ ಸೆಟ್ಟಿಯು? ಇಂಥ ಭಕ್ತಿ ಹೀನರ ಮಾತು ನೀವೇಕೆ ಹೇಳುವಿರಿ? ಶಿವನು ಭಕ್ತರನ್ನು ಹೀಗೆ ವಧಿಸಿದನೇ? ಅವನು ಭಕ್ತದ್ರೋಹಿಯಾದನೇ ? ಏತಕೀ ಮಾತು? ವೀರಶೈವರು ಮಾಂಸವನ್ನು ಮುಟ್ಟಬಾರದು, ನೋಡಲು ಸಹ ಬಾರದು. ಎಂದು ಸಿಟ್ಟಿನಿಂದ ನುಡಿದನು.

ಅದಕ್ಕೆ ಮಾಹೇಶ್ವರ ವೇಷದಲ್ಲಿದ್ದ ಶಿವನು ಜಗತ್ತಿನಲ್ಲಿ ಅನೇಕ ಪುರಾತನರು ಆಗಿಹೋಗಿದ್ದಾರೆ. ಅವರಲ್ಲಿ ಅನೇಕರು ತಮ್ಮ ಮಹಿಳೆಯರನ್ನು ಮಕ್ಕಳನ್ನು ಮತ್ತು ತಮ್ಮನ್ನು ಪರಮಾತ್ಮನಿಗೆ ಅರ್ಪಿಸಿದ್ದಾರೆ. ಹಲಾಯುಧನೇ, ನೀನೆಂದ ಮಾತು ಸಲ್ಲದು. ನಿರ್ಮಳ ಮನದ ಸಿರಿಯಾಳನನ್ನು ಭೂವಲಯದಲ್ಲಿ ಜನರೆಲ್ಲರು ನಾನಾ ಬಗೆಯಾಗಿ ಸ್ತುತಿಸುತ್ತಾರೆ. ಸಭಾಕಾಲದಲ್ಲಿ ಅವನ ಚರಿತೆಯನ್ನು ಕೇಳಿ ಆನಂದಿಸುತ್ತಾರೆ, ಎಂದು ಉತ್ತರ ಕೊಟ್ಟನು.

ಈ ನುಡಿಗಳನ್ನು ಕೇಳಿ ಹಲಾಯುಧನ ಕೋಪವು ಮತ್ತಿಷ್ಟು ಹೆಚ್ಚಿತು. ಅವನು ಅಬ್ಬರಿಸುತ್ತ— ಅಹುದಹುದು, ಉಮಾಪತಿಯು ಮಾಂಸವನ್ನು ಬೇಡಿದನೇ? ಸೆಟ್ಟಿಯು ಭಕ್ತವತ್ಸಲನೇ? ಅವನು ಭಕ್ತನಾದರೆ ತರಳನನ್ನು ಹೇಗೆ ಕೊಂದ ? ಅವನ ಹೆಂಡತಿಯು ರಕ್ಕಸಿಯಾದಳೇ ? ಶಿವನು ತರಳನನ್ನು ಕಾಮಿಸಿ ಹೇಗೆ ಅವನನ್ನು ಕೊಲ್ಲಿಸಿದನು ? ಇದು ಭಕ್ತಾಚಾರವೇ? ನರಮಾಂಸವು ಮಲಹರನ ಗಂಟಲಲ್ಲಿ ಹೇಗೆ ಇಳಿಯಿತು? ಇದು ನಿರ್ಮಳನ ಕಥೆ, ಎಂದು ನೀವು ನನಗೆ ಹೇಳುತ್ತೀರಿ. ಇದು ಪಾಪದ ಕಥೆಯು,

ನೀವು ಪಾಪಿಷ್ಠರು. ನೀವು ಜಗತ್ತಿನಲ್ಲಿ ಇರಬಾರದು ಎಂದು ಅಬ್ಬರಿಸುತ್ತ ಕೈತಾಳಂಗಳನ್ನು ಹೊಯ್ದನು.

ಆಗ ಉಭಯ ಮಹೇಶ್ವರರು ಹಲಾಯುಧನ ರೋಷವನ್ನು ನೋಡಿ ಭಯಗೊಂಡರು. ಅವರಿಗೆ ಪ್ರಾಣಭಯವು ಉಂಟಾಯಿತು. ಅವರ ಎದೆಯು ಡವಡವನೆ ಹಾರಹತ್ತಿತು. ಶಿವನು ಭಯದಿಂದ ವಿಹ್ವಲನಾದನು. ಆಗ ಉಭಯತರಿಗೆ ತಮ್ಮ ಕಾಂತೆಯರ ನೆನಪಾಯಿತು. ತಮ್ಮನ್ನು ಉಳಿಸಿಕೊಳ್ಳಬೇಕೆಂದು ಅವರನ್ನು ನೆನೆದರು. ಆಗ ಚಂಗಳೆ, ಪಾರ್ವತೀದೇವಿಯರು ಹಲಾಯುಧನಿದ್ದಲ್ಲಿಗೆ ಓಡಿಬಂದರು. ಅವರು ನಡೆದ ಸಂಗತಿಗಳನ್ನು ತಿಳಿದುಕೊಂಡು ಪಾರ್ವತಿದೇವಿಯು ಹಲಾಯುಧನಿಗೆ— ನೀನು ನಮಗೆ ಆಶೀರ್ವಾದವನ್ನು ಮಾಡು. ನಮ್ಮ ಆಶೆಯನ್ನು ನೀನು ಪೂರೈಸು. ಈಕೆ ಸಿರಿಯಾಳನ ಸತಿಯು ಚಂಗಳೆಯು. ನಾನು ಜಗದೀಶನ ರಾಣಿ. ನಾವು ಪತಿಬಾಹ್ಯರಾಗುವಂತೆ ಮಾಡಬೇಡ. ನೀವು ನಮ್ಮ ಪತಿಗಳನ್ನು ನಮಗೆ ಭಿಕ್ಷೆಯಾಗಿ ಕೊಡಬೇಕು ಎಂದು ಅವನಿಗೆ ಬೇಡಿಕೊಂಡರು.

ಆಗ ಹಲಾಯುಧನ ರೋಷವು ಅಡಗಿತು. ಅವರಿಗೆ— ನೀವು ಅಂಜಬೇಡಿರಿ, ಅಂಜಬೇಡಿರಿ ಎಂದು ಅಭಯವನ್ನು ಕೊಟ್ಟನು. ಆದರೆ ನಿಮ್ಮ ಪತಿಗಳು ಹಿಂಸಾಚಾರವನ್ನು ಬಿಡಬೇಕು, ಇದು ಅಧರ್ಮವು, ಎಂದು ನುಡಿದನು. ಆಗ ಶಿವನು ಹಲಾಯುಧನ ಸಾಧುಮಾರ್ಗಕ್ಕೆ ಪ್ರೀತನಾಗಿ ಅವನಿಗೆ ನಿಜರೂಪವನ್ನು ತೋರಿಸಿದನು. ಹಲಾಯುಧನು ಶಿವನ ರೂಪನ್ನು ನೋಡಿ ಶಿವನನ್ನು ಹೊಗಳುವಲ್ಲಿ—ಶಿವನ ಅಗ್ನಿನೇತ್ರವು ಜ್ವಾಲೆಯಿಂದ ಪೂರಿತವಾದದ್ದೆಂದು ಹೇಳದೆ ಅದು ಕುಂಕುಮದ ಲಲಾಮವೆಂದು ಹೇಳಿದನು. ಅವನ ಶಿರದ ಗಂಗೆ ಜಟೆಯಲ್ಲಿ ಬಂಧಿಸಲ್ಪಟ್ಟವಳೆಂದು ಹೇಳದೆ, ಜಾಜಿಯ ನನೆಯು ಎಂದು ಹೇಳಿದನು. ಶಿವನ ಕಂಠದಲ್ಲಿ ಇದ್ದ ಕಪ್ಪನ್ನು ವಿಷವೆಂದು ಹೇಳದೆ ಅದು ಕಸ್ತೂರಿಯ ರೇಖೆ ಎಂದು ಹೇಳಿದನು. ಹಲಾಯುಧನು ಶಿವನನ್ನು ಹೀಗೆ ಮೃದುವಚನಗಳಿಂದ ಹೊಗಳುತ್ತ— ಶಂಕರನೇ, ಶುಭಾಕರನೇ, ವರದಭಯಕರನೇ, ನೀನೊಲಿದರೆ ಇರುವೆ ಬ್ರಹ್ಮನಾಗುವದು. ನೊರಜು ನಾರಾಯಣನಾಗುವದು, ಭಕ್ತರ ವಾಮಕ್ಷೇಮ ನಿನ್ನದು. ಕರ್ತೃವೇ, ಭಕ್ತರ ಸಿಧಿ ನಿಧಾನವೇ ಎಂದು ತನ್ನ ಶುದ್ಧ ಸಾತ್ವಿಕ ಅಹಿಂಸಾಮಯವಾದ ಉಕ್ತಿಗಳಿಂದ ಪರಮಾತ್ಮನನ್ನು ಸ್ತುತಿಸಿದನು.

ಆಗ ಪರಮಾತ್ಮನು ಹಲಾಯುಧನ ನೈಜವಾದ ಮತ್ತು ಶುದ್ಧವಾದ ಭಕ್ತಿಗೆ ಪ್ರೀತನಾಗಿ— ನಿನಗೇನು ಬೇಕು ಬೇಡು ಎನಲು ಅವನು ತನ್ನ ನವಪುರದ ಜನರನ್ನೊಡಗೊಂಡು ನನ್ನನ್ನು ನಿನ್ನ ಶಿವಪುರಕೆ ಒಯ್ಯು ಎಂದು ಹೇಳಲು ಶಿವನು ಅವನ ಒಂಬತ್ತು ಪುರಗಳು ಸಹಿತವಾಗಿ ಅವನನ್ನು ಕೈಲಾಸಕ್ಕೊಯ್ದನು. ಆಗ ಅವನೊಡನೆ ಸಿರಿಯಾಳನೂ ಚಂಗಳೆಯೂ ಇರಲು, ಶಿವನು ಸಿರಿಯಾಳನಿಗೆ — ನೋಡಿದೆಯಾ ಭಕ್ತರ ಮಹಾತ್ಮೆಯನ್ನು! ಮಗನನ್ನರ್ಪಿಸಿದೆನೆಂದು ನೀನು ಹೆಮ್ಮೆಯನ್ನು ತಾಳಿದ್ದೆ. ನಿನ್ನಕಿಂತಲೂ ಹೆಚ್ಚಿನ ಭಕ್ತರು ಜಗತ್ತಿನಲ್ಲಿ ಆಗಿಹೋಗಿರುವದನ್ನು ನೀನು ಪ್ರತ್ಯಕ್ಷ ಭೂಲೋಕದಲ್ಲಿ ಕಂಡೆಯಾ? ಎಂದು ನುಡಿಯಲು ಸಿರಿಯಾಳನು— ಅಹುದಹುದು? ನನ್ನಿಂದ ಅಪರಾಧವಾಗಿದೆ. ಕ್ಷಮಿಸೆಂದು ಬೇಡಿಕೊಳ್ಳಲು ಪರಮಾತ್ಮನು ಅವನನ್ನು ಕರೆದುಕೊಂಡು ಕೈಲಾಸಕ್ಕೆ ಹೋದನು.

---

## ವಿಮರ್ಶೆ

ಹಲಾಯುಧನು ಬೌದ್ಧ ಸಂಸ್ಕೃತಿಯು ಇದ್ದ ಅಫಗಾಣಿಸ್ತಾನದಲ್ಲಿ ವಾಸಿಸುವವನಾದ್ದರಿಂದ ಅವನ ಚರಿತ್ರೆಯಲ್ಲಿ ಇದೇ ಸಂಸ್ಕೃತಿಯ ಹೊಳಹನ್ನು ನಾವು ಕಾಣಬಹುದು. ಬೌದ್ಧ ಧರ್ಮವು ಮನುಷ್ಯನು ಜಗತ್ತಿನಲ್ಲಿ ಹೇಗೆ ನಡೆಯಬೇಕೆಂಬುದಕ್ಕೆ ಮಹತ್ವ ಕೊಟ್ಟು ಅವನು ಅಹಂ ಎಂಬುದನ್ನು ತೊರೆಯಬೇಕು, ಪ್ರಾಣಿಗಳಲ್ಲಿ ದಯಾಭಾವ ವುಳ್ಳವನಾಗಿರಬೇಕು ಹಿಂಸಾಚಾರಿಯಾಗಿರಬಾರದು, ಎಂದು ಹೇಳುತ್ತಿದೆ. ಹೀಗೆಯೇ ಹಲಾಯುಧನು ನಡಿದದ್ದರಿಂದ ಅವನಿಗೆ ಪರಮಾತ್ಮನೇ ಶರಣು ಬರಬೇಕಾಯಿತು. ಈ ಪ್ರಕಾರ ಅವನ ಚರಿತ್ರೆಯು ಮನುಷ್ಯನು ನೀತಿ ಮತ್ತು ಸದಾಚಾರದಿಂದ ನಡೆಯಬೇಕೆಂಬ ಬೌದ್ಧ ಧರ್ಮದ ತಿರುಳನ್ನು ಹೇಳುತ್ತಿದೆ. ಹೀಗೆ ನಡಿಯುವವನಿಂದ ಇಡೀ ಜಗತ್ತೇ ಉದ್ಧಾರವಾಗುತ್ತದೆ. ಆದ್ದರಿಂದ ಹಲಾಯುಧನು ತನ್ನನ್ನಷ್ಟೇ ಅಲ್ಲ, ತಾನಿದ್ದ ನವ ಗ್ರಾಮಗಳನ್ನೆಲ್ಲವನ್ನು ಕೈಲಾಸಕ್ಕೊಯ್ಯಲು ಸಮರ್ಥನಾದನು.

ಆದರೆ ಓಹಿಲಯ್ಯನು ಕಾಯಕದಿಂದ ಮುಕ್ತಿಯನ್ನು ಹೊಂದಿದವನು. ಆದರೆ ಕಾಯಕವು ಅವನ್ನು ಮಾಡುವವನಿಗೆ ಮಾತ್ರ ಸಂಬಂಧಿಸುತ್ತದೆ. ಆದ್ದರಿಂದ ಓಹಿಲನೊಬ್ಬನೇ ಕೈಲಾಸಕ್ಕೆ ಹೋಗಬೇಕಾಯಿತು. ಆದರೂ ಕಾಯಕದ ಕ್ಷೇತ್ರವು ಸಾಕಷ್ಟು ವಿಸ್ತಾರವಾದದ್ದೂ **ಪರಿಣಾಮಕಾರಿಯಾದದ್ದೂ**

ಇರುತ್ತದೆಂಬುದು ನಿಃ ಸಂದೇಹವಾದದ್ದು. ಆದರೆ ಉದ್ಭಟನು ಶಿವಶರಣರ ಲಿಂಗಾಚಾರದ ರೀತಿಯನ್ನು ತಿಳಿದವನಾಗಿದ್ದನು. ಇಂಥವನ ಆಚಾರದ ಪ್ರಭಾವವು ಸುತ್ತಲಿನ ಜಗದ ಮೇಲೆಯೂ ಲೋಹಚುಂಬಕದಂತೆ ಪಸರಿಸುತ್ತದೆ. ಆದ್ದರಿಂದ ಉದ್ಭಟನು ತನ್ನನ್ನಷ್ಟೇ ಅಲ್ಲ, ತನ್ನ ಗ್ರಾಮವನ್ನು ಸಹ ಕೈಲಾಸಕ್ಕೆ ಒಯ್ಯಲು ಸಮರ್ಥನಾದನು. ಆದರೆ ಈ ಎಲ್ಲರ ರೀತಿಗಳಿಗಿಂತಲೂ ಸದಾಚಾರ ಸದ್ವರ್ತನೆಯಿಂದ ನಡೆಯುವವನ ರೀತಿಯೇ ಹೆಚ್ಚು ಪ್ರಭಾವವುಳ್ಳದ್ದಾಗಿದೆ. ಇದು ಹಲಾಯುಧನ ಚರಿತ್ರೆಯಿಂದ ತಿಳಿದುಬರುತ್ತದೆ.

ಓಹಿಲಯ್ಯನು ಕಾಯಕವನ್ನು ಆಚರಿಸುವ ದಾಸೋಹಿಯು. ಆದ್ದರಿಂದ ಅವನು ಪ್ರಸಾದಿಸ್ಥಲದವನು. ಅವನದು ಚನ್ನಬಸವಣ್ಣನ ಮಾರ್ಗವು. ಉದ್ಭಟನು ಲಿಂಗಶಕ್ತಿಯನ್ನು ಒಳಕೊಂಡು ಲಿಂಗವೊಳು ಇರುವವನು. ಅವನ ಮಾರ್ಗವು ಸಿದ್ಧರಾಮೇಶ್ವರನದು, ಪ್ರಾಣಲಿಂಗಿಯದು. ಆದರೆ ಹಲಾಯುಧನು ಸದ್ವರ್ತನೆಯುಳ್ಳವನು. ಅವನದು ಭಕ್ತಸ್ಥಲವು. ಅವನು ಬಸವೇಶ್ವರನ ಮಾರ್ಗದವನು. ಆದರೆ ಶಿವಶರಣರಲ್ಲಿ ಬಸವೇಶ್ವರನ ಸ್ಥಾನವು ಬಹಳ ಹೆಚ್ಚಿನದಾಗಿರುತ್ತದೆ. ಅವನು ಎಲ್ಲರನ್ನೂ ಪುನೀತರನ್ನಾಗಿ ಮಾಡಿದನು. ಇದರಿಂದ ಹಲಾಯುಧನು ತಾನು ತನ್ನ ಗ್ರಾಮ, ಇಷ್ಟೇ ಅಲ್ಲ, ತನ್ನ ಸುತ್ತಲಿನ ಗ್ರಾಮಗಳನ್ನೆಲ್ಲವನ್ನು ಉದ್ಧಾರ ಮಾಡುವಷ್ಟು ಸಾಮರ್ಥ್ಯವನ್ನು ಹೊಂದಿದವನಾದನು. ಅವನದು ಸುಲಭವಾದ ಮಾರ್ಗವೆಂದು ಬಾಹ್ಯದಲ್ಲಿ ತೋರಿದರೂ ಕಠಿಣವಾದುದು.

ಆದರೆ ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಮನುಷ್ಯನು ಭಕ್ತ, ಮಹೇಶ ಮೊದಲಾದ ಆರೂ ಸ್ಥಲಗಳನ್ನು ತನ್ನಲ್ಲಿ ಜಾಗ್ರತಪಡಿಸಿಕೊಳ್ಳುವದು ಅತ್ಯಾವಶ್ಯಕವಾದುದು.

ಒಂದೇ ಒಂದು ಸ್ಥಲವನ್ನು ಜಾಗ್ರತಗೊಳಿಸುವದರಿಂದ ಪೂರ್ಣ ವಿಕಾಸವನ್ನು ಮನುಷ್ಯನು ಹೊಂದಲಾರನು. ಷಟ್‌ಸ್ಥಲಗಳೆಲ್ಲವನ್ನು ಜಾಗ್ರತಗೊಳಿಸಿದಲ್ಲಿ ಭಕ್ತನ ಎಲ್ಲ ಕರಣಗಳು, ಎಲ್ಲ ಇಂದ್ರಿಯಗಳು ಅವನ ಇಡೀ ಚೈತನ್ಯವು ಜಾಗ್ರತಿ ಹೊಂದುವವು. ಶಿವಶರಣರ ಈ ಮಾರ್ಗವನ್ನು ಅನುಸರಿಸಿದಲ್ಲಿ ಮನುಷ್ಯನಿಗೆ ಉಚ್ಚಸ್ಥಿತಿಯು ಪ್ರಾಪ್ತವಾಗುತ್ತದೆ.

# ಮರುಳು ಶಂಕರ ದೇವ.

ಬರ್ಬರ ದೇಶದಲ್ಲಿ ಕಣ್ಟಿತ್ತೂರು ಎಂಬ ಗ್ರಾಮವಿದೆ. ಅಲ್ಲಿ ನೈಸರ ಎಂಬ ಹೆಸರಿನ ಒಬ್ಬ ವಿರಕ್ತನಾಗಿ ಭಿಕ್ಷುಕವೃತ್ತಿಯುವನು ಒಂದು ಆಶ್ರಮವನ್ನು ಕಟ್ಟಿಕೊಂಡು ವಿರಕ್ತಾಶ್ರಮದ ನಡೆಗಳನ್ನು ಪಾಲಿಸುತ್ತಿದ್ದನು. ಮರುಳು ಶಂಕರನೆಂಬವನು ಅವನಿಗೆ ಸಹಾಯಕನಾಗಿ ಅವನ ಸೇವೆ ಮಾಡುತ್ತ ಅವನೊಡನೆಯೇ ವಾಸಿಸುತ್ತಿದ್ದನು. ಹೀಗಿರುವಲ್ಲಿ ಒಂದು ದಿವಸ ಒಂದು ಶ್ವಾನನು ಗಾಯವನ್ನು ಹೊಂದಿ ನೈಸರನ ಆಶ್ರಮದಲ್ಲಿ ಬಂದು ಬಿದ್ದಿತು. ನೈಸರನು ಅದನ್ನು ನೋಡಿ ದಯಾಭರಿತನಾಗಿ ಒಂದು ಪರ್ಣದಲ್ಲಿ ಭಿಕ್ಷಾನ್ನವನ್ನು ಹಾಕಿ ಆ ನಾಯಿಗೆ ಉಣ್ಣಿಸಿದನು ಆದರೆ ಆ ನಾಯಿಯು ಮುಂದೆ ಸ್ವಲ್ಪ ವೇಳೆಯಲ್ಲಿ ಮರಣ ಹೊಂದಿತು. ಅದು ಮರಣ ಹೊಂದುವ ವರೆಗೂ ನೈಸರನು ದಯಾರ್ದ್ರ ಭಾವವುಳ್ಳವನಾಗಿ ಅದರ ಆರೈಕೆ ಮಾಡಿದನು. ಆ ನಾಯಿಯು ತನ್ನ ಕೃತಜ್ಞತಾಭಾವವನ್ನು ತನ್ನ ದೃಷ್ಟಿಯಿಂದ ವ್ಯಕ್ತ ಮಾಡುತ್ತ ಆಶ್ರಮದಲ್ಲಿಯೇ ಮರಣ ಹೊಂದಿತು.

ಹೀಗೆ ಆ ನಾಯಿಯು ವಿರಕ್ತನಾದ ಆ ಭಿಕ್ಷುಕನು ಕೊಟ್ಟ ಪ್ರಸಾದವನ್ನು ಸೇವಿಸಿ ಮರಣಹೊಂದಿದ್ದರಿಂದ ಭೂಲೋಕದಲ್ಲಿ ರಾಜನಾಗಿ ಹುಟ್ಟುವ ಪ್ರಾರಬ್ಧವು ಅದಕ್ಕೆ ಒದಗಿತು. ಮತ್ತು ಅದು ಅದೇ ಕಣ್ಟಿತ್ತೂರಲ್ಲಿ ರಾಜನ ಉಚ್ಚಸ್ಥಾನವನ್ನು ಹೊಂದಿತು.

ಹೀಗೆ ಆ ಶ್ವಾನನು ರಾಜನಾಗಿ ಆಳುತ್ತಿರುವಲ್ಲಿ ಅದಕ್ಕೆ ಪೂರ್ವ ಜನ್ಮದ ಸ್ಮರಣೆಯು ಉಂಟಾಯಿತು. ಆಗ ಆ ರಾಜನು ತನಗೆ ಈ ಶ್ರೇಷ್ಠ ಸ್ಥಾನವು ದೊರೆತದ್ದು ನೈಸರನ ಮೂಲಕ ಮತ್ತು ಅವನು ತನ್ನ ಮರಣ ಕಾಲದಲ್ಲಿ ಕೊಟ್ಟ ಪ್ರಸಾದದ ಮಹಿಮೆಯಿಂದ ಎಂದು ತಿಳಿದು ಅವನು ನೈಸರನ ಆಶ್ರಮಕ್ಕೆ ಹೋಗಿ ಅವನ ಪಾದಕ್ಕೆರಗಿದನು. ಆಗ "ನೀನಾರು" ಎಂದು ನೈಸರನು ಕೇಳಲಾಗಿ — ನಿಮ್ಮಿಂದ ನಾನು ರಾಜನಾದೆನೆಂದು ತನ್ನ ಪೂರ್ವಾಪರವನ್ನು ತಿಳಿಸಿದನು. ಅದಕ್ಕೆ ಆ ವಿರಕ್ತನು ನಾನು ಕೊಟ್ಟದ್ದನ್ನು ಪ್ರಸಾದಭಾವವುಳ್ಳವನಾಗಿ ನೀನು ಸೇವಿಸಿದ್ದೇನೋ ನಿಜವಿದೆ. ಆದರೆ ನಿನ್ನ ಈ ಪದಕ್ಕೆ ಮುಖ್ಯ ಕಾರಣನಾದವನು ನಾನಾಗಲಾರೆನು. ಅದಾರೆಂದು ಅವನನ್ನೇ ಕೇಳಲು, ಅವನು ನೈಸರನ ಉದ್ದೇ

ಶವನ್ನು ಊಹಿಸಿ, ಈ ಪಟ್ಟಣದ ನೀಲಕಂಠೇಶ್ವರನೇ ನನ್ನ ಈ ಪದಕ್ಕೆ ಕಾರಣನೆಂದು ಹೇಳಿದನು. ನೈಸರನು ಇದನ್ನು ಕೇಳಿ ಇದು ಸಟೆ ಎಂದು ನುಡಿದು ಆ ಉಭಯತರು ಆ ಲಿಂಗವಿದ್ದಲ್ಲಿಗೆ ಹೋಗಿ ಕೇಳಲು ಆ ಲಿಂಗ ಮೂರ್ತಿಯು ನೈಸರನಿಗೆ ಈ ಶ್ವಾನನಿಗೆ ಈ ಪದವು ಉಂಟಾದದ್ದು ನಿನ್ನ ಮೂಲಕ, ನನ್ನಿಂದಲ್ಲ, ಎಂದು ನುಡಿಯಿತು

ಅದನ್ನು ನೈಸರನು ಕೇಳಿ ಕುಪಿತನಾಗಿ ಅವನು— ಇದು ನನ್ನಿಂದಲ್ಲ. ಪ್ರಸಾದಿಗೆ ನಿತ್ಯಪದವನ್ನು ಕೊಡುವಂತಹದು ಆ ಪ್ರಸಾದವೇ ಸರಿ ಎಂದು ಅನ್ನುತ್ತ ಅವನು ತನ್ನ ಕಯ್ಯಲ್ಲಿದ್ದ ದಂಡದಿಂದ ಆ ಲಿಂಗವನ್ನು ತಿವಿದನು. ಇದಕ್ಕೆ ಆ ಲಿಂಗವು ಎಷ್ಟು ಕೊಪಿಸದೆ ನಿಜವಾಗಿ ಇದು ನಿನ್ನ ಖಂಡ ಪ್ರಸಾದದ ಮಹಿಮೆಯು. ಆದರಿಂದ ಪ್ರಸಾದ ಸ್ವೀಕಾರುವವನೂ ಪ್ರಸಾದ ಕೊಡುವವನೂ ಉಭಯತರು ನಿಜದಲ್ಲಿ ಮುಕ್ತರು, ಇದು ಜಗತ್ತಿನ ಜನರಿಗೆಲ್ಲ ತಿಳಿಯಲೆಂದು ಈ ಪೊವಾಡವು ಉಂಟಾಗಿರುತ್ತದೆ. ಇದರ ನಿದರ್ಶನವು ಜಗತ್ತಿಗೆ ಆಗಬೇಕೆಂದು ಪ್ರಸಾದವನ್ನು ಸ್ವೀಕರಿಸಿದ ರಾಜನೂ ಪ್ರಸಾದಕ್ಕೆ ಕಾರಣನಾದ ನೀನೂ ಪ್ರಸಾದದಲ್ಲಿಯೇ ನಿಜಮುಕ್ತರು. ಪ್ರಸಾದವು ಘನತರವಾದದ್ದು, ಎಂಬ ಶಬ್ದಗಳುಂಟಾದವು.

ನೇಸರನಲ್ಲಿದ್ದ ಮರುಳು ಶಂಕರ ದೇವನು ಶಿವ ಪ್ರಸಾದದ ಈ ಮಹಿಮೆಯನ್ನು ಕಂಡು ಅವನೂ ಪ್ರಸಾದದಲ್ಲಿ ಭಕ್ತಿಯುಳ್ಳವನಾಗಿ ಪ್ರಸಾದಿಯಾಚರಣೆಯಲ್ಲಿರತೊಡಗಿದನು. ಅವನು ಶಿವಾರ್ಪಿತವಿಲ್ಲದೆ ಏನನ್ನೂ ಸೇವಿಸನ, ಆವುದನ್ನೂ ಭುಂಜಿಸನು. ಆಗ ಅವನು ಕಲ್ಯಾಣ ಪಟ್ಟಣದಲ್ಲಿ ಬಸವಾದಿ ಪ್ರಮಥರು ಇದ್ದಾರೆ, ಅವರು ಪ್ರಸಾದದ ಆಚರಣೆಯನ್ನು ಸಾಧಿಸಿದ್ದಾರೆ, ಎಂಬುದನ್ನು ತಿಳಿದವನಾಗಿ ಅವನು ಕಲ್ಯಾಣ ಪಟ್ಟಣಕ್ಕೆ ಬಂದು ಬಸವೇಶ್ವರನ ಅರಮನೆಯಲ್ಲಿರತೊಡಗಿದನು.

ಆದರೆ ಅವನು ಕಲ್ಯಾಣದಲ್ಲಿ ಬಸವೇಶ್ವರನಲ್ಲಿರುವಾಗ, ಇವನಾರೆಂಬುದನ್ನು ಯಾರೂ ಅರಿಯರು. ಅವನು ಗೌಪ್ಯವಾಗಿ ಅಲ್ಲಿ ಕಾಲ ಕಳೆಯುತ್ತಿದ್ದನು. ಅವನು ಹನ್ನೆರಡು ವರ್ಷ ಇದರಂತೆ ಅಲ್ಲಿಯೇ ಇದ್ದನು. ಅವನು ಶಿವಶರಣರ ಪ್ರಸಾದದ ರೀತಿಗಳನ್ನು ತಿಳಿಯುವವನಾಗಿ ಪ್ರಸಾದದ ಮೂಲಕ ತನ್ನ ಅಂಗೇಂದ್ರಿಯಗಳನ್ನು ಲಿಂಗೇಂದ್ರಿಯಗಳನ್ನಾಗಿ ಮಾಡಿ ಅರ್ಪಿತ ಭಾವದಿಂದ ಆಚರಿಸುತ್ತ ಬಂದನು

ಹೀಗೆ ಆವನು ಅಲ್ಲಿ ವಾಸಿಸುತ್ತಿರುವಾಗ್ಗೆ ಅಲ್ಲಮ ಪ್ರಭುವು ಒಂದು ದಿವಸ ಬಹು ಶರಗರದಿಂದ ಬಸವರಾಜದೇವರ ಭವನಕ್ಕೆ ಆಗಮಿಸಿ ದನು. ಆಪರ ಅಂಗಣದಲ್ಲಿದ್ದ ಮರುಳ ಶಂಕರ ದೇವನು ಮುಂದೆ ಬಂದು ಪ್ರಭುದೇವರಿಗೆ ನಮಸ್ಕರಿಸಲು ಪ್ರಭುದೇವರು ಅವನನ್ನು ಕಂಡು— ಇಂದು ನಾನೊಂದು ಆಶ್ಚರ್ಯವನ್ನು ಕಂಡೆನೆಂದು ಬಸವರಾಜನಿಗೆ ತಿಳಿಸಿದನು. ಅದೇನೆಂದು ಅವನು ಕೇಳಲು ಮರುಳು ಶಂಕರನನ್ನು ತೋರಿಸಿ— ಈತನು ಒಕ್ಕ ಮಿಕ್ಕ ಪ್ರಸಾದವನ್ನು ಸೇವಿಸುತ್ತ ನಿನ್ನಲ್ಲಿ ಹನ್ನೆರಡು ವರುಷ ತನ್ನ ನಿಜ ಸ್ವರೂಪವನ್ನು ಅರಿಯಗೊಡದೆ ವಾಸಿಸಿ ದ್ದಾನೆ. ಇದು ಪ್ರಸಾದದ ರೀತಿಯು. ಆದರೆ ಇದನ್ನು ಆರೂ ಅರಿಯರು. ಹೂಳಿದ ನಿಧಿ ನಿಧಾನವು ಬೀದಿಯಲ್ಲಿ ಬಿದ್ದ ಮಾಣಿಕ್ಯವು ಆರಿಗೂ ಕಾಣಿಸುವದಿಲ್ಲ ಪಾಪಿಗಳ ಕಣ್ಣಿಗೆ ಹರುಷ ಕಲ್ಲಾಗಿ ಕಾಣುತ್ತದೆ. ಮರುಳು ಶಂಕರನ ನಿಲುವು ಇಂತಹದಿದೆ ಎಂದು ನುಡಿದನು.

ಅದಕ್ಕೆ ಮರುಳು ಶಂಕರನು ಉತ್ತರವಾಗಿ— ಬಸವೇಶ್ವರನ ದಯೆ ದಿಂದ ನಾನಿಂದು ಪ್ರಭುದೇವರ ಶ್ರೀಮೂರ್ತಿಯನ್ನು ಕಂಡೆನು. ನನ್ನ ಸಂಸಾರದ ಬಂಧನವೂ ಇಂದು ಹರಿಯಿತು. ನಿತ್ಯ ನಿರಂಜನ ಪರಂ ಜ್ಯೋತಿಯ ಪ್ರಕಾಶವು ನನ್ನಲ್ಲಿ ಬೆಳಗಿತು ಎಂದು ನುಡಿದನು.

ಆಮೇಲೆ ಎಲ್ಲ ಶಿವಶರಣರು ಶಿವಾನುಭವ ಮಂಟಪಕ್ಕೆ ಆಗಮಿಸಿ ಮರುಳು ಶಂಕರ ದೇವನು ಆಚರಿಸಿದ ಪ್ರಸಾದದ ರೀತಿಯನ್ನು ತಿಳಿದ ವರಾಗಿ ಅವನನ್ನು ಹೊಗಳುವವರಾದರು.

ಆ ಮೇಲೆ ಮರುಳು ಶಂಕರ ದೇವನು ನನ್ನ ಜೀವಿತವು ಇಂದು ಸಫಲವಾಯಿತು. ನಾನು ಸಂಸಾರವೆಂಬ ಸಾಗರವನ್ನು ಇಂದು ದಾಟಿ ದೆನು, ಎಂದು ನುಡಿಯುತ್ತ ತನ್ನ ಲಿಂಗದಲ್ಲಿಯೇ ಐಕ್ಯನಾದನು.

ಈ ಪ್ರಕಾರ ಮರುಳು ಶಂಕರ ದೇವನು ಶಿವಾನುಭವ ಮಂಟಪದಲ್ಲಿ ಗೋಪ್ಯವಾಗಿ ಕಾಲ ಕಳೆಯುತ್ತ ಪ್ರಸಾದಿಯಾಗಿ ಆಚರಿಸುತ್ತ ಸಾಮ ರಸ್ಯತ್ವವನ್ನು ಹೊಂದಿದನು.

ಪ್ರಸಾದಿಯು ಆತ್ಮಾರ್ಪಣ ಭಾವವುಳ್ಳವನಾಗಿ ಆಚರಿಸುತ್ತಾನೆ. ಆದ್ದರಿಂದ ಅವನು ಜನರ ಸ್ತುತಿ ನಿಂದೆಗಳನ್ನು ಅಲಕ್ಷಿಸಿ ಅವನು ತನ್ನ ಕಾರ್ಯದಲ್ಲಿ ಮಗ್ನನಾಗಿರುತ್ತಾನೆ. ಅವನು ಜನರಲ್ಲಿದ್ದರೂ ಒಂದು

ಬಗೆಯು ಏಕಾಂತ ವಾಸಿಯು, ಎಂದು ಹೇಳಬಹುದು. ಆದ್ದರಿಂದ ಅವನು ನಿರ್ಜನ ಪ್ರದೇಶದಲ್ಲಿರಬೇಕೆಂದು ಅರಣ್ಯ ವಾಸವನ್ನು ಇಚ್ಛಿಸುವದಿಲ್ಲ. ಅವನು ಅರ್ಪಿತ ಭಾವವುಳ್ಳವನಾಗಿ ತಾನಿದ್ದ ಪ್ರಪಂಚದಲ್ಲಿಯೇ ಇರುತ್ತಾನೆ. ಈ ತೆರದ ಶಿವಾನುಭವದ ಆಚರಣೆಯಂತೆ ಸ್ವೈರ ವಿರಕ್ತನು ಆಚರಿಸುವವನಾಗಿದ್ದನು. ರಾಜನಾದರೂ ಅವನಂತೆಯೇ ಆಚರಿಸಿದನು. ಹೀಗೆ ಉಭಯಂತರು ನಿಜಮೋಕ್ಷವನ್ನು ಹೊಂದಿದರು. ಜಪ ತಪ ಹೋಮ ನಿಯಮ ಯಜ್ಞ ಯಾಗಾದಿಗಳೂ ಅಷ್ಟಾಂಗ ಯೋಗ ಸಾಧನೆಗಳೂ, ನಿತ್ಯ ನೈಮಿತ್ತಿಕ ಕರ್ಮಗಳೂ, ದೇವಾಲಯಗಳಲ್ಲಿ ನಡಿಸಬೇಕಾದ ಪೂಜಾದಿ ಕಾರ್ಯಗಳೂ ಹಿಂದೂ ಧರ್ಮ ಶಾಸ್ತ್ರಗಳಲ್ಲಿ ಅಪರಿಮಿತವಾಗಿ ಹೇಳಲ್ಪಟ್ಟಿವೆ. ಆದರೆ ಶಿವಶರಣರು ಅವುಗಳನ್ನು ಅನುಸರಿಸದೆ ಗುರು ಲಿಂಗ ಜಂಗಮದ ರೀತಿಗಳನ್ನು ತಿಳಿದುಕೊಂಡು ತಮ್ಮಲ್ಲಿಯೇ ಗುರು ಲಿಂಗ ಜಂಗಮವನ್ನು ಒಳಕೊಂಡು ಪ್ರಸಾದದ ಅನುಭವದಲ್ಲಿ ಪ್ರತಿನಿಮಿಷ ಇರುತ್ತಾರೆ. ಇದು ಶ್ರೇಷ್ಠ ನಡೆಯು ಎಂದು ಅವರ ಉಕ್ತಿಗಳಿವೆ. ಹಾಗೆಯೇ ಮರುಳು ಶಂಕರದೇವನ ಉಕ್ತಿಗಳೂ ಇವೆ.

ಮರುಳು ಶಂಕರದೇವನು ವಚನಕಾರನಿದ್ದಾನೆ. ಅವನ ಮುದ್ರಿಕೆಯು "ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತ ಚನ್ನ ಮಲ್ಲಿಕಾರ್ಜುನಾ" ಎಂದಿದೆ.

ಅನೇಕರು ಮರುಳು ಶಂಕರದೇವನು ಬಸವೇಶ್ವರನ ಅರಮನೆಯಲ್ಲಿ ಜಂಗಮದ ಉಚ್ಛಿಷ್ಟವನ್ನು ತಿನ್ನುತ್ತ ಅಲ್ಲಿ ವಾಸಮಾಡಿದನೆಂದು ತಿಳಿದಿದ್ದಾರೆ. ಆದರೆ ಶಿವಶರಣರು ತಮ್ಮ ಆಹಾರವನ್ನು ಲಿಂಗಕ್ಕೆ ಅರ್ಪಿಸದೆ ಊಟ ಮಾಡಕೂಡದು. ಅದನ್ನು ಅರ್ಪಿಸಿದ ಬಳಿಕ ಅದನ್ನು ಹೊರಗೆ ಎಷ್ಟುಮಾತ್ರವೂ ಚೆಲ್ಲಕೂಡದು. ಆದ್ದರಿಂದ ಅವರು ಉಚ್ಛಿಷ್ಟವನ್ನು ಉಂಟು ಮಾಡಲಾರರು. ಇದು ಅವರ ಕಟ್ಟಾಚರಣೆಯು ಇದೆ. ಆದ್ದರಿಂದ ಮರುಳು ಶಂಕರನು ಜಂಗಮರು ಉಂಡು ಚೆಲ್ಲಿಕೊಟ್ಟ ಉಚ್ಛಿಷ್ಟವನ್ನು ಕೆಲವೊಂದು ಕುಂಡದಲ್ಲಿ ಒಗೆದದ್ದನ್ನು ಸೇವಿಸುತ್ತ ಅದರಲ್ಲಿಯೇ ಮುಳುಗಾಡಿ ಹೋಗಿದ್ದನೆಂದು ತಿಳಿಯುವದು ತಪ್ಪಾದದ್ದು. ಇದು ಶಿವಶರಣರ ಆಚರಣೆಯಲ್ಲ.

ಪ್ರಸಾದಕ್ಕೆ ಷಟ್‌ಸ್ಥಲ ಶಾಸ್ತ್ರದಲ್ಲಿ ಬಹು ಹೆಚ್ಚಿನ ತರದ ಅರ್ಥವಿದೆ. ಮರುಳು ಶಂಕರನು ತನ್ನ ವಚನಗಳಲ್ಲಿ ಇದರ ಉಚ್ಚ ವಿಚಾರಗಳನ್ನೇ ನಿರೂಪಿಸಿದ್ದಾನೆ. ನಮ್ಮಲ್ಲಿ ಅವನ ಇಪ್ಪತ್ತು ವಚನಗಳಿವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಉದಾಹರಣೆಗಾಗಿ ಕೆಳಗೆ ಕೊಟ್ಟಿದ್ದೇವೆ. ಅವು ಯಾವವೆಂದರೆ—

## ವಚನಗಳು

(೧) ಇಷ್ಟಲಿಂಗಕ್ಕೆ ಅಂಗವನರ್ಪಿತವ ಮಾಡಬೇಕು. ಪ್ರಾಣಲಿಂಗಕ್ಕೆ ಮನ ಸಮರ್ಪಿಸಬೇಕು. ಭಾವಲಿಂಗಕ್ಕೆ ತೃಪ್ತಿಯನರ್ಪಿತವ ಮಾಡಬೇಕು. ಈ ವರ್ಮವನರಿದು ಮಾಡಬಲ್ಲೊಡೆ ಪ್ರಸಾದಿಯು. ಅದೆಂತೆಂದೊಡೆ-" ಇಷ್ಟಲಿಂಗಾರ್ಪಿತಂ ಅಂಗಂ ಪ್ರಾಣಲಿಂಗಾರ್ಪಿತಂ ಮನಃ । ಭಾವಲಿಂಗಾರ್ಪಿತಂ ತೃಪ್ತಿ ಇತಿ ಭೇದಂ ವರಾನನೇ ॥ ಎಂದುದಾಗಿ ಲಿಂಗಕ್ಕೆಯೂ ತನಗೆಯೂ ಎಡೆದೆರಹಿಲ್ಲದೆ ಲಿಂಗ ಸಹಿತವಾಗಿಯೇ ಕೇಳುವ, ಲಿಂಗ ಸಹಿತವಾಗಿಯೇ ಘ್ರಾಣಿಸುವ, ಲಿಂಗ ಸಹಿತವಾಗಿಯೇ ರುಚಿಸುವ, ಲಿಂಗ ಸಹಿತವಾಗಿಯೇ ನೋಡುವ, ಲಿಂಗ ಸಹಿತವಾಗಿಯೇ ತೊಳಗುವ ಇಂತಪ್ಪ ಮಹಾ ಮಹಿಮ ಸದ್ಭಕ್ತನ ಅಂಗವೆಲ್ಲವೂ ಲಿಂಗ, ಸಂಗವೆಲ್ಲವೂ ಲಿಂಗ, ಅಂಗ ಸಂಗವೆಲ್ಲವೂ ಲಿಂಗ ಸಂಗವಾದ ಕಾರಣ ಅಂಗ ಕ್ರಿಯೆಗಳೆಲ್ಲವೂ ಲಿಂಗ ಕ್ರಿಯೆಗಳಾದ ಕಾರಣ ಅಂಗ ಭೋಗವೆಲ್ಲವೂ ಲಿಂಗ ಭೋಗವಾದ ಕಾರಣ ಇಂತಪ್ಪ ಮಹಾ ಮಹಿಮ ಸದ್ಭಕ್ತನ ಶ್ರೀಚರಣಕ್ಕೆ ಎನ್ನ ಶಿರವನರಿದು ಪೂಜಿಸುವೆ ಕಾಣಾ ಶುದ್ಧ ಸಿದ್ಧ ಪ್ರಸಿದ್ಧ ಪ್ರಭುವೇ ಶಾಂತ ಚನ್ನಮಲ್ಲಿಕಾರ್ಜುನಯ್ಯ. ನಿಮ್ಮ ಸದ್ಭಕ್ತನ ನಿಲವಿನ ಪರಿಯ ನೀವೇ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ. ನಿಮ್ಮ ಧರ್ಮ, ನಿಮ್ಮ ಧರ್ಮ, ನಿಮ್ಮ ಧರ್ಮ.

(೨) ಗುರುಲಿಂಗ ಜಂಗಮಕ್ಕೆ ದಾಸೋಹವ ಮಾಡುವ ಸದ್ಭಕ್ತನ ಪರ್ಯಾಯವ ನೋಡಿರಯ್ಯ. ಶ್ರೀ ಗುರು ಶಿಷ್ಯಂಗೆ ಅನುಗ್ರಹವ ಮಾಡಲೊಡನೆ ಆ ಶಿಷ್ಯನ ಆ ಶ್ರೀ ಗುರುವ ಕೊಂದ ನುಂಗಿದ ಪರಿಯ ನೋಡಿರಯ್ಯ. ಲಿಂಗ ಬಂದು ಪೂಜೆಯ ಮಾಡಿಸಿಕೊಂಡೆನೆಂದಡೆ ಆ ಸದ್ಭಕ್ತನು ಆ ಲಿಂಗವ ಕೊಂದು ನುಂಗಿದ ಪರಿಯ ನೋಡಿರಯ್ಯ, ಜಂಗಮವು ಬಂದು ಪೂಜೆಯ ಕೈಕೊಂಡೆನೆಂದಡೆ ಆ ಸದ್ಭಕ್ತನು ಜಂಗಮವ ಕೊಂದು

ನುಂಗಿದ ಪರಿಯ ನೋಡಯ್ಯ, ಇಂತೀ ಮೂವರ ಕೊಂದು ನುಂಗಿದವ ನೆಂತು ಭಕ್ತನೆಂಬೆನಯ್ಯ? ಆತನನಾಚಾರಿ. ಆತ ವ್ರತಗೇಡಿ, ಆತ ಕ್ರಿಯಾ ರಹಿತನು. ಇಂತಾತನ ನುಡಿಯ ಕೇಳಲಾಗದು, ಹೇಳಲಾಗದು. ಆತ ಮರ್ತ್ಯ ಲೋಕಕ್ಕೆ ಸಲ್ಲ. ಆತ ದೇವಲೋಕಕ್ಕೆಯೂ ಸಲ್ಲ. ಆತನಾವ ಲೋಕಕ್ಕೆಯೂ ಸಲ್ಲ. ಇಂತೀ ನೀತಿ ಬಾಹಿರನನು ಭಕ್ತನೆಂದೆಂತೆಂಬೆ ನಯ್ಯ? ಅಂತಪ್ಪ ಸದ್ಭಕ್ತನು ನಿಂದ ನಿಲವಿನ ಪರಿಯ ನೀವೇ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ? ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸನ್ನ ಪ್ರಭುವೇ ಶಾಂತ ಮಲ್ಲಿಕಾರ್ಜುನಯ್ಯ, ನಿಮ್ಮ ಧರ್ಮ, ನಿಮ್ಮ ಧರ್ಮ, ನಿಮ್ಮ ಧರ್ಮ.

(೩) ಮಹಾ ಶ್ರೀಗುರುವೇ ತಂದೆ, ಮಹಾ ಜಂಗಮವೇ ತಾಯಿ. ಇವರಿಬ್ಬರ ಸಂಗ ಸಂಯೋಗದಿಂದ ಆನು ಹುಟ್ಟಿದೆ ನೋಡಯ್ಯ ಆನು ಹುಟ್ಟಿದ ಬಳಿಕ ಆ ತಂದೆ ತಾಯಿಗಳಿಬ್ಬರು ಲಿಂಗವೆಂಬ ಹೆಣ್ಣ ತಂದು ಎನ್ನ ಕೊರಳಲ್ಲಿ ಕಟ್ಟಿ ಮದುವೆಯ ಮಾಡಿದರಯ್ಯ ಆ ಹೆಣ್ಣಿನ ಕೈವಿಡಿದು ಆನು ಬದುಕಿದೆನು. ಆ ಹೆಣ್ಣಿನ ಸಂಗ ಸಂಯೋಗದಿಂದ ಮಗ ನೆಂಬ ಮಹಾ ಲಿಂಗ ಹುಟ್ಟಿದನಯ್ಯ. ಆ ಮಗ ಹುಟ್ಟಿದ ಮುನ್ನವೇ ಎನಗೆ ಮರಣವಾಯಿತ್ತು. ಲಿಂಗವೆಂಬ ಹೆಂಡತಿ ಮುಂಡೆಯಾದಳು ತಂದೆ ತಾಯಿಗಳಿಬ್ಬರೂ ಎನ್ನೊಂದಾಗಿ ಅಡಗಿ ಹೋದರು. ಇನ್ನು ಮುಂದಿನ ಪರಿಯೆಂತುಟಿಲ್ಲವಾಗಿ ಆನು ಬದುಕಿದೆನು ಕಾಣಾ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತ ಚನ್ನಮಲ್ಲಿಕಾರ್ಜುನ ದೇವಯ್ಯ ನಿಮ್ಮ ಶರಣರ ಕರುಣದಿಂದ ಎನ್ನ ಕರ್ಮ ನಿರ್ಮಳವಾಯಿತ್ತಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ, ನಿಮ್ಮ ಧರ್ಮ

(೪) ಶ್ರೋತ್ರದಲ್ಲಿ ಕೇಳುವ ಸುವಾಕ್ಯದ ಪರಿಣಾಮವನು ಮನದ ಅವಧಾನದಲ್ಲಿ ಲಿಂಗಕ್ಕೆ ಸಮರ್ಪಿಸಬೇಕು ನೇತ್ರದಲ್ಲಿ ಕಂಡ ರೂಪನು ಮನದ ಅವಧಾನದಲ್ಲಿ ಲಿಂಗಕ್ಕೆ ಸಮರ್ಪಿಸಬೇಕು. ನಾಶಿಕದಲ್ಲಿ ಬಂದ ಸುಗಂಧದ ಪರಿಣಾಮವನು ಮನದ ಅವಧಾನದಲ್ಲಿ ಲಿಂಗಕ್ಕೆ ಅರ್ಪಿಸ ಬೇಕು. ಜಿಹ್ವೆಯಲ್ಲಿ ಬಂದ ಸುರುಚಿಯನು ಮನದ ಅವಧಾನದಲಿ ಲಿಂಗಕ್ಕೆ ಅರ್ಪಿಸಬೇಕು. ರತಿ ಸಂಗದಲ್ಲಿ ಬಂದ ಸುಖದ ಪರಿಣಾಮವ ವನು ಮನದ ಅವಧಾನದಲ್ಲಿ ಲಿಂಗಕ್ಕೆ ಅರ್ಪಿಸಬೇಕು. ಇದೇ ಅರ್ಪಿತ ಮುಖ ಕೇಳಣ್ಣಾ. ಅದೆಂತೆಂದೊಡೆ ಶ್ಲೋ॥ ಸಂಯೋಗೇ ಚ ವಿಯೋ

ಗೇಚ ಕಣಾಬಂದು ಸುಖಾರ್ಪಿತಂ। ಯುಃಕುರ್ಯಾದಿಷ್ಟಲಿಂಗೇತು ಸಾವಧಾನ ನಿರಂತರಂ॥ ಎಂದುದಾಗಿ ನಮ್ಮ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ, ಶಾಂತ ಚನ್ನಮಲ್ಲಿಕಾರ್ಜುನನಲ್ಲಿಯೂ ಈ ಸುಖಾರ್ಪಿತ ಮುಖವರಿದು ಅರ್ಪಿಸ ಬಲ್ಲಡೆ ತೃಪ್ತಿಯುನೈದುವನು

(೫) ಶಿಷ್ಯನೆಂಬ ಧರೆಯು ಮೇಲೆ ಶ್ರೀಗುರುವೆಂಬ ಬೀಜವ ಬಿತ್ತಿ, ಅರಿವೆಂಬ ಗೊಬ್ಬರವನಿಕ್ಕಿ, ಜ್ಞಾನವೆಂಬ ಉದಕವ ನೆರೆಯುಲಿಕೆ, ಲಿಂಗವೆಂಬ ಆಕಾರ ಮೊಳೆದೋರಿತ್ತು ಕಾಣಿರೇ. ಜಂಗಮವೆಂಬ ಸಸಿ ಬಲಿದು ವೃಕ್ಷ ಪಲ್ಲವಿಸಿತ್ತು. ಸುಜ್ಞಾನವೆಂಬ ಸನೆ ಬಿರಿಮುಗುಳಾಯಿತ್ತು. ಮಹಾಜ್ಞಾನವೆಂಬ ಪುಷ್ಪ ವಿಕಸಿತವಾಯಿತ್ತು. ಖಂಡಿತವೆಂಬ ಮಂಗಳವಾಯಿತ್ತು. ಅಖಂಡಿತವೆಂಬ ಕಾಯಿ ಬಲಿಯಿತ್ತು. ಪರಮ ಜ್ಞಾನವೆಂಬ ಹಣ್ಣಾಯಿತ್ತು ಆ ಹಣ್ಣು ಬಲಿದು ತೊಟ್ಟು ಬಿಟ್ಟು ಬಟ್ಟಬಯುಲಲ್ಲಿ ಬಿದ್ದಿತ್ತು ಆ ಹಣ್ಣಕಂಡು ನಾನು ಇದೆಲ್ಲಿಯದೆಂದು ನಾನು ವಿಚಾರ ನೋಡಲ್ಕೆ ಬಿತ್ತಿದವರಾರೆಂದು ಹೇಳುವರಿಲ್ಲ. ಬಿತ್ತಿದವನ ನೊಮ್ಮ ನಾವು ಕೇಳಬಾರದು. ಆ ಹಣ್ಣು ಕೊಂಡು ನಾನು ಬಿತ್ತಿದಾತನನರಿಸಿಕೊಂಡು ಹೋಗಲ್ಕೆ ನಾನೆತ್ತ ಹೋದೆನೆಂದರಿಯೆನಯ್ಯ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತ ಚನ್ನಮಲ್ಲಿಕಾರ್ಜುನನ ದೇವಯ್ಯ ನಿಮ್ಮ ಬಿತ್ತಿದಾತನ ಪರಿಯು ನೀವೇ ಬಲ್ಲಿರಿ ನಾನೆತ್ತ ಬಲ್ಲೆನಯ್ಯ ನಿಮ್ಮ ಧರ್ಮ, ನಿಮ್ಮ ಧರ್ಮ, ನಿಮ್ಮ ಧರ್ಮ

(೬) ಇಷ್ಟಲಿಂಗಾರ್ಪಿತಂ ಪ್ರಾಣಂ ತೃಪ್ತಿ ಲಿಂಗಾರ್ಪಿತಂ ಭವೇತ್। ಲಿಂಗಾಂಕಿತ ಲಿಂಗಾಂಗಿನೆ ತ್ರಿವಿಧಲಿಂಗಮುಚ್ಯತೆ॥ ಇಂತೆಂದುದಾಗಿ ಲಿಂಗಕ್ಕು ತನಗೂ ಎಡೆತೆರಹಿಲ್ಲದಿಪ್ಪ ಲಿಂಗಸಹಿತವಾಗಿ ಕೇಳುವ, ಲಿಂಗಸಹಿತವಾಗಿಯೇ ರುಚಿಸುವ, ಲಿಂಗಸಹಿತವಾಗಿಯೇ ಆಳಲುವ, ಲಿಂಗಸಹಿತವಾಗಿಯೇ ಬಳಲುವ, ಇಂತಪ್ಪ ಮಹಾಮಹಿಮ ಲಿಂಗವಂತನ ಅಂಗಕ್ರಿಗಳೆಲ್ಲವು ಲಿಂಗಕ್ರಿಗಳಾದವು. ಅಂಗಸಂಗವೆಲ್ಲ ಲಿಂಗಸಂಗಹಾವವು. ಅಂಗಭೋಗವೆಲ್ಲವು ಲಿಂಗಭೋಗವು. ಇಂತಪ್ಪ ಮಹಾಮಹಿಮ ಲಿಂಗವಂತನ ಚರಣಕ್ಕೆ ಎನ್ನ ಶಿರವರಿದು ಪೂಜಿಸುವೆನ ಕಾಣಾ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತಚನ್ನಮಲ್ಲಿಕಾರ್ಜುನದೇವಯ್ಯ ನಿಮ್ಮ ಲಿಂಗವಂತನ ಪರಿಯು ನೀವೆ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ ನಿಮ್ಮ ಧರ್ಮ, ನಿಮ್ಮ ಧರ್ಮ, ನಿಮ್ಮ ಧರ್ಮ.

ಮರುಳ ಶಂಕರ ದೇವನು ತನ್ನ ಯಾವ ವಚನದಲ್ಲಿಯೂ ಉಚ್ಛಿಷ್ಟ ಪ್ರಸಾದವೆಂದು ಹೇಳಿಲ್ಲ. ಮನುಷ್ಯನು ತನ್ನ ಇಂದ್ರಿಯಗಳ ಸುಖವನ್ನು ಹೇಗೆ ಲಿಂಗಕ್ಕರ್ಪಿಸಿ ಪ್ರಸಾದರೂಪವಾಗಿ ಅದನ್ನು ಗ್ರಹಿಸಬೇಕೆಂಬುದನ್ನು ಷಟ್‌ಸ್ಥಲ ಶಾಸ್ತ್ರಕ್ಕನುಸರಿಸಿ ಮೇಲೆ ನಾವು ಉದಹರಿಸಿದ ವಚನಗಳಲ್ಲಿ ಅತ್ಯಂತ ವಿಶದವಾಗಿ ಸುಂದರವಾಗಿ ನಿರೂಪಿಸಿದ್ದಾನೆ. ಗುರುಲಿಂಗ ಜಂಗಮಗಳು ತನ್ನಲ್ಲಿಯೇ ಇದ್ದು ಅವುಗಳ ಸಹಾಯದಿಂದಲೇ ಅವನು ತನ್ನನ್ನು ಹೇಗೆ ಉದ್ಧಾರ ಮಾಡಬೇಕೆಂಬುದನ್ನು ಇವುಗಳಲ್ಲಿ ಹೇಳಿದ್ದಾನೆ. ಈ ವಚನಗಳಲ್ಲಿ ಶಿವಾನುಭವ ಶಾಸ್ತ್ರದ ಉಚ್ಚ ತತ್ವಗಳು ನಿರೂಪಿತವಾಗಿರುತ್ತವೆ. ಆದರೆ ಉಚ್ಛಿಷ್ಟದಲ್ಲಿ ಮರುಳು ಶಂಕರನು ೧೨ ವರ್ಷ ಇದ್ದನೆಂಬ ವಿಚಾರಗಳು ಅವನ ಯಾವ ವಚನದಲ್ಲಿಯೂ ಇಲ್ಲ.

ಮರುಳು ಶಂಕರ ದೇವನು ಬೌದ್ಧ ಧರ್ಮದ ಸಂಸ್ಕೃತಿಯು ಇದ್ದ ಅಫಗಾಣಿಸ್ತಾನದವನಿದ್ದಾನೆ. ಅಹಿಂಸೆಯನ್ನು ಬೋಧಿಸುವ ಆ ಧರ್ಮದ ಛಾಯೆಯನ್ನು ನಾವು ಅವನ ಚರಿತ್ರೆಯ ಆರಂಭದ ಭಾಗದಲ್ಲಿ ಅಂದರೆ ನೈಸರ ವಿರಕ್ತನ ಆಚರಣೆಯಲ್ಲಿ ಕಾಣುತ್ತೇವೆ. ಹಿಂಸೆಯನ್ನು ಹೊಂದಿದ ಒಂದು ನಾಯಿಯ ಬಗ್ಗೆ ಅವನು ದಯೆಯನ್ನು ತೋರಿ ಅದಕ್ಕೆ ಪ್ರಸಾದವನ್ನಿಕ್ಕಲು ಅದು ಸತ್ತ ಬಳಿಕ ರಾಜ ಪದವಿಯನ್ನು ಹೊಂದಿತು. ಪ್ರಸಾದದ ಮಹಿಮೆಯ ಮೂಲಕ ಆ ರಾಜನೂ ಆ ವಿರಕ್ತಾಶ್ರಮಿಯೂ ಮುಕ್ತಿಯನ್ನು ಹೊಂದಿದರು. ಇದನ್ನು ಮರುಳು ಶಂಕರದೇವನು ಕೇಡು ಪ್ರಸಾದದ ರೀತಿಯನ್ನು ತಿಳಿಸಲು ಕಲ್ಯಾಣಕ್ಕೆ ಬರುತ್ತಿದ್ದನೆಂದು ಅವನ ಈ ಚರಿತ್ರೆಯಲ್ಲಿ ಹೇಳಿದೆ.

# ಶಿವಾನುಭವ.

ಸಂಪುಟ ೨೪ ] ( ಮಾಸಪತ್ರಿಕೆ ) [ ಸಂಚಿಕೆ ೧೦



ಅಕ್ಟೋಬರ ೧೯೩೦ ] ವಿಜಾಪೂರ [ ಆಶ್ವೀನ ೧೮೫೨

ವಾ. ಚಂ. ೫-೧೬-೦

# ವಿಷಯಾನುಕ್ರಮಣಿಕೆ



---


**ಶಿವಾನುಭವ ಪತ್ರಿಕೆ, ವಿಜಾಪುರ.**

ಮಾಸಿಕ ೬೪ ಪುಟಗಳು.

**ವಾರ್ಷಿಕ ಚಂದಾ ೫-೧೨-೦**

# ಶಿವಾನುಭವ

| ವರ್ಷ ೨೪ | ಅಕ್ಟೋಬರ ೧೯೫೦ | ಸಂಚಿಕೆ ೧೦ |
| --- | --- | --- |

## ವೀರಶೈವ ಧರ್ಮದ ಪ್ರಾಶಸ್ತ್ಯ.

[ಲೇ:- ಶ್ರೀಯುತ ವೀರಪ್ಪ ಯುಗಟಿ ಬಿ.ಎ.ಎಲ್.ಎಲ್.ಬಿ.ವಕೀಲ ಹಾವೇರಿ]



ವೀರಶೈವವು ಜಗತ್ತಿನಲ್ಲಿರುವ ಕ್ರೈಸ್ತ, ಇಸ್ಲಾಮ, ಯಹುದಿ, ಪಾರ್ಶಿ, ಸಿಂಟೋ, ಬೌದ್ಧ, ಜೈನ, ಆರ್ಯಸಮಾಜ, ಬ್ರಹ್ಮಸಮಾಜ ಇಲ್ಲವೆ ಥಿಯಾಸಫಿ ಮುಂತಾದ ಧರ್ಮಗಳ ತಳಹದಿಯಿಂದಾಗಲಿ ಅಥವಾ ಹಿಂದೂ ಧರ್ಮದ ಅನುಕರಣೆಯಿಂದಾಗಲಿ ಹುಟ್ಟಿದುದಾಗಿರುವದಿಲ್ಲ. ಹಿಂದೂ ಧರ್ಮವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವೆಂಬ ನಾಲ್ಕು ವರ್ಣಾಶ್ರಮಗಳಿಂದ ಕೂಡಿದ್ದು ಆ ವರ್ಣಗಳಲ್ಲಿ ಅಪಾರವಾದ ಭೇದವೂ, ಒಂದು ವರ್ಣದವನು ಮತ್ತೊಂದು ವರ್ಣದವನ ಮುಟ್ಟಕ್ಕೆ ಮುಟ್ಟಲು ಸಾಧ್ಯವಿಲ್ಲದಂತಿದೆ. ಅದರಲ್ಲಿ ಸ್ತ್ರೀಯರಿಗೂ ಶೂದ್ರರಿಗೂ ಧಾರ್ಮಿಕ ಹಕ್ಕು ಬಾಧ್ಯತೆಗಳಿರುವದಿಲ್ಲ. ಆದರೆ ವೀರಶೈವವು ಇಂತಹ ಅಸಮತ್ವವಾದ ಮತ್ತು ಸರ್ವಸಮ್ಮತವಾಗದ ವರ್ಣಾಶ್ರಮಗಳನ್ನು ಮಾನ್ಯಮಾಡದೆ ಅತಿವರ್ಣ ಅಥವಾ ಅತ್ಯಾಶ್ರಮವೆಂದು ಹೆಸರುಳ್ಳ ತನ್ನದೊಂದು ಸ್ವತಂತ್ರ ಧರ್ಮವನ್ನು ರಚಿಸಿಕೊಂಡಿದೆ. ವೀರಶೈವನು ವರ್ಣಾಶ್ರಮಗಳನ್ನು ಮೀರಿ ಮೇಲ್ತರದ ಗತಿಗೆ ಹೋದವನು. ಇಷ್ಟಲಿಂಗವನ್ನು ಗುರುವಿನಿಂದ ಯಾವನು ದೀಕ್ಷಾಪೂರ್ವಕವಾಗಿ ಪಡೆಯುವನೋ ಅವನು ಶಿವಸ್ವರೂಪನಾಗುವನು. ಅವನು ಪೂರ್ವದಲ್ಲಿ ಬ್ರಾಹ್ಮಣನೇ ಇರಲಿ, ಕ್ಷತ್ರಿಯನಿರಲಿ,

ವೈಶ್ಯನಿರಲಿ, ಶೂದ್ರನಿರಲಿ ಆವನ ಪೂರ್ವ ಜಾತಿಯು ದೀಕ್ಷೆಯಿಂದ ಸುಡಲ್ಪಟ್ಟು ಅವನ ಮಾಂಸಪಿಂಡವು ( ದೇಹ ) ಮಂತ್ರಪಿಂಡವಾಗಿ ಪರಿಣಮಿಸುವದು. " ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾಯೇ ಚಾನ್ಯ ಜಾತಯಃ । ಲಿಂಗಧಾರಣ ಮಾತ್ರೇಣ ಶಿವಯೇವ ನ ಸಂಶಯಃ ॥ ( ಪಾರಮೇಶ್ವರಾಗಮ ಪಟಲ ೧ ಶ್ಲೋಕ ೫೬ ) ಹೀಗೆ ಲಿಂಗಧಾರಿಯಾದ ವೀರಶೈವನಿಗೆ ಜಾತಿಭೇದವಾಗಲಿ ಸೂತಕ ದೋಷವಾಗಲಿ ಇರುವದಿಲ್ಲ. "ನ ತಸ್ಯ ಜಾತಿಭೇದೋಽಸ್ತಿ ನ ಶುಚ್ಯಶುಚಿಕಲ್ಪನಾ" ( ಪಾ. ಆ. ೧ ಶ್ಲೋ ೫೩)

ಏಳುವಿಧವಾದ ಶೈವ ಮತಗಳಲ್ಲಿ ವೀರಶೈವವು ಶ್ರೇಷ್ಠವಾದದ್ದೆಂದು ಪಾರಮೇಶ್ವರಾಗಮದ ಪ ೧ ಶ್ಲೋಕ ೧೦೨ನೇದ್ದರಲ್ಲಿ ಹೇಳಿದೆ. ( ಸಪ್ತವಿಧೇಷ್ವೇಷು ವೀರಶೈವಂ ಮಹತ್ತರಂ " ಮತ್ತೆ " ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೆ" ಎಂದು ಹೇಳಲ್ಪಟ್ಟಿದೆ. ( ಪಾ ಆ. ಪ ೧ ಶ್ಲೋ ೪೦) ವೀರಶೈವವು ವೇದದ ಜ್ಞಾನಕಾಂಡವನ್ನು ಮಾತ್ರ ಮಾನ್ಯ ಮಾಡುತ್ತ ವೈದಿಕ ಧರ್ಮದ ಕರ್ಮಮಾರ್ಗವನ್ನು ತಿರಸ್ಕರಿಸಿ ಶಿವನೊಬ್ಬನನ್ನೇ ದೈವವನ್ನಾಗಿ ಸ್ವೀಕರಿಸಿ ಶಿವನಲ್ಲಿ ಸಾಮರಸ್ಯವನ್ನು ಹೊಂದುವದಕ್ಕಾಗಿ ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲಗಳೆಂಬ ಅನ್ಯಧರ್ಮಗಳಲ್ಲಿ ದೊರೆಯದ ಧರ್ಮತತ್ವಗಳನ್ನು ಸಾಧನವಾಗಿಟ್ಟುಕೊಂಡಿದೆ. ಆತ್ಮ ಪರಮಾತ್ಮರನ್ನು ಅಂಗ, ಲಿಂಗವೆಂಬ ವಿಶಿಷ್ಟವಾದ ಹೆಸರಿನಿಂದ ಕರೆದು ಮೊದಲಿಗೆ ಈ ದ್ವೈತಭಾವದಿಂದ ( ದಾಸೋಹಂ ) ಪ್ರಾರಂಭಿಸಿ ಕೊನೆಯಲ್ಲಿ ಆತ್ಮ ಪರಮಾತ್ಮರಲ್ಲಿಯ ಅಭೇದವನ್ನು ಕಂಡುಕೊಂಡು ಅದ್ವೈತ ಸ್ಥಿತಿಗೆ ಮುಟ್ಟಿ ಅಷ್ಟಕ್ಕೇ ನಿಲ್ಲದೆ ದ್ವೈತಾದ್ವೈತಗಳನ್ನು ಸಮನ್ವಯಗೊಳಿಸಿಕೊಂಡು ಶಿವನಲ್ಲಿ ಸಾಯುಜ್ಯ ( ಐಕ್ಯ ) ಹೊಂದುವ ಧ್ಯೇಯವುಳ್ಳ ಶಿವಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತವೆಂಬ ತತ್ವ ಶಾಸ್ತ್ರವನ್ನು ನಿರ್ಮಿಸಿಕೊಂಡಿರುವದು. ಇವೆಲ್ಲ ಸಂಗತಿಗಳನ್ನು ಆಳವಾಗಿ ವಿಚಾರಿಸಿ ಶ್ರೀ ಅ. ನ. ಕೃಷ್ಣರಾಯರು ತಮ್ಮ " ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ " ಎಂಬ ಗ್ರಂಥದ ಪುಟ ೧೧೬ ರಲ್ಲಿ " ವೀರಶೈವವು ಸತ್ಯದ ಕೇಂದ್ರವನ್ನೇ ಅರಿಸಿತು. ಇದು ಎಲ್ಲ ಧರ್ಮಗಳ ಸಾರವಾಯಿತು. ಅಂತೇ ವಿಶ್ವಧರ್ಮವೆನಿಸಿಕೊಳ್ಳಲು ಪೂರ್ಣ ಅರ್ಹತೆಯನ್ನು ಪಡೆಯಿತು. ವೀರಶೈವ ಧರ್ಮ ಜೀವಂತ ಧರ್ಮವಾಗಿ ಉಳಿದಿದೆ. " ಎಂದು ಹೇಳಿದ್ದಾರೆ.

ವೀರಶೈವ ಧರ್ಮವು ಶ್ರೀ ಬಸವೇಶ್ವರನಿಂದ ೧೨ನೇ ಶತಮಾನದಲ್ಲಿ ಸ್ಥಾಪಿಸಲ್ಪಟ್ಟಿತೆಂದು ಕೆಲವರ ಮತವು. ಆದರೆ ಇದಕ್ಕೆ ಆಧಾರಗಳಿರುವವೇ ಎಂಬದನ್ನು ಶೋಧಿಸೋಣ. ಬಸವಣ್ಣನವರು ತಮ್ಮ ವಚನಗಳಲ್ಲಿ ಎಲ್ಲಿಯೂ ತಾವು ಧರ್ಮಸ್ಥಾಪಕರೆಂದು ಹೇಳಿಕೊಂಡಿಲ್ಲ. ಅವರು ಮೇಲಿಂದಮೇಲೆ ತಮಗಿಂತ ಪುರಾತನರಾದ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಮುಂತಾದ ಶರಣರನ್ನೂ ಕಂಚೀಪುರದ ಶಿರಿಯಾಳಶೆಟ್ಟಿ, ನಿಂಬಿಯಕ್ಕ, ಅಂಬೇರಾಮಪುರದ ಅರಸನಾಗಿದ್ದ ಸಕಳೇಶ ಮಾದರಸ ಮುಂತಾದ ವೀರಶೈವ ಶರಣರನ್ನೂ ಹೊಗಳುತ್ತಾರೆ. ( ಬಸವಪುರಾಣ ಸ. ಧಿ. ೧೯ ) ಬಸವಣ್ಣನವರು ತಮ್ಮ ವಚನಗಳಲ್ಲಿ ವೇದ, ಆಗಮ, ಸ್ಮೃತಿ, ಪುರಾಣಗಳ ಆಧಾರಗಳನ್ನು ತಮ್ಮ ವಚನಗಳ ಪುಷ್ಟಿಗಾಗಿ ಉದಾಹರಿಸಿದ್ದಾರೆ. ಅವರು ಒಂದುಕಡೆಯಲ್ಲಿ ಲಿಂಗಾಂಗಿಗಳಲ್ಲಿ ಜಾತಿ ಭೇದವಿಲ್ಲವೆಂಬುದಕ್ಕೆ ವ್ಯಾಸರಿಂದ ಬರೆಯಲ್ಪಟ್ಟ ಲಿಂಗಪುರಾಣದ ಹಾಗೂ ಪಾರಮೇಶ್ವರಾಗಮದ ದೃಷ್ಟಾಂತವನ್ನು ಕೊಟ್ಟಿದ್ದಾರೆ. " ಸ್ತ್ರೀವಾ ಪುರುಷಷಂಡ ಚಾಂಡಾಲ ದ್ವಿಜವಂಶಜಾಃ । ನ ಜಾತಿಭೇದೋ ಲಿಂಗಾರ್ಚನೆ ಸರ್ವೇ ರುದ್ರಗಣಾಃ ॥ ತಮ್ಮ ವಚನದ ಭಕ್ತ ಜ್ಞಾನಸ್ಥಳದಲ್ಲಿ ಶಿವನಿಗೆ ಮಗನನ್ನು ಕತ್ತರಿಸಿ ಊಟಮಾಡಿಸಿದ ಶಿರಿಯಾಳನನ್ನು ಕೊಂಡಾಡಿದ್ದಾರೆ. ಮತ್ತು ಅದೇ ಸ್ಥಳದ ೩೬ನೇ ವಚನದಲ್ಲಿ ಕ್ರಿ. ಶ. ೧೦೧೮ ರಿಂದ ೧೦೪೨ರ ವರೆಗೆ ಆಳಿದ ಚಾಲುಕ್ಯರ ೨ನೇ ಜಯಸಿಂಹರಾಜನಿಂದ ಆದರ ಹೊಂದಿದ ಶಂಕರದಾಸಿಮಯ್ಯನನ್ನು ಹೊಗಳಿದ್ದಾರೆ. ಶಂಕರ ದಾಸಿಮಯ್ಯನ ಸಮಕಾಲಿಕನಾದ ದೇವರದಾಸಿಮಯ್ಯನು ಜಯಸಿಂಹನ ಹೆಂಡತಿಯಾದ ಸುಗ್ಗಲಾದೇವಿಯ ಗುರುವಾಗಿದ್ದನು. ಆತನು ಮುದನೂರಿಂದ ಕಲ್ಯಾಣಕ್ಕೆ ಬಂದಾಗ ಜೈನರು ಅವನನ್ನು ಪರೀಕ್ಷೆ ಮಾಡಬೇಕೆಂದು ಒಂದು ಮಡಿಕೆಯಲ್ಲಿ ಹಾವನ್ನು ಹಾಕಿ ರಾಜನ ಎದುರಿಗೆ ಮಡಿಕೆಯೊಳಗಿನ ವಸ್ತುವನ್ನು ಹೊರಗೆ ತೆಗೆಯಲು ಹೇಳಿದಾಗ ದೇವರ ದಾಸಿಮಯ್ಯನು ಅದನ್ನು ಮುಟ್ಟಿ ಲಿಂಗವನ್ನಾಗಿ ಮಾಡಿದನು. ಆಗ ರಾಜನೂ ಸಹ ದಾಸಿಮಯ್ಯನಿಂದ ವೀರಶೈವ ದೀಕ್ಷೆಯನ್ನು ಹೊಂದಿದನು. ( ಇಂಡಿಯನ್ ಆ್ಯಂಟಿಕ್ವೆರಿವ್ಹಾ ೮ ಪುಟ ೧೦೧ ಮತ್ತು ಬಾಂಬೆ ಗ್ಯಾಝೆಟಿಯರ್ ವ್ಹಾ ೧ ಭಾಗ ೨ ಪುಟ ೪೩೭-೫೦೨ ನೋಡಿರಿ. )

ಬಸವಣ್ಣನವರು ಭಕ್ತಜ್ಞಾನಸ್ಥಲದ ೩೯ನೇ ವಚನದಲ್ಲಿ ವೀರಶೈವಳಾದ ಚುಂಗಳೆಯು ಲಿಂಗಪೂಜೆಯ ಪ್ರಭಾವದಿಂದ ಅವಳು ತನ್ನ ಪುರದ ಜನರನ್ನೆಲ್ಲ ಕೈಲಾಸಕ್ಕೆ ಒಯ್ದ ಸಂಗತಿಯನ್ನು ಹೇಳಿದ್ದಾರೆ. ಭಕ್ತಸ್ಥಳದ ೭೦-೭೧ನೇ ವಚನಗಳಲ್ಲಿಯೂ ಮತ್ತು ಮಹೇಶ್ವರ ಜ್ಞಾನಸ್ಥಳದ ೯೫ನೆಯ ವಚನದಲ್ಲಿಯೂ ಬಸವಣ್ಣನವರು ದೇವರದಾಸಿಮಯ್ಯನು ಶಿವನಿಗೆ ವಸ್ತ್ರಕೊಟ್ಟು ತವನಿಧಿಯೆಂಬ ಅಕ್ಷಯ ಪಾತ್ರೆಯನ್ನು ಪಡೆದಿದ್ದನೆಂತಲೂ ಅದರಮೂಲಕ ದೇವರದಾಸಿಯು ಅನಾಥರನ್ನೂ ಜಂಗಮರನ್ನೂ ರಕ್ಷಿಸುತ್ತಿದ್ದನೆಂತಲೂ ವರ್ಣಿಸಿದ್ದಾನೆ. ಈ ಸಂಗತಿಯು ಶಂಕರದಾಸಿಮಯ್ಯನ ಪುರಾಣದಲ್ಲಿಯೂ ವರ್ಣಿಸಲ್ಪಟ್ಟಿದೆ. ಶಂಕರದಾಸಿಮಯ್ಯನು ಕವಿಲೆ ಎಂಬ ಗ್ರಾಮದಿಂದ ಮುದನೂರಿಗೆ ದೇವರದಾಸಿಯ ದರ್ಶನಕ್ಕೆ ಬಂದಾಗ ದೇವರದಾಸಿಯು ಶಂಕರದಾಸಿಗೆ ಬೇಕಾದಷ್ಟು ಆಹಾರ ಪದಾರ್ಥಗಳನ್ನು ಕೊಡುವೆನೆಂದು ಹೆಮ್ಮೆಯಿಂದ ಹೇಳಿದಾಗ ಶಂಕರದಾಸಿಯು ವೈರಾಗ್ಯಶಾಲಿಯಾದ್ದರಿಂದ ಬೇಡವೆಂದು ಹೇಳಿ ದೇವರದಾಸಿಯ ಅಹಂಕಾರವನ್ನು ತಗ್ಗಿಸಲು ಅವನ ತವನಿಧಿಯನ್ನು ಅದೃಶ್ಯವಾಗುವಂತೆ ಮಾಡಿದನು. ಆಗ ದೇವರದಾಸಿಯು ತನ್ನ ಅಹಂಕಾರಕ್ಕೆ ಪಶ್ಚಾತ್ತಾಪಪಟ್ಟು ಶಂಕರದಾಸಿಗೆ ಕ್ಷಮೆ ಬೇಡಲು ಶಂಕರದಾಸಿಯು ಪುನಃ ಅವನಿಗೆ ದೊರೆಯುವಂತೆ ಮಾಡಿದ ಸಂಗತಿಯು ಶಂಕರದಾಸಿಮಯ್ಯ ಪುರಾಣದಲ್ಲಿ ದೊರೆಯುತ್ತವೆ. ಶಂಕರದಾಸಿ, ದೇವರದಾಸಿಗಳು ಕ್ರಿ. ಶ. ೧೧ನೆಯ ಶತಕದ ಆದಿಭಾಗದಲ್ಲಿದ್ದವರು. ಆದರೆ ಬಸವಣ್ಣನವರು ಕ್ರಿ. ಶ. ೧೨ರ ಕಡೆಯ ಭಾಗದಲ್ಲಿದ್ದವರು. ಮಹೇಶ್ವರ ಜ್ಞಾನಸ್ಥಳದ ೨ನೇ ವಚನದಲ್ಲಿ ಬಸವಣ್ಣನವರು ಶಿವನು, ಇಂದ್ರ, ವಿಷ್ಣು ಮೊದಲಾದವರ ಉತ್ಪಾದಕನೆಂದು ಯಜುರ್ವೇದದ ಸೂಕ್ತವನ್ನು ಉದಾಹರಿಸಿದ್ದಾರೆ. "ಸೋಮಃ ಪವತೇ ಜನಿತೇಂದ್ರಸ್ಯ, ಸೂರ್ಯಸ್ಯ ಜನಿತೋಥ ವಿಷ್ಣೋಃ" ಅದೇ ಸ್ಥಳದ ೧೫೭ನೆಯ ವಚನದಲ್ಲಿ ಬಸವಣ್ಣನವರು ತಮಗಿಂತ ಪೂರ್ವದಲ್ಲಿದ್ದ ವೀರಶೈವನಾದ ಓಹಿಲಯ್ಯನೆಂಬ ಸೌರಾಷ್ಟ್ರದ ಶರಣನನ್ನು ಹೊಗಳಿದ್ದಾರೆ. ಅದೇ ವಚನದಲ್ಲಿ ಶಿರಿಯಾಳನನ್ನು ಸಹ ಸ್ತುತಿಸಿದ್ದಾರೆ.

ಗುಜರಾತದ ಮತ್ತೊಬ್ಬ ವೀರಶೈವನಾದ ಆದಯ್ಯಶೆಟ್ಟಿಯೆಂಬವನು ವ್ಯಾಪಾರಕ್ಕಾಗಿ ಕರ್ನಾಟಕಕ್ಕೆ ಬಂದು ಆಗ ಪುಲಿಗೆರೆಯೆಂದು ಹೆಸರಾದ

ಲಕ್ಷ್ಮೇಶ್ವರದಲ್ಲಿ ವಾಸವಾಗಿದ್ದನು. ಆಗ ಪಟ್ಟಣವು ಚಾಲುಕ್ಯರ ೨ ನೇ ಪುಲಕೇಶಿಯ ಮಗನಾದ ಚಂದ್ರಾದಿತ್ಯನ ರಾಜಧಾನಿಯಾಗಿತ್ತು. ಆದಯ್ಯನು ಆ ಪಟ್ಟಣದ ಪಾರಿಶೆಟ್ಟಿಯೆಂಬ ಜೈನನ ಮಗಳಮೇಲೆ ಪ್ರೇಮವನ್ನು ತಾಳಿ ಅವಳನ್ನು ವೀರಶೈವಳನ್ನಾಗಿ ಮಾಡಿ ಲಗ್ನವಾದನು. ಒಂದು ದಿನ ಆದಿಶೆಟ್ಟಿಯು ಜಂಗಮರಿಗೆ ಊಟಕ್ಕೆ ಹೇಳಿ ಪಕ್ವಾನ್ನಗಳನ್ನು ತಯಾರಿಸಿದಾಗ ಪಾರಿಶೆಟ್ಟಿಯ ಮನೆಗೆ ಮಧ್ಯಾಹ್ನದಲ್ಲಿ ಜೈನಮುನಿಗಳು ಅಕಸ್ಮಾತ್ತಾಗಿ ಬಂದರು. ಅಡಿಗೆ ಸಿದ್ಧವಾಗಿರಲಿಲ್ಲ. ಪಾರಿಶೆಟ್ಟಿಯು ತನ್ನಹೆಂಡತಿಗೆ ತನ್ನಮಗಳಾದ ಪದ್ಮಾವತಿಯ ಮನೆಗೆ ಹೋಗಿ ಅಡಿಗೆಯನ್ನು ತಂದು ಮುನಿಗಳಿಗೆ ಬಡಿಸಬೇಕೆಂದು ಹೇಳಲು ಅವನ ಹೆಂಡತಿಯು ಹಾಗೆಮಾಡಿದಳು. ಇತ್ತ ಆದಿಶೆಟ್ಟಿಯ ಮನೆಗೆ ಜಂಗಮರು ಬರಲು ತನ್ನ ಹೆಂಡತಿಯಾದ ಪದ್ಮಾವತಿಯಿಂದ ಅವಳ ತಾಯಿಯು ಅಡಿಗೆಯನ್ನು ಒಯ್ದ ಸಂಗತಿಯನ್ನು ತಿಳಿದು ಆದಿಶೆಟ್ಟಿಯು ಕಳವಳಪಟ್ಟನು. ಆಗ ಅವನು ಒಂದು ತಿಂಗಳೊಳಗಾಗಿ ಸೌರಾಷ್ಟ್ರದ ಸೋಮನಾಥಲಿಂಗವನ್ನು ತಂದು ಲಕ್ಷ್ಮೇಶ್ವರದ ಜೈನಬಸತಿಯಲ್ಲಿದ್ದ ಜಿನಮೂರ್ತಿಯನ್ನು ಕಿತ್ತು ಅದರ ಸ್ಥಳದಲ್ಲಿ ಸ್ಥಾಪಿಸುವೆನೆಂದು ಪ್ರತಿಜ್ಞೆಮಾಡಿ ಅದನ್ನು ನೆರವೇರಿಸಿದನು. ಈ ಸಂಗತಿಯು ಮಹಾಕವಿ ರಾಘವಾಂಕನಿಂದ ಸೋಮನಾಥ ಪುರಾಣದಲ್ಲಿ ವರ್ಣಿಸಲ್ಪಟ್ಟಿದೆ. ಚಾಲುಕ್ಯರ ಚಂದ್ರಾದಿತ್ಯನು ಕ್ರಿ. ಶ. ೬೫೫ ರಲ್ಲಿ ಆಳುತ್ತಿದ್ದನೆಂದು ಚರಿತ್ರೆಯಿಂದ ಗೊತ್ತಾಗುತ್ತದೆ. ಆದ್ದರಿಂದ ವೀರಶೈವ ಧರ್ಮವು ಕ್ರಿ. ಶ. ೬೫೫ ರಲ್ಲಿಯೂ ಅಸ್ತಿತ್ವದಲ್ಲಿತ್ತೆಂದು ಸಿದ್ಧವಾಗುತ್ತದೆ.

ಪ್ರಾಣಲಿಂಗಿ ಸ್ಥಳದ ೬ ನೆಯ ವಚನದಲ್ಲಿ ಉಪನಿಷತ್ತಿನ ಮಹಾವಾಕ್ಯವನ್ನು ಅಂದರೆ “ ಮನಸ್ಸು ಮತ್ತು ಮಾತುಗಳು ಯಾವ • ಪರವಸ್ತುವನ್ನು ತಿಳಿಯಲು ಅಶಕ್ತವಾಗಿರುವವೋ ಅಂಥ ಬ್ರಹ್ಮವು ಆನಂದಮಯವಾದದ್ದೆಂದು ಯಾವ ಬುದ್ಧಿವಂತನು ತಿಳಿಯುವನೋ ಆತನು ಯಾವದರಿಂದಲೂ ಭಯಪಡತಕ್ಕದ್ದಿಲ್ಲ. ( ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾಸಹ, ಆನಂದಂ ಬ್ರಹ್ಮಣಾ ವಿದ್ವಾನ್ನ ಬಿಭೇತಿ ಕುತಶ್ಚನ” ) ಎಂಬುದನ್ನು ಉದಾಹರಿಸಿದ್ದಾರೆ. ಅವರು ವೇದೋಪನಿಷತ್ತುಗಳನ್ನು ಆಳವಾಗಿ ಅಭ್ಯಾಸಮಾಡಿದ್ದರು. ಡಾಕ್ಟರ ನಂದಿಮಠರು

ಪ್ರಸಿದ್ಧಪಡಿಸಿರುವ ಅರ್ಜುನವಾಡದ ಶಿಲಾಶಾಸನವು ಬಸವಣ್ಣನವರ ಮತ್ತು ಅವರ ವಂಶದವರ ಚರಿತ್ರೆಯನ್ನು ಹೇಳುತ್ತದೆ. ಅದರಲ್ಲಿ ಬಸವಣ್ಣನವರು ವೀರಶೈವ ಧರ್ಮಸ್ಥಾಪಕರೆಂದು ಹೇಳಿರುವದಿಲ್ಲ. ಈ ಶಾಸನದ ಕಾಲವು ಕ್ರಿ ಶ ೧೨೬೦ ಇದ್ದು ಅದರಲ್ಲಿ ಬಸವಣ್ಣನು ಪುರಾತನ ಶರಣರ, ಜಂಗಮರ ಮತ್ತು ಲಿಂಗದ ಭಕ್ತನೆಂದು ಹೇಳಿದೆ. ಇದರಿಂದ ಬಸವನು ಆಗಿದ್ದ ವೀರಶೈವವನ್ನು ಸ್ವೀಕರಿಸಿ ಉಜ್ವಲಗೊಳಿಸಿದನೆಂದು ಸ್ಪಷ್ಟವಾಗುತ್ತದೆ. ಮಿ. ಎಂಥಾವೆನ್ನರು ತಮ್ಮ ಧರ್ಮ ಮತ್ತು ನೀತಿಯ ವಿಶ್ವಜ್ಞಾನಕೋಶದಲ್ಲಿ ಐಹೊಳಿಯಲ್ಲಿ ೫೦೦ ಜಂಗಮರೊಡನೆ ಕೂಡಿಕೊಂಡಿದ್ದ ಏಕಾಂತ ರಾಮಯ್ಯನು ಬಸವನಿಗಿಂತ ೫೦ ವರ್ಷ ಹಿರಿಯನೆಂದು ಬರೆದಿದ್ದಾರೆ.

ಬಳ್ಳಿಗಾವಿಯ ಶಾಸನವು ಕ್ರಿ. ಶ. ೧೦೩೫ ರದು. ಇದರಲ್ಲಿ ಪಾಶುಪತಮತಸ್ಥಾಪಕನಾದ ಲಕುಲೀಶನಿಗೆ ದತ್ತಿಕೊಟ್ಟ ವಿಷಯವಿದೆ. ಇವನು ಬರೋಡಸಂಸ್ಥಾನದವನಿದ್ದು ಉತ್ತರ ಅರ್ಕಾಟದಲ್ಲಿ ಬೋಧಿಮಾಡಿ ದೇಹದ ಮೇಲೆ ಶಿವನ ಕುರುಹಾದ ಲಿಂಗವನ್ನು ತನ್ನ ಅನುಯಾಯಿಗಳು ಧರಿಸುವಂತೆ ಮಾಡಿದನು. ಈ ಪಾಶುಪತ ಮತದವರೆಲ್ಲರು ಮುಂದೆ ವೀರಶೈವರಲ್ಲಿ ಸಮಾವೇಶರಾದರು. ಆದ್ದರಿಂದ ವೀರಶೈವವು ಬಸವನಕಿಂತಲೂ ಪೂರ್ವದಲ್ಲಿತ್ತೆಂತಲೂ ಬಸವನು ವೀರಶೈವವನ್ನು ಉದ್ಧಾರಗೊಳಿಸಿದ್ದರಿಂದ ಕಾಲಾಂತರದಲ್ಲಿ ಬಸವನನ್ನು ಮತಸ್ಥಾಪಕನೆಂದು ಜನರು ಭಾವಿಸಿದರೆಂದು ಎಂಥಾವೆನ್ನರು ಹೇಳಿದ್ದಾರೆ.

ರಾ॥ ಬ॥ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯಲ್ಲಿ ಮರೆಮಿಂಡದೇವನು ಕ್ರಿ. ಶ. ೧೧೦೦ ರಲ್ಲಿದ್ದನೆಂದು ಹೇಳಿದ್ದಾರೆ. ಪದ್ಮರಾಜಪುರಾಣವು ಸಕಳೇಶಮಾದರಸನು ಬಸವನಿಗಿಂತ ೫೦ ವರ್ಷ ಮೊದಲಿದ್ದನೆಂದು ಸೂಚಿಸುತ್ತದೆ. ಅವನು ಶಿವಯೋಗಿಮಲ್ಲರಸನ ಮಗನು. ಮಲ್ಲರಸನು ರಾಜ್ಯತ್ಯಾಗಮಾಡಿ ಶ್ರೀಶೈಲಬೆಟ್ಟಕ್ಕೆ ತಪಸ್ಸಿಗಾಗಿ ಹೋಗಿದ್ದನು. ಸಕಳೇಶಮಾದರಸನು ಕೆಲವುಕಾಲ ರಾಜ್ಯವಾಳಿದಮೇಲೆ ವೈರಾಗ್ಯತಾಳಿ ಶ್ರೀ ಶೈಲಕ್ಕೆ ಹೋಗಿದ್ದ ತನ್ನ ತಂದೆಯ ಬಳಿಗೆ ಬಂದನು. ಅಲ್ಲಿ ತಂದೆಯನ್ನು ಎಷ್ಟು ಹುಡಿಕಿದರೂ ಕಾಣದಿರಲು ಪ್ರಾಣಕಳೆದು ಕೊಳ್ಳಲು

ಸಿದ್ಧನಾದನು. ಆಗ ತಂದೆಯು ಅವನಿಗೆ ಕಾಣಿಸಿಕೊಂಡನು. ಮಲ್ಲರಸನು ಮಗನ ಸತ್ವ ಪರೀಕ್ಷೆ ಮಾಡಬೇಕೆಂದು ಅವನನ್ನು ಒಂದು ಆಲದ ಮರದ ಅಡಿಯಲ್ಲಿ ಕುಳ್ಳಿರಿಸಿ ತಾನು ಸ್ವಲ್ಪಹೊತ್ತಿನಲ್ಲಿ ಬರುವೆನೆಂದು ಹೇಳಿ ಅಡವಿಯಲ್ಲಿ ಮರೆಯಾದನು. ಆಗ ಒಬ್ಬ ಕುರುಬನು ತನ್ನ ಕುರಿ ಮೇಯಿಸಲು ಎಲೆಗಳನ್ನು ಉದರಿಸಹತ್ತಿದನು. ಆಗ ಮಾದರಸನು ಕುರಬನ ಮೇಲೆ ಸಿಟ್ಟಿಗೆದ್ದನು. ಅಷ್ಟರಲ್ಲಿ ಮಲ್ಲರಸನು ಬಂದು ಮಗನ ಕೋಪವನ್ನು ಕಂಡು ಮಗನನ್ನು ಕುರಿತು ಕಲ್ಯಾಣಕ್ಕೆ ೫೦ ವರ್ಷಗಳ ನಂತರ ಬರುವ ಬಸವನಲ್ಲಿಗೆ ಹೋಗಿ ಅನುಭಾವಿಯಾಗೆಂದು ಹೇಳಿ ಮಾದರಸನನ್ನು ತಿರುಗಿ ಕಳಿಸಿದನು. ಅವನು ಅದರಂತೆ ಬಸವನಲ್ಲಿಗೆ ಹೋಗಿ ಜ್ಞಾನಹೊಂದಿ ಪುನಃ ಶ್ರೀ ಶೈಲಕ್ಕೆಹೋಗಿ ಮುಕ್ತಿಪಡೆದನೆಂಬ ಸಂಗತಿಯು ಸಹ ಬಸವಪುರಾಣದ ೧೯ ನೆಯ ಸಂಧಿಯಲ್ಲಿಯೂ ಹೇಳಲ್ಪಟ್ಟದೆ.

ಶರಣರಾದ ಮೋಳಿಗೆಮಾರಯ್ಯ, ಸೊಡ್ಡಳ ಬಾಚರಸ, ಆಯದಕ್ಕಿ ಮಾರಯ್ಯ, ನುಲಿಯ ಚಂದಯ್ಯ, ಮಡಿವಳ ಮಾಚಯ್ಯ, ಮರುಳ ಶಂಕರದೇವ, ಹಡಪದ ಅಪ್ಪಣ್ಣ, ಮುಂತಾದ ಶರಣರು ಬಸವನ ಒಡನಾಡಿಗಳಿದ್ದರೂ ಬಸವನಿಗಿಂತ ಎಷ್ಟೋ ವಯಸ್ಸಿನಿಂದ ಹಿರಿಯರಾಗಿದ್ದರು. ಅವರು ಬಸವಣ್ಣನವರು ಹುಟ್ಟುವದಕ್ಕಿಂತ ಎಷ್ಟೋವರ್ಷ ಮೊದಲು ವೀರಶೈವರಿದ್ದವರು. ಈ ಶರಣರಿಗೆ ಬಸವನಾಗಲೀ ಅಥವಾ ಅವನ ಅನುಯಾಯಿಗಳಾಗಲೀ ವೀರಶೈವ ದೀಕ್ಷೆ ಕೊಟ್ಟಸಂಗತಿಯು ಯಾವ ವೀರಶೈವ ಗ್ರಂಥದಲ್ಲಿಯೂ ಕಂಡುಬರುವದಿಲ್ಲ. ಆದರೆ ಅವರ ಅಸಾಧಾರಣವಾದ ಆಚಾರವಿಚಾರಗಳು ಬಸವನಮೇಲೆ ಪರಿಣಾಮುವನ್ನುಂಟುಮಾಡಿದ್ದರಿಂದ ಬಸವನು ಕರ್ಮಮಯವಾದ ಬ್ರಾಹ್ಮಣ ಧರ್ಮವನ್ನು ತೊಲಗಿ ನಿಷ್ಕಾಮಮಯವಾದ ವೀರಶೈವವನ್ನು ಸ್ವೀಕರಿಸಿದನು.

ಮೋಳಿಗೆ ಮಾರಯ್ಯನು ಕಾಶ್ಮೀರದ ತನ್ನ ರಾಜ್ಯತ್ಯಾಗಮಾಡಿ ಬಸವನ ಕೀರ್ತಿಯನ್ನು ಕೇಳಿ ಕಲ್ಯಾಣಕ್ಕೆ ಬಂದು ಕಟ್ಟಿಗೆಯನ್ನು ಮಾರಿ ಉದರಜೀವನ ಮಾಡುತ್ತ ಬಸವನಿಗೆ ಗೊತ್ತಾಗದಂತೆ ಎಷ್ಟೋಕಾಲ ವಾಸವಾಗಿದ್ದನು. ಅವನ ಬಡತನ ಸ್ಥಿತಿಯನ್ನು ಕೇಳಿ ಬಸವನು ಅವ

ನಿಲ್ಲದ ವೇಳೆಯಲ್ಲಿ ಮಾರಯ್ಯನ ಮನೆಗೆ ಹೋಗಲು ಮಾರಯ್ಯನ ಹೆಂಡತಿಯು ಅವನಿಗೆ ಊಟಕ್ಕೆ ಬಡಿಸಿದಳು. ಬಸವನು ತಿರುಗಿಹೊರಡುವಾಗ ಹಣದ ಚೀಲವನ್ನು ಹರವಿಯ ಮರೆಯಲ್ಲಿಟ್ಟು ಬಂದನು. ಮಾರಯ್ಯನು ಮನೆಗೆ ಬಂದಾಗ ಚೀಲವನ್ನು ಕಂಡು ಬಸವನು ಬಂದದ್ದನ್ನು ಅರಿತುಕೊಂಡು ಚೀಲದಲ್ಲಿಯ ಹಣವನ್ನು ಜಂಗಮರಿಗೆ ಹಂಚಿದನು. ಜಂಗಮರ ಪಾದೋದಕವನ್ನು ಕಟ್ಟಿಗೆಯ ಮೇಲೆ ಹಾಕಲು ಬಂಗಾರವಾಗಲು ಅದನ್ನು ಜಂಗಮರಿಗೆ ಹಂಚಿದನು. ಬಸವನು ಮಾರಯ್ಯನ ಮಹತ್ವವನ್ನು ತಿಳಿದು ಮಾರಯ್ಯನ ಕ್ಷಮೆ ಬೇಡಿದನು. ಮಾರಯ್ಯನು ಸಹ ಬಸವನಿಗಿಂತ ಹಿರಿಯನು.

ಹೀಗೆಯೇ ಮರುಳಶಂಕರದೇವನೆಂಬ ಶರಣನು ಬಸವನ ಅಂಗಳದ ಗವಿಯಲ್ಲಿ ೧೨ ವರ್ಷ ವಾಸವಾಗಿದ್ದುದು ಬಸವನಿಗೆ ಗೊತ್ತಿರಲಿಲ್ಲ. ಅಲ್ಲಮನು ಕಲ್ಯಾಣಕ್ಕೆ ಮೊದಲನೆಯ ಸಲ ಬಂದಾಗ್ಗೆ ಮರುಳಶಂಕರನು ಅಲ್ಲಮನ ದರ್ಶನಕ್ಕೆ ಬಂದಾಗ ಅಲ್ಲಮನು ಬಸವನಿಗೆ ಅವನ ಪರಿಚಯ ಮಾಡಿಕೊಟ್ಟಿದ್ದಾನೆ. ಈ ಸಂಗತಿಯು ಶೂನ್ಯಸಂಪಾದನೆಯ ಮರುಳಶಂಕರನ ಸಂಪಾದನೆಯಲ್ಲಿ ಹೇಳಲ್ಪಟ್ಟಿದೆ. ಬಸವನ ಕಾಲದಲ್ಲಿ ಬಸವನ ಸಮ್ಮುಖದಲ್ಲಿ ಅಲ್ಲಮನ ಸಂಗಡ ಕಲ್ಯಾಣಕ್ಕೆ ಬಂದ ಭವಿಯಾದ ಸಿದ್ಧರಾಮನ ಲಿಂಗದೀಕ್ಷೆಯ ಉದಾಹರಣೆಯೊಂದೇ ತೋಡೆದು ಕಾಣುತ್ತಿದೆ. ಸಿದ್ಧರಾಮನು ಭವಿಯಿದ್ದ ಮೂಲಕ ಬಸವನು ಅವನನ್ನು ಮನೆಯಲ್ಲಿ ಪ್ರವೇಶಿಸಿಕೊಳ್ಳಲು ಆಕ್ಷೇಪವೆತ್ತಿದ್ದರಿಂದ ಅಲ್ಲಮನು ಚನ್ನಬಸವನಿಂದ ಸಿದ್ಧರಾಮನಿಗೆ ಲಿಂಗದೀಕ್ಷೆ ಕೊಡಿಸಿದನು. ಬಸವನು ತಾನು ಭಕ್ತನೆಂದು ಭಾವಿಸುತ್ತಿದ್ದರಿಂದ ಸ್ವತಃ ಈ ದೀಕ್ಷೆಯನ್ನು ಮಾಡಲಿಲ್ಲ.

ಮಹಾದೇವಿಯಕ್ಕನು ಜನ್ಮದಿಂದಲೇ ವೀರಶೈವಳಾಗಿದ್ದಳು. ಉಡುತಡಿಯ ಅರಸನಾದ ಕೌಸಿಕನು ಅವಳನ್ನು ಲಗ್ನವಾಗಲು ಇಚ್ಛಿಸಿದಾಗ ಅವಳು ಅರಸನು ಜೈನಮತ ಬಿಟ್ಟು ವೀರಶೈವನಾದರೆ ಲಗ್ನವಾಗುವೆನೆಂದು ಹೇಳಿದಳು. ಅರಸನು ಅದಕ್ಕೆ ಒಪ್ಪದ್ದರಿಂದ ಅವಳು ವೈರಾಗ್ಯ ತಾಳಿ ಕಲ್ಯಾಣಕ್ಕೆ ಬರುತ್ತಾಳೆ. ಬಸವನ ಅನುಭವ ಮಂಟಪದಲ್ಲಿ ಪ್ರವೇಶಿಸಲು ಅವಳಿಗೆ ಸಿದ್ಧರಾಮನಂತೆ ಆತಂಕವಾಗಲಿಲ್ಲ. ಅಲ್ಲಮನಾದರೆ ಬಸ

ವನು ತನ್ನ ಗುರುವೆಂದು ಭಾವಿಸಿ ಅವನಿಗೆ ಶೂನ್ಯ ಪೀಠವನ್ನು ರಚಿಸಿದನು. ಸರ್. ಎಸ್. ರಾಧಾಕೃಷ್ಣನ್ನರು ತಮ್ಮ ಹಿಂದು ತತ್ವಜ್ಞಾನ ಗ್ರಂಥದ ೨ನೆಯ ಭಾಗದಲ್ಲಿ ಕಂಚಿಯಲ್ಲಿ ಕ್ರಿ. ಶ ೫ನೇ ಶತಮಾನದ ಶಾಸನದಲ್ಲಿ ೨೮ ಆಗಮಗಳ ಉಲ್ಲೇಖವಿರುವದನ್ನು ಬರೆದಿದ್ದಾರೆ. ಆಗಮಗಳಲ್ಲಿ ವೀರಶೈವದ ಶ್ರೇಷ್ಠತೆಯು ವಿವರಿಸಲ್ಪಟ್ಟಿದೆ. ರಾಧಾಕೃಷ್ಣನ್ನರ ಅಭಿಪ್ರಾಯದ ಮೇರೆಗೆ ವೀರಶೈವದ ಕಾಲವು ೨೦೦೦ ವರ್ಷಗಳ ಪೂರ್ವದ್ದೆಂದು ಸಿದ್ಧವಾಗುತ್ತದೆ. ಕಾಶ್ಮೀರದಿಂದ ಕಂಚಿಯವರೆಗೆ ವೀರಶೈವವು ವಿಸ್ತರಿಸಿತ್ತೆಂದು ಹೇಳಬಹುದಾಗಿದೆ.

ವೀರಶೈವದ ಆಧಾರವಾದ ಶಿದ್ಧಾಂತ ಶಿಖಾಮಣಿ ಮುಂತಾದ ಅನೇಕ ಗ್ರಂಥಗಳು ಸಂಸ್ಕೃತದಲ್ಲಿದ್ದು ಅವು ವೀರಶೈವದ ಶ್ರೇಷ್ಠತೆಯ ಪುಷ್ಟಿಗಾಗಿ ವೇದ ಸ್ಮೃತಿ, ಪುರಾಣಗಳ ಆಧಾರ ತೋರಿಸಿರುವವು. ಬಸವನು ಆಗಮದ ಆಧಾರ ಕೊಟ್ಟು ವಚನಗಳಲ್ಲಿ ವೀರಶೈವ ತತ್ವಗಳನ್ನು ಎತ್ತಿ ಹಿಡಿದಿದ್ದಾನೆ. ಆಗಮಗಳಲ್ಲಿ ಅಥವಾ ಮತ್ತಾವ ವೀರಶೈವ ಮತ ಗ್ರಂಥಗಳಲ್ಲಿ ಬಸವನು ಮತಸ್ಥಾಪಕನೆಂದು ದೊರೆಯುವದಿಲ್ಲ. ಆದ್ದರಿಂದ ವೀರಶೈವ ಮತಕ್ಕೆ ಅಪಾರವಾದ ಸಂಸ್ಕೃತ ಗ್ರಂಥಗಳ ಹಿನ್ನೆಲೆಯೂ ಪೂರ್ವದ ಶರಣರ ಅಸ್ತಿತ್ವವೂ ಇರುವದರಿಂದ ಅವರ ಅಸ್ತಿತ್ವವು ೨೦೦೦ ವರ್ಷಗಳ ಪೂರ್ವದ್ದೆಂದು ಸಿದ್ಧವಾಗುತ್ತದೆ.



# ಷಟ್ ಸ್ಥಲಗಳೂ ಏಕೋತ್ತರ ಶತಸ್ಥಲಗಳೂ

[ ಲೇಖಕರು:- ಶ್ರೀ ಬಸವಪ್ಪ ಚನ್ನಪ್ಪ ಪಟ್ಟೇದ ವಂಟಮುರಿ ]

## ಈಶ್ವರ

ಸಂಸಾರದ ಕಷ್ಟ ನಷ್ಟಗಳಿಗೆ ಪೋಲಿಂದಮೇಲೆ ತುತ್ತಾಗಿ, ಅನು ಭವಗೊಂಡು ಬೇಸತ್ತು ಇದರಲ್ಲಿ ಸುಖವಿಲ್ಲೆಂಬುದು ಮನವರಿಕೆಯಾದ ಮೇಲೆ ಬಲ್ಲವರಿಂದ ನಿಜಸುಖದ ಮಾರ್ಗ ತಿಳಿದುಕೊಂಡು "ಅದರಂತೆ ತಪ್ಪದೇ ನಡೆಯುವಂತೆ ತನ್ನ ಮನವನ್ನು ಅಧೀನದಲ್ಲಿರಿಸಿಕೊಂಡವನೇ ಈಶ್ವರನು. ಆ ಬಲ್ಲ ಮಹಾತ್ಮನೇ ಗುರುವು. ಆತನೇ ಮಾರ್ಗದರ್ಶಿಯು.

ಈಶ್ವರತ್ವ ಹೊಂದಬೇಕಾದರೆ ಅವನು ಮೊದಲು ಎಂಟು ಅಂಗ ಸ್ಥಲಗಳಲ್ಲಿ ತರಬೇತು ಹೊಂದಬೇಕಾಗುವದು. ಅವು ಯಾವವೆಂದರೆ:-

( ೧ ) ಪಿಂಡ ಸ್ಥಲ:— ಆದಿ ಮಹಾಜ್ಞಾನ ಪಿಂಡವಿಡಿದು ಬಂದ ಸೂಕ್ಷ್ಮಜ್ಞಾನ ಪಿಂಡವೇ 'ಪಿಂಡ'ವೆಂದು ಸ್ವತಂತ್ರ ಸಿದ್ಧಲಿಂಗೇಶ್ವರ ವಚನ ವದೆ. ಪರಮಾತ್ಮನ ಅಂಶವು ( ಬಿಂದುವು ) ಅಂದರೆ ಅಂತರಾತ್ಮನು ನರದೇಹದೊಳಗೆ ಪ್ರವೇಶಿಸಿ ಜೀವವೆಂದೆನಿಸುವದು. ಬಹುಜನ್ಮಗಳ ಪುಣ್ಯ ಪರಿಪಾಕದಿಂದ ನಿರ್ಮಲವಾದ ಜೀವವೇ ಪಿಂಡವೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಲಾಗಿದೆ. ಫಲಿತಾಂಶವೇನೆಂದರೆ ದೇಹಗತ ಪರ ಮಾತ್ಮ ( ಶಿವ ) ನೇ ಪಿಂಡವು.

( ೨ ) ಪಿಂಡಜ್ಞಾನ ಸ್ಥಳ:— ಪರಮಾತ್ಮನ ಅಂಶವೇ ದೇಹದಲ್ಲಿ ಪಿಂಡವಾದಮೇಲೆ ಪಿಂಡಜ್ಞಾನವೆಂದರೆ ಅದು ಪರಮಾತ್ಮನೇ ಹೊರತು ಅನ್ಯವೇನೂ ಅಲ್ಲ ಎಂದು ತಿಳಿಯಲೇ ಬೇಕು.

( ೩ ) ಸಂಸಾರ ಹ್ಯೇಯ ಸ್ಥಲ:— ಸಂಸಾರದಲ್ಲಿ ಸುಖದ ಆಭಾ ಸವೇ ವಿನಾ ನಿಜವಾದ ಸುಖವಿಲ್ಲೆಂದು ಮನವರಿಕೆಯಾದಮೇಲೆಯೇ ನರನು ಅದರ ಮೇಲಿನ ಪ್ರೇಮವನ್ನು ತೆಗೆದುಹಾಕಿರುತ್ತಾನೆ. ಇದೇ ಸಂಸಾರ ಹ್ಯೇಯ ಸ್ಥಲವು.

( ೪ ) ಗುರುಕಾರುಣ್ಯ ಸ್ಥಲಃ – ನಿಜಸುಖದ ಮಾರ್ಗವನ್ನು ತೋರಿಸಬಲ್ಲ ಮಹಾತ್ಮನನ್ನು ಶೋಧಿಸಿ, ಅವನಿಗೆ ಶರಣು ಹೋಗುವವೇ ಗುರುಕಾರುಣ್ಯ ಸ್ಥಲವು.

( ೫ ) ಲಿಂಗಧಾರಣ ಸ್ಥಳಃ – ಆಗ ಆ ಗುರುವು ಅಜ್ಞಾನ ಮೂಲಕವಾಗಿಯೇ ನೀನು ದುಃಖಬಡುತ್ತಿರುವೆಯಾದುದರಿಂದ ಲಿಂಗ ( ಸುಜ್ಞಾನ ) ಧಾರಣ ಮಾಡಿಕೊಂಡು ಅದನ್ನು ಸರಿಯಾಗಿ ಪೂಜಿಸುತ್ತ ನಡೆ, ಎಂದು ಹೇಳಿ ಲಿಂಗವನ್ನು ಧರಿಸುವನು.

( ೬ ) ವಿಭೂತಿ ಧಾರಣ ಸ್ಥಳಃ— ವಿಭೂತಿಯು ಪವಿತ್ರವಾದ ಗೋಮಯವನ್ನು ದಹಿಸಿ ಉಂಟಾದ ಬಿಳಿಯ ಭೂತಿಯನ್ನು ಗಟ್ಟಿ ಯಾಗುವಂತೆ ಸಿದ್ಧಗೊಳಿಸಿದ ಪವಿತ್ರ ಪದಾರ್ಥವು. ಅಗ್ನಿ ಸಂಸ್ಕಾರ ದಿಂದ ಭಿನ್ನ ಭಿನ್ನವಾದ ವಸ್ತುಗಳಲ್ಲಿ ದಗ್ಧವಾಗಿ ತಮ್ಮ ಗುಣರೂಪಾದಿ ಗಳನ್ನೆಲ್ಲ ಕಳೆದುಕೊಂಡು ಒಂದೇ ಒಂದು ಭಸಿತ (ಪ್ರಸಾದ ಸ್ವರೂಪ) ವಾಗುವವು. ಆದರಂತೆ ಜಗತ್ತಿನಲ್ಲಿರುವ ನಾನಾವಿಧ ನಾಮ ರೂಪಾದಿ ಯಾಗಿರುವ ಅಸಂಖ್ಯ ಒಡವೆಗಳನ್ನೆಲ್ಲ ರುದ್ರಾಕ್ಷಿ ಎಂಬ ಜ್ಞಾನ ನೇತ್ರ ದಿಂದ ದಹಿಸಿ, ಒಂದೇ ವಿಭೂತಿ ರೂಪಕ್ಕೆ ತಂದುಕೊಳ್ಳಬೇಕೆಂಬುದನ್ನು ಗಮನಕ್ಕೆ ತಂದುಕೊಡುವ ಉದ್ದೇಶದಿಂದಲೇ ವಿಭೂತಿಧಾರಣ ಸ್ಥಳವು ರೂಢವಾಗಿದೆ.

( ೭ ) ರುದ್ರಾಕ್ಷಿ ಧಾರಣ ಸ್ಥಳಃ— ರುದ್ರಾಕ್ಷಿಯು ರುದ್ರಾಕ್ಷಿವೃಕ್ಷದ ಬೀಜವಾಗಿದ್ದರೂ ಅದರ ಅರ್ಥವು ಬಹು ಸ್ವಾರಸ್ಯ ಉಳ್ಳದ್ದಾಗಿದೆ. "ರುದ್" (ದುಃಖ) ಎಂಬ ಶಬ್ದಕ್ಕೆ "ದ್ರ" (ದ್ರವಿಸುವದು) ಎಂಬ ನಾಮಕ ಹತ್ತಿ "ರುದ್ರ" ಎಂಬ ಸಾಮಾಸಿಕ ನಾಮವಾಗಿದೆ. ದುಃಖವನ್ನು ಕರಗಿಸಿ ಬಿಡುವ ವಸ್ತುವು ಜ್ಞಾನವಲ್ಲದೆ ಮತ್ತೊಂದಲ್ಲ. ಆದುದರಿಂದ "ರುದ್ರ" ಅಂದರೆ ಜ್ಞಾನವು. ಈ ಜ್ಞಾನವೇ " ಅಕ್ಷಿ " ( ಕಣ್ಣು ) ಆದರೆ ಅದು ರುದ್ರಾಕ್ಷಿ ಎನ್ನಿಸುವದು. ಅದಕ್ಕೇ ಹಣೆಗಣ್ಣು ಎಂದು ಹೇಳುತ್ತಾರೆ. ಹಣೆಯ ಹಿಂಬದಿಯಲ್ಲಿ ಎಲುವಿನಾಚೆಗೆ ಮಿದುಳಿದೆ ಅದೇ ಜ್ಞಾನದ ( ಚಿತ್ಕಳೆಯ )ಆದಿಸ್ಥಾನವು. ಅಂಥ ಮೂಲ್ಯವುಳ್ಳ ಜ್ಞಾನವನ್ನು ಪಡೆಯಬೇಕೆಂಬುದರ ಸೂಚನಾರ್ಥವಾಗಿಯೇ ರುದ್ರಾಕ್ಷಿ ಧಾರಣಸ್ಥಳವು ಏರ್ಪಟ್ಟಿದೆ.

( ೮ ) ಪಂಚಾಕ್ಷರಿ ಮಂತ್ರ ಜಪಸ್ಥಳ:— ಪಂಚಾಕ್ಷರಿ ಮಂತ್ರವು ಗುರುವಿನಿಂದ ಬೋಧಿಸಲ್ಪಡುವದು. ಅದು ಜೀವನು ಆರೆಂಬುದನ್ನು ತಿಳಿಸಿಕೊಡುವ ಗುಪ್ತ ಮಾತಾಗಿದೆ. ತಾನು ಆರು ಎಂಬುದನ್ನರಿಯುವದೇ ಮಾನವ ಜನ್ಮದ ಮುಖ್ಯ ಗುರಿಯು. ಈ ಮಹತ್ಕಾರ್ಯ ಸಾಧನೆ ಗಾಗಿಯೇ ಪಂಚಾಕ್ಷರಿ ಮಂತ್ರವನ್ನು ಜಪಿಸಬೇಕಾಗುತ್ತದೆ.

ಈ ಎಂಟು ಸ್ಥಳಗಳಿಂದ ಸಂಸಿದ್ಧನಾದ ಮನುಜನು ಈಶ್ವರನೆಂದು ತಿಳಿಯಬೇಕು. ವಚನ ಗ್ರಂಥಗಳಲ್ಲಿ ಈಶ್ವರನಿಗೆ ಭಕ್ತನೆಂದು ಸಂಬೋಧಿಸಿರುವರು. ಈ ಪ್ರಕಾರ ಭಕ್ತನಾಗುವದೇನು ಸಾಮಾನ್ಯ ವಿಷಯವಲ್ಲ. ಅವನು ಎಲ್ಲಕ್ಕೂ ಮೊದಲು ಸಂಸಾರದ ಬಗೆಗೆ ಜಿಗುಪ್ಸೆಯುಳ್ಳವನಾಗಿರ ಬೇಕಾಗುವದು. ಇದು ನೆಲೆಗೊಳ್ಳದೇ ಸುಮ್ಮ ಸುಮ್ಮನೇ ಲಿಂಗ ಧಾರಣ ಮಾಡಿದುದು, ವ್ಯರ್ಥವಾಗಿ ಬಿಡುವದು. ಲಿಂಗಾಂಗಿಗಳಲ್ಲಿ ಹುಟ್ಟಿದ ಕೂಸುಗಳಿಗೆ ಶೈಶವಾವಸ್ಥೆಯಲ್ಲಿಯೇ ( ಅದು ಗರ್ಭಸ್ಥವಿರಲಿ ಜನ್ಮ ತಾಳಿದೊಡನೆಯೇ ಇರಲಿ ) ಅನಾಯಾಸವಾಗಿ ಲಿಂಗ ಧಾರಣೆ ಯಾಗಿ ಬಿಡುವದ . ಮುಂದೆ ಆ ಬಾಲಕನು ಪಂಚ ಜ್ಞಾನೇಂದ್ರಿಯ ವಶನಾಗಿ ವಿಷಯ ಲೋಲುಪನಾಗುವನು. ಮನೆಯವರನ್ನಾಗಲೀ ನೆರೆಹೊರೆಯವರ ನ್ನಾಗಲಿ ನೋಡಿ ನೋಡಿ, ತಾನೇ ಮನಬಂದಂತೆ ಲಿಂಗವನ್ನು ಪೂಜಿಸುವನು. ಇಲ್ಲವೆ ಅದರೊಡನೆ ವ್ಯವಹರಿಸುವನು. ಹಿರಿಯರಾಗಲೀ ಮನೆಗುರುಗ ಳಾಗಲೀ ಬಹುಶಃ ಅತ್ತ ಗಮನಿಸುವದೇ ಇಲ್ಲ ಅವನಿಗೆ ದೀಕ್ಷೆಯಾಗಿ ಶಿವ ಮಂತ್ರ ಬೋಧೆಯಾಗುವದು ದುರ್ಲಭವಾಗುತ್ತದೆ. ಕೆಲವರು ಜನ್ಮ ಲಿಂಗಧಾರಣ ಕಾಲದಲ್ಲಿಯೇ ಪಂಚಾಕ್ಷರಿ ಬೋಧೆಯಾಗುವದೆಂದು ಹೇಳು ತ್ತಾರೆ. ಅದೆಲ್ಲ ಬರಿಯ ಶಿಷ್ಟಾಚಾರವೇ ಹೊರತು, ಫಲಕಾರಿಯಾಗ ಲಾರದು. ವ್ಯವಹಾರದಲ್ಲಿ ಹಾಗೆ ಸುಪರಿಣಾಮವಾದುದೇನೂ ಕಂಡು ಬರುವದಿಲ್ಲ. ಅಂದಮೇಲೆ ಹಾಗೆ ಹೇಳುವದರಲ್ಲೇನು ಪುರುಷಾರ್ಥವು ?

ಶಿವದೀಕ್ಷೆ ಎಂದರೇನೇ ಆ ಅಪ್ರಬುದ್ಧ ಬಾಲಕನಿಗೆ ಶಿವಮಾರ್ಗದ ಶಿಕ್ಷಣ ಕೊಡಲಿಕ್ಕೆ ಆರಂಭಿಸುವದರ ಚಿನ್ಹವೇ ಸರಿ. ಈ ಶಿವದೀಕ್ಷೆಯೇ ಇಲ್ಲದಿರುವಾಗ ಅವನು ಭಕ್ತತ್ವದ ( ಈಶ್ವರತ್ವದ ) ಪೂರ್ಣತೆಯನ್ನು ಹೊಂದಲಾರನು. ಬರಿಯ ಶಿವ ದೀಕ್ಷೆ ಮಾಡಿಯೇ ಅಷ್ಟಕ್ಕೆ ನಿಲ್ಲಬಾರದು. ಶಿವಮಾರ್ಗದ ಕ್ರಿಯೆಗಳನ್ನೆಲ್ಲ ಸಾಂಗೋಪಾಂಗವಾಗಿ ಅವನಿಗೆ ಬಿತ್ತರಿಸಿ

ಕೊಟ್ಟು, ತವ್ವದಾಚರಿಸಲಿಕ್ಕೆ ಹಚ್ಚಬೇಕು. ಇವೇ ಭಕ್ತನ (ಈಶ್ವರನ) ನೆಯ ಸ್ಥಳವು. ಭಕ್ತಮಾರ್ಗ ಕ್ರಿಯಾಸ್ಥಳವು. ಈ ಕ್ರಿಯಾಸ್ಥಳವಲ್ಲಿ ಕಾಲಿಟ್ಟೊಡನೆಯೇ ಈಶ್ವರನಿಗೆ ಮಹೇಶ್ವರನೆಂಬ ಹೆಸರು ಪ್ರಾಪ್ತವಾಗುತ್ತದೆ.

## —ः ಮಹೇಶ್ವರ ः—

ತಾನು ಅಜ್ಞಾನ ಮಾರ್ಗದಲ್ಲಿ ನಡೆದು, ಅನಿಷ್ಟವನ್ನು, ಇಲ್ಲವೆ ಅನಾಚಾರವನ್ನು ಅಥವಾ ದುಷ್ಕ್ರಿಯೆಗಳನ್ನು ಸಹಸಾ ಮಾಡಲಿಕ್ಕಿಲ್ಲೆಂಬ ದೃಢ ನಿಶ್ಚಯವನ್ನು ಹೊಂದಿ ತದನುಸಾರ ತನ್ನನ್ನು ( ತನ್ನಮನವನ್ನು ) ಆಳಲಣಿಯಾದ ಬುದ್ಧಿವಂತ ಮನುಷ್ಯನೇ ಮಾಹೇಶ್ವರನು. ಈಶ್ವರನು ತನ್ನ ಮಾರ್ಗಕ್ರಿಯೆಯಲ್ಲಿ ಮುಂದುವರಿಯುತ್ತ ಕೊನೆಗೆ ಮಹೇಶ್ವರನಾಗುವನು. ಈ ಈಶ್ವರ ಮಹೇಶ್ವರರೀರ್ವರೂ ತ್ಯಾಗಾಂಗ ನೊಡಲೊಳಗಿರುವರು. ದೇಹವನ್ನು ಸದಾಚಾರ ಸತ್ಕ್ರಿಯೆಗಳಲ್ಲಿ ಯಾವಾಗಲೂ ನಡೆಯುಹಚ್ಚುವದರಲ್ಲಿ ಸಿದ್ಧತೆಯನ್ನು ಪಡೆಯುವದೇ ಇವರ ಕರ್ತವ್ಯವು.

ಭಕ್ತದಲ್ಲಿ ತೀರ ತುಸು ಜನರೇ ಯಾಕಾಗಲೊಲ್ಲರು, “ ತಾವು ಕ್ರಿಯಾಸ್ವೀಕರಿಸಿದವರು ಇಲ್ಲವೆ ಕಿರೆಹಿಡಿವವರು, ಎಂದು ಹೇಳುವವರು ಸಿಕ್ಕುವರು. ಆದರೆ ಅದು ಸದ್ಭಾವಿ ಸತ್ಯ ಶರಣರಿಂದಲ್ಲ. ವಿಷಮತೆ ನಿಡಿಡ ಅಯ್ಯಾಚಾರಗಳಿಂದ, ಅವರು ಗುರುವಿನಿಂದ, ಮಂತ್ರೋಪದೇಶವನ್ನು ಇಷ್ಟಲಿಂಗ ಪೂಜೆಯನ್ನು ಒಂದು ತರದ ಯಾಂತ್ರಿಕ ವಿಧಾನವನ್ನು ಪಡೆದಿರುವರು. ಅವರು ನಿತ್ಯಸ್ನಾನ ಮಾಡಿ ಲಿಂಗ ಪೂಜೆಯನ್ನು ನೆರವೇರಿಸಿ, ಲಿಂಗಾರ್ಪಿತ ಮಾಡಿ ಆ ಪ್ರಸಾದವನ್ನೇ ಸೇವಿಸುವರು. ಪುನಃ ಸ್ನಾನ ಮಾಡುವವರೆಗೆ ಬಾಯಲ್ಲಿ ನೀರು ಸಹ ಹಾಕುವದಿಲ್ಲ. ಯಾವಾಗಲೂ ಸಂಗಡ ಗುರುವಿತ್ತ ವಿಭೂತಿಯನ್ನು ತಕ್ಕೊಂಡೇ ಗ್ರಾಮಾದಿಗಳಿಗೆ ಹೋಗುವರು. ಅಯ್ಯನವರಿಂದ ಪೂಜೆ ಪಾದೋದಕ ಪ್ರಸಾದದಲ್ಲಿ ನಂಬುಗೆಯನ್ನಿಟ್ಟಿರುವರು. ಇದೇನು ಕೆಡಕಲ್ಲ. ಇದೆಲ್ಲವೂ ಬೇಕೇಬೇಕು. ಆದರೂ ಪ್ರಸಂಗೋಪಾತ್ತಾಗಿ ಇವುಗಳಲ್ಲಿ ತುಸು ತಪ್ಪಿದರೂ ಅದರಿಂದೇನೂ ಆತ್ಮೋದ್ಧಾರಕ್ಕೆ ಹೇಳತಕ್ಕಂಥ ಹಾನಿಯಿಲ್ಲ. ಏಕೆಂದರೆ ಅವು ಸಾಧನಗಳು, ಸಾಧ್ಯಗಳಲ್ಲ. ಆದರೆ ಮುಂದಿನ ಸಂಗತಿಗಳನ್ನು

ಮಾತ್ರ ಎಷ್ಟೆಷ್ಟು ಕೊಂಕಾಗದಂತೆ, ಬಹು ಎಚ್ಚರದಿಂದ ಜಪ್ಪಿಸಿಕೊಂಡು ನಡೆಯಲೇ ಬೇಕು. ತಪ್ಪಿದರೆ ಮಾತ್ರ ಅದರಿಂದ ನರಜನ್ಮವೆತ್ತಿದುದೇ ಹಾಳಾಗುವದು. ಇದನ್ನೇ ಮುಖ್ಯವಾಗಿ ಸಾಧಿಸಬೇಕಾಗಿದೆ ಎಂಬುದನ್ನು ಯಾವಾಗಲೂ ಕ್ರಿಯಸ್ಥರು ನೆನೆಸಬೇಕು.

ಕ್ರಿಯಸ್ಥರು ತಮ್ಮ ಮೇಲಿನಂತಹ ಕ್ರಿಯಾಚರಣೆಯಿಂದಷ್ಟೇ ತೃಪ್ತರಾಗಿ, ವ್ಯವಹಾರದಲ್ಲಿ ಮನಬಂದಂತೆ ವರ್ತಿಸುವದು ತರವಲ್ಲ. ಅವರು (ಮಹೇಶ್ವರನು) ಪರಧನ ಪರಸತಿ ಮುಂತಾದವುಗಳ ಬಗ್ಗೆ ಬಹು ದೃಢಮನಸ್ಕರಾಗಿರಬೇಕು. ಅತ್ಯಂತ ಶುದ್ಧತೆಯಿಂದ ವರ್ತಿಸಬೇಕು. ಪ್ರಾಮಾಣಿಕತನದಿಂದ ನಡೆದುಕೊಳ್ಳುವದರಲ್ಲಿಯೇ ಸದಾ ನಿರತರಾಗಿರಬೇಕು. ಇತ್ತ ಬಹುಶಃ ಅನೇಕ ಜನ ಕ್ರಿಯಸ್ಥರ ದೃಷ್ಟಿಯೇ ಹೋಗುವದಿಲ್ಲ. ಹೊರಗೆ ಡಾಂಭಿಕತನದ ಕ್ರಿಯೆ ಕೈಕೊಳ್ಳುವದು, ಜನರಲ್ಲಿ ದುರಾಚಾರದ ವರ್ತನೆ ನಡೆಸುವದು, ಇವು ತೀರ ಘಾತುಕವಾದವುಗಳು.

ಶ್ರೀ॥ ಬಸವಣ್ಣನವರು :— "ಭವಿಸಂಗ ಬಿಡದನ್ನಕ್ಕ ಭಕ್ತನೆಂತೆಂಬೆ, ಪರಧನ ಪರಸತಿಯುಳ್ಳನ್ನಕ್ಕ ಮಹೇಶ್ವರನೆಂತೆಂಬೆ?" ಎಂದು ಹೇಳಿದ್ದಾರೆ.

ವಚನಶಾಸ್ತ್ರಗಳಲ್ಲಿ ಮಹೇಶ್ವರನ ಪಾಣಿ ಮಾಣಿ ವಾಣಿಗಳು ಶುದ್ಧವಾಗಿರಬೇಕೆಂದು ವಿವರಿಸಿದ್ದು ಉಂಟು. ಇದೇ ಮಾತನ್ನು ವ್ಯಾವಹಾರಿಕ (ಸಾದಾ) ರೀತಿಯಲ್ಲಿ ಮಾನವನ ಕೈಬಾಯಿ ಕಚ್ಚೆಗಳು ಶುದ್ಧವಾಗಿರಬೇಕೆಂದು ಅನುಭವಪಡೆದ ಹಿರಿಯರು ಹೇಳುತ್ತಲೇ ಬರುವರು. ಕೈಶುದ್ಧವೆಂದರೆ ಅನ್ಯರದೇನೂ ಹಿಡಿಯಬಾರದು ಅಥವಾ ಕಳವು ಮಾಡಬಾರದು. ಯಾವನಲ್ಲಿಯೂ ಏನನ್ನೂ ಬೇಡಕೂಡದು. "ಭಕ್ತನು ಬೇಡಕೂಡದು" ಎಂದು ಪ್ರಮಥರ ಬಲವಾದ ಆಜ್ಞೆ ಸಹ ಇರುವದು. ಇದರಿಂದ ಲಿಂಗಾಂಗಿಗಳಿಗೆ ಬಿಕ್ಷೆ ಬೇಡುವದು ನಿಷಿದ್ಧವೆಂಬುದು ಒಡೆದು ಕಾಣುತ್ತದೆ. ತನಗೆ ಬೇಕಾದುದನ್ನೆಲ್ಲ ಕಾಯಕದಿಂದಲೇ ದೊರಕಿಸಿ, ಗುರುಲಿಂಗ ಜಂಗಮ ಸೇವೆ ಸಲ್ಲಿಸಬೇಕು. ಯಾರಿಗೂ ಎಷ್ಟು ಮಾತ್ರವೂ ಪೀಡಾದಿಗಳನ್ನು ಮಾಡಕೂಡದು. ಇಷ್ಟೆಲ್ಲ ಕೈ ಶುದ್ಧ ವಿರಬೇಕೆಂಬುದರಲ್ಲಿ ಅರ್ಥ ತುಂಬಿದೆ.

ಇದರಂತೆ ಬಾಯಿ ಶುದ್ಧವಿರಬೇಕು ಎಂದರೆ — ಬಾಯಿಂದ ಯಾರಿಗೂ ಬಿರುನುಡಿಗಳನ್ನಾಡಕೂಡದು. ಬಯ್ಯಕೂಡದು ಯಾರ ನಿಂದೆಯನ್ನೂ ಯಾವದೇ ರೀತಿಯಿಂದ ಮಾಡಕೂಡದು. ಸುಳ್ಳಾಡುವದನ್ನು ಮೊದಲೇ ವರ್ಜಿಸತಕ್ಕದ್ದು. ಮಾತಿನಲ್ಲಿಯೂ ಪರರೊಡನೆ ನಡೆಯಿಸುವ ಪ್ರತಿಯೊಂದು ವ್ಯವಹಾರದಲ್ಲಿಯೂ ಪ್ರಾಮಾಣಿಕನಾಗಿರಬೇಕು. ವಿನಯಸಂಪನ್ನನಾಗಿರುವದು ಅತ್ಯವಶ್ಯ. ತನ್ನ ಬಣ್ಣಿಸಿಕೊಳ್ಳಬಾರದು. ಹೀಗೆ ಬಾಯಿ ಶುದ್ಧವಿರುವದರ ಅರ್ಥವದೆ

ಕಚ್ಚಿ ಶುದ್ಧವಿರಬೇಕು. ಎಂದರೆ — ಪರಸ್ತ್ರೀಯರ ಸಹವಾಸವನ್ನು ಮಾಡಕೂಡದು. ಸಾಧಾರಣವಾಗಿ ಕಚ್ಚೆಹರಕು ತನ ಇರಬಾರದೆಂದು ಅನ್ನುವರು. ಪತ್ನೀವ್ರತಸ್ಥನಾಗಿಯೇ ಇರಬೇಕು. ಪಾಣಿ ವಾಣಿ ಮಾಣಿಗಳು ಶುದ್ಧವಿರಬೇಕೆಂದು ವಚನಕಾರರು ಸೂತ್ರರೂಪವಾಗಿ ಇವನ್ನೇ ಹೇಳುವರು. ಇವು ಹೇಳಲಿಕ್ಕೆ ಹಗುರಾಗಿದ್ದರೂ ಪಾಲಿಸಲಿಕ್ಕೆ ಬಹು ಕಠಿಣವಾಗಿವೆ. ಬಲವಾದ ಮನೋನಿಗ್ರಹವು ಇರದೆ ವಿಷಯಗಳ ತಿರಸ್ಕಾರವೂ ಎಂದೂ ಸಾಧ್ಯವಿಲ್ಲ. ಆವರೂ ಲಿಂಗಾಂಗಿಗೆ ಇವನ್ನು ಸಾಧಿಸದಿದ್ದರೆ ನಿರ್ವಾಹವೇ ಇಲ್ಲ. ಹೀಗೆ ಮಹೇಶ್ವರನ ಆಚಾರವು ಭದ್ರವಾದುದು ಇರಲೇ ಬೇಕಾಗುವದು.

ಅಕ್ಕ ಮಹಾದೇವಿಯವರು :— ಕಾಮ, ಕ್ರೋಧ, ಮೋಹ, ಲೋಭ, ಮದ, ಮಾತ್ಸರಗಳೇ ಭವಿಗಳೆಂದೂ, ಈ ಬಲಿಷ್ಠ ಅರಿಷಡ್ವರ್ಗವು ತಮ್ಮಲ್ಲಿಂಲು ಅದನ್ನು ಮರೆತು, ಲಿಂಗವಿಲ್ಲದ ಇತರರನ್ನು ಭವಿಗಳೆಂದು ತಿರಸ್ಕರಿಸಿ ನುಡಿಯುವದು ಸರಿಯಲ್ಲವೆಂದೂ ಹೇಳುತ್ತಾರೆ. ಭವಿಸಂಗ ಬಿಡುವದೆಂದರೆ — ಈ ಪ್ರಾಪಂಚಿಕ ವಿಷಯಗಳೇ ಭವಿಗಳು. ಹೊನ್ನು, ಹೆಣ್ಣು, ಮಣ್ಣು, ಮೊದಲಾದವನ್ನು ಹೆಚ್ಚಾಗಿ ಮೋಹಿಸಿ ನಿರಂತರ ಅವುಗಳಲ್ಲಿ ನಿರತರಾದವರೇ ಭವಿಗಳು. ಈ ವಿಷಯಗಳೇ ಕಾಮ ಕ್ರೋಧಾದಿಗಳಿಗೆ ಕಾರಣವಾಗುತ್ತವೆ. ಆದುದರಿಂದ ಸಂಸಾರ ಹ್ಯೇಯವನ್ನು ತಾಳಿದ ಭಕ್ತನಿಗೆ ಇವೆಲ್ಲ ಭವಿಗಳೇ! ಇವನ್ನು ಬಿಡದಿದ್ದರೆ ಅವನು ಭಕ್ತನಾಗಲು ಅನರ್ಹನು. ಕಾಯಕದಿಂದ ಧನ ಸಂಪಾದಿಸಬೇಕು. ಪತ್ನೀವ್ರತಸ್ಥನಾಗಿ ನಡೆಯಬೇಕು. ಇವೇ ಮಹೇಶ್ವರನ ಮುಖ್ಯಕರ್ತವ್ಯಗಳು.

ಸಿದ್ಧಾಂತ ಶಿಖಾಮಣಿಯಲ್ಲಿ:—

ಮದ್ಯಪಾನೀ ಮಾಂಸಭಕ್ಷೀ ಚಾನ್ಯದೈವಸ್ಯ ಪೂಜಕ. |
ಅಲಿಂಗೀ ಚ ದುರಾಚಾರೀ ಪಂಚೈತೆ ಭವಿನಃ ಸ್ಮೃತಾಃ ||

ಎಂದು ಹೇಳಿದೆ. ಮದ್ಯ ಮಾಂಸಗಳ ಸೇವನೆಯಿಂದ ದೂರವಿರಬೇಕು. ಇಷ್ಟಲಿಂಗದ ವಿನಾ ಬೇರೆ ದೈವವನ್ನು ಪೂಜಿಸಕೂಡದು. ದುರಾಚಾರಿಯಾಗಬಾರದು. ಯಾವಾಗಲೂ ದೇಹದ ಮೇಲೆ ಇಷ್ಟಲಿಂಗವಿರಬೇಕು. ಇವು ಮಹೇಶ್ವರ ಭಕ್ತನ ಮುಖ್ಯ ಲಕ್ಷಣಗಳಾಗಿವೆ. ಈಗ ಬಹು ಜನ ಭಕ್ತರು ಈ ಭವಿಸಂಗ ತ್ಯಾಗದತ್ತ ಕಣ್ಣುಮುಚ್ಚಿಯೇ ನಡೆಯುತ್ತಾರೆ. ಹೀಗಾಗಲಿಕ್ಕೆ ಶಿಕ್ಷಾಗುರುವಿನ ಕಾರ್ಯವು ಸಮಾಜದಲ್ಲಿ ನಿಂತುಹೋದುದೇ ಕಾರಣವು.

ಲಿಂಗಾಂಗಿಗಳಲ್ಲಿ "ನಾವು ಭಕ್ತರಲ್ಲವೆಂದೂ, ಅವರು ಗುರುವರ್ಗದವರೆಂದೂ, ಅವರಿಗಿಂತ ಶ್ರೇಷ್ಠ ಜಾತಿಯವರೆಂದೂ" ಹೇಳಿಕೊಳ್ಳುವದೊಂದು ಸಮಾಜವುಂಟು. ಅವರು ತಮ್ಮನ್ನು ಅಯ್ಯಗಳೆಂದು ಕರೆಯಿಸಿಕೊಳ್ಳುವರು. ಇವರು ಜನ್ಮಲಿಂಗಧಾರಣೆ ಹೊಂದುವದರಿಂದ ಶ್ರೀ ಬಸವಣ್ಣನವರ ವಚನದಂತೆ ಇವರಾದರೂ ಭಕ್ತರೇ ಆಗುವರು. ಆದರೆ ಇವರು ತಾವು ಭಕ್ತರೆಂಬುದನ್ನು ಮಾತ್ರ ಒಡಂಬಡುವದಿಲ್ಲ. ಅವಕಾರಣ ಮಹೇಶ್ವರರಾಗಲಿಕ್ಕೆ ತಮಗೊಂದು ಬೇರೆ ಸಂಸ್ಕಾರವನ್ನು ಇಟ್ಟುಕೊಂಡಿರುವರು ಅದಕ್ಕೆ ಅಯ್ಯಾಚಾರವೆಂತಲೂ ಮಹೇಶ್ವರ ದೀಕ್ಷೆ ಎಂತಲೂ ಕರೆಯುವರು

ಬಸವನ ಭಕ್ತ ಸಂಪ್ರದಾಯದಲ್ಲಿ ಎಲ್ಲರೂ ಸಮಾನಸ್ಕಂಧರಾಗಿರುವರು. ಅವರಲ್ಲಿ ಮೇಲುಕೀಳು ಮೊದಲಾದ ಯಾವ ಭೇದ ಭಾವವೂ ಸ್ವಾಭಾವಿಕವಾಗಿ ( ಜನ್ಮತಃ ) ಇರುವದಿಲ್ಲ. ಇದಲ್ಲದೆ "ಭಕ್ತನು ಬೇಡಲಾಗದು. ಅವನು ಯಾವದಾದರೊಂದು ಸತ್ಕಾಯಕದಿಂದಲೇ ಜೀವಿಸಬೇಕು." ಎಂಬ ದೃಢವಾದ ಕಟ್ಟಳೆ ಇರುವದು. ಇದರಿಂದ ಅಯ್ಯತನದಿಂದ ಮಹೇಶ್ವರರಾಗುವ ವರ್ಗದವರಿಗೆ ಸರಿದೋರಿದಂತೆ ಕಾಣುವದಿಲ್ಲ ಅವರು ಮೊದಲು ಬ್ರಾಹ್ಮಣ ವರ್ಗದಲ್ಲಿದ್ದು ಅಲ್ಲಿ ಭಿಕ್ಷೆ ಬೇಡುವದೂ, ಜನ್ಮತ: ಹೆಚ್ಚಿನ ಜಾತಿಯವರೆಂದು ಎನ್ನಿಸಿಕೊಂಬುವದೂ ಅವರಿಗೆ

ವೈಯಂಡ ವಿಷಯಗಳಾಗಿವೆ.ದು ತೋರುತ್ತದೆ. ಇಂತಹವರಿಗೆ ಭಕ್ತರ ಕಟ್ಟು ಕಠಿಣವೆನ್ನಿಸುವದೂ ಸಾಹಜಿಕ! ಅನಾಯಾಸವಾಗಿ ಪ್ರಾಪ್ತವಾಗುವ ಆ "ವರ್ಣಾನಾಂ ಬ್ರಾಹ್ಮಣೊ ಗುರುಃ" ಎಂಬುದು ಕಳೆದು ಹೋಗುವದಲ್ಲ ಎಂಬ ಹುರುಹುರು ಮನದಲ್ಲಿ ಉದ್ಭವಿಸುವದೇನೂ ಸೋಜಿಗವಲ್ಲ. ಅಂತೇ ಅವರು ಶ್ರೀ ಬಸವಣ್ಣನವರ ಭಕ್ತತನವನ್ನು ಒಪ್ಪಿಕೊಳ್ಳದೆ, ಷಟ್ ಸ್ಥಲದ .ಮಹೇಶ್ವರತ್ವವನ್ನು ಒಪ್ಪಿಕೊಳ್ಳದೆ, ತಮಗಾಗಿ ಸ್ವತಂತ್ರವಾದ ಅಯ್ಯಾಚಾರವೆಂಬ ಮಹೇಶ್ವರತ್ವವನ್ನು ನಿರ್ಮಿಸಿಕೊಂಡರು. ಅಯ್ಯಾಚಾರವೆಂದರೆ ಆರ್ಯಾಚಾರವು ಆರ್ಯರಂತೆ ಆಚಾರವನ್ನಿಟ್ಟುಕೊಳ್ಳಲಿಕ್ಕೆ ಅನುವಾಗಬೇಕೆಂಬ ಹೇತುವಿನಿಂದಲೇ ಈ ಅಯ್ಯಾಚಾರ ಸಂಸ್ಕಾರವನ್ನು ಬಳಿಕೆಗೆ ತಂದಿರುವರು. ಪ್ರತಿ ಗೃಹದ ( ದಾನ ತಕ್ಕೊಳ್ಳುವ ) ಅಧಿಕಾರವು ಭಕ್ತರಿಗೆ ಇಲ್ಲವಾದುದರಿಂದಲೇ ಅದನ್ನು ತಿರಸ್ಕರಿಸಿ, ಅಯ್ಯಾಚಾರ ದೀಕ್ಷೆಯ ಮುಖಾಂತರವಾಗಿ ಜೋಳಿಗೆಯನ್ನು ಪಡಕೊಂಡರು. ಅದರಂತೆಯೇ ಜಂಗಮನ ಕಠಿಣವಾದ ಜ್ಞಾನಾಚರಣೆಗೆ ಹಿಂಜರಿದು, ಕಾಲಿಗೆ ಜಂಗ ( ಜಂಗಮತ್ವ ಇಲ್ಲವೆ ಜಂಗಮ ) ಕಟ್ಟಿಕೊಂಡು ಅನಾಯಾಸವಾದ ಜಂಗಮತ್ವ ಪಡಕೊಂಡರು. ಇದರಿಂದ " ಗುಣಾಃ ಪೂಜಾಸ್ಥಾನಂ ಗುಣಿಷು ! ನ ಚ ಲಿಂಗಂ ನ ಚ ವಯಃ ||" ಎಂಬ ಕಟ್ಟಿನೊಳಗಿಂದ ಅನಾತ ಪಾರಾದರು. ಆದಕಾರಣ ಬ್ರಾಹ್ಮಣರಂತೆ ಲಿಂಗಾಯತರಲ್ಲಿ ತಾವು ಗುರುಗಳೆಂದು ಹೇಳಿಕೊಳ್ಳಲಿಕ್ಕೆ ಇವರಿಗೆ ಅನುವು ಪ್ರಾಪ್ತವಾಯಿತು. ಷಟ್ಸ್ಥಲದೊಳಗಿನ ಕಠಿಣವಾದ ಮಹೇಶ್ವರತ್ವದ ಆಚರಣೆಯೂ, ಜಂಗಮತ್ವದ ಆಚರಣೆಯೂ ಎತ್ತೋ ಹೋಗಿಬಿಟ್ಟು ಈ ಸುಲಭವಾದ ಗುರುಲಿಂಗ ಜಂಗಮತ್ವಗಳೂ ಹಕ್ಕಿನ ಭಿಕ್ಷಾಟನವೂ ಇವರಿಗೆ ಲಭಿಸಿದವು. ಇದರಿಂದ ಭಕ್ತರ ಹಾಗೂ ಅಯ್ಯಗಳ ಮಹೇಶ್ವರತ್ವದಲ್ಲಿ ಮಹದಂತರ ಉಂಟಾಗಿ ಇವರಿಗೆ ಪೊಳ್ಳಿನಲ್ಲಿ ಉಳಿದುಕೊಳ್ಳಲಿಕ್ಕೆ ಧರ್ಮದ ಹೆಸರಿನಲ್ಲಿಯೇ ಅವಸರ ದೊರೆದಿದೆ.

ಇವರಿಗೆ ಕ್ರಿಯಾ ಸ್ವೀಕರಿಸಿದ ಭಕ್ತರಂತೆ ಅಯ್ಯಾಚಾರದಲ್ಲಿ ಮಂತ್ರೋಪದೇಶವಾಗಿ ಕ್ರಿಯೆಯ ಸಂಬಂಧವು ಪ್ರಾಪ್ತವಾಗುತ್ತಿದ್ದರೂ ಅದೆಲ್ಲ ಬರೇ ಹೆಸರಿಗೆ ಮಾತ್ರವಿರುವದು. ಹೀಗೆ ನಡೆವರೂ ಅದು ಒಗ್ಗುವದು. ಇವರನ್ನು ಕಂಡೇ ಭಕ್ತರೊಳಗಿನ ಕ್ರಿಯಾಸ್ಥರೂ ಸಹ ಹೀಗೇ

ನಡೆಯು ಹತ್ತುವರು. ಹೀಗಾಗಿ ಷಟ್‌ಸ್ಥಲದ ನಿಜವಾದ ಮಹೇಶ್ವರತ್ವವು ಲೋಪವಾಗಿಹೋಗಿದೆ.

ಈಗ ಅಯ್ಯಗಳು ಬಿಕ್ಷೆಬೇಡುವದಲ್ಲದೆ, ವರ್ಣಾಶ್ರಮ, ಹೋಮ ಹವನ, ತಮ್ಮ ಜಾತಿಯು ಲಿಂಗವಂತರಲ್ಲಿ ಜನ್ಮತಃ ಶ್ರೇಷ್ಠವಾದುದೆಂದೂ ತಮ್ಮಲ್ಲಿ ಸೂತಕಗಳೂ, ಮಡಿಮೈಲಿಗೆ ಇಲ್ಲವೆ ಸ್ಪೃಶ್ಯಾ ಸ್ಪೃಶ್ಯತೆ ಇರುವವೆಂದೂ ನಂಬುವದುಂಟು ಮಡಿಮೈಲಿಗೆ ಎಂದರೆ, ಸ್ವಚ್ಛಾ ಸ್ವಚ್ಛತೆಗಳೆಲ್ಲ ಇವು ಸಕಲರಿಗೂ ಬೇಕೇ ಬೇಕು ಮಡಿಮೈಲಿಗೆಗಳು ಅಂತರಿಕಕ್ಕೆ ಸಂಬಂಧಿಸಿವೆ ಆದರೆ ಸ್ವಚ್ಛಾಸ್ವಚ್ಛತೆಗಳು ಬಹಿರಂಗಕ್ಕೆ ಅಂಟಿಕೊಂಡಿರತಕ್ಕಂಥವು ಸ್ವಚ್ಛತೆಗೆ ಜಲವು ಕಾರಣವಾಗಿವೆ ಆದರೆ ಮಡಿ (ಪಾವಿತ್ರ್ಯ) ಗೆ ಜ್ಞಾನವು ಕಾರಣವಾಗಿದೆ ಈ ಜ್ಞಾನದ ಕೈಯಲ್ಲಿ ಸಣ್ಣಾಗುವದನ್ನು ತಪ್ಪಿಸಿಕೊಳ್ಳಲಿಕ್ಕೆ ನೀರಿನ ದ್ವಾರವಾಗಿ ಮಡಿಮೈಲಿಗೆಯ ಸ್ತೋಮವು ಹಬ್ಬಿಸಿಂತಿದೆ. ಇದೇ ಮೇರೆಗೆ ವರ್ಣಾಶ್ರಮಗಳನ್ನು ಹಬ್ಬಿಸುವ ಕಾರ್ಯವಾದರೂ ನಡೆದೇ ಇದೆ. ಇವರಲ್ಲಿ ಹೆಣ್ಣುಮಕ್ಕಳಿಗೆ ಪುನರ್ವಿವಾಹದ ಬಾಧ್ಯತೆ ಇಲ್ಲ. ಮೇಲೆ ಹೇಳಿದಂತಹ ಈಗಿನ ನಾಮಮಾತ್ರ ಮಹೇಶ್ವರತ್ವದ ನೆಲೆಗಟ್ಟಿನ ಮೇಲೆಯೇ ಮುಂದಿನ ಪ್ರಸಾದಿ ಮೊದಲಾದ ಸ್ಥಳಗಳು ಏರ್ಪಡಿಸಲ್ಪಡುವದರಿಂದ ಅವೆಲ್ಲ ಜೀವವಿಲ್ಲದವುಗಳಾಗಿಯೇ ಇರುವದೇನೂ ಅಚ್ಚರಿಯಲ್ಲ

ಈಶ್ವರ ಮಹೇಶ್ವರರ ಮಾರ್ಗಕ್ರಿಯೆಯಲ್ಲಿ ಮೇಲೆ ಹೇಳಿದವಲ್ಲದೆ ಲಿಂಗದಲ್ಲಿ ಭಕ್ತಿ, ಕಾಯಕಗ್ರಹಣ, ದಾನಧರ್ಮ ಪರೋಪಕಾರಾದಿಗಳು, ಮಡಿ ಮೈಲಿಗೆ ಸೂತಕಾದಿಗಳನ್ನು ವರ್ಜಿಸುವದು, ಭಿಕ್ಷೆ ಬೇಡದಿರುವದು ಮೊದಲಾದವು ಬರುವವು. "ಬೇಡುವವ ಭಕ್ತನಲ್ಲ" ಎಂದು ವಚನಶಾಸ್ತ್ರದ ಆಜ್ಞೆಯುಂಟು. ಇದರಿಂದ ಅವನು ಯಾವದೊಂದು ಸತ್ಶುದ್ಧ ಕಾಯಕವಿಡಿದು, ದುಡಿದೇ ಗಳಿಸಬೇಕೆಂಬುದು ತಾನೇ ನಿಷ್ಪನ್ನವಾಗುವದು. ಅವನು ದಯಾವಂತನಾಗಿ ಸತ್ಪಾತ್ರದಲ್ಲಿ ಯಾವಾಗಲೂ ತನ್ನ ಶಕ್ತಿಯ ಮೇರೆಗೆ ದಾನ ಪರೋಪಕಾರಾದಿಗಳನ್ನು ಮಾಡಲೇಬೇಕು ಪರೋಪಕಾರವೆನ್ನುವದಕ್ಕಿಂತ ಪರಸೇವೆ ಎನ್ನುವದೇ ಭಕ್ತನಿಗೆ ಹೆಚ್ಚು ಶೋಭಿಸುವದು. ದಾನ, ವಿನಯ, ಸೇವಾಸಮತೆ ಮೊದಲಾದವುಗಳಿಂದಲೆ ಗುರು ಲಿಂಗ ಜಂಗಮ ಸೇವೆಯು ಘಟಿಸುತ್ತದೆ.

ಲಿಂಗದಲ್ಲಿ ಅತ್ಯಂತ ನಿಷ್ಠೆಯನ್ನು ಧರಿಸುವದು ಮಹೇಶ್ವರನ ಮಹತ್ವದ ವಿಷಯವು ಇಷ್ಟಲಿಂಗದಲ್ಲಿ ಪೂಜಾ ಪುರಸ್ಕಾರಾದಿಗಳಿರಬೇಕೇ ಹೊರತು ಬೇರೆ ದೈವತದ ಕಡೆಗೆ ಎಷ್ಟು ಮಾತ್ರವೂ ಗಮನಿಸಕೂಡದು.

“ಲಿಂಗಧರಿಸಿದವಗೆ ಮೈಲಿಗೆ ಇಲ್ಲ”—“ಲಿಂಗಧಾರೀ ಸದಾಶುಚಿಃ” ಎಂಬ ಆಗಮ ವಾಕ್ಯದಂತೆ ವಿಶ್ವಾಸ ಪೂರ್ವಕವಾಗಿ ನಡೆಯತಕ್ಕದ್ದು. ಪಂಚ ಸೂತಕಗಳನ್ನು ಭವಿಗಳಂತೆ ಭಕ್ತರು ಎಂದೂ ಪಾಲಿಸಬಾರದು. ಸೂತಕ ಪಾಲಿಸಬಾರದೆಂದರೆ ಅಸ್ವಚ್ಛತೆಗೆ ಇಂಬುಗೊಡಬೇಕೆಂಬರ್ಥವಲ್ಲ. ಇಲ್ಲಿಯವರೆಗೆ ಸಾಧಾರಣ ಮಹೇಶ್ವರನ ಮಾರ್ಗ ಕ್ರಿಯೆಯಬಗ್ಗೆ ಹೇಳಲಾಯಿತು. ಇನ್ನು ಆತನ ಅಂಗ ಲಿಂಗಸ್ಥಳಗಳನ್ನು ಲಕ್ಷಿಸೋಣ.

## ಮಹೇಶ್ವರನ ಅಂಗಸ್ಥಳಗಳು.

ಇವು ಒಂಭತ್ತು ಅವೆ. ಮೊದಲನೆಯದು ಮಹೇಶ್ವರಸ್ಥಲ. ಇದರಲ್ಲಿ ಮಹೇಶ್ವರನ ಸರ್ವಸಾಧಾರಣ ಕ್ರಿಯೆಗಳು ಬರುವವು. ಅವು ಮೇಲೆ ಬಂದಿವೆ.

(೧) ಲಿಂಗ ನಿಷ್ಠಾ ಸ್ಥಳಃ— ಇಷ್ಟಲಿಂಗದಲ್ಲಿ ಅಪಾರವಾದ ನಂಬುಗೆಯನ್ನು ಆತನು ಧರಿಸಬೇಕು. ಬೇನೆ ಬೇಸರಿಕೆಗಳು ರೋಗಾದಿಗಳಲ್ಲೆಲ್ಲ ಲಿಂಗವನ್ನು ಅನುಸರಿಸಬೇಕು. ಬೇರೆ ದೇವರಕಡೆಗೆ ಎಷ್ಟು ಮಾತ್ರವೂ ಹೋಗಿ ಬಲಗೆಡಬಾರದು. ನಮ್ಮ ಗುರುಗಳಾದ ಅಯ್ಯನವರಲ್ಲಿ ಇಷ್ಟಲಿಂಗ ನಿಷ್ಠೆಯಾದರೂ ಬಹುಜನರಲ್ಲಿ ತಕ್ಕಷ್ಟು ಇದ್ದಂತೆ ಕಂಡುಬರುವದಿಲ್ಲ.

(೨) ಪೂರ್ವಾಶ್ರಯ ನಿರಸನ ಸ್ಥಳಃ—ಇದು ಮಹೇಶ್ವರನ ಅಂಗ ಸ್ಥಲಗಳಲ್ಲಿ ಬಹು ಮಿಗಿಲಾದುದು. ಪೂರ್ವ ಅಂದರೆ ಶಿವದೀಕ್ಷೆಯಾಗುವ ಮೊದಲು ಆಗ ಮನಬಂದಂತೆ ನಡೆದು ಹುಡುಗನು ತನ್ನಲ್ಲಿ ಅನೇಕ ದುಶ್ಚಟಗಳನ್ನೂ ದುರ್ಗುಣಗಳನ್ನೂ ಸಂಪಾದಿಸಿರುತ್ತಾನೆ. ತಿಂಡಿ ತಿನಸುಗಳಿಗೆ ತೀರ ಮನಸೋತವನಾಗಿರುತ್ತಾನೆ ಅದಕ್ಕಾಗಿ ಸುಳ್ಳು ಹೇಳಲು ಕಳವುಮಾಡಲು ಸಹ ಹಿಂಜರಿಯುವದಿಲ್ಲ. ಹಟಮಾರಿತನ, ಜಗಳ

ಗಂಟಿತನ, ಉದ್ಧಟತನ ಮೊದಲಾದವುಗಳಿಗೆ ಇಂಬುಗೊಟ್ಟಿರುವನು ಇವೇ ಮೊದಲಾದ ತನ್ನ ಜನ್ಮೋದ್ಧಾರಕ್ಕೆ ಕಂಟಕಗಳಾದ ಅನೇಕ ಸಂಗತಿಗಳಿಗೆ ತನ್ನಲ್ಲಿ ಆಶ್ರಯ ಕೊಟ್ಟಿರುವನು. ಸ್ವಾರ್ಥಲಂಪಟನಾಗಿರುವನು. ಇವೇ ಮೊದಲಾದವುಗಳು ಪೂರ್ವಾಶ್ರಯಗಳು ಇವುಗಳನ್ನು ಸಂಪೂರ್ಣ ತ್ಯಾಗಮಾಡಲಿಕ್ಕೆ ಬೇಕು. ಹೀಗಾಗುವದಕ್ಕೇನೇ ಪೂರ್ವಾಶ್ರಯ ನಿರಸನವೆಂಬ ಹೆಸರು. ಇದಾದರೆ ಮಾತ್ರ ಭಕ್ತನ ಮನಸ್ಸು ಗಂಜಿ ಮಾಡಿದ ಸ್ವಚ್ಛ ಬಿಳಿಯ ವಸ್ತ್ರದಂತೆ ನಿರ್ಮಲವಾಗುವದು. ಆಗ ಮಾತ್ರ ಅದರಮೇಲೆ ಅಚ್ಚು ಒತ್ತಿದರೆ ಅದು ಸ್ವಚ್ಛವಾಗಿ ಮೂಡುವದು. ಮಲಿನ ಬಟ್ಟೆಯಮೇಲೆ ಅಚ್ಚೊತ್ತಿದರೆ ಅದರಿಂದೇನೂ ಪ್ರಯೋಜನವಾಗದು. ಪ್ರಮಥರ ಮಾರ್ಗವು ತೀರ ಶುದ್ಧವಾದುದೂ ಸಮತ್ವ ಉಳ್ಳದ್ದೂ ಆಗಿರುವದರಿಂದ ಅವನ್ನು ಸಂಗ್ರಹಿಸಲಿಕ್ಕೆ ಮಹೇಶ್ವರನ ಮನಸ್ಸು ಸಿದ್ಧವಾಗಬೇಕಾದರೆ ಅವನು ಪೂರ್ವಾಶ್ರಯ ನಿರಸನವನ್ನು ಬಲವಾಗಿಯೇ ಹೊಂದಬೇಕು ವೀರಶೈವ ಮತೋದ್ಧಾರಕರಾದ ಅಯ್ಯಾಚಾರಿಗಳು ಪೂರ್ವಾಶ್ರಯ ನಿರಸನಕ್ಕೆ ಎಷ್ಟುಮಾತ್ರವೂ ಲೆಕ್ಕಿಸದೆ ಅಯ್ಯಾಚಾರಕ್ಕೆ ಮಾತ್ರ ಒಳಿತಾಗಿ ಇಂಬುಗೊಡುತ್ತಿರುವರು.

(೪) ವಾಗತ್ಯಯ ನಿರಸನ ಸ್ಥಳ:— ಮಹೇಶ್ವರನ ನಾಲ್ಕನೆಯ ಸ್ಥಳವು ವಾಗತ್ಯಯ ನಿರಸನವೆಂಬುದಿರುವದು. ಬರಿಯ ಬಾಯಿಂದ ಪರರಿಗೆ ಬುದ್ಧಿ ಆಚಾರಾದಿಗಳನ್ನು ಮಾತ್ರ ಬೇಕಾದಷ್ಟು ಹೇಳುತ್ತಾ ಹೋಗಿ ತಾನು ಮಾತ್ರ ಸ್ವಲ್ಪವೂ ಸಹ ಹಾಗೆ ನಡೆಯದೆ ಇರುವದಕ್ಕೆ ವಾಗತ್ಯಯವೆನ್ನುವರು. ಇದು ಲಿಂಗಾಂಗಿಗಳಿಗೆ ತರವಲ್ಲ. ಆಡಿದಂತೆ ತಾನು ಮೊದಲು ನಡೆದು ಬಳಿಕ ಪರರಿಗೆ ಹಾಗೆ ನಡೆಯಲು ಹೇಳುವದು ಪ್ರಮಥರ ರೀತಿಯು. ಅವರು ಬಹು ಸತ್ಯವಂತರು. ಯಾವ ಕುಂದನ್ನೂ ಹಚ್ಚಿಕೊಳ್ಳುವವರಲ್ಲ ಈ ಮಾತು ಮಹೇಶ್ವರ ಭಕ್ತನು ಒಳಿತಾಗಿ ಲಕ್ಷಿಸುವಂತಹದಿರುವದು. ಲಿಂಗಾಯತರ ಮುಖಂಡರಾದ ಅಯ್ಯಗಳು ವಾಗತ್ಯಯ ದೋಷದ ಬಲೆಗೆ ಒಳಿತಾಗಿ ಶಿಕ್ಕುಬಿದ್ದಿರುವದು ದುಃಖದ ಸಂಗತಿಯು.

(೫) ಆಹ್ವಾನ ನಿರಸನ ಸ್ಥಳ:— ನಮ್ಮ ಲಿಂಗವನ್ನು ಒಮ್ಮೆ ಧರಿಸಿದಮೇಲೆ ಜನ್ಮವಾಗಿ ಅದು ಮೈಮೇಲೆ ಧರಿಸಲ್ಪಡುವದಾದುದರಿಂದ

ಅದನ್ನು ವಿಸರ್ಜಿಸಲು ಬರುವದಿಲ್ಲ. ವಿಸರ್ಜಿಸದಿದ್ದರೆ ಆಹ್ವಾನವೂ ಇಲ್ಲ. ಬೇಕಾದಾಗ ತೆಗೆದುಕೊಂಡು ಪೂಜಿಸಿ ಮುಗಿದ ಮೇಲೆ ಪುನಃ ಅದನ್ನು ಧರಿಸಿ ಬಲು ಎಚ್ಚರದಿಂದ ರಕ್ಷಿಸಬೇಕು ಮಣ್ಣು ಮೊದಲಾದವು ಗಳಿಂದ ತಾತ್ಪೂರ್ತಿಕ ಲಿಂಗ ಮಾಡಿ ಪೂಜಿಸುವವರಿಗೆ ಆಹ್ವಾನ ವಿಸರ್ಜನೆಗಳು ಉಂಟು. ಅವು ಅಲಿಂಗಿಗಳಿಗೆ ಮಾತ್ರ!

(೬) ಅಷ್ಟಮೂರ್ತಿ ನಿರಸನ ಸ್ಥಳಃ - ಪಂಚ ಮಹಾಭೂತಗಳೂ, ಸೂರ್ಯ ಚಂದ್ರ ಆತ್ಮರುಗಳು, ಈ ಎಂಟಕ್ಕೆ ಅಷ್ಟಮೂರ್ತಿ ಎಂದೆನ್ನುವರು. ಇವಾವನ್ನೂ ಭಕ್ತನು ನಂಬಕೂಡದು. ತನ್ನ ಇಷ್ಟಲಿಂಗ ಒಂದರ ಹೊರತು ಅವನು ಬೇರೆ ಏನೂ ಮನ್ನಿಸಕೂಡದು. ಹೀಗೆ ಅವುಗಳ ತ್ಯಾಗ ಮಾಡುವದಕ್ಕೆ ಅಷ್ಟಮೂರ್ತಿ ನಿರಸನವೆನ್ನುವರು. ಭವಿ ಜನರಲ್ಲಿ ಈ ಅಷ್ಟಮೂರ್ತಿಗಳು ಮನೆಮಾಡಿಕೊಂಡಿರುತ್ತವೆ.

(೭) ಸರ್ವಗತ ನಿರಸನ ಸ್ಥಳಃ— ದೇವರು ಅಣುರೇಣು ತೃಣ ಕಷ್ಟಗಳೇ ಮೊದಲಾಗಿ ಸರ್ವತ್ರ ವ್ಯಾಪಿಸಿರುವನೆಂಬ ಒಣ ಮಾತು ಹೇಳ ಬಾರದು. ಹಾಗೆ ತನಗೇನೂ ಅನುಭವವಿರುವದಿಲ್ಲ. ಒಬ್ಬರು ಹೇಳಿದು ದನ್ನು ಕೇಳಿ ಹಾಗೆ ಹೇಳಬಾರದು ಎಂಬೇ ಈ ಸ್ಥಳದ ನಿರಸನವದೆ.

(೮) ಶಿವ ಜಗನ್ಮಯ ಸ್ಥಳಃ— ಮೇಲಿನ ಸ್ಥಳದಲ್ಲಿ ಹಾಗೆ ಹೇಳಿದ್ದರೂ ನಿಜವಾಗಿ ಶಿವನು ಜಗನ್ಮಯನಾಗಿರುವನೆಂಬುದು ಸತ್ಯವೆಂದು ಇಲ್ಲಿ ಹೇಳಿದ್ದಾರೆ. ಹೀಗೆ ತಿಳಿಯುವದರಿಂದ ಶಿವನು ( ದೇವರು ) ಎಲ್ಲಿ ರುವನೆಂಬುದು ತಿಳಿಯದಂತಾಗಿ ಅಜ್ಞ ಮಾನವನನ್ನು ಅರಣ್ಯ ಪುಗಿಸಿ ಬಿಟ್ಟಂತಾಗುವದು. ಯಾವುದನ್ನು ಪೂಜಿಸಲಿ, ಯಾವುದನ್ನು ಬಿಡಲಿ ಎಂಬುದೇನೂ ತಿಳಿಯದೆ ಕಂಡ ಕಂಡುದಕ್ಕೆಲ್ಲ ಕೈ ಮುಗಿಯ ತೊಡಗ್ತ ವನು. ಇದರಿಂದ ಯಾವುದರಲ್ಲಿಯೂ ಭಕ್ತಿಯು ಸ್ಥಿರವಾಗದೆ, ಅವನು ಕಡೆಗೆ ಅಂತರಾಳದಲ್ಲಿ ತೂಗಾಡ ಬೇಕಾಗುವದು. ಇದಕ್ಕಾಗಿಯೇ ಅದ ನ್ನೆಲ್ಲ ಸದ್ಯಕ್ಕೆ ಬದಿಗಿರಿಸಿ, ಕೆಳಗಿನ ಭಕ್ತ ದೇಹಿಕ ಲಿಂಗಸ್ಥಳವನ್ನು ನಿರ್ಮಿಸಿದ್ದಾರೆ.

(೯) ಭಕ್ತದೇಹಿಕ ಲಿಂಗಸ್ಥಳಃ— ಭಕ್ತನ ದೇಹವೇ ಲಿಂಗ (ಜ್ಞಾನ) ವಿರುವ ಸ್ಥಳವಿಲ್ಲದೇ ಬೇರಲ್ಲ ಎಂದು ಈ ಸ್ಥಳದಲ್ಲಿ ಹೇಳಿ ದ್ದಾರೆ. ದೇಹಾಂತರ್ಗತ ಪ್ರಾಣಲಿಂಗವನ್ನೆ ಹೊರತೆಗೆದು ಅದಕ್ಕೆ ಆಕಾರ

ಕಲ್ಪಿಸಿ, ಇಷ್ಟಲಿಂಗವೆಂದು ಗುರುವು ಕರಕ್ಕೆ ಕೊಟ್ಟುದನ್ನೇ ಲಿಂಗವೆಂದು ಪೂಜಿಸಬೇಕಲ್ಲದೆ, ಬೇರೆ ಯಾವುದನ್ನು ಪೂಜಿಸಕೂಡದೆಂಬ ನಿರ್ಬಂಧ ಹಾಕಿದ್ದಾರೆ ಇದರಿಂದ ಭಕ್ತನು ತನ್ನ ಸಂಶೋಧನೆ ಮಾಡಿ ಬರ ಬರುತ್ತ ಉನ್ನತಾವಸ್ಥೆಯನ್ನು ಹೊಂದುತ್ತ, ಪ್ರಗತಿ ಶೀಲನಾಗಿ, ನಿಜ ವಾಗಿಯೇ ಆತ್ಮೋದ್ಧಾರ ಹೊಂದುವನು ತನ್ನ ಹೊರಗೆ ದೇವನಿರುವ ನೆಂದು ಅವನನ್ನು ಪೂಜಿಸುತ್ತ ಹೋದರೆ, ಎಂದೆಂದು ಆತ್ಮೋದ್ಧಾರ ವಾಗದು. ತಾನು ಬೇರೆ, ದೇವ ಬೇರೆ, ಆವನನ್ನು ತಾನು ಸರಿಗಟ್ಟು ವದು, ಎಂದೂ ಸಾಧ್ಯವಿಲ್ಲೆಂದು ಮಾನವನ ಕಲ್ಪನೆಯಾಗುವದು. ಇದು ತೊಲಗಲಿಕ್ಕೆ ಭಕ್ತ ದೇಹಿಕ ಲಿಂಗಸ್ಥಲವೆಂಬುದೊಂದೇ ಉಪಾ ಯವು ಉಂಟು.

ಈ ಒಂಬತ್ತು ಸ್ಥಳಗಳಲ್ಲಿ ಲಿಂಗ (ಜ್ಞಾನ) ದಲ್ಲಿ ನಿಷ್ಠೆಯುಳ್ಳವ ನಾಗಿ ಪೂರ್ವಾಶ್ರಯದಿ ನಿರಸನಗಳನ್ನು ಹೊಂದಿ ಭಕ್ತದೇಹಿಕ ಲಿಂಗ ಸ್ಥಳವೆಂದು ಒಳಿತಾಗಿ ನಂಬಿ ನಡೆಯುತ್ತ ಹೋದರೆ ಮಹೇಶ್ವರನು ತನ್ನ ಆಚಾರ ಪೂರ್ಣತ್ವ ಲಿಂಗ (ಗುರುಲಿಂಗ) ದಲ್ಲಿ ಬೆರೆಯಲಿಕ್ಕೆ ಒಳಿತಾಗಿ ಸಹಾಯವಾಗುವದು.

## ಮಹೇಶ್ವರನ ಲಿಂಗಸ್ಥಲಗಳು

ಇವೂ ಸಹ ಒಂಬತ್ತೇ ಇರುವವು :— (೧) ಕ್ರಿಯಾಗಮ; (೨) ಭಾವಾಗಮ; (೩) ಜ್ಞಾನಾಗಮಗಳನ್ನು ಹೊಂದಿ; (೪) ಸಕಾಯ (೫) ಅಕಾಯ (೬) ಪರಕಾಯಗಳಿಂದ, ಲಿಂಗವನ್ನು ಪೂಜಿಸಿ (೭) ಧರ್ಮಾಚಾರ, (೮) ಭಾವಾಚಾರ, (೯) ಜ್ಞಾನಾಚಾರ ಪಡೆ ಯಬೇಕೆಂದುದೇ ಆಗಿರುತ್ತವೆ. ಮಹೇಶ್ವರನು ಆಚಾರಲಿಂಗದಲ್ಲಿಯೇ ಬೆರೆಯಬೇಕೆಂಬುದು, ಸುಸ್ಪಷ್ಟವಾಗಿ ಕಂಡುಬರುತ್ತದೆ. ಗುರುಲಿಂಗ ವೆಂದರೆ ಆಚಾರಲಿಂಗವೇ! ಆಚಾರವೇ ಗುರು ಎಂದು ಹೇಳಿದುದು, ಇದ ಕ್ಕಾಗಿಯೇ! ಅಂತೇ ಅವನು ಈಶ್ವರನಿಗಿಂತ ಮಿಗಿಲಾದವನು. ಎಂದೇ ಅರಿತು ಅವನನ್ನು ಮಹೇಶ್ವರನೆಂದು ಹೇಳಿರುವರು.

ಮಹೇಶ್ವರತ್ವವು ಸಾಮಾನ್ಯವಾದುದಲ್ಲ. ಅದು ಸಹಜವಾಗಿ ಸಿಕ್ಕು ವದಲ್ಲ. ಬಹುಯತ್ನಪೂರ್ವಕವಾಗಿ ನಡೆಯಬೇಕಾಗುವದು. ಆಗಮಾತ್ರ ಅವನು ತನ್ನ ಲಿಂಗದಲ್ಲಿ ಬೆರೆಯುವನು. ನೋಡಿರಿ :—

(೧) ಕ್ರಿಯಾಗಮ ಸ್ಥಳ :— ಸತ್ಕ್ರಿಯಗಳನ್ನು ಮಾತ್ರ ತನ್ನಲ್ಲಿ ಬರಮಾಡಿಕೊಳ್ಳುವದಕ್ಕೆ ಕ್ರಿಯಾಗಮವೆಂದು ಅನ್ನುವರು. ದುಷ್ಕ್ರಿಯೆಗಳನ್ನು (ಅಲ್ಲದ ಕಾರ್ಯಗಳನ್ನು) ಅವನು ಹೊಡೆದು ಹಾಕಲೇಬೇಕು. ಇದೇ ಇಷ್ಟವಿಡಿದು ಅನಿಷ್ಟ ವರ್ಜಿಸುವದೆಂಬುದು. ಭವಿಸಂಗ ಬಿಡುವದೆಂದರೂ ಇದೇ! ಅವನು ಸ್ವಾರ್ಥಕ್ಕೆ ಬಲಿಯಾಗಿ, ಸುಳ್ಳು, ಕಳವು, ಕೊಲೆ ಹಾದರ ಮೊದಲಾದ ಯಾವದಕ್ಕೂ ಆಶ್ರಯವೀಯಲಾಗದು. ಹೀಗಾದಾಗ ಮಾತ್ರ ಅವನು ಕ್ರಿಯಾಗಮವನ್ನು ಮಾಡಿಕೊಂಡಂತೆ ಆಗುವದು.

(೨) ಭಾವಾಗಮ :— ಭಾವಶುದ್ಧವಿರದಿದ್ದರೆ ಅವನಿಂದ ಸತ್ಕ್ರಿಯಗಳನ್ನು ಬರಮಾಡಿಕೊಂಡು, ಅವನ್ನಷ್ಟೇ ಆಚರಿಸುವದು, ಎಂದೂ ಆಗದ ಮಾತು. ಆ ಕಾರಣ ಮಹೇಶ್ವರನು ಸದ್ಭಾವನೆಯನ್ನು ತಾಳಿ, ಯಾವಾಗಲೂ ಅವನ್ನು ಅಗಲದೇ ಕೂಡಿಕೊಂಡಿರಲೇಬೇಕು.

(೩) ಜ್ಞಾನಾಗಮ ಸ್ಥಳ :— ಹಾಗೆ ಸದ್ಭಾವನೆ ನೆಲೆಗೊಳ್ಳಲಿಕ್ಕೆ ಮಹೇಶ್ವರನು ತನ್ನ ಅಜ್ಞಾನವನ್ನೆಲ್ಲ ವಚನಶಾಸ್ತ್ರದಿಂದ ಕಳೆದುಕೊಂಡು, ಒಳ್ಳೇ ಜ್ಞಾನಯುತನಾಗಿರುವದು ಅತ್ಯವಶ್ಯವು. ಈ ಮೇರೆಗೆ ಜ್ಞಾನಾರ್ಜನೆ ಮಾಡಿಕೊಂಡು, ಪ್ರಮಥರ ಮಾರ್ಗದಲ್ಲಿ ಮುಂದುವರಿಯುತ್ತ ಹೋಗುವದೇ ಜ್ಞಾನಾಗಮ ವೆನ್ನಿಸುವದು.

(೪) ಸಕಾಯ ಸ್ಥಳ :— ಸತ್‌ಕ್ರಿಯಾಗಮ ಮಾಡಿಕೊಂಡು ತದನುಸಾರ ಕಾಯ ಮೂಲಕವಾಗಿ ಸದಾಚಾರಿಯಾಗಿ ವರ್ತಿಸಬೇಕೆಂಬುದೇ ಸಕಾಯ ಸ್ಥಳವು.

(೫) ಅಕಾಯ ಸ್ಥಳ :— ಕಾಯವಲ್ಲದುದೇ ಅಕಾಯ. ಅದೇ ಮನ ಇಲ್ಲವೇ ಭಾವ. ಕಾಯ ಮೂಲಕವಾಗಿ ಸತ್‌ಕಾರ್ಯಗಳು ಒದಗಬೇಕಾದರೆ ಅವಕ್ಕೆ ಭಾವಾಗಮ ಮಾಡಿಕೊಂಡು, ಒಳ್ಳೆಯ ಮನ ಭಾವಗಳನ್ನು ಆ ಕ್ರಿಯೆಗಳಿಗೆ ಜೊತೆಗೊಳಿಸದಿದ್ದರೆ ಅವು ಈಡೇರಲಾರವು. ಅಂತೇ ಈ ಅಕಾಯವೆಂಬ ಸ್ಥಳವು ನಿರ್ಮಿತವಾಗಿದೆ.

( ೬ ) ಪರಕಾಯ ಸ್ಥಳ :— ಅತ್ಯಂತ ಶ್ರೇಷ್ಠವಾದುದು ನಮ್ಮಲ್ಲಿರುವದೆಂದರೆ ಜ್ಞಾನವೇ. ಆದುದರಿಂದ ಅದೇ ಪರಕಾಯವೆನ್ನಿಸುವದು. ಜ್ಞಾನಾಗಮದಿಂದ ಹೊಂದಿದ ನಿರ್ದೋಷವಾದ ಜ್ಞಾನದ ಯೋಗದಿಂದಲೇ ಆಚಾರಲಿಂಗವನ್ನು ಪೂಜಿಸಬೇಕಾಗುವದು. ಆದುದರಿಂದಲೇ ಈ ಪರಕಾಯ ಸ್ಥಳದ ನಿಯೋಜನೆಯಾಗಿದೆ.

( ೭ ) ಧರ್ಮಾಚಾರ ಸ್ಥಳ :— ತನ್ನ ಹಾಗೂ ಅನ್ಯರ ಉದ್ಧಾರ ಸಾಧ್ಯವಾಗುವಂತೆ ವರ್ತಿಸುವ ಮಾರ್ಗವೇ ಧರ್ಮವು. ಕ್ರಿಯಾಗಮ ಹೊಂದಿ ಕಾಯದ್ವಾರವಾಗಿ ಯಾವಾಗಲೂ ಧಾರ್ಮಿಕತನದಿಂದ ವರ್ತಿಸುವದೇ ಧರ್ಮಾಚಾರ ಸ್ಥಳವು.

( ೮ ) ಭಾವಾಚಾರ ಸ್ಥಳ :— ಭಾವಾಗಮಹೊಂದಿ, ಮನೋಭಾವಗಳಿಂದ ( ಮನಃಪೂರ್ವಕವಾಗಿ ) ಆಚಾರಲಿಂಗವನ್ನು ಪೂಜಿಸುವದೇ ಧರ್ಮಾಚಾರ ಸ್ಥಳವು.

( ೯ ) ಜ್ಞಾನಾಚಾರ ಸ್ಥಳವು :— ನಿಜವಾದ ಜ್ಞಾನಾಚಾರಹೊಂದಿ ಆ ಜ್ಞಾನಪೂರ್ವಕವಾಗಿಯೇ ( ಅಜ್ಞಾನದ ಲವಲೇಶವೂ ಕೂಡ ಇರದಂತೆ) ಆಚಾರಲಿಂಗ ಪೂಜಿಸುವದೇ ಜ್ಞಾನಾಚಾರವೆನ್ನಿಸುವದು.

ಈ ಮೇರೆಗೆ ಮಹೇಶ್ವರನು ಕ್ರಿಯಾ ಭಾವ ಜ್ಞಾನಗಳಲ್ಲಿ ಪರಿಶುದ್ಧನಾಗಿ, ಕಡೆತನಕ ಆಚರಿಸಬೇಕಾಗುವದು. ಇದೇನೂ ಸುಲಭವಾದುದೇನೂ ಅಲ್ಲ.

---

# ಜಾಗತಿಕ ಅನುಭವ ಮಂಟಪ.
# ಅದರ ಮಹತ್ವ ಮತ್ತು ಜಯದ ಗುಟ್ಟು.

ಲೇ:- ಅನ್ನದಾನೀಶ್ವರ ವಿರಕ್ತಮಠ ಶಿಕ್ಷಕರು, ಬಸವೇಶ್ವರ ಟ್ರೇನಿಂಗ ಕಾಲೇಜ
ಬಾಗಲಕೋಟ



## ( ೧ ) ಇಂದಿನ ಜಾಗತಿಕ ಪರಿಸ್ಥಿತಿ.

ಇಂದು ಜಗತ್ತು ಅಶಾಂತಿಯ ಮಡುವಿನಲ್ಲಿ, ತಿರುಗಣಿ ಮಡುವಿನಲ್ಲಿ ಸಿಕ್ಕಬಿದ್ದಿದೆ. ವಿಜ್ಞಾನವು ಜಗತ್ತಿನ ರಾಷ್ಟ್ರಗಳನ್ನು ಸಮೀಪಕ್ಕೆ ತಂದಿರುವದಾದರೂ ಆ ರಾಷ್ಟ್ರಗಳ ಹೃದಯಗಳನ್ನು ಸಮೀಪಕ್ಕೆ ತರುವದಾಗಲಿಲ್ಲ. ಪ್ರಬಲ ರಾಷ್ಟ್ರಗಳಲ್ಲಿ ದೈವೀ ಶಕ್ತಿಯು ಮೂಡಲಿಲ್ಲ. ತದ್ವಿರುದ್ಧವಾಗಿ ಆಸುರೀ ಶಕ್ತಿಯು ಬೆಳೆಯತೊಡಗಿದೆ. ಜಗತ್ತಿನ ಅಮೋಘ ಸಂಸ್ಕೃತಿ ನಾಗರಿಕತೆಗಳನ್ನೇ ಧ್ವಂಸಮಾಡುವ ಆಟಂ ಬಾಂಬ ಹೈಡ್ರೋಜನ್ ಬಾಂಬು ( ಜಲಜನಕ ಬಾಂಬು ) ಮುಂತಾದ ವಿಧ್ವಂಸಕ ಅಸ್ತ್ರದಳ ಶೋಧವಾಗಿ ಜಗತ್ತಿನ ಹಾಹಾಕಾರವನ್ನು ಹೆಚ್ಚಿಸಲಿಕ್ಕೆ ಕಾರಣಗಳಾಗಿವೆ. ಜಗತ್ತಿನ ವಿನಾಶಕ್ಕೆ ದುನುಷ್ಯನ ಬುದ್ಧಿಯು ದುರ್ವ್ಯಯವಾಗುತ್ತಿರುವದು ಅತ್ಯಂತ ಶೋಚನೀಯವೂ ದೇವರ ನಿಯಮಕ್ಕೆ ಅವಮಾನಕಾರಕವೂ ಆಗಿ ತೋರುತ್ತದೆ. ಆದರೆ ಸ್ಮಶಾನದಲ್ಲಿಯೇ ಶಿವನ ಲೀಲೆಯು ಕಂಗೊಳಿಸುವದು ಶಿವ ಸಂಕಲ್ಪವಿರಬಹುದೇ? ಈ ರಹಸ್ಯವನ್ನರಿಯುವ ಲಿಂಗದೃಷ್ಟಿಯು ಜಗತ್ತಿಗೆ ಬೇಕಲ್ಲವೇ? ಅಮೇರಿಕಾ, ರಶಿಯಾ, ರಾಷ್ಟ್ರಗಳು ತಮ್ಮೊಳಗಿನ ಮತಭೇದಗಳನ್ನು ಸೌಹಾರ್ದವಾಗಿ ಬಗೆಹರಿಸಿಕೊಳ್ಳಲೊಲ್ಲವು. ದುರ್ಬಲ ರಾಷ್ಟ್ರಗಳಾಗಿರುವ ಜರ್ಮನಿ, ಜಪಾನ, ಇಂಡೋಚಾಯನಾ, ಮುಂತಾದ ದೇಶಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಅಮೇರಿಕಾ, ರಶಿಯಾ, ಫ್ರಾನ್ಸ, ಇಂಗ್ಲಂಡಗಳು ಬಯಸುವದನ್ನು ಬಿಡಲೊಲ್ಲವು. ವಸಾಹತುವಾದ, ಸಾಮ್ರಾಜ್ಯವಾದ, ಬಂಡವಳಸಾಹಿತ್ಯ, ಮುಂತಾದ ಪ್ರತಿಗಾಮೀ ಶಕ್ತಿಗಳು ಇನ್ನೂ ಪೂರಾ ಕಳೆಗುಂದಿಲ್ಲ.

ಸಂಯುಕ್ತ ರಾಷ್ಟ್ರಸಂಘದ ಭದ್ರತಾಮಂಡಳವು ಪ್ರಬಲ ರಾಷ್ಟ್ರಗಳ ಹಟಮಾರಿತನದಿಂದ ಅಭದ್ರವಾಗಿದೆ. ಸಾಮ್ಯವಾದ, ಸಂಘವಾದಗಳು ( ರಶಿಯಾ ದೇಶದವು ) ವ್ಯಕ್ತಿಯ ಅಮೂಲ್ಯ ಸ್ವಾತಂತ್ರ್ಯವನ್ನೇ ಹರಣ ಮಾಡಹತ್ತಿವೆ. ಅಹಿಂಸೆ ಪ್ರೇಮಗಳ ಕಾಂತಿಯನ್ನೇ ಕಳೆಯ ತೊಡಗಿವೆ. ಜಗತ್ತಿನ ಪ್ರಬಲ ಧರ್ಮಪಥಗಳಾಗಿರುವ ಬುದ್ಧ ಧರ್ಮ, ಮಹಮ್ಮದೀಯ ಧರ್ಮ, ಕ್ರಿಸ್ತಧರ್ಮ, ಮತ್ತು ಹಿಂದು ಧರ್ಮಗಳು ಸಂಯುಕ್ತ ರಂಗವನ್ನು ರಚಿಸಿಕೊಳ್ಳದೇ ಅಸಹಕಾರದಿಂದ ತೊಳಲುತ್ತಿವೆ. ವಿನಾಶದತ್ತ ಸಾಗಿರುವ ಜಗತ್ತನ್ನು ರಕ್ಷಿಸಲಿಕ್ಕೆ ಬೇಕಾದ ಸತ್ವಾಂಶಗಳನ್ನು ಕಳೆದು ಕೊಳ್ಳತೊಡಗಿವೆ.

ಪೌರ್ವಾತ್ಯರ ಸಂಸ್ಕೃತಿಯಲ್ಲಿ ರಭಸದ ಚಟುವಟಿಕೆ ಮತ್ತು ಸಂಘಟನಾಚಾತುರ್ಯವಿಲ್ಲದಿದ್ದರೆ, ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಅಂತರಂಗ ಜೀವನದ ಮಾಧುರ್ಯ ಮತ್ತು ಸೌಂದರ್ಯಗಳಿಲ್ಲ. ಪಾಶ್ಚಾತ್ಯದೇಶಗಳು ವೈಜ್ಞಾನಿಕ, ಆರ್ಥಿಕ, ಶೈಕ್ಷಣಿಕ ರೀತಿಗಳಿಂದ ಪ್ರಗತಿಹೊಂದುತ್ತಿದ್ದರೆ, ಪೌರ್ವಾತ್ಯದೇಶಗಳು ಹಿಂದೆ ಬಿದ್ದಿವೆ. ಪ್ರಗತಿಹೊಂದಿದ ರಾಷ್ಟ್ರಗಳಲ್ಲಿ ಹಿಂದುಳಿದ ದೇಶಗಳನ್ನು ಮುಂದೆತರುವ ವಿಶಾಲ ಹೃದಯವಿಲ್ಲ. ಮುತ್ಸದ್ದಿಗಳ ಮಹಾತಲೆಗಳು ರಾಷ್ಟ್ರೀಯ ಎಲ್ಲೆಯನ್ನು ಮೀರಿ ವಿಶ್ವೈಕ ದೃಷ್ಟಿಯಿಂದ ವಿಚಾರಿಸಲೊಲ್ಲವು. ಒಂದು ವೇಳೆ ವಿಚಾರಿಸಿದರೂ ಕ್ರಿಯಾರಂಗಕ್ಕೆ ತಮ್ಮ ಸಹಾನುಭೂತಿಯನ್ನು ಇಳಿಸಲಾರವು. ಜಗತ್ತಿನ ಜನರಲ್ಲಿ ಶಾಂತಿಯಿಲ್ಲ ನೆಮ್ಮದಿಯಿಲ್ಲ. ಪರಸ್ಪರ ವ್ಯವಹಾರದಲ್ಲಿ ಪ್ರಾಮಾಣಿಕತೆಯಿಲ್ಲ ವಿಶ್ವಾಸವಿಲ್ಲ. ಪೂರ್ಣತ್ವದ ಕಡೆಗೆ ಒಯ್ಯುವ ನವಸಮಾಜದ ವ್ಯವಸ್ಥೆಯಿಲ್ಲ ಒಟ್ಟಾರೆ ಜಗತ್ತು ಇಂದು ಅವನತಿಯ ದಾರಿಯನ್ನು ತುಳಿಯುತ್ತ ನಿಜವಾದ ಮಾರ್ಗದರ್ಶಕ ಪರಮಾನುಭವವಿಲ್ಲದೆ ತೊಳಲುತ್ತ ಬಳಲುತ್ತ ನಡೆದಿರುವದು.

### ( ೨ ) ಜಾಗತಿಕ ಅನುಭವ ಮಂಟಪದ ದೈವೀಶಕ್ತಿ.

ಪೂರ್ವೋಕ್ತ ಅನಿಷ್ಟ ಪರಿಸ್ಥಿತಿಯನ್ನು ದೂರಮಾಡಲಿಕ್ಕೆ ಜಾ

ಜನಜೀವನದ ಬಹಿರಂಗ ನಾಗರಿಗತೆ, ಜನಜೀವನದ ಅಂತರಂಗ ಸಂಸ್ಕೃತಿ, ಈ ಅಂತರಂಗ ಬಹಿರಂಗಗಳೆರಡನ್ನೂ ಸುಂದರ ಮಾಡಲಿಕ್ಕೆ ಕಲ್ಯಾಣದ ಅನುಭವ ಮಂಟಪವು ಜಗದಂಣ ಬಸವಂಣನ ಕಾಲದಲ್ಲಿ ಮಹಾ ಸಾಹಸದ ಮಂಗಲ ಕಾರ್ಯಮಾಡಿ ಜಗತ್ತಿಗೆ ತೋರಿಸಿರುವದು. ಈಗಲೂ ಆ ಮಹಾಬೆಳಕನ್ನು ಅದು ಬೆಳಗಬಲ್ಲದು.

ಜಗತ್ತಿನ ಸಮಸ್ಯೆಗಳನ್ನು ಪರಿಹರಿಸಲಿಕ್ಕೆ ಬೇಕಾದ ಮಹಾನುಭಾವವನ್ನು ಅದು ಕರುಣಿಸುವದು. ಈ ಮಹಾನುಭಾವ ವಿದ್ಯೆಯು ಶರಣ ಶರಣೆಯರ, ಮಹಾಶಿವಯೋಗಿಗಳ, ಮಹಾತ್ಮರ ವಚನ ಭಾಂಡಾರದ ರಹಸ್ಯವಾಗಿದೆ.

## (೩) ಕನ್ನಡದ ಅಮೃತದ ವಚನಗಳು.

ಕನ್ನಡದ ಅಮರ ವಚನಗಳು ಎಂದೂ ನಾಶವಾಗದ ಅಮೌಲ್ಯ ತತ್ವಗಳನ್ನು ಗರ್ಭೀಕರಿಸಿಕೊಂಡಿವೆ. ವಚನಗಳು ಮಾನವ ಜನಾಂಗದ ನಿಜವಾದ ಸಂಪತ್ತು. ಮಾನವೀ ಜನಾಂಗಕ್ಕೆ ಆದರ್ಶಪೂರ್ಣ ಮಾದರಿಯಂತಿರುವ ಮಹಾತ್ಮರ ಪೂರ್ಣ ವ್ಯಕ್ತಿತ್ವವೇ ವಚನಗಳಲ್ಲಿ ಮೈದಳೆದು ನಿಂತಿದೆ.

ಶರಣ ಶರಣೆಯರು ಐಕ್ಯರಾಗಿ ಎಂಟುನೂರು ವರ್ಷಗಳಾದರೂ ಬಾಳಿನಲ್ಲಿ ಬೆಳಕು ಬೀರಲೆಂದೂ, ಶಾಶ್ವತ ತತ್ವಗಳ ಬೆಳಕಿನಲ್ಲಿ ಪ್ರಪಂಚದ ದಾರಿ ಸುಗಮವಾಗಿರಲೆಂದೂ, ಮಾನವ ಪ್ರಪಂಚಕ್ಕೆ ಅಮೃತ ವಚನಗಳನ್ನು ಬಿಟ್ಟು ಹೋಗಿರುವರು. ಅವರನ್ನು ಎಷ್ಟು ಸ್ಮರಿಸಿದರೂ ಕಡಿಮೆಯೇ ಸರಿ. ಇನ್ನೂ ಬೆಳಕಿಗೆ ಬಾರದೆ ಅಸಂಖ್ಯಾತ ವಚನಗಳು ಕರ್ನಾಟಕದಲ್ಲಿ ಇವೆ. ಅವು ಬೆಳಕಿಗೆ ಬಂದರೆ ಇಡೀ ಪ್ರಪಂಚವೇ ಕಲ್ಯಾಣ ಕಾಣುವದು. ವಚನಗಳು ಶಕ್ತಿಯು, ಸ್ಫೂರ್ತಿಯು, ಧೈರ್ಯದ ಕಲ್ಯಾಣದ ಗಣಿಗಳಾಗಿವೆ. ಅವು ಜಗತ್ತಿನಲ್ಲಿ ಪ್ರಸಾರವಾದರೆ ಇಡೀ ಜಗತ್ತಿನಲ್ಲಿಯೇ ತುಂಬಬಹುದು. ದೀನ, ದುರ್ಬಲ, ದಲಿತರಿಗೂ, ಸ್ತ್ರೀಪುರುಷರಿಗೂ, ಬಾಲಕರಿಗೂ, ಮುದುಕರಿಗೂ, ಎಲ್ಲ ಜನಾಂಗದವರಿಗೂ ಎಲ್ಲ ಮತದವರಿಗೂ ವಚನಗಳು ಸ್ವಾಗತಮಾಡುತ್ತವೆ. ಅಮರ

ಸಂದೇಶ ಕೊಡುತ್ತವೆ. ಶಾರೀರಕ, ಮಾನಸಿಕ, ಆಧ್ಯಾತ್ಮಿಕ ಸ್ವಾತಂತ್ರ್ಯದ ಮಂತ್ರವನ್ನು ಮೌನವಾಗಿ ಘೋಷಿಸುತ್ತವೆ ಜನರ ಮನಸ್ಸಿಗೆ ಶಾಂತಿ ವ್ಯವಹಾರದಲ್ಲಿ ಸಭ್ಯತೆ ಪ್ರಾಮಾಣಿಕತೆಗಳು, ಮತ್ತು ಮಾದರಿಯ ನವ ಸಮಾಜದ ರಚನೆ— ಈ ತತ್ವಗಳು ಸದಾ ವಚನಗಳಲ್ಲಿ ಮಿನುಗುತ್ತಿವೆ. ನಕ್ಷತ್ರಗಳು ಚಿಕ್ಕವಾಗಿ ಮಿನುಗುತ್ತಿದ್ದರೂ ನಿಜವಾಗಿ ದೊಡ್ಡವಿರುವಂತೆ ವಚನಗಳು ಕಣ್ಣಿಗೆ ಸಣ್ಣವಾಗಿ ಕಂಡರೂ ಹಿರಿಯ ಭಾವ, ವಿಚಾರ, ಆಚಾರ, ಉಚ್ಚಾರ, ದೃಷ್ಟಿ ಮುಂತಾದ ಜಗದುದ್ಧಾರಕ ಶಕ್ತಿಗಳಿಂದ ದೊಡ್ಡವಾಗಿಯೇ ಇವೆ. ವೇಳೆಗೆ ಅತ್ಯಂತ ಮಹತ್ವವಿರುವ ಉದ್ಯೋಗದಲ್ಲಿ ತೊಡಗಿದ ಇಂದಿನ ಸುಧಾರಕ ಜಗತ್ತಿಗಂತೂ ಚಿಕ್ಕ ವಚನಗಳು ಸಂಜೀವಿನಿಯಂತಿರುತ್ತವೆ. ಕನ್ನಡಿಯಂತಿರುವ ಕನ್ನಡದ ಅಮೃತ ವಚನಗಳು ಅನುಭವ ಮಂಟಪದ ಪ್ರಾಣವು. ಜೀವ ಜೀವಾಳವು. ಇಂಥ ಅನುಭವ ಮಂಟಪವು ಜಗತ್ತಿನ ದೃಷ್ಟಿಗೆ ಕಂಗೊಳಿಸಿದರೆ, ಅದರ ಉಪಯೋಗವನ್ನು ಮಾನವರು ಮಾಡಿಕೊಳ್ಳುವಂತಾದರೆ, ವಿಶ್ವ ಶಾಂತಿಯು ಸ್ಥಾಪಿತವಾಗುವದರಲ್ಲಿ ಸಂದೇಹವೇ ಇಲ್ಲ.

### ( ೪ ) ಜಾಗತಿಕ ಅನುಭವ ಮಂಟಪದ ಜಯದ ಗುಟ್ಟು.

ಜಾಗತಿಕ ಅನುಭವ ಮಂಟಪವನ್ನು ಸ್ಥಾಪಿಸುವ ಮೊದಲು ಭಾರತದ ತುಂಬೆಲ್ಲ ಅನುಭವ ಮಂಟಪಗಳು ಸ್ಥಾಪಿಸಲ್ಪಡಬೇಕು. ಭಾರತೀಯ ಕೇಂದ್ರ ಅನುಭವ ಮಂಟಪವು ಎಲ್ಲ ಪ್ರಾಂತೀಯ ಮಂಟಪಗಳನ್ನು ಸಾಗಿಸಿಕೊಂಡು ಹೋಗಬೇಕು. ಈಗ ಅಚ್ಚಾದ ಮತ್ತು ಅಚ್ಚಾಗದೇ ಇದ್ದ ಎಲ್ಲ ವಚನ ಗ್ರಂಥಗಳು ಸಿಗುವಂತೆ ಒಂದು ಕೇಂದ್ರ ಗ್ರಂಥಾಲಯವು ಸ್ಥಾಪಿಸಲ್ಪಡಬೇಕು. ಅಚ್ಚಾದ ವಚನ ಗ್ರಂಥಗಳ ಶುದ್ಧ ಪ್ರತಿಗಳು ಮತ್ತು ಅನೇಕ ಚಿಕ್ಕ ದೊಡ್ಡ ಆಕಾರದ ಪುಸ್ತಕಗಳು ಸಿದ್ಧವಾಗಬೇಕು. ಅವು ಎಲ್ಲ ಪ್ರಾಂತೀಯ ಮಂಟಪಗಳಲ್ಲಿ ಇರಬೇಕು. ಐತಿಹಾಸಿಕ ಸಂಶೋಧನೆ ನಡೆದು ಅಚ್ಚಾಗದ ವಚನಗಳು ಅಚ್ಚು ಮಾಡಲ್ಪಡಬೇಕು. ಶುದ್ಧ ಪ್ರತಿಗಳ ಭಾಷಾಂತರವು ಎಲ್ಲ ಭಾಷೆಗಳಲ್ಲಿ ಆಗಬೇಕು. ಕೇಂದ್ರ ಸಂಸ್ಥೆಯು ಮಹಾ ಸಾಹಸದ ಕಾರ್ಯಗೈಯುತ್ತಿರುವ ಕ್ರಿಸ್ತೀ ಮಿಶನ್‌ಗಳಂತೆ ಚಟುವಟಿಕೆಯುಳ್ಳದ್ದಿರಬೇಕು. ಮತ್ತು ಬಲಿಷ್ಠ ಸರ್ವಾಂಗ ಸುಂದರವೂ ಇರಬೇಕು ದೈನಿಕ, ಸಾಪ್ತಾಹಿಕ, ಮಾಸಿಕ ಪತ್ರಿಕೆಗಳು ಹೊರಡಬೇಕು ದೊಡ್ಡ ಪ್ರಚಾರಕ ತಂಡ ಬೇಕು. ವಚ

ಗಳಿಗೆ ತಿಳಿಯುವಂಥ ರೀತಿಯಲ್ಲಿ ಅರ್ಥ ಬರೆಯಬೇಕು. ಅನುಭಾವಿಗಳಿಗೆ ಅರ್ಥ ಬರೆಯುವದನ್ನು ಒಪ್ಪಿಸಬೇಕು. ಪಂಡಿತರು, ಕವಿಗಳು, ತತ್ವ ಜ್ಞಾನಿಗಳು, ಸಾಹಿತಿಗಳು, ಪ್ರಚಾರಕರು ವಚನಗಳ ಅರ್ಥವನ್ನು ಪ್ರಚಾರ ಮಾಡಬೇಕು.

ಇತಿಹಾಸ ಸಂಶೋಧಕ ಮಂಡಲ ಮತ್ತು ಅನುಭವಿಗಳ ಶಿಸ್ತಿನ ತಂಡ ಇವೆರಡು ಅದ್ಭುತ ಕಾರ್ಯ ಮಾಡಬಲ್ಲವು. ಕೆಲವು ವಚನಗಳ ತತ್ವಗಳಿಗೆ ದೇಶ, ಕಾಲ, ಪರಿಸ್ಥಿತಿಯ ರೂಪ ಕೊಟ್ಟು ಹೇಳಬೇಕಾಗು ವದು. ರಾಮಕೃಷ್ಣ ಮಿಶನ್‌ದವರಂತೆ ಕಾರ್ಯ ನಡೆದರೆ ಬಹು ಪ್ರಯೋ ಜನ. ವಚನಗಳ ತತ್ವಗಳಂತೆ ಧೈರ್ಯದಿಂದ ನಿಷ್ಠೆಯಿಂದ ನಡೆಯುವ ನಡೆಯುವ ಆಚಾರದ ತೇಜಸ್ಸಿನ ಶುದ್ಧ ತಂಡವು ತಯಾರಾದರೆ ಅದೇ ಜಗ ತ್ತನ್ನು ಉದ್ಧರಿಸಬಲ್ಲದು. ವಚನಗಳ ತತ್ವಗಳನ್ನು ಅಭ್ಯಾಸ ಮಾಡುವ ತಿಳಿ ದುಕೊಳ್ಳುವ, ಮತ್ತು ಜೀವನದಲ್ಲಿ ಅರಗಿಸಿಕೊಳ್ಳುವ ವಾಯು ಮಂಡಲವು ತಯಾರಾದರೆ ಅಂದು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅನುಭವ ಮಂಟಪಗಳನ್ನು ಸ್ಥಾಪಿಸಿ ಮುಂದೆ ಜಾಗತಿಕ ಅನುಭವ ಮಂಟಪವನ್ನು ಸ್ಥಾಪಿಸಬಹುದು. ಇದು ಒಂದು ದಾರಿ. ಜಾಗತಿಕ ಅನುಭವ ಮಂಟಪವು ಜಗತ್ತಿನ ಎಲ್ಲ ಭಾಷೆಗಳಲ್ಲಿ ವಚನಗಳನ್ನು ಭಾಷಾಂತರಿಸಬೇಕು. ಜಾಗತಿಕ ಅನುಭವ ಮಂಟಪವು ವರ್ಷಕ್ಕೊಮ್ಮೆ ಒಂದು ದೇಶದಲ್ಲಿ ಸೇರಬೇಕು. ಅದರ ಕೇಂದ್ರ ಕಚೇರಿಯು ಅಮೇರಿಕೆಯಲ್ಲಾಗಲೀ, ಇಂಗ್ಲಂಡದಲ್ಲಿಯಾಗಲೀ, ಅನುಕೂಲವಿದ್ದ ಮಧ್ಯ ಸ್ಥಳದಲ್ಲಾಗಲೀ ಇರಬೇಕು.

ಎರಡನೇ ದಾರಿಯೆಂದರೆ:— ಸ್ವಾಮಿ ವಿವೇಕಾನಂದರಂಥ ವ್ಯಕ್ತಿಯು ತಯಾರಾಗಿ ಪರದೇಶಗಳಲ್ಲಿ ವಚನ ಸಂಸ್ಕೃತಿಯನ್ನು ಬೀರಿ ನಂತರ ಭಾರತದಲ್ಲಿ ಕಾರ್ಯ ಪ್ರಾರಂಭಿಸಬಹುದು. ಹೇಗೆ ಮಾಡಿದರೂ ಈ ಸೂತ್ರವನ್ನು ನೆನಪಿನಲ್ಲಿಡಬೇಕು.

ಎಲ್ಲ ಧರ್ಮಗಳ ಪ್ರತಿನಿಧಿಗಳೊಡನೆ ಪ್ರೇಮಾದರ ವಿಶ್ವಾಸಗಳಿಂದ ಸಾಗಬೇಕು. ಗುಣಗ್ರಾಹಕತೆ, ಕೂಡಿನಡೆಯುವ ಗುಣ, ಉದ್ಯೋಗ ಶೀಲತೆ, ಸಂಘಟನೆ, ಬಂಧುಭಾವ ಇವು ಎಲ್ಲಿದ್ದರೂ ಸ್ವೀಕರಿಸಬೇಕು. ಧಾರ್ಮಿಕ ಸಹಿಷ್ಣುತೆಯೂ, ನಮ್ರತೆಯೂ ಅದ್ಭುತ ಕಾರ್ಯ ಮಾಡು ತ್ತವೆ. ಈ ಸೂತ್ರವೇ ವಿಜಯದ ರಹಸ್ಯವು.

---

# ಕಲ್ಯಾಣ.

( ಶ್ರೀ ಆನಂದಕವಿ – ಕುರುಗುಂದ )

ಕಲ್ಯಾಣ ಬೇಕೆಂದು ಜಗವೆಲ್ಲ ಬಯಸುವದು
ಸಲ್ಲಲಿತ ಪರಹಿತಕೆ ಕಲ್ಯಾಣ ತುಳುಕುವದು ।
ನಿಲ್ಲದಲೆ ಸ್ವಾರ್ಥದಲಿ ಮುಳುಗುವಗೆ ಕಲ್ಯಾಣ ಕನಸಿನೊಳು
ಕಾಣಬಹುದೆ?

ಬಲ್ಲಿದರು ಬಸವೇಶ ಬುದ್ಧ ಪೈಗಂಬರರು
ನಲ್ಮೆಯಿಂದಾತ್ಮವನು ಸೇವೆಯೊಳಗರ್ಪಿಸುತೆ ।
ಒಳ್ಳೊಳ್ಳೆ ದೇವರಂ ಹಿಂದಟ್ಟಿ ವಿಶ್ವದೊಳ್ ಪೂಜ್ಯತೆಯ
ಪಡೆದರಲ್ತೆ ?

ಘನಮಹಿಮ ರಾಮನಂ ಹಲಕೆಲವು ನೆನೆಯುವರು
ಹನುಮನಂ ಪ್ರತಿಯೊಂದು ಹಳ್ಳಿಯೊಳು ಪೂಜಿಪರು ।
ಹನುಮನವ ಸವಿಸಿರುವ ಹನುಮನಾ ಸೇವೆಯದು ರಾಮನಿಂ
ಪೂಜ್ಯಮಲ್ತೆ ?

ಸೇವೆಯಾ ಸೊಬಗನ್ನು ಬಣ್ಣಿಸಲ್ ಬರ್ಪುದೇ ?
ಭೂವಿನುತ ಸೇವೆಯಿಂ ಪುಣ್ಯಮದು ಬೇರಿಹುದೆ ?
ಸೇವೆಯನ್ನುಳಿದವಗೆ ಕಲ್ಯಾಣಕರವಾದ ನಿಜಶಾಂತಿ
ದೊರೆಯಬಹುದೇ ?

# ಮನೆ ಮುರುಕ.

ಕೊಲ್ಲು, ಕೊಲ್ಲು, ಕೊಲ್ಲು, ಯಮದೇವ, ಎಲ್ಲರನು ಕೊಲ್ಲು.
ಕೊಲ್ಲುವುದೆ ನಿನ್ನ ಆಟ, ಸೊಲ್ಲನು ಇಲ್ಲೆನಿಸುವುದೆ ನಿನ್ನ ಮಾಟ,
ಧರ್ಮಹೀನನು ನೀನು, ನಿರ್ಮೂಲಮಾಡುವುದಕಾಗಿಯೆ ನೀನು,
ಕರ್ಮಜೀವಿಗಳು ನಾವು, ನಿನ್ನ ಹುಚ್ಚಾಟದ ಕೈಗೊಂಬೆಗಳು ನಾವು.
ನೀ ಮಾಡಿದುದು ತಪ್ಪು, ನೆಪ್ಪ ಮಾಡೆಂದು ಹೇಳುವಾ ಶಕ್ತಿ ಯಮಗಿಲ್ಲ,
ಇಂದಲ್ಲ, ಇನ್ನೊಂದು ದಿನ ನಿನ್ನಾಸೆಯ ಪೂರೈಸಿಕೊ ಎನುವ ಯುಕ್ತಿಯನು ನಾವರಿತಿಲ್ಲ

ಹಲವು ಸಾಮ್ರಾಟರನು, ಹಲವು ಸನ್ಯಾಸಿಗಳನು, ಸಾಧುಗಳನು ಕೊಂದೆ,
ವೃದ್ಧರನು, ವನಿತೆಯರನು, ಯುವಕರನು ಅರೆದು ನುಂಗಿದೆ
ಶಿಶು ಪಶುಗಳೆನ್ನದೆ, ಎಲ್ಲರನು ಹಿಂದುಮುಂದು ನೋಡದೆ ತಿಂದೆ,
ಹೆಮ್ಮೆಯಲಿ, ಉಸಿರಾಡುವ ಎಲ್ಲ ಜೀವವು ನನಗೇ ಆಹುತಿಯು ಎಂದೆ.

ನಿನ್ನ ಕೊಲ್ಲುವ ಹಿರಿಮೆಯನು ಕೇಳಿರುವೆನಾದರೂ
ಸಾವೇನೆಂಬುದು ನಾನರಿತಿರಲಿಲ್ಲ
ಕೈ ಸುಟ್ಟರಲ್ಲವೆ ಬಿಸಿಯು ತಾಗುವುದು?

ಮೊನ್ನೆ ನಿನ್ನ ಕೆಟ್ಟಕಣ್ಣು ನನ್ನರಮನೆಯ ಮೇಲೆ ಬಿತ್ತು
ನನ್ನ ಸಿರಿಯ ನೋಡಿ ನಿನಗಾಯ್ತು ಕಿಚ್ಚು,
ಉಕ್ಕುವಾ ಪ್ರೇಮ, ಉಕ್ಕುವಾ ನಗೆ, ಉಕ್ಕುವಾ ತೃಪ್ತಿಯನು ಕಂಡು ನಿನ್ನ ಕಿಚ್ಚು ಇಮ್ಮಡಿಯಾಯ್ತು.
ಸೇಡ ತೀರಿಸುವೆನೆಂದು ನನ್ನಿನಿಯನನು ಆರಿಸಿದೆ,
ನಾ ಕಾವಲಿರಲು ನಿನ್ನಾಟ ನಡೆಯಲಿಲ್ಲ.
ನಾ ಸೋಲಿನೆಂಬ ಛಲದ ಮೇಲೆ ಹೊಂಚುಹಾಕಿದ ಸಂಚುಕಾರನು ನೀನು
ನನ್ನೊಡೆಯನೊಂಟಿಯಾಗಿರುವ ಸಮಯವನೆ ಕಾಯ್ದು
ಅವನುಸಿರ ಕದ್ದೊಯ್ದ ಕಳ್ಳನು ನೀನು.

ಯಮುರಾಯ ಈಗೇನಾಯ್ತು ಬಲ್ಲೆಯಾ?
ನನ್ನ ಹೊಂಗನಸು ಒಡೆದೊಡೆದು ಹೋಯ್ತು, ನನ್ನ ಮನೆ ಮಸಣ
ವಾಯ್ತು
ನನ್ನೊಲುಮೆಯ ಜೀವನ ಹಾಳಾಯ್ತು, ನನ್ನ ಸಿರಿಗುಡಿಸಲು
ಬರಿದಾಯ್ತು,
ನನ್ನ ಪ್ರೇಮದ ಬತ್ತಿ ಆರಿ ಹೋಯ್ತು, ನನ್ನ ನಗೆಯು ಉಕ್ಕಿ ನಂದಿ
ಹೋಯ್ತು
" ಚನ್ನಾ, ಚಂದಿರಾ " ಎಂದು ಕೂಗೆ " ಆ " ಎನ್ನುವವರು
ಇಲ್ಲದಂತಾಯ್ತು,
" ಅಪ್ಪಾ " ಎಂಬ ಮುದ್ದು ಸೊಲ್ಲೆ ಅಡಗಿ ಹೋಯ್ತು,
ಹೋಯ್ತು, ಹೋಯ್ತು, ನನ್ನ ಎಲ್ಲವು ಹಾಳಾಯ್ತು.
ಮನೆಮುರುಕಾ! ನನಗೆ ಇಷ್ಟಾದರೂ ನಿನಗೆ ಬಂದದೇನು?
ನಿನ್ನ ಅಳಿದ ಜೀವದ ರಾಶಿಯಲಿ ಒಂದು ಜೀವ ಹೆಚ್ಚಾಯ್ತು,
ನಿನ್ನ ಕದ್ದ ಭಂಡಾರಕೆ ಮತ್ತೊಂದು ರತ್ನ ಬಿತ್ತು
ಇನ್ನೇನಾಯ್ತು ಹೇಳು?
ಸಾಕು, ನಿನ್ನ ಜಯವನು ನೋಡಿ ಹಿಗ್ಗದಿರು.
ಒಮ್ಮೆ, ಬಾ, ಇಳಿದು ಬಾ ಕೆಳಗೆ
ಅಳಿದವರ ನೋಡಿ ನಲಿವುದಿರಲಿ, ಉಳಿದವರ ಬಾಳ
ನೋಡು, ಅವರ ಗೋಳ ಕೇಳು,
ನಿನ್ನ ಕಲ್ಲೆದೆಯು ಕರಗುವುದು
ನಿನ್ನ ಕಲ್ಲು ಮನವು ಮರುಗುವುದು
ಇಲ್ಲ, ಇಲ್ಲ ನೀನು ಪರಮ ಕ್ರೂರಿ, ಕರುಣೆಗು ನಿನಗು
ಬಲು ದೂರ
ಹಾಳು ಮಾಡುವುದೆ ನಿನ್ನ ಕೆಲಸ
ಕೊಲ್ಲುವುದೆ ನಿನ್ನ ಕಸಬು
ನಿನ್ನ ಕಟ್ಟಿ ಬರವು ಎಂದಿಗೂ ಹಿಂಗದು
ಕೊಲೆಪಾತಕಾ ಮನೆ ಮುರುಕಾ
ಕೊಲ್ಲು, ಕೊಲ್ಲು, ಕೊಲ್ಲು, ಯಮದೇವ ಎಲ್ಲರನು
ಕೊಲ್ಲುವುದೆ ನಿನ್ನಾಟ, ಸೊಲ್ಲನಿಲ್ಲಿಸುವುದೆ ನಿನ್ನ ಮಾಟ,

— ಚಂದಿರಾ.

# ಸತ್ಕಾಯದ ಸದುಪಯೋಗ.
# ಅಥವಾ ಕಾಯಕದ ಕೊಸರು.

( ಲೇ:- ಶ್ರೀಯುತ ಸಿ. ನಾ. ಮಹಾಂತಣ್ಣವರು ಮು. ಧಾರವಾಡ )



ಶಿವಶರಣರ ವಚನವಾಙ್ಮಯವನ್ನು ಪಚಿಸಿ ಪಚಿಸಿದವರಿಗೆ ಆ ಮಹಾತ್ಮರ ಅರುಹು ಆಚಾರ ಭಕ್ತಿ ಕ್ರಿಯೆ ಸುಜ್ಞಾನಾನುಭಾವಗಳೂ, ಸತ್ಕಾಯಕ, ಸತ್ಯ, ಅಹಿಂಸೆ, ಬಂಧುಭಾವ, ಶಿವಭಾವ, ಸಮದೃಷ್ಟಿ, ನಿಸ್ವಾರ್ಥ ನಿರಾಶೆ, ನಿರಂಗಾದಿ ಲಿಂಗಾನುಸಂಧಾನಗಳೂ ಹೊಳೆಯದೆ ಇರವು. ಈ ವಚನಭಾಂಡಾರದ ನಿಕ್ಷೇಪವನ್ನು ನಿಸ್ವಾರ್ಥದಿಂದೊಡಗೂಡಿದ ನಿಜ ದೃಷ್ಟಿಯೆಂಬ ಅಂಜನಹಚ್ಚಿ ತೆಗೆದು, ವೀರಶೈವದ ಸ್ವತ್ತಾದ ಎರಡೆಂಭತ್ತು ಕೋಟಿ ಭಾಂಡಾರದ ಬೆಳಗನ್ನು ಬೆಳಗಿದವರೂ ಬೆಳಗುವವರೂ ಯಾರು ? ಎಂಥ ಕಷ್ಟನಷ್ಟಗಳೊದಗಿದರೂ, ಇನ್ನೂ ಹೆಚ್ಚು ಮಹಾಬೆಳಗಿನ ಪ್ರಕಾಶವನ್ನು ಕೊಡುವ ಆತುರವುಳ್ಳವರು ಯಾರು ? ಶಿವಶರಣಾಂಶಿಕರಾದ ರಾವಬಹಾದ್ದೂರ ಹಳಕಟ್ಟಿಯವರಲ್ಲವೆ ? ಶ್ರೀ ಬಸವಣ್ಣನವರ ವಚನವಾಙ್ಮಯದ ವಚನಾಮೃತವನ್ನು ಪಂಡಿತ ಪಾಮರರೂ ಆಬಾಲವೃದ್ಧರೂ ಅಷ್ಟೇಕೆ ? ಇಡೀ ವಿಶ್ವವೇ ಪಾನಮಾಡಿ, ಜ್ಞಾನವಂತರಾಗಿ ಜ್ಞಾನ ಪ್ರಕಾಶದ ಬೆಳಗಿನ ಬೆಳಗಾದ ಮಹಾಬೆಳಗಿನ ನಿಜಾನಂದವನ್ನು ಪಡೆಯಲೆಂದು, ಹಿಂದಿನ ವೇದ್ಯರು ಬರೆದಿಟ್ಟ ಶ್ರೀ ಬಸವಣ್ಣನವರ ಸಟೀಕ ವಚನಗಳನ್ನು ಅಚ್ಚುಹಾಕುವ ಅದ್ಭುತಕಾಯಕವನ್ನು ವಹಿಸಿರುವದು ನಮ್ಮೆಲ್ಲರ ಪುಣ್ಯವಲ್ಲದೆ ಮತ್ತೇನು ? ಈ ಬಗ್ಗೆ ಅವರು ಅಚ್ಚುಹಾಕುವ ಕಾರ್ಯಕ್ಕೆ ಎಷ್ಟರಮಟ್ಟಿಗೆ ಧನಸಹಾಯ ಬೇಕೆಂಬದನ್ನು ಹೋದ ಅಗಸ್ಟ ತಿಂಗಳ ಶಿವಾನುಭವ ಪತ್ರಿಕೆಯಲ್ಲಿ ವ್ಯಕ್ತಗೊಳಿಸಿದ್ದಾರೆ.

ವೀರಶೈವ ಬಂಧುಗಳೇ ವಿಶ್ವಪ್ರೇಮಿಗಳೇ ಇಂದು ಅಲ್ಲಲ್ಲಿ ಸಣ್ಣಾಗಿ ಚನ್ನಾಗಿ ಪ್ರಚಾರಪಡುವ ಶಿವಶರಣರ ವಚನಗ್ರಂಥಗಳೂ ಅವರ

ಜೀವನ ಚರಿತ್ರಗಳೂ ಶಿವಾನುಭವ ಸಮ್ಮೇಲನಗಳೂ ಜ್ಞಾನದಾಸೋಹ ಗಳೂ ಸಂಕೀರ್ತನಗಳೂ ಅಕ್ಕನ ಬಳಗಗಳೂ ಶಿವಾನುಭವ ಮಂಟಪ ಗಳೂ ಶರಣಸಾಹಿತ್ಯ ಸಾವಧಾನ ಶಿವಾನುಭವ ಪತ್ರಿಕೆಗಳೂ ವೀರಶೈವ ವಾಚನಾಲಯಗಳೂ ಫ್ರೀ ಬೋರ್ಡಿಂಗಗಳೂ ವಿಮರ್ಶಾತ್ಮಕ ಗ್ರಂಥ ಗಳೂ ಯುನಿವ್ಹರ್ಸಿಟಿಯವರ ಸಹಕಾರ ಸಹಾನುಭೂತಿಗಳೂ ತಲೆದೋ ರಲು ಯಾವ ಮಹನೀಯರು ಕಾರಣರೋ ಆ ಮಹನೀಯರಿಂದಲೂ ಇನ್ನಿತರ ಸಹಾಸಿಗರ ಸಂಸ್ಥೆಗಳಿಂದಲೂ ಶಿವಶರಣರ ನಡೆನುಡಿಗಳು ಆದರ್ಶಪ್ರಾಯವಾಗಿರುವವೆಂದು ಹೇಳಲು ಆನಂದವೆನಿಸುತ್ತದೆ.

ಶ್ರೀ ಬಸವಣ್ಣನವರ ಉಕ್ತಿಯಂತೆ ಕಾಯಕವೇ ಕೈಲಾಸವೆಂದು ಮಾತು ಸಧ್ಯಕ್ಕೆ ನಿದರ್ಶನಕ್ಕೆ ಬರಹತ್ತಿದೆ. ಆದರೆ ನಾವೆಲ್ಲರೂ ಒಂದಿ ಲ್ಲೊಂದು ಕಾಯಕವನ್ನು ಕೈಕೊಂಡಿರುತ್ತೇವಷ್ಟೇ? ಅದು ಸದೋಷವಾ ಗಿದ್ದರೆ ಆ ದೋಷವನ್ನು ತೆಗೆದು ಹಾಕಿ ನಾವು ಕೈಕೊಂಡ ಕಾಯಕ ವನ್ನೇ ಸತ್ಕಾಯಕವನ್ನು ಮಾಡುವದು ನಮ್ಮ ನಮ್ಮ ಕೈಯಲ್ಲಿಯೇ ಅದೆ. ನಾವು ವಹಿಸಿದ ಕಾಯಕದಲ್ಲಿ ಸತ್ಯ, ಅಹಿಂಸೆ, ಪ್ರಾಮಾಣಿಕ ತನ, ನಿಷ್ಕಪಟತೆ, ನಿರ್ವಂಚನೆಗಳೂ ಭಕ್ತಿಭಾವವೂ ಅನುಭಾವವೂ ಬೇಕೇ ಬೇಕು. ಇಂಥಕಾಯಕವೇ ಕೈಲಾಸವಾಗಿ ಶಿವಶರಣರ ಸನ್ನಿಧಿ ದೊರೆತು ಅವರ ಸಂಗದಿಂದ ಕೂಡಲಸಂಗಮನ ಅರುಹು ಅರಿವುಗಳು ಆಗುವದು ಅಗಾಧವಲ್ಲ.

ಶ್ರೀ ಬಸವಣ್ಣನವರ ವಚನಗಳಲ್ಲಿ ಎಷ್ಟೋ ಬೆಡಗಿನ ವಚನಗಳಿ ರಬಹುದು. ಅಂತರಂಗದಲ್ಲಿ ಅಡಗಿದ ಶಿವತತ್ತ್ವದ ವಚನಗಳಿರಬಹುದು. ಸತ್ಕ್ರಿಯೆ, ಸದಾಚಾರ ಸುಜ್ಞಾನ ಮಹಾಜ್ಞಾನ ಶೂನ್ಯ ನಿಶ್ಶೂನ್ಯ ಸರ್ವ ಶೂನ್ಯ ದರ್ಶಕವಚನಗಳಿರಬಹುದು. ಅರುಹಿನ ಕುರುಹುದೋರುವ ವಚ ನಗಳಿರಬಹುದು. ಅವರ ಮಹಾ ಮನೆಯೊಳು ಎಲ್ಲ ಶಿವಶರಣರು, ಶ್ರೀ ಪ್ರಭುದೇವರು ಶ್ರೀ ಸಿದ್ಧರಾಮರೊಡನೆ ಮಹಾಪಾದಪೂಜೆ, ಮಹಾ ಲಿಂಗಾರ್ಚನೆ, ಮಹಾಲಿಂಗಾರ್ಪಿತವಾದ ಮಹಾಪ್ರಸಾದಗಳನ್ನು ಅನುಭ ವಿಸಿ ಅನುಭಾವಿಸಿ, ಕಂಡುನೋಡಿ ನಿರ್ಧರಿಸಿ ನಿಜವಲ್ಲಿ ನಿಬ್ಬೆರಗಾಗಿ ನಿಜಾನಂದ ದರ್ಶಕಗಳಾದ ವಚನಗಳಿರಬಹುದು. ಇಂಥ ವಚನಗಳ

ರ್ಶನಕ್ಕೆ ತಂದರೆ ತಪ್ಪಾಗಲಿಕ್ಕಿಲ್ಲ. ಶ್ರೀ ಬಸವಣ್ಣನವರು, ಪ್ರಭುದೇವ ಸಿದ್ಧರಾಮ, ಹಡಪದ ಅಪ್ಪಣ್ಣ, ಮಡಿವಾಳ ಮಾಚಿದೇವ, ಚನ್ನಬಸವಣ್ಣ ರೊಡನೆ ಸಮರಸ ಸುಖಾನುಭವಿಗಳಾಗಿ, ಆನಂದವು ಹೊರಹೊಮ್ಮಿ ಶ್ರೀ ಪ್ರಭುದೇವರು ಹೋಗುವಕಾಲಕ್ಕೆ " ಆದಿಯನರುಹಿದ ಅನಾದಿಯ ತೋರಿದ, ಇಹವ ಕೆಡಸಿದ, ಪರವ ನಿಲಿಸಿದ ಘನವ ತೋರಿದ, ಮನವ ಸಂತವಿಟ್ಟು ಅನುವತೋರಿ ತನುವ ಮರಸಿ ಮಹವನರುಪಿದ ಪೂರ್ವಾ ಶ್ರಯ ಹಿಂದಕ್ಕೆ ತೂರಿ ಮುಂದಣ ಸಂದೇಹವ ಬಿಡಿಸಿದ ಕೂಡಲಸಂಗ ಮದೇವಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನುತಿ ರ್ದೆನು. "

ಆಹಹ! ಎಂಥಗೂಢವಾದ ಗೋಪ್ಯವಾದ ರಹಸ್ಯವುಳ್ಳ ವಚನ ವಿದು! ವೀರಶೈವದ ಸಾರವನ್ನೇ ಸ್ವಲ್ಪದರಲ್ಲಿ ಸವಿಸ್ತಾರವಾಗಿ ಹೇಳುವ ದಲ್ಲ! ಇಂಥ ವಚನಗಳ ವಿಸ್ತಾರಾರ್ಥದ ಮಹತ್ವವು ಎಷ್ಟಿದೆಂಬುದನ್ನು ವಾಚಕರೇ ಊಹಿಸಲಿ. ಇವರಂತೆ ಅನೇಕ ವಚನಗಳನ್ನು ಉದಾಹರಿಸ ಬಹುದು.

ಇರಲಿ, ಇದೀಗ ನಮ್ಮ ಮಹನೀಯರು ಕೈಕೊಂಡ ಸಟೀಕಾ ಶ್ರೀ ಬಸವೇಶ್ವರ ವಚನಗಳನ್ನು ಅಚ್ಚುಹಾಕುವದಕ್ಕೆ ನಾವೆಲ್ಲಸೂ ಶಿವ ಭಾಗಿಗಳಾಗಿ ಶಿವ ಕಾರ್ಯಕ್ಕೆ ಒಮ್ಮನಸ್ಸಿನಿಂದ ನಾವಿಡಿದ ಸತ್ಕಾಯಕ ದಲ್ಲಿ! ಒಂದುವರ್ಷದ ಉತ್ಪನ್ನ ಅಂದರೆ ಹೋದ ದಿಪಾವಳಿಯಿಂದ ಈ ದೀಪಾವಳಿಯವರೆಗೆ ಕಷ್ಟಾರ್ಜಿತ ಹಣದ ಆಥಾವೆಯನ್ನು ಅಜಮಾಸಾಗಿ ತೆಗೆದು ಒಂದು ರೂಪಾಯಿಗೆ ಒಂದುದುಡ್ಡಿನಂತೆ ಲೆಕ್ಕ ಮಾಡಿ ಕಾಯ ಕದ ಕೊಸರೆಂದು ಓಟ್ಟಾಗಿ ದೃಷ್ಟಿಗೆ ನೆಟ್ಟಹಣವನ್ನು ಕಳಿಸಿಯೇ ತೀರು ವೆವು. ಇದಕ್ಕೂ ಹೆಚ್ಚುಹಣವನ್ನು ಸಲ್ಲಿಸಬೇಕೆಂಬ ಕುತೂಹಲವನ್ನು ಶಿವಶರಣರು ತಮ್ಮ ತಮ್ಮ ಭಾಗದಲ್ಲಿ ಬಿಂಬಿಸಿದರೆ ಹೆಚ್ಚು ಧನಸಹಾ ಯವನ್ನು ಮಾಡಬಹುದು. ದೊಡ್ಡ ದೊಡ್ಡ ಶ್ರೀಮಂತರೂ ವತನದಾ ರರೂ ರೈತರೂ ಕಾಮದಾರರೂ ಕಸಬುದಾರರೂ ತಮ್ಮ ತಮ್ಮ ಅನ ಕೂಲತೆಯಂತೆ, ಶಿವನ ಸೊಮ್ಮೆಂದು ಭಾವಿಸಿ ಶಿವನ ಕಾರ್ಯಕ್ಕೆ ಕಾಣಿ ಕೆಯ ಸಲ್ಲಿಸದೆ ಇರಲಾರರೆಂದು ನನ್ನಪೂರ್ಣ ನಂಬಿಗೆ. ಇನ್ನು ಆಗ ತಂದು ಆಗ ಉಣ್ಣುವವರು ಸಹ ಒಂದುರೂಪಾಯಿ ದುಡಿವರೆ ಆ ದುಡಿ

ಮೆಯು ೬೪ ದುಡ್ಡುಗಳಲ್ಲಿ ೬೩ ದುಡ್ಡುಗಳು ೬೩ ಶಿವಶರಣರ ಪ್ರಸಾದವೆಂದು ಭಾವಿಸಿ, ಅವನ್ನೆಲ್ಲ ತಮ್ಮ ಊಟಉಡಿಗೆ ಬಟ್ಟೆಬರೆಗಳಿಗೆ ಉಪಯೋಗಿಸಿ ಉಳಿಮೆಯಾದ ಒಂದು ದುಡ್ಡನ್ನು ಶಿವಶರಣರ ಸೊಮ್ಮೆಂದು ಮುಡುಪಾಗಿ ಇಟ್ಟು, ಕೂಡಿದಷ್ಟು ತಿಂಗತಿಂಗಳಿಗಾಗಲೀ ವರ್ಷಕ್ಕೊಮ್ಮೆಯಾಗಲೀ ಶಿವಾನುಭವ ಸಂಪಾದಕರಿಗೆ ಕಳಿಸುತ್ತ ಹೋದರೆ ಕಳಿಸಿದವರ ಸತ್ಕಾಯಕದಲ್ಲಿ ಪ್ರಗತಿಯಾಗಿ ಯಾವ ತಾಪತ್ರಯವನ್ನೂ ಅವರಿಗೆ ಶ್ರೀ ಬಸವೇಶ್ವರನು ಮಾಡಗೊಡಲಿಕ್ಕಿಲ್ಲೆಂದು ಕೈ ಎತ್ತಿ ಹೇಳಬಹುದು

ಒಂದುವೇಳೆ ಇಂಥ ಸದ್ಭಕ್ತಿಗೂ ಎಡರು ತೊಡರುಗಳೂ ಕಷ್ಟ ನಷ್ಟಗಳೂ ಬಂದರೆ, " ಹರತನ್ನ ಭಕ್ತರನು ಅರೆದು ನೋಡುವ, ಒರೆದು ನೋಡುವ, ಇರಿದು ನೋಡುವ, ತರಿದು ನೋಡುವ, ಕೊರೆದು ನೋಡುವ ಆಗ ಆ ಭಕ್ತನ ನಿಷ್ಠೆಯು ನಿಲುಗಳೆಯದಿದ್ದರೆ ಕರವಿಡಿದೆತ್ತಿಕೊಳ್ಳುವ ನಮ್ಮ ರಾಮನಾಥ " ಎಂಬ ವಚನಾನುಸಾರವಾಗಿ ಶಿವಭಾವಿಗಳಾದ ನಾವೆಲ್ಲರೂ ಈ ಕೊಸರುಗಾಣಿಕೆಯ ವ್ರತವನ್ನು ಏಕೆ ಹಿಡಿಯಬಾರದು? ಈಗಿನ ಕಂಟ್ರೋಲ ಕಾಲದಲ್ಲಿ ರೇಶನಿಂಗ ಅಂಗಡಿಯಲ್ಲಿ ಸಾಕಷ್ಟು ಕಾಳು ಸಿಗದ್ದರಿಂದ ರೈತರಹೊರತಾಗಿ ಗುರು ಲಿಂಗ ಜಂಗಮದ ದಾಸೋಹಿಗಳಾಗಿ ಅವರ ಪಾದೋದಕ ಪ್ರಸಾದಗಳನ್ನು ಪಡೆಯುವದು ದುಸ್ತರವಾಗಿದೆ ಯೆಂಬುದನ್ನು ಎಲ್ಲರೂ ಮನಗಂಡಿದ್ದಾಗಿದೆ. ಕಾರಣ ಅತಿ ಸುಲಭವಾದ ಸಾಸಿವೆಕಾಳಿನಷ್ಟು ಭಕ್ತಿಭಾವವೆಂದೆನಿಸುವ ಕಾಯಕದ ಕೊಸರನ್ನು ಸತ್ಕಾರ್ಯಕ್ಕೆ ಸಲ್ಲಿಸುವದು ಪ್ರತಿಯೊಬ್ಬ ಶಿವಭಾವಿಯು ಕರ್ತವ್ಯವು.

ಹನಿಹನಿ ಕೂಡಿ ಹಳ್ಳ, ತೆನಿತೆನಿ ಕೂಡಿ ರಾಶಿ, ಎಂಬಂತೆ ಈ ಸುಲಭೋಪಾಯದ ವ್ರತವನ್ನು ಯಾರೂ ಬಿಡಬಾರದೆಂದು ಮತ್ತೆ ಮತ್ತೆ ಒತ್ತಿಹೇಳುವೆ. ಈ ಸಂಸಾರದಲ್ಲಿ ದುಃಖವಿಲ್ಲದೆ ಸುಖವಿಲ್ಲ. "ನಡೆನುಡಿ ಸೊಲ್ಲೆಡೆಯಲ್ಲಿ ಒಂದು ಕಿಚ್ಚು, ಮಡದಿ ಪುರುಷರೆಡೆಯಲ್ಲಿ ಒಂದು ಕಿಚ್ಚು, ತಡೆದುಂಬ ಎಡೆಯಲ್ಲಿ ಒಂದು ಕಿಚ್ಚು, ಪಡೆದರ್ಥ ಕೆಡುವಲ್ಲಿ ಒಂದು ಕಿಚ್ಚು, ಗಳಿಸಿದ ದ್ರವ್ಯದ ಮೋಹದೆಡೆಯಲ್ಲಿ ಒಂದು ಕಿಚ್ಚು. ಇಂತೀ ಐದು ಕಿಚ್ಚನಿಕ್ಕಿ ಬಾಯಲ್ಲಿ ಮಣ್ಣು ಹೊಯ್ದು ಕೆಡಿಸಿದೆಯಯ್ಯಾ ರಾಮನಾಥಾ" ಎಂಬ ಸಂಸಾರ ಹ್ಯೇಯ ಸ್ಥಳದ ವಚನಾನುಭವವನ್ನು ಮನ

ದಂದರೆ ಭಕ್ತಿಶಕ್ತಿಯಾದ ಕಾಯಕದ ಕೊಸರು ಈ ಕಿಚ್ಚುಗಳನ್ನು ಹೆಸರಿಲ್ಲದೆ ಒರಿಸದೆ ಇರದೆಂಬದು ಸದ್ಭಾವಿಗಳ ಸ್ಪಷ್ಟಾನುಭಾವವು.

ಶಕ್ತಿಯ ರೂಪವೇ ಕಾಯಕವು ಅಥವಾ ಕ್ರಿಯೆಯು. ಈ ಕ್ರಿಯೆಯು ನಿಯತವಾಗಿ ನಡೆದರೆ ಪ್ರಸಾದವು. ಪ್ರಸಾದದ ಬಲವೇ ಬಲವು. ಈ ಪ್ರಸಾದಕಾಯಕ್ಕೆ. ಈ ಪ್ರಸಾದವು ನಮಗೆ ಗುರುಲಿಂಗ ಜಂಗಮ ( ತನು ಮನ ಭಾವ ) ದ ಹಸ್ತ ( ಅನುಗ್ರಹ ) ದಿಂದ ದೊರೆಯಬೇಕಲ್ಲವೇ ? ಅಂದಬಳಿಕ ನಾವು ಮಾಡುವ ಕಾಯಕದಲ್ಲಿಯೂ ಅದನ್ನು ಪಡೆಯುವ ಧನಧಾನ್ಯಗಳಲ್ಲಿಯೂ ಶಿವಭಕ್ತಿಯು ಇರಬೇಕೇ ಆಗುವದು. ಆದ್ದರಿಂದ ಭಕ್ತಿಭಾಂಡಾರಿಯೆನಿಸಿದ ಶ್ರೀ ಬಸವಣ್ಣನವರ ಭಕ್ತಿಭಾವವೂ ಅನುಭಾವವೂ ಅತ್ಯವಶ್ಯವು. ಅಂತೇ ದೇವರದಾಸಿಮಾರ್ಯರು " ಭಕ್ತಿಯ ಬಲ್ಲವರು ನಚ್ಚಿ, ಮಚ್ಚಿ, ಮನವನೊಚ್ಚತಗೊಡುವರು. ಭಕ್ತಿಯನರಿಯದ ಬಲು ಪಾಪಿ ಜೀವಿಗಳು ಕಚ್ಚುವರು ಜೊಗಳುವರು ರಾಮನಾಥಾ " ಎಂದು ಅಂದಿರುವರು. ಇದನ್ನರಿತೇ ಬಸವಣ್ಣನವರು ಬಂದ ಜಂಗಮದಲ್ಲಿ ಬಹ್ವಾನಂದದಿಂದ ಅವರ ತೃಪ್ತಿಗೆಯ್ಯುತ್ತಿದ್ದರು. ಇವರಂತೆ ಉಳಿದ ಶಿವಶರಣರ ಭಕ್ತಿಯೂ ಬೆಳಗುತ್ತಲಿದೆ. ಕಾರಣ ನಾವು ಈ ಕಾಯಕದ ಕೊಸರಿಗೆ ಓಸರಿಸದೆ ಈಶಸೇವೆಯೆಂದು ಭಾವಿಸಿ, ಬಹು ಸಂತೋಷದಿಂದ ಈ ಕೊಸರಿನ ಕಾಣಿಕೆಯನ್ನು ಅವಧರಿಸೋಣ. ಯಾರಾದರೂ ಭಕ್ತಿಯ ಮಹತ್ವವನ್ನು ಅರಿತಿರದಿದ್ದರೆ ಅವರು ಶಿವಶರಣರ ಅನುಭವದ ವಚನವನ್ನು ಆಲಿಸಿಯಾದರೂ ಭಕ್ತಿ ಪಂಥವನ್ನು ಸತ್ಕರಿಸಲೆಂದು ಅತಿ ಸೌಂದರ್ಯದ ಮಾಧುರ್ಯದ ಮನೋಹರದ ಮಾತನ್ನು ಮನಗಾಣಿಸಿದ್ದು ನಮ್ಮೆಲ್ಲರ ಹಿತಕ್ಕಾಗಿಯೇ. " ಕತ್ತೆ ಬಲ್ಲುವೆ ಕತ್ತುರಿಯ ವಾಸನೆಯ ? ತೊತ್ತು ಬಲ್ಲಳೆ ಗುರುಹಿರಿಯರುತ್ತಮರೆಂಬುದ? ಭಕ್ತಿಯನರಿಯದ ವ್ಯರ್ಥ ಜೀವಿಗಳು ನಿಮ್ಮನೆತ್ತಬಲ್ಲರೈ ರಾಮನಾಥಾ " ಎಂದು ಹೇಳಿದ್ದಾಗಿದೆ.

ಮೊದಲು ನುಡಿ, ಆಮೇಲೆ ನಡೆ, ನಡೆನುಡಿಗಳು ಒಂದಾದರೆ ಇದೇ ಜನ್ಮಕಡೆ, ಎಂಬ ಗಾದೆಯ ಮಾತಿನಂತೆ, ಎಂದೂ ಕೇಳದ ಕತೆಯಾದ ಶ್ರೀ ಹೇಮರಡ್ಡಿ ಮಲ್ಲಮ್ಮನ ಕತೆಗೇಳಿದ ಜೀವಭಾವಿಯ ವೃತ್ತಿ ಪಲ್ಲಟಿಸಿ ಶಿವಭಾವದಕಡೆಗೆ ಒಲೆಯಲು ಹಂಬಲಿಸುವದು. ಆದರಲ್ಲಿ ಆ

ಮಹಿಮಳ ನಾಟಕವನ್ನು ಪ್ರತ್ಯಕ್ಷ್ಯ ನೋಡಿದವರಂತೂ ಜೀವಭಾವವು ಪೂರ್ಣ ಇಲ್ಲದಂತಾಗಿ ಶಿವಭಾವದ ಕಳೆಯು ಕಂಡುಬರುವದು. ಮತ್ತೆ ಮತ್ತೆ ಪುರಾಣ ಪ್ರವಚನ ಕೀರ್ತನ ಸಿನೇಮಾಗಳ ಆದರ್ಶವಾದರಂತೂ ಆ ಮಹಿಮಳ ಕಷ್ಟ ನಷ್ಟಗಳೂ ಎಡರು ತೊಡರುಗಳೂ ಮನದಲ್ಲಿ ಮೂಡಿ ಅವಳು ಶ್ರೀ ಮಲ್ಲಿಕಾರ್ಜುನನಲ್ಲಿಯೂ ಗುರುಲಿಂಗಜಂಗಮರಲ್ಲಿಯೂ ಇಟ್ಟ ಭಕ್ತಿಭಾವಗಳು ಶಿವಭಾವದ ಕಳೆಯುಂಟಾದವನಲ್ಲಿಯೂ ತಲೆದೋರಿ ತಾನೂ ನಡೆಯಲು ಪ್ರಯತ್ನಿಸುವನು. ಹಾಗೂ ಆಕೆಗೆ ಮನೆಯವರ ಕಾಟ ಕೂಟಗಳು ಎಷ್ಟಿದ್ದರೂ ಅವಳ ಭಕ್ತಿಯೂ ಅನುಭಾವವೂ ಅಚಲವಾಗದ್ದನ್ನು ಮನದಂದರೆ ಅವಳ ಭಾವದೊಳು ಬಿಂಬಿಸಿದ ಮನದೊಳು ಮೂಡಿ ತನುವಿನೊಳು ವ್ಯಾಪಿಸಿದ ಶಿವಭಕ್ತಿಯ ಬೆಳಗು, ಆಕೆಯ ಚರಿತ್ರದಿಂದ ಸಹೃದಯವನ್ನು ವ್ಯಾಪಿಸುತ್ತದೆ. ಇದಕ್ಕನ್ನವರು ಅನುಭಾವ. "ಅನುಭಾವವಿಲ್ಲದ ಭಕ್ತಿ, ತಲೆಕೆಳಗಪ್ಪುದಯ್ಯ. ಅನುಭಾವವೇ ಭಕ್ತಿಗಾಧಾರ. ಅನುಭಾವವೇ ಭಕ್ತಿಗೆ ನೆಲೆವನೆ. ಅನುಭಾವಿಗಳ ಕಂಡರೆ ತೂರ್ಯಾ ತೂರ್ಯ ಸಂಭಾಷಣೆಯ ಮಾಡದಿದ್ದರೆ ನರಕದಲ್ಲಿಕ್ಕುವ್ಯ ರಾಮನಾಥಾ" ಎಂದು ಶಿವಶರಣರು ಹಾಡಿಕೊಂಡು ತಮ್ಮ ಅನುಭಾವದ ವಚನಗಳ ಫಲವನ್ನು ಸಹ ಹೇಳಿಕೊಂಡಿದ್ದಾರೆ. "ಅನುಭಾವವಿಲ್ಲದೆ ಈ ತನು ನೆಳತಟವಾದುದಯ್ಯ ಅನುಭಾವವೇ ತನುವಿಂಗೆ ಆಧಾರ. ಅನುಭಾವಿಗಳ ಅನುಭಾವ ಮನವಾರೆ ವೇಧಿಸಿದವರಿಗೆ ಜನನವಿಲ್ಲ ನೋಡಾ ರಾಮನಾಥಾ"

ಒಟ್ಟಿನಲ್ಲಿ ಶತ್ಕಾಯಕದಿಂದ ಸದ್ಭಕ್ತಿ, ಸತ್ಕ್ರಿಯೆ, ಸದಾಚಾರ, ಸಮ್ಯಜ್ಞಾನಾನುಭಾವಗಳುಂಟಾಗಿ ಗುರುಲಿಂಗ ಜಂಗಮದ ಒಕ್ಕು ಮಿಕ್ಕ ಪ್ರಸಾದಕ್ಕೆ ತಕ್ಕವರಾಗಿ ಪರಿಣಮಿಸಿ ನಿಜಾನಂದ ನಿತ್ಯ ಸುಖದ ಸುಗ್ಗಿಯೊಳು ಒಗ್ಗಲು ಸತ್ಕಾಯಕವೇ ಮೂಲವೆಂದ, ಮಾನವ ವರ್ಗವು ಮನಗಾಣದೇ ಇರದು. ಈ ಲೌಕಿಕ ಪಾರಮಾರ್ಥಿಕ ಪ್ರಪಂಚಕ್ಕೆ ಸತ್ಕಾಯಕದ ಮಹತ್ವವೂ ಅದರಿಂದುಂಟಾಗುವ ಸುಪರಿಣಾಮಂಗಳೂ ಮನಂಬುಗುವ "ಸತ್ಕಾಯಕದಿಂದ ಬಹು ಜನ್ಮದ ದೋಷ ತಗಲುವದಯ್ಯ. ಸತ್ಕ್ರಿಯೆಯಿಂದ ಕಾಲಕಾಮರ ಭಯ ಹರಿವುದಯ್ಯ, ಸಮ್ಯಜ್ಞಾನದಿಂದ ಮಾಯಾಪಾಕ ಹಿಂದಾಗುವದಯ್ಯ, ಸದ್ಭಕ್ತಿಯಿಂದ ಪಾವನಸ್ವರೂಪರಾಗುವರಯ್ಯ. ಲಿಂಗಾಚಾರದಿಂದ ತನ್ನ ಅಂಗ ಶುದ್ಧವಾಗುವದಯ್ಯ.

ಸದಾಚಾರದಿಂದ ಮನ ಶುದ್ಧವಾಗುವದಯ್ಯ. ಶಿವಾಚಾರದಿಂದ ಧನ ಪ್ರಸಿದ್ಧವಾಗುವದಯ್ಯ. ಗಣಾಚಾರದಿಂದ ನಡೆ ಪರುಷವಾಗುವದಯ್ಯ. ಭೃತ್ಯಾಚಾರದಿಂದ ನುಡಿ ಪರುಷವಾಗುವದಯ್ಯ. ಕ್ರಿಯಾಚಾರದಿಂದ ಕರ್ಮೇಂದ್ರಿಯಗಳು ಪವಿತ್ರವಾಗುವವಯ್ಯ ಜ್ಞಾನಾಚಾರದಿಂದ ಜ್ಞಾನೇಂದ್ರಿಗಳು ಪಾವನವಾಗುವವಯ್ಯ, ಭಾವಾಚಾರದಿಂದ ಕರಣಂಗಳು ನಿಜ ಸ್ವರೂಪವಾಗುವವಯ್ಯ. ಸತ್ಯಾಚಾರದಿಂದ ವಾಯುಗಳು ಮಹಾ ಪ್ರಸಾದವಾಗುವವಯ್ಯ. ಸರ್ವಾಚಾರದಿಂದ ಸರ್ವಾಂಗ ಜ್ಞಾನಜ್ಯೋತಿಯುಪ್ಪುದು ತಪ್ಪದು ನೋಡಾ. ಧರ್ಮಾಚಾರದಿಂದ ಲಿಂಗಾಂಗಗಳು ಏಕವಾಗುವ ವಯ್ಯ, ಇಂತು ಸತ್ಕಾಯಕ ಮೊದಲಾದ ಷೋಡಶ ಕಲೆಗಳ ಸದ್ಗುರು ಮುಖದಿಂದ ಚಿದ್ಘನ ಲಿಂಗವ ಮಾಡಿಕೊಂಡು, ಶೋಡಶ ವರ್ಣವ ಸದ್ಗುರು ಮುಖದಿಂದ ಚಿದಂಗವ ಮಾಡಿಕೊಂಡು, ಸದ್ಗುರು ಮುಖದಿಂದ ಎರಡಳಿದು ಏಕ ಸ್ವರೂಪದಿಂದ ಜ್ಯೋತಿಯು ಜ್ಯೋತಿ ಬೆರೆದಂತೆ, ಬಸವ ಮೊದಲಾದ ಪ್ರಮಥಗಣಂಗಳೆಲ್ಲ ಬಯಲೊಳಗೆ ಮಹಾ ಬಯಲಾದರು ನೋಡಾ ಸಂಗನಬಸವೇಶ್ವರಾ" ಈ ವಚನವು ವ್ಯಕ್ತಗೊಳಿಸುತ್ತದೆ.

ವಚನಾನುಭಾವಿಗಳೂ ಶಿವ ಭಾವಿಗಳೂ ಶಿವಾನುಭವಿಗಳೂ ಶಿವ ಶರಣಾಂಶಿಕರೂ ಭಕ್ತರೂ ಮಹೇಶ್ವರರೂ ಪ್ರಸಾದಿಗಳೂ ಪ್ರಾಣಲಿಂಗಿಗಳೂ ಶರಣರೂ ಅಕ್ಕಗಳೂ ಅಣ್ಣಗಳೂ ಜ್ಞಾನದಾಸೋಹಿಗಳೂ ಶಿವಾನುಭವ ಸಮ್ಮೇಲನಗಳೂ ಸಂಸ್ಥೆಗಳೂ ಶಿವಾನುಭವ ಮಂಟಪಗಳೂ ಇನ್ನಿತರ ಸಂಸ್ಥೆಗಳೂ ನಿರಾಭಾರಿಗಳಾದ ನಿರಂಜನ ಪ್ರಣವ ಸ್ವರೂಪಿಗಳೂ ಈ ಕಾಯಕದ ಕೊಸರಿನ ಕಾಣಿಕೆಯನ್ನು ತಾವು ಸಲ್ಲಿಸುವದಲ್ಲದೆ, ಈ ಕಾಣಿಕೆಯ ವ್ರತವನ್ನು ಆಚರಿಸಲು, ಜಡಜೀವಿಗಳಿಗೂ ಕೂಡ ಸಂಬೋಧಿಸಿ ಶಿವನ ಸೊಮ್ಮಾದ ಕಾಯಕದ ಕೊಸರುಗಾಣಿಕೆಯನ್ನು ಶ್ರೀ ಬಸವೇಶ್ವರನ ಸಟೀಕಾವಚನದ ಅಚ್ಚುಗೆಗೆ ( ಮುದ್ರಣಕ್ಕೆ ) ಸಲ್ಲಿಸುವ ಬುದ್ಧಿಯನ್ನು ಜಗದೀಶನು ದಯಪಾಲಿಸಲೆಂದೂ' ಈ ಮೂಳನ ಈ ವರ್ಷದ ಸತ್ಕಾಯಕದ ಹನ್ನೊಂದು ರೂಪಾಯಿ ಕೊಸರುಗಾಣಿಕೆಯು ಶಿವಾನುಭವ ಸಂಪಾದಕರು ವಹಿಸಿದ ಕಾಯಕಕ್ಕೆ ಸಲ್ಲಲೆಂದೂ ಸಂತೋಷಿಸುತ್ತೇನೆ.

ಮಾತ್ರಂ:—

ವಚನಃ— ಉಸುರಿನೊಳಡಗಿರ್ದ ಶಶಿಧರನ ಕುರುಹನು ವಸುಧ
ಯೊಳು ಪಸರಿಸಿದ ಶ್ರೀ ಬಸವೇಶನ ಸದ್ವಚನ ಸದರ್ಥ ಸವಿಸ್ತಾರಕ
ಒಲಿದು ಒಚ್ಚತಂಗೊಡದವರಾರು ಹೇಳಾ ಸಿದ್ಧೇಶ್ವರಾ ||೧||

ಶರಣರ ವಚನ ಸಾಹಿತ್ಯಸಾರವನು ಸರಿಯಾಗಿ ಒರೆವ ಸ್ಥಿರವಾದ
ಕಾರ್ಯಕ್ಕೆ ನೆರವಾಗದವರಾರೆಂದ ನಮ್ಮ ಸಿದ್ಧೇಶ್ವರಾ ||೨||

ವಿನಯಜಲ, ಕರುಣಜಲ, ಸಮತೆ ಜಲಗಳ ಆಲಯದ ಶೀಲವನ
ಬಲವಾಗಿ ಬೋಧಿಸುವ ಕಾರ್ಯಕ್ಕೆ ಕಾಯಕದ ಕಾಣಿಕೆಯ ಸಲಿಸದಾ
ರಾರು ಹೇಳಾ ಸಿದ್ಧೇಶ್ವರಾ ||೩||

ಸ್ಪರ್ಶನೋದಕದ ಅಭಿಷೇಕ ಆಚಾರಲಿಂಗಕ್ಕೆ, ಅವಧಾನೋದಕಾ
ಭಿಷೇಕ ಗುರುಲಿಂಗಕ್ಕೆ, ಆಪ್ಯಾಯನ ಪ್ರಸಾದ ಆಚಾರಲಿಂಗಕ್ಕೆ ಸಮಯ
ಪ್ರಸಾದ ಗುರುಲಿಂಗಕ್ಕೆ ಕೊಟ್ಟು ಕೊಂಬುವ ಇಷ್ಟಲಿಂಗ ಭಕ್ತರು ಪರಿ
ಣಮಿಸುವ ಸತ್ಕಾಯಕದ ಸೊಗಸಿನ ಸುಗ್ಗಿಯೊಳು ನುಗ್ಗದವರಾರ
ಹೇಳಾ ಸಿದ್ಧೇಶ್ವರಾ ||೪||

ಶರಣರ ಪರಿಪರಿಯ ವಚನಗಳ ಪರಮಾಮೃತವ ಸುರಿಸುರಿದ
ಸುಖಿಸುವ ಪರಮಾರ್ಥ ಬೋಧನೆಗೆ ಸದಮಲಾಂಗದ ಕೊಸರಿನ ಕಾಣಿ
ಕೆಯ ಕರವನೆತ್ತದವರಾರು ಹೇಳೆಂದ ನಮ್ಮ ಸಿದ್ಧೇಶ್ವರ ||೫||
ಮತ್ತಂ :—

ಕಂದಃ— ಈಕ್ಷಿಸೆ ದಾನಾದಿಗಳಂ |
ಭಕ್ಷ್ಯಸುಭೋಜನ ಸುಪೇಯ ||
ಸುಪದಾರ್ಥಗಳಂ ಭಿಕ್ಷೆಯ ನಿಕ್ಕುದರಿಂದಂ |
ಅಕ್ಷಯ ಸುಖದಾ ಕೊಸರಿನ ಕಾಣಿಕೆಮೇಲ್ಕೆ ||೧

ಸತ್ಕಾಯಕದಾ ಧನಮಂ |
ಸತ್ಕಾರ್ಯಂಗಳೊಳು ಸವಿಸುತಿರ್ಪರು ಶರಣರ್ ||
ಮತ್ಕಾಯವ ಸವೆಸುತ್ತಂ |
ಸತ್ಕಾರ್ಯಕೆ ಕಾಣಿಕೆ ಕೊಡುವುದು ಲೇಸಲ್ತೇ ||೨||

ಆದ್ಯರ ವಚನಾನುಭವಂ |
ವೇದ್ಯರ ವಾಙ್ಮಯ ವಿಚಾರ ವಿವೇಚನಂಗಳ್ ||
ಸಾಧ್ಯರ ಸತ್ಕಾಯಕಗಳ್ |
ಬೋಧ್ಯರ ಬುದ್ಧಿಗೆ ಸುಬೋಧವಾಗುವವಲ್ತೇ ||೩||

ಬಸವನ ವಚನಾರ್ಥಂಗಳ್ |
ವಸುಧೆಯ ಪಸರಿಸಿ ಸುಬೋಧವಾಗುವ ತೆರದಿಂ ||
ಜಸವಡೆದು ಜನಾಂಗಕ್ಕಂ |
ಬೆಸೆಯಲಿ ಸದ್ಭಾವ ಸುಮನ ಸಂತಾನದೊಳಂ ||೪||

ಲಿಂಗಸ್ಥಳಕುಳ ತಿಳಿಯುತ |
ಲಿಂಗಸಕೀಲಂಗಳನರಿದಾಚರಿಸುತ್ತಂ ||
ಲಿಂಗಾನುಭವದೊಳಿರುತಂ |
ಲಿಂಗಾಂಗ ಸಮರಸ ಸುಖವ ಸುರಿವಂ ಭಕ್ತಂ ||೫||

---

# ಟೀಕೆ ಟಿಪ್ಪಣೆಗಳು.

(೧) ಹೇಮರಡ್ಡಿ ಮಲ್ಲಮ್ಮ ಮತ್ತು ರಾಜಯೋಗಿ ವೇಮಣ್ಣ (ವೇಮ— ಹೇಮ— ರೆಡ್ಡಿ ವಂಶದ ಇತಿಹಾಸ ):—

ಲೇಖಕರು ಆಸ್ಥಾನ ವಿದ್ವಾನ್ ಎಂ. ಜಿ ನಂಜುಂಡಾರಾಧ್ಯರು. ಗ್ರಂಥವು ಬೆಂಗಳೂರಿನ ಪ್ರಬೋಧ ಪುಸ್ತಕ ಮಾಲೆಯ ೯ ನೆಯ ಪುಸ್ತಕ ವಾಗಿದೆ. ಇದರಲ್ಲಿ ತೆಲುಗು ದೇಶವನ್ನು ವೈಭವದಿಂದ ಆಳಿದ ರೆಡ್ಡಿ ವಂಶದ ರಾಜರ ಇತಿಹಾಸವಿದೆ. ಈ ರಾಜರು ಶ್ರೀಶೈಲ ಸುತ್ತುಮುತ್ತಲಿನ ಕೊಂಡವೀಡು ಪ್ರಾಂತವನ್ನು ಸುಮಾರು ಒಂದುನೂರು ವರ್ಷಗಳವರೆಗೆ ೧೪ನೇ ೧೫ನೇ ಶತಮಾನಗಳಲ್ಲಿ ಆಳುತ್ತಿದ್ದರು. ಇವರು ಪಾಕನಾಟಿರೆಡ್ಡಿ ವಂಶದವರು. ಈ ರೆಡ್ಡಿಗಳ ಸಂಖ್ಯೆಯು ಹೈದರಾಬಾದ ಮತ್ತು ಮುಂಬಯಿ ಕರ್ನಾಟಕದಲ್ಲಿ ದಟ್ಟವಾಗಿ ಪಸರಿಸಿರುತ್ತದೆ. ಇಲ್ಲಿ ಇವರಿಗೆ ಪಾಕ ನಾಕ ರೆಡ್ಡಿಗಳೆಂಬ ಹೆಸರಿದೆ. ಇವರು ವೀರಶೈವರು. ಈ ವಂಶದಲ್ಲಿ ಅನೇಕರು ರಾಜರಾಗಿದ್ದು ಇವರಲ್ಲಿ ರಾಜಯೋಗಿ ವೇಮಣ್ಣನು ತೆಲಗು ಸಾಹಿತ್ಯದಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದಾನೆ. ಇವನ ನೈತಿಕ ವಚನಗಳು ಕನ್ನಡದಲ್ಲಿ ಹೇಗೆ ಸರ್ವಜ್ಞನ ವಚನಗಳು ಪ್ರಸಿದ್ಧವಾಗಿವೆಯೋ ಹಾಗೆ ತೆಲುಗಿನಲ್ಲಿ ಪ್ರಸಿದ್ಧವಾಗಿರುತ್ತವೆ. ಇವನು ಸೋಮಶೇಖರನೆಂಬ ಸದ್ಗುರುವಿನಿಂದ ವೀರಶೈವ ದೀಕ್ಷೆಯನ್ನು ಹೊಂದಿದನೆಂದು ತಿಳಿಯುತ್ತದೆ. ಇವನ ಉಕ್ತಿಗಳಲ್ಲಿ ವೀರಶೈವ ಸಂಸ್ಕೃತಿಯು ಚನ್ನಾಗಿ ಹೊರಪಟ್ಟಿದೆ. ಇವನು ಸರ್ವಜ್ಞನಂತೆ ನಿದಾಕ್ಷಿಣ್ಯ ವೃತ್ತಿಯವನು. ಆದುದರಿಂದ ವೀರಶೈವರನ್ನು ಅಲ್ಲಲ್ಲಿ ಟೀಕಿಸಿರುವನು. ಆದರೂ ಈತನು ವೀರಶೈವನೆಂದು ಗ್ರಂಥಕಾರರು ವಿಪುಲವಾದ ಆಧಾರಗಳನ್ನು ಈ ಗ್ರಂಥದಲ್ಲಿ ಕೊಟ್ಟಿರುತ್ತಾರೆ. ಅವುಗಳನ್ನು ವಾಚಕರು ಲಕ್ಷಿಸುವದು ಅವಶ್ಯವಿದೆ. ವೇಮಣ್ಣನ ಅನೇಕ ಪದ್ಯಗಳನ್ನು ಶ್ರೀ ಬಿ. ಭೀಮರಾಜು ಎಂಬ ಕವಿಯು ಕನ್ನಡದಲ್ಲಿ ಭಾಷಾಂತರಿಸಿದ್ದು ಅವುಗಳನ್ನೇ ನಾವು ಶಿವಾನುಭವ ಪತ್ರಿಕೆಯಲ್ಲಿ ಈಗ ಪ್ರಸಿದ್ಧಿಸುತ್ತಾ ಇದ್ದೇವೆ. ರಾಜಯೋಗಿ ವೇಮಣ್ಣನು ಮೊದಲು ವೇಶ್ಯೆಯರೊಡನೆ ಕಾಲಕಳೆಯುತ್ತಿದ್ದರೂ ಹಿಂದುಗಡೆ ಅವನು

ಜನರಿಗೆ ಸದ್ಬೋಧೆಯನ್ನು ಮಾಡುತ್ತ ಯೋಗಿ ಎಂದು ಪ್ರಸಿದ್ಧನಾದನು. ಈತನು ೧೪೨೨ ರಿಂದ ೧೪೮೦ ರವರೆಗೆ ಇದ್ದನೆಂದು ತಿಳಿಯುತ್ತದೆ. ಈ ಗ್ರಂಥದಲ್ಲಿ ಹೇಮರಡ್ಡಿ ಮಲ್ಲಮ್ಮನ ಚರಿತ್ರೆಯನ್ನು ಗ್ರಂಥಕಾರರು ಬಹು ಸಂಕ್ಷಿಪ್ತವಾಗಿ ವಿವರಿಸಿರುತ್ತಾರೆ. ಈಕೆಯನ್ನು ಶ್ರೀಶೈಲಕ್ಕೆ ದಕ್ಷಿಣದಲ್ಲಿರುವ ಸಿದ್ಧಾಪೂರ ಎಂಬಲ್ಲಿ ಒಬ್ಬ ಜಮೀನುದಾರನ ಮಗನಿಗೆ ಕೊಟ್ಟಿತ್ತು. ಆದರೆ ಆಕೆಯನ್ನು ಗಂಡನ ಮನೆಯವರು ಬಹಳ ಪೀಡಿಸುತ್ತಿದ್ದರು. ಆದರೂ ಅವಳು ಆವರ ಪೀಡೆಗಳನ್ನು ತಾಳಿಕೊಂಡು ನಾಡಿನಲ್ಲಿ ಒಬ್ಬ ಆದರ್ಶ ಗೃಹಿಣಿ ಎಂದು ಪ್ರಸಿದ್ಧಳಾಗಿದ್ದಾಳೆ. ಕನ್ನಡಿಗರು ತಮ್ಮಲ್ಲಿ ಆಗಿ ಹೋದ ಇಂಥ ಮಹಾನುಭಾವರ ಚರಿತ್ರೆಗಳನ್ನು ಅರಿಯುವದು ಬಹು ಅವಶ್ಯವು. ಎಲ್ಲರೂ ಈ ಚಿಕ್ಕ ಪುಸ್ತಕವನ್ನು ಅವಶ್ಯವಾಗಿ ಸಂಗ್ರಹಿಸಕ್ಕದ್ದು. ಗ್ರಂಥದ ಪುಟ ಸಂಖ್ಯೆ ೪೦ ಬೆಲೆ ೮ ಆಣೆ

## ( ೨ ) ಸಂಕ್ಷಿಪ್ತ ಶಿವಪೂಜಾವಿಧಿ

ಇದು ಶರಣ ಸಾಹಿತ್ಯ ಗ್ರಂಥಮಾಲೆಯ ೮ ನೆಯ ಪುಷ್ಪವಾಗಿದೆ ಇದನ್ನು ರಚಿಸಿದವರು ಜಗದಾಚಾರ್ಯ ಶ್ರೀ ಸ್ವಾಮಿ ವಿರೂಪಾಕ್ಷ ಒಡೆಯರ್ ಇವರು ಇದ್ದು ಪ್ರಕಾಶಕರು ಆಸ್ಥಾನ ವಿದ್ವಾನ್ ಪಂಡಿತರತ್ನ ಕೀರ್ತನಾಚಾರ್ಯ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಇದ್ದಾರೆ. ಬೆಲೆ ೧ ರೂಪಾಯಿ ಮತ್ತು ಪುಟಸಂಖ್ಯೆ ೬೧ ಈ ಗ್ರಂಥದಲ್ಲಿ ಕೇವಲ ವೇದ ಮಂತ್ರಗಳ ಆಧಾರದಿಂದಲೇ ಶಿವ ಪೂಜೆಮಾಡುವ ಕ್ರಮವನ್ನು ಸಂಗ್ರಹವಾಗಿ ಹೇಳಲಾಗಿದೆ ಎಂತಲೂ ಈ ಪೂಜೆಯು ಇಷ್ಟಲಿಂಗ ಪೂಜೆಯುಲ್ಲದೆ ಪ್ರಾಣಲಿಂಗ ಮತ್ತು ಭಾವಲಿಂಗಗಳ ಅನುಸಂಧಾನವು ಅಗತ್ಯವೆಂತಲೂ ಪ್ರಸ್ತಾವನೆಯಲ್ಲಿ ಹೇಳಿದ್ದಾಗಿದೆ. ಆರಂಭದಲ್ಲಿ ನಿತ್ಯವಿಧಿಗಳನ್ನು ವಿವರಿಸುತ್ತ ಮುಂದೆ ಪ್ರಾಣಾಯಾಮ ಪದ್ಧತಿ ನೂರೆಂಟು ಶಿವ ನಾಮಗಳು ಹೇಳಲ್ಪಟ್ಟಿರುತ್ತವೆ. ಮುಂದೆ ಪರಿಶಿಷ್ಟ ಪ್ರಕರಣಗಳಲ್ಲಿ ಪ್ರಾಣಲಿಂಗ ಭಾವಲಿಂಗಗಳು ನಿರ್ದೇಶಿಸಲ್ಪಟ್ಟಿರುತ್ತವೆ. ಇದು ಒಂದು ಉಪಯುಕ್ತ ಗ್ರಂಥವಾಗಿರುತ್ತದೆ.

## ( ೩ ) ತುರುಗಾಹಿ ರಾಮಣ್ಣನ ವಚನಗಳು

ಇದು ಶರಣಸಾಹಿತ್ಯ ಗ್ರಂಥಮಾಲೆಯ ೯ನೇ ಗ್ರಂಥವು. ಪ್ರಕಾಶಕರು ಆಸ್ಥಾನ ವಿದ್ವಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಬೆಲೆ ೪ ಆಣೆ.

ಪುಟ ಸಂಖ್ಯೆ ೧೦ ಈ ಗ್ರಂಥವಲ್ಲಿ ೪೫ ವಚನಗಳು ಬಂದಿರುತ್ತವೆ. ಕುರು ಗಾಹಿ ರಾಮಣ್ಣನು ಬಹಳ ಹಿಂದಿನ ಕಾಲದವನು. ಬಹುಶಃ ಬಸವೇ ಶ್ವರನಿಗೆ ಸಮಕಾಲೀನನು. ಆ ಕಾಲಕ್ಕೆ ವಾಡಿಕೆಯಾಗಿದ್ದ ವಚನ ರಚ ನೆಯ ಪದ್ಧತಿ ಅಂದರೆ ಸ್ವಲ್ಪ ಶಬ್ದಗಳಲ್ಲಿ ಅರ್ಥ ಬಾಹುಲ್ಯವಿರುವದು, ತೂಕದಿಂದ ಇಟ್ಟ ಅಚ್ಚಗನ್ನಡ ಬಿಡಿಬಿಡಿ ಶಬ್ದಗಳು, ಇವುಗಳನ್ನು ಇದ ರಲ್ಲಿ ಕಾಣಬಹುದು. ಈ ಗ್ರಂಥದಲ್ಲಿಯ ಅನೇಕ ವಚನಗಳಲ್ಲಿ ವಚನ ಕಾರನು ದನಕಾಯುವ ಕಾಯಕದಲ್ಲಿ ಪಾರಮಾರ್ಥಿಕ ತತ್ವಗಳನ್ನು ಹೆಣೆದಿದ್ದಾನೆ. ಅವುಗಳ ಅರ್ಥ ಮಾಡುವಲ್ಲಿ ಷಟ್‌ಸ್ಥಲ ಶಾಸ್ತ್ರದ ಪೂರ್ಣ ಜ್ಞಾನಬೇಕು. ಇಂಥ ವಚನಗಳು ವೀರಶೈವ ವಾಙ್ಮಯದಲ್ಲಿ ಅನೇಕ ಇದ್ದು ಅವುಗಳ ಅರ್ಥವನ್ನು ವಿವರವಾಗಿ ಬರೆಯುವದು ವಿದ್ವಾಂಸರ ಕಾರ್ಯವಿದೆ. ಆದರೆ ಉಪಲಬ್ಧವಾಗುವ ವಚನಗಳನ್ನು ಈ ಪ್ರಕಾರ ಪ್ರಸಿದ್ಧಿಸುವದು ಬಹು ಅವಶ್ಯವಿದ್ದು ಪ್ರಕಾಶಕರು ಈ ಕಾರ್ಯವನ್ನು ಮಾಡಿದ್ದಕ್ಕೆ ನಾವು ಅವರನ್ನು ಅಭಿನಂದಿಸುತ್ತೇವೆ.

## ( ೪ ) ಆತ್ಮವಿಚಾರ

ಇದೊಂದು ಮಾಸಪತ್ರಿಕೆಯು ಇದ್ದು ಇದರ ಸಂಪಾದಕರು ಶ್ರೀಮಾನ್ ಎಂ. ಎಲ್. ನಾಗಣ್ಣನವರು ಇದ್ದಾರೆ. ಇವರು ಮೈಸೂ ರಲ್ಲಿ ಆತ್ಮವಿಚಾರ ಮಂದಿರವನ್ನು ಸ್ಥಾಪಿಸಿ ಅದರ ದ್ವಾರಾ ಕನ್ನಡ ಮತ್ತು ಇಂಗ್ಲಿಷ ಗ್ರಂಥಗಳನ್ನು ಯಾವಾಗಲೂ ಪ್ರಕಟಮಾಡುತ್ತ ಬಂದಿ ದ್ದಾರೆ. ಅವರು ಆತ್ಮವಿಚಾರ ಪತ್ರಿಕೆಯಲ್ಲಿ ವೀರಶೈವ ಮತ ಮತ್ತು ವೇದಾಂತ ಇವುಗಳಲ್ಲಿರುವ ತಾರತಮ್ಯವನ್ನು ಕುರಿತು ವಿವೇಚಿಸುತ್ತ ವೀರಶೈವ ಮತದ ತತ್ವಗಳನ್ನು ಈ ಸಂಚಿಕೆಗಳಲ್ಲಿ ನಿರೂಪಿಸಿರುವರು ಈ ತತ್ವಗಳನ್ನು ನಿರೂಪಿಸುವಲ್ಲಿ ಅವರುಶಕ್ಯವಿದ್ದಷ್ಟು ಸಂಸ್ಕೃತ ಗ್ರಂಥಗಳ ಆಧಾರಗಳನ್ನ ತೆಗೆದುಕೊಳ್ಳಲು ಯತ್ನಿಸಿದ್ದಾರೆ. ವೀರಶೈವ ಧರ್ಮವು ವೇದಾಗಮೋಪನಿಷತ್ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಷಟ್ ಸ್ಥಲ ಶಾಸ್ತ್ರವನ್ನು ತನ್ನ ವೈಶಿಷ್ಟ್ಯವನ್ನಾಗಿಟ್ಟುಕೊಂಡಿರುತ್ತದೆ. ಈ ವೈಶಿ ಷ್ಟ್ಯವನ್ನು ಜನಸಾಮಾನ್ಯರಲ್ಲಿ ಪ್ರಚಾರಪಡಿಸುವದು ವೀರಶೈವರ ಆದ್ಯ ಕರ್ತವ್ಯವಾಗಿರುವದು. ಈ ಪದ್ಧತಿಯನ್ನು ಉರಿಲಿಂಗಪೆದ್ದಿ, ಗಣಭಾ ಷ್ಯರತ್ನಮಾಲೆಯನ್ನು ರಚಿಸಿರುವ ಗುಬ್ಬಿಮಲ್ಲಣ ಮುಂತಾದವರು ಅನು

ಸಂಗಿಸಿದ್ದಾರೆ. ಬಸವೇಶ್ವರನು ಸಹ ಸಂಸ್ಕೃತ ಧರ್ಮ ಗ್ರಂಥಗಳನ್ನು ತನಗೆ ಆಧಾರವಾಗಿಟ್ಟುಕೊಂಡಿದ್ದಾನೆ. ಆದರೂ ವಿಶಾಲ ಹೃದಯಿಗಳಾದ ಶಿವಶರಣರು ವೇದಾಂತಧರ್ಮದ ಅಕುಂಚಿತ ವಿಚಾರಗಳನು ಯಾವಾಗಲೂ ವಿರೋಧಿಸಿರುವರೆಂಬುದನ್ನು ನಮ್ಮಲ್ಲಿಯ ವಿದ್ವಾಂಸರು ತಿಳಿದುಕೊಳ್ಳುವದು ಅವಶ್ಯವಿದೆ ಒಂದುಕಾಲದಲ್ಲಿ ಮೈಸೂರಪ್ರಾಂತದಲ್ಲಿ ಮತ್ತು ಉತ್ತರಕರ್ನಾಟಕದಲ್ಲಿ ಮುಖ್ಯವಾಗಿ ಸೊಲಾಪೂರ ಭಾಗದಲ್ಲಿ ಬ್ರಾಹ್ಮಣರ ಧರ್ಮತತ್ವಗಳನ್ನು ಅನುಸರಿಸುವ ಒಲವು ಬಹಳ ಹೆಚ್ಚಾಗಿದ್ದಿತು. ಅವುಗಳನ್ನು ಅನುಸರಿಸುವದರಿಂದಲೇ ವೀರಶೈವಧರ್ಮದ ಹೆಚ್ಚಳವೆಂಬ ವಿಚಾರಗಳು ಉಂಟಾಗಿದ್ದವು. ಆದರೆ ಷಟ್‌ಸ್ಥಲಶಾಸ್ತ್ರದ ವ್ಯವಸ್ಥಿತವಾದ ಮತ್ತು ಉದಾತ್ತವಾದ ವಿಚಾರಗಳು ವಚನ ವಾಙ್ಮಯದ ಪ್ರಸಾರದಿಂದ ಜನತೆಯಲ್ಲಿ ಈಚೆಗೆ ರೂಢವಾಗಹತ್ತಿದ್ದು ಸಮಾಜದ ಏಳ್ಗೆಗೆ ಕಾರಣವಾಗದೆ ಇರದು. ಚಾತುರ್ವರ್ಣಗಳು ಯಾವಾಗಲೂ ಭಾರತದಲ್ಲಿ ಅಸ್ತಿತ್ವದಲ್ಲಿರಲಿಲ್ಲ. ಅವು ಬ್ರಾಹ್ಮಣರು ಕೇವಲ ತಮ್ಮ ಸ್ವಾರ್ಥಕ್ಕಾಗಿ ವಿರಚಿಸಿಕೊಂಡ ಗ್ರಂಥಗಳಲ್ಲಿ ಹೆಚ್ಚಾಗಿ ಇದ್ದು ಅವುಗಳ ಬಲಿಗೆ ನಮ್ಮವರು ಬೀಳದೆ ಶುದ್ಧ ಮತ್ತು ಸಾತ್ವಿಕವಾದ ವೀರಶೈವ ಧರ್ಮದ ತತ್ವಗಳನ್ನು ಪ್ರಸಾರ ಪಡಿಸುವದು ವೀರಶೈವರ ಕರ್ತವ್ಯವಾಗಿದೆ ಇವುಗಳಿಗೆ ವಿರೋಧವಲ್ಲದ ತತ್ವಗಳು ಸಂಸ್ಕೃತ ಆಂಧ್ರ ಮುಂತಾದ ಯಾವ ವಾಙ್ಮಯದಲ್ಲಿದ್ದರೂ ಕೂಡ ಅವುಗಳನ್ನು ನಾವು ಆದರಿಸಬೇಕು. ನಮ ಕಡೆಗೆ ಆತ್ಮವಿಚಾರದ ಮೂರು ನಾಲ್ಕು ಸಂಚಿಕೆಗಳು ಬಂದಿದ್ದು ಅವುಗಳಲ್ಲಿಯ ಲೇಖಗಳು ಉಚ್ಚಪ್ರತಿಯವಾಗಿರುತ್ತವೆ. ಇದರ ವಾರ್ಷಿಕಚಂದಾ ೫ ರೂ.ಇದ್ದು ಓದುಗರು ಪತ್ರಿಕೆಯನ್ನು ಅವಶ್ಯವಾಗಿ ಪೋಷಿಸತಕ್ಕದ್ದು.

(೫) ಅನುಭಾವದ ವಚನಗಳು:— ಪುರಾತನ ವಚನಗಳ ಮಾದರಿಯ ಮೇಲೆ ಬರೆದ ವಚನ ಗ್ರಂಥವು ಇದಾಗಿರುತ್ತದೆ. ಈ ಗ್ರಂಥವನ್ನು ಶಿವಶರಣ ವಾಙ್ಮಯ ಪ್ರೇಮಿಗಳಾದ ಶ್ರೀ ಮೂರು ಸಾವಿರಪ್ಪ ಸಾದರಹಳ್ಳಿ ಸಾ. ಹುಬ್ಬಳ್ಳಿ ಇವರು ರಚಿಸಿರುತ್ತಾರೆ. ಈಚೀಚೆಗೆ ಬಹು ಜನರು ಈ ರೀತಿ ವಚನಗಳನ್ನು ಬರೆಯತೊಡಗಿರುವರು. ಇದು ಸುಚಿನ್ಹವು. ಆದರೆ ಇವರಲ್ಲಾರೂ ವಿಷಯುಗಳನ್ನು ತೆಗೆದುಕೊಂಡು ಅವುಗಳ ಬಗ್ಗೆ ಸಂಪೂರ್ಣ ವಿವೇಚನೆ ಮಾಡಿ ವಚನಗಳನ್ನು ರಚಿಸಿದ್ದು ಕಂಡುಬರುವದಿಲ್ಲ ಅವು

ಗಳೆಲ್ಲ ಬಿಡಿ ಬಿಡಿಯಾಗಿ ರಚಿಸಿದವುಗಳಾಗಿರುತ್ತವೆ. ಆದರೆ ಈಗಿನ ಗ್ರಂಥದಲ್ಲಿ ಗ್ರಂಥಕಾರರು ಸಮಗ್ರ ವೀರಶೈವದ ಮುಖ್ಯ ತತ್ವಗಳ ಮೇಲೆ ೧೦೪ ವಚನಗಳನ್ನು ರಚಿಸಿದ್ದಾರೆ. ಪುರಾತನ ಕಾಲದಲ್ಲಿ ಶಿವಶರಣರ ವಚನಗಳಲ್ಲಿ ಕೆಲವೊಂದು ವೈಶಿಷ್ಟ್ಯವಿರುತ್ತದೆ. ಅವರು ಷಟ್‌ಸ್ಥಲ ತತ್ವಗಳ ಅಂತರಂಗಿಕ ಸ್ವರೂಪದ ಪರಿಚಯ ಮಾಡಿಕೊಂಡು ಅವುಗಳಲ್ಲಿಯ ಗೂಢ ಮತ್ತು ಆಳವಾದ ತತ್ವಗಳ ಮೇಲೆ ಪ್ರಕಾಶ ಕೆಡಹಬೇಕೆಂಬ ಉದ್ದೇಶವನ್ನು ತಾಳಿ ವಚನಗಳನ್ನು ರಚಿಸಿರುವದರಿಂದ ಅವುಗಳ ಮೂಲಕ ಉಚ್ಚ ಭಾವನೆಗಳು ಓದುಗರ ಮನಸ್ಸಿನಲ್ಲಿ ಒಡಮೂಡುತ್ತಿವೆ. ಆದರೆ ಷಟ್‌ಸ್ಥಲ ಶಾಸ್ತ್ರ ಗ್ರಂಥಗಳು ಈಗ ಮುಳುಗಿಹೋಗಿವೆ. ಅವುಗಳ ವಿವೇಚನೆ ಮತ್ತು ಶಿವಯೋಗದ ನಡೆ ಇವುಗಳ ತಿಳಿವಳಿಕೆಯು ಇರುವದಿಲ್ಲ. ಈಗ ನಾವು ವಚನ ಗ್ರಂಥಗಳಲ್ಲಿ ನೋಡುತ್ತಿರುವ ವಚನಗಳಲ್ಲಿ ಬಹುತರ ಎಲ್ಲವೂ ಸ್ಥಲಗಳ ಬಹಿರಂಗದ ವಿವರಣೆಗಳು ಮಾತ್ರ ಇದ್ದು ಈ ವಿವರಣೆಗಳೊಳಗಿಂದ ನಾವು ಶಿವಶರಣರ ಅಂತರಂಗಿಕ ನಡೆಗಳನ್ನು ಮಸಕು ಮಸಕಾಗಿ ಕಂಡುಹಿಡಿಯಬೇಕಾಗಿದೆ. ಇವುಗಳಲ್ಲಿ ಶಿವಯೋಗದ ರೀತಿಯನ್ನು ಅನುಸರಿಸಿ ಬರೆದ ವಚನಗಳು ಅತ್ಯಲ್ಪವಾಗಿವೆ. ಈಗಿನವರು ಕೇವಲ ಸಾಮಾಜಿಕ ಸ್ವರೂಪದ ವಚನಗಳನ್ನು ನಿರೂಪಿಸಹತ್ತಿದ್ದಾರೆ. ಇದು ಸ್ವಾಭಾವಿಕವಾಗಿದೆ. ಇದರಿಂದ ಇವುಗಳಲ್ಲಿ ಹಿಂದಿನವರ ವಚನಗಳಲ್ಲಿಯಂತೆ ಸ್ಫೂರ್ತಿಯು ಒಡಮೂಡುವದು ಶಕ್ಯವಿಲ್ಲ. ಈಗಿನ ಗ್ರಂಥದಲ್ಲಿ ಶ್ರೀ ಮೂರುಸಾವಿರಪ್ಪನವರು ವಚನಗಳಲ್ಲಿರುವ ಅಮೌಲ್ಯ ನೈತಿಕ ಮತ್ತು ಆಧ್ಯಾತ್ಮಿಕ ತತ್ವಗಳನ್ನು ವಿಶದಪಡಿಸಿದ್ದಾರೆ. ಇದು ಕೆಳಗೆ ಕಾಣಿಸಿದ ವಾಕ್ಯಗಳಿಂದ ಸ್ಪಷ್ಟವಾಗುವಂತೆ ಇದೆ. ಅವರು - ಶರಣರ ಬಟ್ಟೆ ನುಡಿಯಲಿಲ್ಲ, ನಡೆಯಲ್ಲಿಹುದು ನೋಡಾ. ಚಿತ್ರದ ಹಣ್ಣನ್ನು ಮೆಲಬಹುದೇ? ಎಂದು ನುಡಿದಿರುವರು. ಮತ್ತೊಂದೆಡೆಯಲ್ಲಿ ಸುಖವೆಂದರೆ ಸಂಪೂರ್ಣ ಸಮಾಧಾನ ಆಶೆಯಿಲ್ಲದ ಅಂತರಂಗದ ಶಾಂತಿಮಯ ಸ್ಥಿತಿಯೇ ಸುಖ ನೋಡಯ್ಯಾ ಎಂದು ಹೇಳಿದ್ದಾರೆ ಮತ್ತೊಂದು ವಚನದಲ್ಲಿ—ಬೀಗಿ ಬೆಳೆದು ಬಾಗಿದ ನೆಲ್ಲು ಶಿವಪ್ರಸಾದಕ್ಕೆ ಸಲ್ಲುವದು. ಅದು ಕಾರಣ ಬೇಗದೆ ಎನ್ನ ಬಾಗುವಂತೆ ಮಾಡಿ ನಿನ್ನ ಕಾರುಣ್ಯಕ್ಕೆ ಯೋಗ್ಯನ ಮಾಡಾ ಎನ್ನ ತಂದೆ ಎಂದು ಹೇಳಿದ್ದಾರೆ. ಇನ್ನೊಂದು ವಚನದಲ್ಲಿ—ದೃಷ್ಟಿಯು ಅರಳಿದಂತೆ ಸೃಷ್ಟಿಯು ಸಿಹಿಯಾಗಿ ತೋರುವದಯ್ಯ, ದೃಷ್ಟಿಯು

ಆಕಂಚನದಲ್ಲಿ ಸೃಷ್ಟಿಯು ಕಹಿಯಾಗಿ ತೋರುವದಯ್ಯಾ ಎಂದು ಹೇಳಿದ್ದಾರೆ. ಒಡಲೊಳಗಿರ್ಪ ದೇವನನ್ನು ಅರಿಯದಲೆ ಗುಡಿಯೊಳಗಿರ್ಪ ದೇವರಿಗೆ ಎಡೆಯ ಒಯ್ದು ಕೊಟ್ಟು ಒಡವೆ ವಸ್ತುಗಳ ಬೇಡುವರಯ್ಯ ಎಂದು ಲೋಭಿಗಳನ್ನು ಟೀಕಿಸಿರುವರು. ಮೌನವೆಂಬುದು ಭಾವದ ಭ್ರಮೆ ನೋಡಯ್ಯ. ಜಗದ ಜನರ ಕೂಡ ಸಂಭಾಷಣೆಯನ್ನು ಬಿಟ್ಟು ಸನ್ನೆಯಿಂದ ವರ್ತಿಸುವದಿದು ಮೌನವೇ ? ಹೀಗೆ ಕೆಲವು ಸ್ವಾಮಿಗಳು ಅಜ್ಞಾನಿಗಳನ್ನು ವಂಚಿಸಲು ಹಾಕಿಕೊಂಡ ಈ ರೀತಿಯನ್ನು ಗ್ರಂಥಕಾರರು ಟೀಕಿಸಿದ್ದಾರೆ. ತನ್ನ ತೊರೆದು ದಾಸೋಹ ಭಾವದಿಂದ ಮಾಡುವದು ಕಾಯಕವೆನಿಸುವದು ನೋಡಾ ಎಂದು ಕಾಯಕದ ವ್ಯಾಖ್ಯೆಯನ್ನು ಮಾಡಿದ್ದಾರೆ. ಈ ತೆರದ ಶ್ರೇಷ್ಠ ತತ್ವಗಳನ್ನು ಸ್ವಲ್ಪ ಶಬ್ದಗಳಲ್ಲಿ ಗ್ರಂಥಕಾರರು ಹೇಳಿದ್ದು ಇವುಗಳು ಮನಸ್ಸನ್ನು ಆಕರ್ಷಿಸುವಂಥವಾಗಿವೆ. ಈಚೆಗೆ ನಮ್ಮ ಗ್ರಂಥಕಾರರು ಮೈಸೂರಿನ ಪದ್ಧತಿಯನ್ನು ಅನುಸರಿಸಿ ಭಾರವಾದ ಶಬ್ದಗಳ ಜೋಡಣೆಯನ್ನು ಮಾಡುತ್ತ ತಮ್ಮ ವಿಚಾರಗಳನ್ನು ಪ್ರಕಟಿಸುವದುಂಟು. ಇದು ಉತ್ತರ ಕರ್ನಾಟಕಸ್ಥರ ಪದ್ಧತಿಯಲ್ಲ. ಅವರದು ಮೊದಲಿನಿಂದಲೂ ಶಿವಶರಣರ ವಾಕ್ಯ ಪದ್ಧತಿಯಾಗಿದೆ. ಅಂದರೆ ಸ್ವಲ್ಪ ಶಬ್ದಗಳಲ್ಲಿ ಅರ್ಥ ಪೂರ್ಣವಾಗಿ ಕನ್ನಡದ ಬಿಡಿನುಡಿಗಳಲ್ಲಿ ಹೇಳುವದೇ ಅವರ ವೈಶಿಷ್ಟ್ಯವು. ಇನ್ನುಮೇಲೆ ಉತ್ತರ ಕನ್ನಡಿಗರು ಮೈಸೂರಿನವರ ಪದ್ಧತಿಯನ್ನು ಬಿಡಬೇಕು. ಶ್ರೀಯುತ ಸಾದರಹಳ್ಳಿಯವರು ವಚನಗಳ ಈ ರೀತಿಯನ್ನು ತಮ್ಮ ಈ ಗ್ರಂಥದಲ್ಲಿ ಅನುಸರಿಸಿದ್ದಾರೆ. ಇದಕ್ಕೋಸ್ಕರ ನಾವು ಅವರನ್ನು ಅಭಿನಂದಿಸುತ್ತೇವೆ. ಗ್ರಂಥವು ಅಚ್ಚುಕಟ್ಟಾಗಿ ಮುದ್ರಿಸಲ್ಪಟ್ಟಿದೆ. ಅದರ ಬೆಲೆ ೮ ಆಣೆ ಮಾತ್ರ. ಪುಟ ಸಂಖ್ಯೆ ೧೬೫.

**( ೫ ) ಸಟೀಕ ಬಸವೇಶ್ವರನ ವಚನಗಳ ಮುದ್ರಣ ನಿಧಿಯು.**

ನಾವು ಅಗಸ್ಟ ತಿಂಗಳಿನ ಸಂಚಿಕೆಯಲ್ಲಿ ಸಟೀಕ ಬಸವೇಶ್ವರನ ವಚನಗಳ ಮುದ್ರಣಕ್ಕಾಗಿ ಸಾರ್ವಜನಿಕರಿಂದ ಸಹಾಯವನ್ನು ಕೋರಿದ್ದೆವು. ಇದು ಒಂದುಸಾವಿರ ಪುಟಗಳುಳ್ಳ ಗ್ರಂಥವಾಗುವದರಿಂದ ಇದರ ಮುದ್ರಣವೆಚ್ಚವು ಸ್ವಾಭಾವಿಕವಾಗಿ ಬಹಳ ಹೆಚ್ಚಾಗುತ್ತದೆ. ಆದುದರಿಂದ ನಾವು ಕೆಲವು ವ್ಯಕ್ತಿಗಳಿಂದ ಸಹಾಯ ಧನವನ್ನು ಅಪೇಕ್ಷಿಸಿರುವದಿಲ್ಲ. ನಾವು ಈ ವರೆಗೆ ಸುಮಾರು ೬೦ - ೭೦ ಶಿವಾನುಭವ ಗ್ರಂಥಗಳನ್ನು

ಮುದ್ರಿಸಿದರೂ ನಾವು ಹೀಗೆ ಸಾರ್ವಜನಿಕವಾಗಿ ಸಹಾಯ ಧನವನ್ನು ಸ್ವೀಕರಿಸಲು ಯಾವಾಗಲೂ ಪ್ರಯತ್ನಿಸಿಲ್ಲ. ಈಗ ಅನಿವಾರ್ಯಹಕ್ಕಾಗಿ ನಾವು ಹೀಗೆ ಮಾಡಬೇಕಾಗಿದೆ ನಾವು ಮಾಡಿದ ಈ ವಿನಂತಿಯನ್ನು ಕೆಲ ಮಹನೀಯರು ಮನ್ನಿಸಿ ನಮ್ಮಕಡೆಗೆ ತಾವಾಗಿಯೇ ಕೆಳಗೆ ಕಾಣಿಸಿದಂತೆ ಹಣವನ್ನು ಕಳಿಸಿದ್ದಾರೆ. ಇದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಅವರು ಯಾರೆಂದರೆ:—

(೧) ಶ್ರೀ. ವ್ಹಿ. ಸಿ. ಬ್ಯಾಹಟ್ಟಿ ಪ್ರಿನ್ಸಿಪಾಲ ಶಿಕ್ಷಕ ಟ್ರೇನಿಂಗ ಕಾಲೇಜ ಬಾಗಲಕೋಟೆ ೫೧ ರೂ. (೨) ಶ್ರೀ. ಎಸ್. ಎಸ್. ಹುದ್ದಾರ ಮು ಧನ್ನೂರು ತಾ. ಹುನಗುಂದ ೧೨ ರೂ. (೩) ಶ್ರೀ ಸಿದ್ಧಲಿಂಗಪ್ಪ ನಾಗಪ್ಪ ಮಹಾಂತಣ್ಣವರ ಮು. ಧಾರವಾಡ ೧೧ ರೂ. (೪) ಶ್ರೀಮಂತ ನಾಗಪ್ಪ ಅಣ್ಣಾ ಕಾಡಾದಿ ಮು. ಸೊಲ್ಲಾಪೂರ ೨೫ ರೂ. (೫) ಶ್ರೀ ಸಂಗಮನಾಥ ಸ್ವಾಮಿಗಳು ವಿರಕ್ತಮಠ ಮು. ಬಿಲ್ಲಹಳ್ಳಿ ಜಿ|| ಶಿವಮೊಗ್ಗಾ ೫೦ ರೂ. (೬) ಶ್ರೀ ಗುರಲಿಂಗಯ್ಯ ಲಿಂಗಧಾಳ ಮು|| ಗದಗ ೫೦ ರೂ. ಈ ಎಲ್ಲ ಮಹನೀಯರು ಹಣವನ್ನು ಕಳಿಸುವಲ್ಲಿ ಅತ್ಯಂತ ಪ್ರೋತ್ಸಾಹಕರವಾದ ಶಬ್ದಗಳಿಂದ ನಮ್ಮ ಕಾರ್ಯದಲ್ಲಿ ತಮ್ಮ ಸಹಾನುಭೂತಿಯನ್ನು ವ್ಯಕ್ತಮಾಡಿದ್ದಾರೆ. ಅವುಗಳನ್ನು ನಾವು ಪತ್ರಿಕೆಯಲ್ಲಿ ಪ್ರಕಟಿಸುವದು ಅವಶ್ಯವಾಗಿತ್ತು ಆದರೆ ವಿಸ್ತಾರಭಯಕ್ಕಾಗಿ ನಾವು ಅವುಗಳನ್ನು ಪ್ರಸಿದ್ಧಿಸಿಲ್ಲ. ಈ ಮಹನೀಯರು ಈ ಕಾರ್ಯದ ಮಹತ್ವವನ್ನು ಅರಿತಿರುವದನ್ನು ತಿಳಿದು ಹೀಗೆಯೇ ಬಹುಜನರು ಇರುವರೆಂದು ಭಾವಿಸಿ ಈ ಮಹತ್ತರ ಕಾರ್ಯವು ಕೊನೆಗಾಣುವದೆಂದು ನಾವು ಭರವಸೆ ತಾಳಿದ್ದೇವೆ ಮೂಲ ಗ್ರಂಥವನ್ನು ರಚಿಸುವ ಕಾರ್ಯವಲ್ಲಿ ನಾವು ದಿನಾಲು ತೊಡಗಿರುತ್ತೇವೆ ಸಾಮಾನ್ಯ ಜನರು ಕೂಡ ತಿಳಿಯುವಂಥ ಸುಲಭ ಭಾಷೆಯಲ್ಲಿ ಇದನ್ನು ಬರೆಯಬೇಕಾದ್ದರಿಂದ ಬೇರೆ ಬೇರೆ ಸ್ಥಳಗಳಿಗೆ ನಾವು ಹೋಗಿ ಅಲ್ಲಿಯ ಸಾಮಾನ್ಯ ಜನರ ಭಾಷೆಯನು ಚನ್ನಾಗಿ ಅಭ್ಯಾಸಮಾಡಿ ಎಲ್ಲರೂ ತಿಳಿಯುವಂಥ ಭಾಷೆಯನ್ನೇ ಇದರಲ್ಲಿ ಉಪಯೋಗಿಸಬೇಕೆಂದು ಸಂಕಲ್ಪಿಸಿದ್ದೇವೆ. ಇದೇ ನೇರಿಗೆ ಅಲ್ಲಲ್ಲಿಯ ಮಹನೀಯರು ಈ ಕಾರ್ಯದಲ್ಲಿ ನಮಗೆ ಸಹಾಯಮಾಡಬೇಕೆಂದು ನಮ್ಮ ವಿನಂತಿ ಇದೆ.

---

ಹಿಡಿದು ಬಿಡಲಾಗದ್ದೈ ಹತ್ತು ಲಕ್ಷಕುವುುದನು |
ಇಟ್ಟು ಹೇಳುವುದಲ್ಲ ಬಡ ಮನುಜನಿಗೆ ||
ಹುಚ್ಚು ಹರಟುವುದಲ್ಲ ದೊರೆಯು ಘನವಾದೊಡಂ |
ವಿಶ್ವತೋಭಿರಾಮ ಕೇಳೊ ವೇಮಾ || ೯೬ ||

ಪ್ರಜೆಯು ಮಾಳ್ಪ ಕೆಡಕು ಪ್ರಭುವಿಗೆ ಬರ್ಪುದು |
ಪ್ರಭುವು ಮಾಳ್ಪ ಮೇಲು ಪ್ರಜೆಗೆ ಅರ್ಧ |
ಪ್ರಭುವು ಮಾಳ್ಪ ಕೆಡುಕು ಪ್ರಜೆಗಳ್ಗೆ ಬರದೇಕೆ ? |
ವಿಶ್ವತೋಭಿರಾಮ ಕೇಳೊ ವೇಮಾ || ೯೭ ||

ಧನವಿಹೀನರಿಗನಿಶ ಧೈರ್ಯವೇ ಶೂನ್ಯವೈ |
ಧೈರ್ಯವಿದ್ದೊಡೆ ಧನವು ಶೂನ್ಯವೈದೆ ||
ಧನವು ಧೈರ್ಯಗಳೆರಡು ಧರೆ ರಾಜವರ್ಗಕ್ಕೆ |
ವಿಶ್ವತೋಭಿರಾಮ ಕೇಳೊ ವೇಮಾ || ೯೮ ||

ಅಲ್ಪ ಬುದ್ಧಿಯವರಿಗಧಿಕಾರ ವಿತ್ತೊಡೆ |
ದೊಡ್ಡವರನು ತೊಲಗಿಸುವರು ಭರದಿ ||
ಮೆಟ್ಟು ತಿಂಬ ನಾಯಿ ಕಬ್ಬು ಸಿಹಿಯರಿವುದೇ |
ವಿಶ್ವತೋಭಿರಾಮ ಕೇಳೊ ವೇಮಾ || ೯೯ ||

ನೀರಿನಲ್ಲಿ ನೆಗಳು ಆನೆಯ ಪಿಡಿವುದು |
ಹೊರಗೆ ನಾಯಿಯುದನು ಕೊಲ್ಲುತ್ತಿಹುದು ||
ಸ್ಥಾನ ಬಲವೆ ಹೊರತು ತನ್ನ ಬಲವಲ್ಲವೈ |
ವಿಶ್ವತೋಭಿರಾಮ ಕೇಳೊ ವೇಮಾ || ೧೦೦ ||

ಬಿಡುವುದುಚಿತ ಊರು ವಿಶ್ರಾಂತಿ ಯಿರದಿರೆ |
ಬಿಡುವುದೊಳಿತು ಮೊದಲು ವಿಧವ ತಿಳಿದು ||
ಬಿಡಲುಬೇಕು ದೊರೆಯೊಳ್ಪಿತರಣೆ ಯಿರದಿರೆ |
ವಿಶ್ವತೋಭಿರಾಮ ಕೇಳೊ ವೇಮಾ ||೧೦೧ ||

ಪರರಿಗಾಗಿ ಭೂಮಿಯನುತ್ತು ಬಿತ್ತುವ |
ರವನಿಪತಿಗೆ ವಶ್ಯರಾಗಿರುವರು ||

ಹಾಲಿನಂಥ ಕುಲಜರೀವರು ಕಂಡಾಯು |
ನಾತನರಿಯರೊಕ್ಕಲಿಗರು ವೇಮಾ || ೧೦೨ ||

ಕನಕಮೃಗವು ಜನಿಪುದರಿದೆಂದು ತಿಳಿಯದೆ |
ರಾಮುಪ್ರಜ್ಞೆಯುಳ್ಳ ರಾಜನಲ್ಲೆ ||
ತಿಳಿವು ಮಲಿನವಹುದು ದೈವಿಕವಲ್ಲವೇ |
ವಿಶ್ವತೋಭಿರಾಮು ಕೇಳೊ ವೇಮಾ || ೧೦೩ ||

---

## ಬಡತನಕ್ಕೆ ಮನ್ನಣೆ ಇಲ್ಲ.

ಧನಿಕನವನೆ ಸಕಲ ಕುಲದೊಳು ಶ್ರೇಷ್ಠನು |
ಧನವೆ ಭೋಗಭಾಗ್ಯಗಳಿಗೆ ಮೂಲ ||
ಧನವಿಹೀನನಾದವನ ಕುಲವೇಂ ಕುಲ |
ವಿಶ್ವತೋಭಿರಾಮು ಕೇಳೊ ವೇಮಾ || ೧೦೪ ||

ಎಲ್ಲಿಯು ಸತಿಯೆಲ್ಲಿಯು ಸುತ |
ರೆಲ್ಲಿಯು ಬಾಂಧವರು ತನಗದೆಲ್ಲಿಯ ಸಖ್ಯರ್ ||
ತಲ್ಲಣಿಸುತಿರಲು ಕಷ್ಟದೊ |
ಳಲ್ಲಿಗೆ ಆರಾರು ಬರರು ಧರೆಯೊಳ್ ವೇಮಾ || ೧೦೫ ||

ವಿತ್ತಹೀನನಾದ ವೇಳೆಯೊಳ್ತಾಯಿಯು |
ಸತಿಯು, ಸುತರು, ಹಿತರು, ಬಂಧುಜನರು ||
ಸರ್ವರು ಶತ್ರುಗಳೀತಕೆ ಕೆಡುಪಿರಿ |
ವಿಶ್ವತೋಭಿರಾಮು ಕೇಳೊ ವೇಮಾ || ೧೦೬ ||

ಕೂಲಿನಾಲಿಮಾಡಿ ಆಳಾಗಿ ದುಡಿಯುತೆ |
ತಂದು ಹಾಕೆ ಸತಿಯು ಮೆಚ್ಚುತಿಹಳು ||
ರಿಕ್ತನಾಗೆ ಸತಿಯು ಪಲತೆರ ಬೈವಳು |
ವಿಶ್ವತೋಭಿರಾಮು ಕೇಳೊ ವೇಮಾ || ೧೦೭ |

ಪುಣ್ಯ ಪುರುಷಗೊಂದು ಬೆನ್ನು ಹುಣ್ಣಾದೊಡೆ |
ವಸುಧೆಯೆಲ್ಲ ವಾರ್ತೆ ಹರಡುತಿಹುದು ||

ಬಡವನ ಮನೆಯು ಲಗ್ನವನಾರುಮರಿಯರೈ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೧೦೮ ॥

ಧನಿಕ ಕುರೂಪಿಯಾದರು ಕಾಮನೆಂಬರು ।
ಬಡತನದೊಳು ಸಿಕ್ಕಿ ನರಳುವವನು ॥
ಕಾಮನಂತಿರ್ದರು ಹೊಲೆಯನೆಂಬರು ಮತ್ತೆ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೧೦೯ ॥

ಒಡವೆ, ವಸ್ತು, ದ್ರವ್ಯ, ಮೊದಲಾದ ಸಂಪದ ।
ಪಡೆದು ಮೆರೆವ ನರನು ಜಗದೊಳೈದೆ ॥
ಹೀನ ಕುಲಜನಾದೊಡೆಂಥವನಾದೊಡಂ ।
ಬನ್ನಿ ಬನ್ನಿ ಬನ್ನಿರೆಂಬರ್ ವೇಮಾ ॥ ೧೧೦ ॥

ಕಮಲಗಳು ನೀರನುಳಿದೊಡೆ ।
ಕಮಲಾಪ್ತಂ ಕಿರಣದಿಂದೆ ಸುಡುವಂ ಗಡ ತಾಂ ॥
ಕ್ರಮದಿಂ ಸ್ಥಳಭ್ರಷ್ಟತ್ವದೆ ।
ಶ್ರಮ ತಪ್ಪದು ಹಿತರಹಿತರು ಧರೆಯೊಳ್ ವೇಮಾ ॥ ೧೧೧ ॥

ಲವಣವಿಲ್ಲದಿರುವ ಸಾರದು ನಿಸ್ಸಾರ ।
ತೊವ್ವೆಯಿಲ್ಲದೂಟ ತಿಂಡಿಕಾಟ ॥
ಸಾಲವಿಲ್ಲದವನು ಶೀಲಸಂಪನ್ನನು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೧೧೨ ॥

ಬಲೆಯೊಳ್ಸಿಕ್ಕ ವೇಳೆಯೊಳ್ಸಿಂಹವಾದೊಡಂ ।
ಒಂದು ನಾಯಿ ಕೊಂದು ಹಾಕುತಿಹುದು ॥
ಸಿಕ್ಕಿ ಬಿದ್ದ ಸಮಯದೊಳ್ ಪಂಥ ಜರಗದು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೧೧೩ ॥

## ಆತ್ಮನಿರೀಕ್ಷಣೆಮಾಡು.

ತಪ್ಪನೆಣಿಸುವವರು ತಂಡೋಪತಂಡವು ।
ಸರ್ವರಲ್ಲಿ ತಪ್ಪಿತಗಳಿರುವುವು ॥
ತಪ್ಪನೆಣಿಸುವವರು ತಮ್ಮ ತಪ್ಪರಿಯರೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೧೪ ॥

## ಹೆರವರನ್ನು ನಿಂದಿಸಬೇಡ.

ಭಸ್ಮದೂಷಕರೆಲ್ಲ ಭಸ್ಮವಾದರು ಮತ್ತೆ ।
ಮಣ್ಣುದೂಷಕರೆಲ್ಲ ಮಣ್ಣು ಬೆರೆದರ್ ॥
ದೂಷಣೆ ಫಲವೈದೆ ತಕ್ಷಣ ತೋರಿತು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೧೫ ॥

## ಚಂಚಲವೃತ್ತಿಯನ್ನು ಬಿಡು

ಪಟ್ಟು ಹಿಡೆಯೆ ಸಲ್ಲ ಹಿಡಿದು ಬಿಡುವುದುಮಲ್ಲ ।
ಪಿಡಿದೊಡದನು ಬಿಗಿಯ ಹಿಡಿಯಬೇಕು ॥
ಪಿಡಿದು ಬಿಡುವುದಕಿಂತ ಪ್ರಾಣ ಬಿಡುವುದೆ ಮೇಲು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೧೬ ॥

## ಸಿಟ್ಟಾಗಬೇಡ.

ಕೋಪದಿಂದ ನರಕ ಕೂಪವ ಸೇರುವ ।
ಕೋಪದಿಂದ ಗುಣವು ಸ್ವಲ್ಪವಹುದು ।
ಕೋಪದಿಂದ ಬಾಳು ಕೆಡುವುದು ಜಗಬೊಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೧೭ ॥

ಪರಕಾಂತಾ ಸೋದರನುಂ |
ಪರಧನಗಳ್ಗಾಸೆ ಪಡೆದವನು ಪರಹಿತನುಂ ||
ಪರರಾಗ್ರಹಗೊಂಡರು ತಾಂ ||
ನೆರೆ ಪುಳಿಯದೆ ಬದುಕುನವನು ಪ್ರಾಜ್ಞನು ವೇಮಾ ||೧೮||

---

## ನೈತಿಕಸಾಮಾನ್ಯ ಪದ್ಯಗಳು

ಕೊಡಬೇಕು ದೀನ ಜನರಿಗೆ|
ಬಿಡಬೇಕೈ ದುರ್ಮತಗಳ ಖಂಡಿಸುತನಿಶಂ ||
ಪಿಡಿವುದು ಪರಮ ಪದಮಂ |
ನಡೆವುದು ತಾನೀ ತೆರದೊಳು ಧರ್ಮವು ವೇಮಾ ||೧೯||

ಮಾಸಿದ ತಲೆಯಿಂದ ಮಲಿನ ವಸ್ತ್ರಗಳಿಂದ |
ಮೆಯ್ಯ ಜಿಡ್ಡಿನಿಂದ ಕೂಡಿದವನು ||
ಅಗ್ರಜನಾದೊಡೇಂ ತೊಲಗು ತೊಲಗೆಂಬರು |
ವಿಶ್ವತೋಭಿರಾಮ ಕೇಳೊ ವೇಮಾ ||೨೦||

ಸತ್ಯವಂತರೊಡನೆ ಸರಸವಾಡಲು ಸಲ್ಲ |
ದೀನರಲ್ಲಿ ಜಗಳವಾಡೆ ಸಲ್ಲ ||
ಭಾಗ್ಯವಂತರೊಡನೆ ಕೂಡಿಯಾಡಲು ಸಲ್ಲ |
ವಿಶ್ವತೋಭಿರಾಮ ಕೇಳೊ ವೇಮಾ ||೧೧||

ಉಪಕಾರಕ್ಕಪಕಾರವ |
ನೆಪವೇನಿರ್ದರೆಯು ಮಾಡಲಾಗದು ಸುಜನರ್ ||
ಅಪಕಾರಕ್ಕನಿಶಂ ತಾ |
ನುಪಕಾರವ ಮಾಡಲಪ್ಪುದೈ ವರ ವೇಮಾ ||೧೨||

ಕತ್ತೆಯ ಶರೀರಕ್ಕೆ ಕಸ್ತೂರಿ ಲೇಪಿಸೆ |
ಏನು ತಿಳಿಯದದುವೆ ಝೂಡಿಸುವುದು ||
ಈಡು ಜೋಡಿಲ್ಲದವನ ಇರಲಿ ರೀತಿ |
ವಿಶ್ವತೋಭಿರಾಮ ಕೇಳೊ ವೇಮಾ ||೨೩||

ಗಜಕ ಬಟ್ಟೆಯೊಗೆವ ಗಿಜಬಿಜಿ ಮಾಡುತೆ ।
ಮಲಿನವೆಲ್ಲ ಕಳೆದು ಮಡಸಿ ಬಡಿವ ॥
ಬುದ್ಧಿ ಹೇಳುವವನು ಗುದ್ದಿದರುಂ ಸರಿಯು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೨೪ ॥

ತನುವಿದೆಂಬ ಗೃಹದಿ ಶತ್ರುಮಿತ್ರರ್ಕಳನು ।
ತಿಳಿಯದವನ ತಿಳಿವದೇತಕಿನ್ನು ।
ತಿಳಿದಿಹ ಮನುಜಗೆ ದಿವ್ಯಾಮೃತವಿದಯ್ಯ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೨೫ ॥

ಮೆಟ್ಟನೊಳಿಹ ಕಲ್ಲು ಕಿವಿಯೊಳಗಿಹ ತೊಣಚೆ
ಕಣ್ಣಿನ ಕಸ ಕಾಲು ಮುಳ್ಳು ಮತ್ತು ।
ಮನೆಯ ಪೋರಿವುಗಳನ್ನಿಷ್ಟು ಎನೆ ಸಲ್ಲ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೨೬ ॥

ಕುಲವ ನೀರು ಮಾಡಿ ಗುರುವನ್ನು ಕೊಲ್ಲಿಸಿ ।
ಬರಿದೆ ಆನೆಯುಷ್ಟು ಸುಳ್ಳು ನುಡಿದ ॥
ಹೆಸರು ಧರ್ಮರಾಜ ನೆರೆ ಬೇವು ಬೀಜವೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೨೭ ॥

ಮಾತನಾಡಲರಿತು ಮನವನು ಕರಗಿಸಿ ।
ಪಿರಿದು ಪ್ರಿಯವ ಪೇಳಿ ಒಲಿಸದಿರಲು ॥
ಪರರ ಕೆಯ್ಯ ಸೊತ್ತು ಸುಮ್ಮನೆ ಬರ್ಪುದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೨೮ ॥

ಬೆಳ್ಳಿ ಬೆಟ್ಟದಲ್ಲಿ ವಾಸವಾಗಿರ್ದೊಡಂ ।
ಭಿಕ್ಷವೆತ್ತಿ ತಿಂದನೇತಕೆ ಶಿವನು ॥
ತನಗದೆಷ್ಟು ಘನತೆಯಿರ್ದೊಡಂ ಪರರನು ।
ಕೇಳದಿರಲು ತೀರದಯ್ಯ ವೇಮಾ ॥ ೧೨೯ ॥

ಧರೆಯೊಳ್ಮೃತವು ಎಂದು ಸಕಲ ಮಾಂಸವ ತಿಂದು
ಬೇರೆ ಹೆಸರಿನಿಂದ ಮಧುವ ಕುಡಿದು ॥

ವಾವೆವರಸೆಯುಳಿದು ನರಕದಿ ಬೀಳುವರ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೦ ॥

ಕದ್ದುಕೊಂಬ ನರನ ಕೂಡೆ ಮಾತು ಸಲ್ಲದ ।
ಇದ್ದ ಮರ್ಮಗಳನು ಹೇಳೆ ಸಲ್ಲ ॥
ಹೇಳಿದೊಡವನಿರದೂರೆಲ್ಲ ಮಟ್ಟಿಪ
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೧ ॥

ಭೂಮಿ ತನ್ನದೆನಲು ಭುವನೇಶ ನಗುವನು ।
ಲೋಭಿಯನ್ನು ನೋಡಿ ಧನ ನಗುವುದು ॥
ಪ್ರಾಣಭಯವ ನೋಡಿ ಯಮನು ತಾಂ ನಗುವನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೨ ॥

ಉಪ್ಪು ಹುಳಿಯು ಹಣ್ಣು ವೂರಿನೊಳಿರಲಾಗಿ ।
ಬರವು ಬಂದಿತೆಂದು ಅಳುವಿರೇಕೆ ॥
ತಾಳಕವುಂಟೈದೆ ತವರವು ಮತ್ತುಂಟು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೩ ॥

ಕಾಗೆ ಪಕ್ಷಿಗಳೊಳು ಕಡು ಹೀನವೆಂಬರು ।
ಕಾಗೆ ಭೋಗವರಿಯರಾರು ಧರೆಯೊಳ್ ॥
ಕಾಗೆಗನ್ನವಿತ್ತು ಕಾಲಿಗೆ ಬೀಳುವರ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೪ ॥

---

## ದಾಂಪತ್ಯಸೌಖ್ಯವು.

ಗುಣವತಿ ಸತಿಯು ತಾಂ ಗೃಹವಲಂಕರಿಸುವಳು ।
ಕತ್ತಲಲ್ಲಿ ದೀಪ ಬೆಳಗುವಂತೆ ॥
ದೇವಿಯಿರ್ಪ ಮನೆಯು ದೇವಾಲಯವದಯ್ಯ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೫ ॥

ಅನುಕೂಲೆಯಾದ ಅಂಗನೆ ದೊರೆಯಲು ।
ಸತಿಪತಿಯರ ಸೌಖ್ಯವತಿಶಯಿಪುದು ॥
ಪ್ರತಿಕೂಲೆಯಾಗೆ ಸುಖವೆಲ್ಲ ಪರಿಹರ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೬ ॥

ಪುರುಷ ಭಾಗ್ಯದಿ ಪುಣ್ಯವತಿ ದೊರೆವಳಿದು ನಿಜ ।
ಪುಣ್ಯವತಿಗುಮಂತೆ ಪುರುಷ ದೊರೆವ ॥
ಈರ್ವರ ಪುಣ್ಯದಿ ಮಿತ್ರರು ಪುತ್ರರು ।
ಅಷ್ಟಭೋಗ ದೊರೆವುದಯ್ಯ ವೇಮಾ ॥ ೧೩೭ ॥

ತನುವು ಕಪ್ಪಗಿರ್ದರುಂ ಸ್ತ್ರೈಣೆಯ ಸತಿ ।
ಗುಣಗಳಿರ್ದೊಡವಳು ಕೋಟಿ ಮೇಲು ॥
ಕರೆಯ ಎಮ್ಮೆ ಹಾಲು ಕೊಳಕೆನ್ನಲಪ್ಪುದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೮ ॥

ದೀನಗೆ ಕನ್ಯಾದಾನವ ।
ಮಾನವ ತಾನೊಮ್ಮೆ ಮಾಡಲತಿಶಯಸುಖದಿಂ ।
ದಾನಂದಿಸುವನು ಪರದೊಳ್ ।
ಧ್ಯಾನಿಸು ವೇದಾಂತಸಾರವಿದು ವರ ವೇಮಾ ॥ ೧೩೯ ॥

ಸತಿಯಿಂದಲೆ ಪತಿ ಜನಿಸಿದ ।
ಪತಿಯಿಂದಲೆ ಸತಿಯುಂ ಜನಿಸಿದಳು ಸತ್ಯವಿದು ॥
ಸತಿಪತಿಗಳೆಂಬರಾರ್ಕೈ ।
ಮತಿಯೊಳ್ ಚರ್ಚಿಸುತೆ ತಿಳಿವುದಿಳೆಯೊಳ್ವೇಮಾ ॥ ೧೪೦ ॥

ಪತಿಗೆ ಇದಿರು ನುಡಿವ ಸತಿಯೆ ತಾಂ ಶುನಕವೈ ।
ಮೀರಿದ ಸತಿಯೊಡಗೂಡಿ ಬೆರೆಯೆ ॥
ಹಂದಿ ಹಂದಿ ಸೇರಿ ಕೆಸರೊಳು ಬಿದ್ದಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೪೧ ॥

---

" ಎಲೋ ಕುಂಭಯೋಗಿಯಾದ ನಿನಗೆ ನಮಸ್ಕಾರವು. ನೀನು ಮಿತ್ರಾ ವರುಣರ ಮಗನಾಗಿ 'ಕಾಶ' ಹೂವಿಗಿಂತ ಶುಭ್ರವಾಗಿರುವಿ. ಆತಾಪಿ ವಾತಾಪಿಗಳನ್ನು ಸಂಹರಿಸಿದಂಥವನೂ ಸಮುದ್ರವನ್ನು ಕುಡಿದಂಥವನೂ ಆದ ಎಲೋ ಅಗಸ್ತ್ಯನೇ ನಿನ್ನನ್ನು ನಾನು ಆಹ್ವಾನಿಸುತ್ತೇನೆ "

ಇವನ ವಾಸ ಸ್ಥಾನವು ಪೋಧೀಯಬೆಟ್ಟದಲ್ಲಿರುವಂತೆ ಪೂರ್ವ ಸಮುದ್ರದ ಆಗ್ನೇಯಮೂಲೆಯಲ್ಲಿರುವ 'ವೇದಾರಣ್ಯ' ಎಂಬಸ್ಥಳದಲ್ಲಿಯೂ ಇದ್ದು ಅಲ್ಲಿಯೂ ಅವನು ಸದಾ ವಾಸಿಸುತ್ತಾನೆಂದು ಜನರು ಭಾವಿಸಿ ಅವರು ಅವನನ್ನು ಪೂಜಿಸುತ್ತಾರೆ.

ಈ ಪ್ರಕಾರ ಅಗಸ್ತ್ಯನು ಶಿವಧರ್ಮವನ್ನು ದಕ್ಷಿಣ ಹಿಂದುಸ್ಥಾನದಲ್ಲಿ ನೆಲೆಗೊಳಿಸಿದ ಬಳಿಕ ಸಮುದ್ರವನ್ನು ದಾಟಿ ಪರದೇಶಗಳಲ್ಲಿಯೂ ಅದನ್ನು ಸ್ಥಾಪಿಸಲು ಉದ್ಯುಕ್ತನಾದನು.

ವಾಯು ಪುರಾಣ ಅಧ್ಯಾಯ ೪೮ ಇದರಲ್ಲಿ ಅವನು ಕೆಳಗೆ ಕಾಣಿಸಿದ ದ್ವೀಪಗಳಿಗೆ ಹೋದಂತೆ ಉಲ್ಲೇಖವಿದೆ. ಅವು ಯಾವವೆಂದರೆ:— ಬರ್ಹಿಣದ್ವೀಪ ಎಂದರೆ ಬೋರ್ನಿಯೋ, ಕುಶದ್ವೀಪ, ವರಾಹದ್ವೀಪ, ಶಾಖ್ಯದ್ವೀಪ, ಎಂಬವುಗಳು ಇರುತ್ತವೆ.

ಅವನು ಸಮುದ್ರವನ್ನು ದಾಟಿ ಕಾಂಬೋಡಿಯಾ ಎಂಬ ದೇಶಕ್ಕೆ ಹೋದದ್ದರ ಉಲ್ಲೇಖಗಳು ಇಲ್ಲಿಯ ಅನೇಕ ಶಾಸನಗಳಲ್ಲಿ ದೊರೆಯುತ್ತವೆ. ಈ ದೇಶದಲ್ಲಿ ಅಂಕೋರವಾಟ ಎಂಬ ಸ್ಥಳದಲ್ಲಿ ಈ ಶಾಸನಗಳಿರುತ್ತವೆ ಆ ಶಾಸನ ಒಂದರಲ್ಲಿ — " ಆರ್ಯದೇಶಲ್ಲಿ ಹುಟ್ಟಿದಂಥ ಬ್ರಾಹ್ಮಣನಾದ ಅಗಸ್ತ್ಯನು ಶಿವಪೂಜೆಯಲ್ಲಿ ನಿರತನಾಗಿ ತನ್ನ ಅಲೌಕಿಕ ಶಕ್ತಿಯಿಂದ ಕಾಂಬೋಡಿಯಾ ದೇಶಕ್ಕೆ ಬಂದು ಶ್ರೀ ಭದ್ರೇಶ್ವರನೆಂಬ ಶಿವಲಿಂಗವನ್ನು ಪೂಜಿಸಿದನು. ಮತ್ತು ಶಿವರನ್ನು ಅವನು ಬಹು ದಿವಸ ಪೂಜಿಸಿ ಮೋಕ್ಷವನ್ನೈದಿದನು " ಎಂದು ಹೇಳಿದೆ.

ಅಗಸ್ತ್ಯನು ಈ ಪ್ರದೇಶದಲ್ಲಿದ್ದಾಗ್ಗೆ ಅಲ್ಲಿಯ ಒಬ್ಬ ರಾಜಕನ್ನಿಕೆಯನ್ನು ಮದುವೆಯಾಗಿ ಒಂದು ರಾಜವಂಶವನ್ನು ಸ್ಥಾಪಿಸಿದನೆಂದು ಮತ್ತೊಂದು ಶಿಲಾಶಾಸನದಿಂದ ತಿಳಿದುಬರುತ್ತದೆ. ಆ ಶಿಲಾಲೇಖದಲ್ಲಿ

ಹೇಳಿರುವದೇನಂದರೆ:— "ಆರ್ಯದೇಶದಿಂದ ಬಂದಂಥ ಮತ್ತು ವೇದಗಳಲ್ಲಿ ಪಾರಂಗತನಾದಂಥ ಅಗಸ್ತ್ಯನೆಂಬ ಹೆಸರಿನಿಂದ ಪ್ರಸಿದ್ಧನಾದಂಥ ಬ್ರಾಹ್ಮಣನು 'ಮಹಿಸಿದ್ಧ' ಮನೆತನಕ್ಕೆ ಹೊಂದಿದ ಯಶೋವತಿ ಎಂಬ ಕನ್ನೆಯನ್ನು ಮದುವೆಯಾದನು. ಮತ್ತು ಆಕೆಯಿಂದ ನರೇಂದ್ರವರ್ಮನೆಂಬ ಎಂಬ ಮಗನನ್ನು ಪಡೆದನು. ಎಂದು ಬರೆದಿದೆ. ಈ ಸಂಗತಿಯು ಬೇರೆ ಅನೇಕ ಶಿಲಾಶಾಸನಗಳಲ್ಲಿರುವದು ಕಂಡು ಬಂದಿದೆ. ಕಾಂಬೋಡಿಯಾ ದೇಶದಲ್ಲಿ ಸುಂದರವಾದ ಅಸಂಖ್ಯ ದೇವಾಲಯುಗಳು ಈಗಲೂ ಇದ್ದು ಅವುಗಳನ್ನು ಈ ರಾಜವಂಶಕ್ಕೆ ಸಂಬಂಧಿಸಿದ ರಾಜರೇ ಕಟ್ಟಿಸಿದ್ದಾರೆ.

ಕಾಂಬೋಡಿಯಾ ದೇಶದಂತೆಯೇ 'ಶ್ಯಾಮ' ದೇಶ ಎಂದರೆ ಸಿಯಾಮ ಪ್ರಾಂತದಲ್ಲಿಯೂ ಶಿವಾಲಯಗಳು ಈಗಲೂ ಇರುತ್ತವೆ. ಇವುಗಳು ದಕ್ಷಿಣ ಹಿಂದುಸ್ತಾನದಲ್ಲಿರುವ ಶಿವಾಲಯುಗಳಂತೆಯೇ ಇರುತ್ತವೆ. ಇದರಿಂದ ಈ ದೇಶದಲ್ಲಿದ್ದ ಶೈವಧರ್ಮವು ಹಿಂದುಸ್ತಾನದಿಂದಲೇ ಬಂದಿತೆಂದು ನಿರ್ವಿವಾದವಾಗಿ ಹೇಳಬಹುದು.

ಮಧ್ಯ ಜಾವಾದಲ್ಲಿ ದಕ್ಷಿಣ 'ಕೋಡೋ' ಎಂಬ ಹೆಸರಿನ ಪಟ್ಟಣವಿದ್ದು ಕ್ರಿ ಶಕ ೭೩೨ ಇಸ್ವಿಯ ಒಂದು ಸಂಸ್ಕೃತ ಶಿಲಾಶಾಸನವು ದೊರೆತಿದೆ. ಇದರಲ್ಲಿ ಈ ನಡುಗಡ್ಡೆಯನ್ನು ವಶಾಹತ್ತು ಮಾಡಿದವನು ಸಂಜಯನೆಂಬ ರಾಜನೆಂದು ಹೇಳಿದೆ. ಅದರಲ್ಲಿರುವ ವರ್ಣನೆ ಏನೆಂದರೆ—"ಜಾವಾ ಎಂಬ ಹೆಸರಿನ ಅತ್ಯುತ್ತಮ ದ್ವೀಪವು ಇಲ್ಲಿ ಇದೆ. ಇಲ್ಲಿ ಬಂಗಾರದ ಕಣಿಗಳು ಇವೆ. ಅಕ್ಕಿ ಮೊದಲಾದ ಧಾನ್ಯಗಳು ಹೇರಳವಾಗಿ ಬೆಳೆಯುತ್ತವೆ. ಈ ದ್ವೀಪದಲ್ಲಿ ಒಂದು ಸುಂದರವಾದ ಮತ್ತು ಅದ್ಭುತವಾದ ಶಿವಾಲಯವು ಇದ್ದು ಈ ಶಿವಾಲಯದಲ್ಲಿಯ ಮೂರ್ತಿಯನ್ನು ಪುಣ್ಯ ಭೂಮಿಯಾದ 'ಕುಂಜರಕುಂಜ' ದೇಶದ ಜನರು ಸ್ಥಾಪಿಸಿದರು"

ಈ ಕುಂಜರಕುಂಜ ದೇಶವು ದಕ್ಷಿಣ ಹಿಂದುಸ್ತಾನದಲ್ಲಿಯೇ ಇದ್ದಿರಲಿಕ್ಕೆ ಬೇಕು. ಕುಂಜರಕುಂಜ ಈ ದೇಶವು ಈಗಿನ ಆನೆಗೊಂದಿಯಾಗಿರಬಹುದು. ಹದಿಮೂರನೇ ಶತಮಾನದ ಕೆಲ ಶಿಲಾ ಶಾಸನಗಳಲ್ಲಿ 'ಕುಂಜರಕೋಣ' ಎಂಬ ದೇಶದ ಉಲ್ಲೇಖವಿದ್ದು, ಅವುಗಳಿಂದ ಈ

ಪ್ರದೇಶವು ಹಂಪಿಯ ಉತ್ತರಕ್ಕೆ ತುಂಗಭದ್ರಾ ನದೀ ತೀರದಲ್ಲಿರಬೇಕೆಂದು ತಿಳಿದುಬರುತ್ತದೆ. ಹರಿವಂಶದಲ್ಲಿ 'ಅಗಸ್ತ್ಯನ ಶುಭಕರವಾದ ಆಶ್ರಮವು ಕುಂಜರ ಪರ್ವತದಲ್ಲಿ ಇತ್ತು' ಎಂದು ಬರೆದಿದೆ. ಇದರಿಂದ ಪಂಪಾಕ್ಷೇತ್ರದಲ್ಲಿ ಅಗಸ್ತ್ಯಾಶ್ರಮವು ಇದ್ದುದು ತಿಳಿದುಬರುತ್ತದೆ. ಇಲ್ಲಿಯೇ ಅವನು ವಾಸಿಸುತ್ತಿರುವಾಗ ಕರ್ನಾಟಕಸ್ಥರು ಸಮುದ್ರ ಮಾರ್ಗವಾಗಿ ಅಗಸ್ತ್ಯನೊಡನೆ ಜಾವಾದ್ವೀಪಕ್ಕೆ ಹೋಗಿ ಅಲ್ಲಿ ಶಿವಾಲಯವನ್ನು ಸ್ಥಾಪಿಸಿರಬಹುದೆಂಬ ಅನುಮಾನವು ಉಂಟಾಗುತ್ತದೆ.

ಈ ಮೇರೆಗೆ ಅಗಸ್ತ್ಯನು ಜಾವಾ ಮತ್ತು ಅದರ ನೆರೆಯ ದ್ವೀಪಗಳಲ್ಲಿ ಶಿವಧರ್ಮವನ್ನು ನೆಲೆಗೊಳಿಸಿ ಶಿವಾಲಯಗಳನ್ನು ಸ್ಥಾಪಿಸಿ ಧರ್ಮೋದ್ಧಾರ ಕಾರ್ಯ ಮಾಡಿದ್ದರಿಂದ ಸ್ವಾಭಾವಿಕವಾಗಿ ಅಲ್ಲಿಯ ಜನರು ಅವನಿಗೆ ದೇವಾವತಾರನೆಂದು ತಿಳಿಯಹತ್ತಿದರು. ಪೂರ್ವ ಜಾವಾ ದ್ವೀಪದಲ್ಲಿ 'ದಿನಯ' ವೆಂಬ ಗ್ರಾಮವಿದೆ. ಅಲ್ಲಿ ಕ್ರಿ. ಶಕ ೭೬೦ ನೇ ಇಸ್ವಿಯ ಒಂದು ಶಿಲಾಲೇಖವಿದ್ದು ಅದರಲ್ಲಿ ಅಗಸ್ತ್ಯನ ಹೆಸರಿನಿಂದ ಒಂದು ಮೂರ್ತಿಯು ಮಾಡಲ್ಪಟ್ಟಿದೆಂಬ ಉಲ್ಲೇಖವಿದೆ. ಅಗಸ್ತ್ಯಮುನಿಗೆ ಈ ಪ್ರಾಂತದಲ್ಲಿ 'ಶಿವಗುರು' ಅಥವಾ 'ಭಟ್ಟಾರಕ ಗುರು' ಎಂಬ ಹೆಸರುಗಳು ಇರುತ್ತವೆ.

ಈ ಎಲ್ಲ ಸಂಗತಿಗಳಿಂದ ಅಗಸ್ತ್ಯನು ದಕ್ಷಿಣಹಿಂದುಸ್ಥಾನದಲ್ಲಿ ಶಿವಧರ್ಮವನ್ನು ನೆಲೆಗೊಳಿಸಿದ ಬಳಿಕ ಪರದೇಶಗಳಿಗೆ ಸಹ ಹೋಗಿ ಅಲ್ಲಿಯೂ ಅದನ್ನು ಪ್ರಕಾಶಗೊಳಿಸಿದನೆಂಬುದು ಸ್ಪಷ್ಟವಾಗುತ್ತದೆ.

ಬಹು ಪುರಾತನ ಕಾಲದಲ್ಲಿ ದಕ್ಷಿಣದೇಶದಲ್ಲಿ ಶೈವಧರ್ಮವು ಪ್ರಸಾರ ಹೊಂದಿದ ಹಾಗೆ ತೋರುತ್ತದೆ. ಅದು ಅಲ್ಲಿ ವೈಭವ ಸ್ಥಿತಿಯನ್ನು ಹೊಂದಿರಬೇಕು. ಅದು ಬಹು ದಿವಸಗಳ ವರೆಗೆ ಈ ದ್ವೀಪಾಂತರಗಳಲ್ಲಿ ಪ್ರಚಲಿತವಿದ್ದು ಮುಂದೆ ಮುಹಮ್ಮದೀ ಧರ್ಮವು ಅದರ ಸ್ಥಾನದಲ್ಲಿ ಪ್ರಸಾರಹೊಂದಿತು, ಅದು ಈಗಲೂ ಅಲ್ಲಿ ಇದೆ. ಆದರೆ ಈ ಮುಸಲ್ಮಾನರ ಮೇಲೆಯೂ ಹಿಂದೂ ಸಂಸ್ಕೃತಿಯು ಪರಿಣಾಮ ಮಾಡಿದ್ದು ಕಂಡುಬರುತ್ತದೆ ಅಲ್ಲಿಯ ಜನರು ಮುಸಲ್ಮಾನರು ಇದ್ದು ಅವರು ಈಗಲೂ 'ಸುಕರ್ಣ' 'ಸುದರ್ಶನ' ಎಂಬ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ

ಸುಕರ್ಣ ಇದು ಈಗಿನ ಇಂಡೋನೇಶಿಯಾದ ಅಧ್ಯಕ್ಷನ ಹೆಸರು. ಅಲ್ಲಿಯ ಮುಸಲ್ಮಾನರು 'ನೀಲಕಂಠ' 'ಶಿವ' ಎಂಬ ಹೆಸರುಗಳಿಂದ ಪರಮಾತ್ಮನನ್ನು ಭಜಿಸುವದೂ ಉಂಟು.

ಅಗಸ್ತ್ಯಮುನಿಯು ನಿರಾತಂಕವಾಗಿ ಸಮುದ್ರವನ್ನು ದಾಟಿ ಪರದೇಶಗಳಿಗೆ ಹೋದವನಾದ್ದರಿಂದ ಅವನು ಸಮುದ್ರವನ್ನು ಕುಡಿದುಬಿಟ್ಟನೆಂಬ ಆಖ್ಯಾಯಿಕೆಯು ಉಂಟಾಗಿರಬಹುದು.

ಈ ಚರಿತ್ರೆಯನ್ನು ನಾವು ಮಿ|| ಓ. ಸಿ. ಗಂಗೋಳಿ ಎಂಬ ಪ್ರಸಿದ್ಧ ಬಂಗಾಲೀ ಪಂಡಿತರು 'ರೂಪಂ' ಎಂಬ ಹೆಸರಿನ ಬಂಗಾಲೀ ಭಾಷೆಯಲ್ಲಿ ಹೊರಡುವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ ಒಂದು ಮಹತ್ವದ ಲೇಖವನ್ನು ಆಧಾರವಾಗಿಟ್ಟುಕೊಂಡು ಬರೆದದ್ದಾಗಿದೆ. ಈ ಲೇಖವು ಮಹಾಕವಿಗಳಾದ ಸರ್ ರವೀಂದ್ರನಾಥ ಟಗೋರ ಇವರ ನಿದರ್ಶನದಲ್ಲಿ ಪ್ರಕಟವಾಗುತ್ತಲಿದ್ದ "ವಿಶ್ವಭಾರತಿ" ಎಂಬ ಪತ್ರಿಕೆಯ ೧೯೨೬ನೇ ಜುಲೈ ಸಂಚಿಕೆಯಲ್ಲಿ ಕೊಡಲ್ಪಟ್ಟಿರುತ್ತದೆ.

---

## ಅರಬಸ್ತಾನದ ಮಕ್ಕೇಶ್ವರ.

ಹೇಗೆ ಹಿಂದುಸ್ತಾನ ದೇಶದ ಆಗ್ನೇಯ ದಿಕ್ಕಿಗಿರುವ ದೇಶಗಳಲ್ಲಿ ಶೈವ ಧರ್ಮದ ಕುರುಹುಗಳು ಇವೆಯೋ ಹಾಗೆಯೇ ಪಶ್ಚಿಮ ದೇಶಗಳಾದ ಅರಬಸ್ತಾನ ಮೊದಲಾದವುಗಳಲ್ಲಿಯೂ ಕೂಡ ಇರುತ್ತವೆಂಬುವರ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ. ಈ ದೇಶಗಳಲ್ಲಿ ಇಸ್ಲಾಮಿ ಧರ್ಮವು ಈಗ ಪೂರ್ಣವಾಗಿ ನೆಲಿಸಿದ್ದರೂ ಅವಕ್ಕೂ ಮೊದಲು ಇಲ್ಲಿ ಹಿಂದೂ ಸಂಸ್ಕೃತಿಯು ಪ್ರಾದುರ್ಭವಿಸಿತ್ತೆಂದು ತೋರಿಬರುತ್ತದೆ. ಪ್ರಸಿದ್ಧ ಇತಿಹಾಸಕಾರನಾದ ಎಡವರ್ಡ ಗಿಬ್ಬನ್ನ ಈತನು ತನ್ನ ರೋಮನ್ನ ಸಾಮ್ರಾಜ್ಯದ ಇತಿಹಾಸದ ೫೦ ನೇ ಅಧ್ಯಾಯದಲ್ಲಿ ಹೇಳಿರುವದೇನಂದರೆ — ಅರಬರ ಮೊದಲಿನ ಕಾಲದ ಧರ್ಮವು ಹಿಂದೂ ಜನರಂತೆಯೇ ಇತ್ತು. ಅವರು ಸೂರ್ಯ, ಚಂದ್ರ, ಮತ್ತು ನಕ್ಷತ್ರಗಳನ್ನು ಪೂಜಿಸುತ್ತಿದ್ದರು. ಪ್ರಕಾಶಮಾನವಾದ ಈ ಗ್ರಹಗಳು ಪರಮಾತ್ಮನ ಪ್ರತ್ಯಕ್ಷರೂಪವೆಂದು ಇವರು ಭಾವಿಸುತ್ತಿದ್ದರು. ಸೃಷ್ಟಿಯು ಶಾಶ್ವತವಾದದ್ದು. ಅದಕ್ಕೆ

ಕೇಡಿಲ್ಲ, ಅದು ವ್ಯವಸ್ಥಿತವಾಗಿ ನಡಿಯುತ್ತದೆ. ಅದ್ದರಿಂದ ಅದರ ನಿಯಂತ್ರಕನಿಗೆ ಬುದ್ಧಿ ಎಂಬುದಿದೆ. ಅವರ ಪೃಥ್ವಿಯಲ್ಲಿರುವವರನ್ನು ಕಾಯುತ್ತಾನೆ. ಎಂಬಿವೇ ಮೊದಲಾದ ಹಿಂದೂಜನರ ವಿಚಾರಗಳು ಅವರಲ್ಲಿದ್ದುದು ಕಂಡುಬರುತ್ತದೆ. ಅರಬರು ಖಗೋಲ ಮತ್ತು ಜ್ಯೋತಿಷ ಶಾಸ್ತ್ರಗಳನ್ನು ಸಹ ಹಿಂದೂ ಜನರಿಂದಲೇ ಕಲಿತುಕೊಂಡಿರಬಹುದೆಂದು ಅನುಮಾನವು ಉಂಟಾಗಲು ಪ್ರಬಲ ಕಾರಣಗಳಿವೆ.

ಆದರೆ ಅರಬಸ್ತಾನದಲ್ಲಿಯ ನಿವಾಸಿಗಳು ನಾಗರಿಕತೆಯಲ್ಲಿ ಮುಂದು ವರಿದವರಿರಲಿಲ್ಲ. ಮಕ್ಕಾಪಟ್ಟಣದಲ್ಲಿ ಲಿಂಗಾಕೃತಿಯುಳ್ಳ ಒಂದು ಪ್ರತಿಮೆ ಇದ್ದು, ಅದು ಇದ್ದ ದೇವಾಲಯವು ಅವರಿಗೆ ಪವಿತ್ರಸ್ಥಾನವಾಗಿದ್ದಿತು. ಅದರ ಇತಿಹಾಸವು ಕ್ರಿಸ್ತಶಕದ ಪೂರ್ವದಲ್ಲಿಯೋ ಪ್ರಾರಂಭವಾಗುತ್ತದೆ. ಅದರಲ್ಲಿ ಕಪ್ಪುಕಾಂತಿಯುಳ್ಳ ಒಂದು ಲಿಂಗ ಪ್ರತಿಮೆ ಇದ್ದು ಅದನ್ನು ಅರ ಬರು ಬಹು ಭಕ್ತಿಯಿಂದ ಪೂಜಿಸುತ್ತಿದ್ದರು. ಮೈಲಿಗೆ ಬಟ್ಟೆಯನ್ನು ಹೊದ್ದುಕೊಂಡು ಅದನ್ನು ಸಮೀಪಿಸುತ್ತಿರಲಿಲ್ಲ. ಅವರು ಅದನ್ನು ಅನೇಕ ರೀತಿಯಿಂದ ಪೂಜಿಸುತ್ತಿದ್ದರು. ಮುಹಮ್ಮದ ಪೈಗಂಬರನ ಹಿಂದಿನ ಪೂರ್ವ ಜರು ಈ ದೇವಾಲಯದ ಪೂಜಾರಿಗಳಾಗಿ ಕೆಲಸಮಾಡುತ್ತಿದ್ದರು. ಈ ಪ್ರತಿಮೆಯು ಹೆಸರು 'ಅಲ್ ಲಾತ್' ಅಥವಾ 'ಅಲ್ ಉಜಾ' ಎಂಬು ದಾಗಿತ್ತು. ಅರಬರು ಕಾಠೇವಾಡಕ್ಕೆ ಬಂದಾಗ್ಗೆ ಅಲ್ಲಿದ್ದ ಸೋಮನಾಥ ದೇವಾಲಯದಲ್ಲಿದ್ದ ಲಿಂಗಮೂರ್ತಿಯನ್ನು ಸಹ "ಲಾತ್" ಎಂಬ ಹೆಸರಿ ನಿಂದ ಕರೆಯುತ್ತಿದ್ದದ್ದು ಕಂಡುಬರುತ್ತದೆ.

ಈಗಿನ ಇಸ್ಲಾಮು ಧರ್ಮದಲ್ಲಿ ಮೂರ್ತಿ ಪೂಜೆಯು ಇರುವದಿಲ್ಲ. ಆದರೆ ಮುಸ್ಲೀಮರು ಮಕ್ಕಾ ಮಶೀದೆಗೆ ಹೋದ ಕಾಲದಲ್ಲಿ ಅಲ್ಲಿ ಅವರು ಈಗ ಅನುಸರಿಸುವ ಧಾರ್ಮಿಕ ಪದ್ಧತಿಗಳಲ್ಲಿ ಪುರಾತನ ಕಾಲ ದಲ್ಲಿ ಅರಬರು ತಮ್ಮ ಲಿಂಗಾಲಯಕ್ಕೋಸ್ಕರ ಅನುಸರಿಸುತ್ತಿದ್ದವುಗಳನ್ನು ಕೆಲಮಟ್ಟಿಗೆ ಕಾಣಬಹುದಾಗಿದೆ. ಮೊದಲು ಅಲ್ಲಿದ್ದ ಕಪ್ಪು ಲಿಂಗಾ ಕಾರ ಮೂರ್ತಿಯನ್ನು ಈಗಲೂ ಮಕ್ಕಾ ಮಶೀದಿಯಲ್ಲಿ ಇಟ್ಟಿರುವರು. ಅದನ್ನು ಮುಸ್ಲೀಮರು ಚುಂಬಿಸಿ ಅದಕ್ಕೋಸ್ಕರ ತಮ್ಮ ಭಕ್ತಿಭಾವ ವನ್ನು ಈಗಲೂ ತೋರಿಸುತ್ತಾರೆ.

ಹಿಂದುಸ್ತಾನದಲ್ಲಿ ವೇದಕಾಲದಲ್ಲಿ ಅಗ್ನಿ, ವರುಣ ಮೊದಲಾದ ನಿಸರ್ಗ ಶಕ್ತಿಗಳ ಪೂಜೆಯು ಇದ್ದು ಹಿಂಸಾತ್ಮಕ ಯಜ್ಞ ಕಾರ್ಯಗಳು ಅನಿರ್ಬಂಧವಾಗಿ ಅವರಿಂದ ನಡಿಸಲ್ಪಡುತ್ತಿದ್ದವು. ಅದೇ ಕಾಲದಲ್ಲಿ ಶಿವಶಕ್ತಿಗಳ ಆರಾಧನೆಯು ಕೂಡ ಈ ಲಿಂಗ ಪೂಜೆಯ ಮೂಲಕ ನಡೆಯುತ್ತಲಿದ್ದವು. ಇದೇ ಕ್ರಮವು ಅರಬಸ್ತಾನದಲ್ಲಿಯೂ ಉಂಟಾಗಿರಬಹುದು. ಈ ಪ್ರದೇಶದಲ್ಲಿ ಶಿವಚಿನ್ಹವು ಹೇಗೆ ಬಂದಿತೆಂಬುವರ ಬಗ್ಗೆ ಕೆಲವು ದಂತಕಥೆಗಳು ನಮ್ಮ ದೇಶದಲ್ಲಿ ಪ್ರಚಲಿತವಿದ್ದು ಇವುಗಳನ್ನು ವಾಚಕರು ಲಕ್ಷಿಸುವದು ಅವಶ್ಯವಿರುತ್ತದೆ.

## ಶಿಶುನಾಗ.

ಪಾಂಡವ ವಂಶದ ಮಗಧ ರಾಜರು ಪಾಟಲಿಪುತ್ರ ಅಂದರೆ ಪಾಟಣಾದಲ್ಲಿ ರಾಜ್ಯವಾಳುತ್ತಿದ್ದರು. ಅವರ ವಂಶದಲ್ಲಿ ಶಿಶುನಾಗನೆಂಬ ರಾಜನು ಜನಿಸಿದನು. ಅವನು ಧಾರ್ಮಿಕ ಬುದ್ಧಿಯುಳ್ಳವನಾಗಿ ಅನೇಕ ಯಜ್ಞಯಾಗಾದಿಗಳನ್ನು ನೆರವೇರಿಸಿದನು. ಹೀಗಿರುವಲ್ಲಿ ನೆರೆ ಪ್ರಾಂತದಲ್ಲಿ ಚೇದಿವಂಶದ ರಾಜರು ಆಳುತ್ತಿದ್ದರು. ಅವರಿಗೂ ಮಗಧ ರಾಜರಿಗೂ ಮನಸ್ತಾಪಗಳಿದ್ದು ಅವರಲ್ಲಿ ಯಾವಾಗಲೂ ಯುದ್ಧಗಳು ನಡೆಯುತ್ತಿದ್ದವು. ಒಂದು ಕಾಲದಲ್ಲಿ ಚೇದಿವಂಶದ ರಾಜರು ಪಾಟಲಿಪುತ್ರ ನಗರವನ್ನು ಕೈವಶ ಮಾಡಿಕೊಂಡು ಅದನ್ನು ಲೂಟಿ ಮಾಡಿದರು. ಆಗ ಶಿಶುನಾಗನು ತನ್ನ ರಾಜ್ಯವನ್ನು ಬಿಟ್ಟುಕೊಟ್ಟು ಸಿಂಧೂನದಿಯನ್ನು ದಾಟಿ ಅದರ ಪಶ್ಚಿಮಕ್ಕೆ ಒಂದು ರಾಜ್ಯವನ್ನು ಸ್ಥಾಪಿಸಿದನು ಆದರೆ ಅವನು ಅಲ್ಲಿ ಬಹಳ ದಿವಸಗಳಿರದೆ ಅವನು ಅದರ ಪಶ್ಚಿಮಕ್ಕಿರುವ ಮಕ್ಕಾ ಪ್ರಾಂತಕ್ಕೆ ಹೋಗಿ ಅಲ್ಲಿ ಆಳಹತ್ತಿದನು. ಅವನೇ ಮಕ್ಕೇಶ್ವರ ಲಿಂಗವನ್ನು ಸ್ಥಾಪಿಸಿದನು. ಅದಕ್ಕೋಸ್ಕರ ಅವನು ಅಲ್ಲಿ ಒಂದು ಸುಂದರ ದೇವಾಲಯವನ್ನು ಕಟ್ಟಿಸಿದನು. ಅದರಲ್ಲಿ ಅನೇಕ ಸುಂದರ ಮೂರ್ತಿಗಳು ಅವನಿಂದ ರಚಿಸಲ್ಪಟ್ಟವು. ಈ ದೇವಾಲಯದ ಖ್ಯಾತಿಯು ಈ ಶಾಸನ ಮೂಲಕ ಎಲ್ಲ ಕಡೆಗೂ ಹಬ್ಬಿತು. ಅಸಂಖ್ಯ ಯಾತ್ರಿಕರು ಅಲ್ಲಿಗೆ ಬಂದು ಅಲ್ಲಿದ್ದ ಲಿಂಗಮೂರ್ತಿಯನ್ನು ಸಂದರ್ಶಿಸುವರು. ಶಿಶುನಾಗನ ತರುವಾಯ ಅವನ ವಂಶಜರು ಅಲ್ಲಿಯೇ ರಾಜ್ಯವಾಳಹತ್ತಿದರು. ಈ

ಮಕ್ಕೇಶ್ವರ ಲಿಂಗದ ಪೂಜೆಯನ್ನು ಮಹಮ್ಮದ ಪೈಗಂಬರನ ಪೂರ್ವ ಜರು ಅವನು ಇಸ್ಲಾಮು ಧರ್ಮವನ್ನು ಸ್ಥಾಪಿಸುವ ವರೆಗೂ ನಡಿಸುತ್ತ ಬಂದರು.

ಮಹಮ್ಮದ ಪೈಗಂಬರನು ತನ್ನ ಇಸ್ಲಾಮು ಧರ್ಮವನ್ನು ನೆಲೆಗೊಳಿಸಿದ ಬಳಕ ಅವನು ನಾಡಿನಲ್ಲಿದ್ದ ಈ ಮೂರ್ತಿ ಪೂಜೆಯನ್ನು ನಿಲ್ಲಿಸಿದನು. ಮೊದಲಿದ್ದ ಮೂರ್ತಿಗಳನ್ನು ಒಡೆದು ಹಾಕಿಸಿದನು. ಆದರೆ ಶಿಶುನಾಗನು ಸ್ಥಾಪಿಸಿದ ಮಕ್ಕೆಶ್ವರ ಲಿಂಗವು ಮಾತ್ರ ಮಕ್ಕಾಮಸೀದೆಯಲ್ಲಿ ಇಡಲ್ಪಟ್ಟಿತು. ಯಾತ್ರಿಕರು ಅದರ ಚುಂಬನ ಮಾಡುತ್ತಿದ್ದರು. ಅದರ ಪೂಜೆಯು ಮಾತ್ರ ನಡಿಯುತ್ತಿರಲಿಲ್ಲ. ಕೆಲವೊಂದು ಕಾಲದಲ್ಲಿ ಈ ಲಿಂಗವು ಯಾರಿಗೂ ಕಾಣದಂತೆ ಗುಪ್ತವಾಗಿ ಇಡಲ್ಪಟ್ಟಿತ್ತೆಂದು ತಿಳಿದು ಬರುತ್ತದೆ.

ಮುಂದೆ ಮ್ಲೇಂಚ್ಛರ ಪ್ರಾಬಲ್ಯವು ಆಯಾ ದೇಶಗಳಲ್ಲಿ ಹೆಚ್ಚುತ್ತ ಹೋಗಿ ಅವರು ಅಗ್ನಿ ಪೂಜಕರು ವಾಸವಾಗಿದ್ದ ಇರಾಣವನ್ನು ಮತ್ತು ಶೈವ ಸಾಂಪ್ರದಾಯವಿದ್ದ ಅಫಗಾಣಿಸ್ತಾನ, ಸಿಂಧೂ ದೇಶಗಳನ್ನು ಗೆದ್ದು ಅವುಗಳನ್ನು ತಮ್ಮ ಪಾದಾಕ್ರಾಂತ ಮಾಡಿಕೊಂಡರು. ಆದ್ದರಿಂದ ಈ ದೇಶಗಳಲ್ಲಿ ಇಸ್ಲಾಂ ಧರ್ಮವು ಬಲಿಯಹತ್ತಿತು. ಇದೇ ಕಾಲಕ್ಕೆ ಶಕ, ಹೂಣ ಮೊದಲಾದ ಕಾಡು ಜನರು ದೇಶದ ಒಳನುಗ್ಗಿದರು. ಈ ಕಠಿಣ ಕಾಲಗಳಲ್ಲಿ ಶಾಲಿವಾಹನ ಮತ್ತು ವಿಕ್ರಮಾದಿತ್ಯರು ಜನಿಸಿ ಮ್ಲೇಂಚ್ಛರನ್ನುಗೆದ್ದು ದೇಶವನ್ನು ಸಂರಕ್ಷಿಸಿದರು.

ವಿಕ್ರಮಾದಿತ್ಯನ ವಂಶದಲ್ಲಿ ಭೋಜರಾಜನು ಉದಿಸಿ ಅವನು ಉಜ್ಜಯಿನಿಯಲ್ಲಿ ರಾಜ್ಯವಾಳುತ್ತಿದ್ದನು. ಅವನು ಮಹಮ್ಮದೀಯರ ಉಪಟಳವನ್ನು ಸಹಿಸಲಾರದೆ ೧೦ ಸಾವಿರ ಶೂರ ಸೈನಿಕರೊಡನೆ ಸಿಂಧೂ ನದಿಯನ್ನು ದಾಟಿ ಇಲ್ಲಿದ್ದ ಮ್ಲೇಂಚ್ಛರನ್ನು ಶಿಕ್ಷಿಸಿ ಅವರ ಮೂಲಸ್ಥಾನವಾದ ಮರುಭೂಮಿಗೆ ( ಅರಬ್ಬೀ ದೇಶಕ್ಕೆ ) ನುಗ್ಗಿದನು ಮತ್ತು ಅಲ್ಲಿ ಮಕ್ಕೇಶ್ವರನಿದ್ದ ಸ್ಥಾನವನ್ನು ಸಂದರ್ಶಿದನು. ಆಗ ಮಕ್ಕೇಶ್ವರನು ಅಶರೀರ ವಾಣಿಯಿಂದ — "ಎಲೈ ಭೋಜರಾಜನೇ ಬಾಹ್ಲೀಕ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಈ ಭೂಮಿಯು ಮ್ಲೇಂಚ್ಛರಿಂದ ದೂಷಿತವಾಗಿರುತ್ತದೆ. ಈ ದಾರುಣ ದೇಶದಲ್ಲಿ ಆರ್ಯಧರ್ಮವು ಸ್ವಲ್ಪವೂ

ಇರುವದಿಲ್ಲ. ಆದ್ದರಿಂದ ನೀನು ಮಹಾ ಕಾಲೇಶ್ವರಸ್ಥಿರುವಲ್ಲಿಗೆ ( ಉಜ್ಜಯಿನಿಗೆ ) ಹೋಗು ಎಂದು ಅಪ್ಪಣೆ ಮಾಡಿದನು. ಆಗ ಭೋಗರಾಜನು ಸ್ವದೇಶಕ್ಕೆ ಹಿಂದಿರುಗಿದನು.

ಮಕ್ಕೇಶ್ವರ ಲಿಂಗದ ಪ್ರಖ್ಯಾತಿಯು ದಕ್ಷಿಣ ಹಿಂದುಸ್ತಾನದಲ್ಲಿ ಅನೇಕ ಕಡೆಗೆ ಇತ್ತೆಂದು ತೋರುತ್ತದೆ. ಆದ್ದರಿಂದ ಕೆಲವು ಶಿವಶರಣರು ಮುಖ್ಯವಾಗಿ ಮಳೆಯರಾಜ, ಮಲ್ಲನೃಪ ಎಂಬವರು ಈ ದೇಶಕ್ಕೆ ಹೋಗಿ ಮಕ್ಕೇಶ್ವರ ಲಿಂಗದರ್ಶನ ಹೊಂದಿದರೆಂದು ಆಖ್ಯಾಯಿಕೆಗಳಿವೆ. ಹಾಗೆಯೇ ತಿರುವಾಂಕೂರಿನ ರಾಜರ ಪೂರ್ವಜನೊಬ್ಬನು ಈ ನಾಡಿಗೆ ಹೋದಹಾಗೆ ಅಲ್ಲಿ ಐತಿಹ್ಯಗಳಿವೆ.

ದಕ್ಷಿಣ ಹಿಂದುಸ್ತಾನದಲ್ಲಿ ಮುಖ್ಯವಾಗಿ ಕರ್ನಾಟಕ, ತಮಿಳದೇಶ, ಮತ್ತು ಗುಜರಾಥ ಈ ದೇಶಗಳಿಗೂ ಅರಬಸ್ತಾನ ಇಜಿಪ್ತ ದೇಶಗಳಿಗೂ ನಿಕಟ ಸಂಬಂಧವಿದೆ. ಆದ್ದರಿಂದ ರೋಮನ್ನರ ನಾಣ್ಯಗಳು ದ್ರಾವಿಡದೇಶದಲ್ಲಿ ದೊರೆತಿರುತ್ತಿವೆ. ಮತ್ತು ಕ್ರಿಸ್ತಶಕದ ಪೂರ್ವದಲ್ಲಿ ೨ ಶತಮಾನಗಳಾಚೆ ಒಂದು ಗ್ರೀಕ ನಾಟಕದಲ್ಲಿ ಕನ್ನಡ ನುಡಿಗಳು ಇರುವದು ಕಂಡುಬಂದಿದೆ. ಇದರಂತೆ ಕೆಲವು ಶೈವ ಸಾಂಪ್ರದಾಯಗಳು ಇಜಿಪ್ತ ಮತ್ತು ಅರಬಸ್ತಾನ ದೇಶಗಳಲ್ಲಿ ದೊರೆತದಕ್ಕೋಸ್ಕರ ನಾವು ಆಶ್ಚರ್ಯಪಡುವ ಕಾರಣವಿಲ್ಲ.

ಈ ಎಲ್ಲ ಸಂಗತಿಗಳನ್ನು ನಿದರ್ಶಿಸಿದಲ್ಲಿ ಶೈವಧರ್ಮ ಮತ್ತು ಅದರ ಸಂಸ್ಕೃತಿ ಒಂದು ಕಾಲದಲ್ಲಿ ಬಹು ದೂರದ ವರೆಗೆ ಹಬ್ಬಿತ್ತೆಂದು ತಿಳಿಯಲು ಯಾವ ಪ್ರತ್ಯವಾಯವಿರುವದಿಲ್ಲ.

ಶಿವಶರಣರ ಚರಿತ್ರೆಗಳ ೩ನೆಯ ಭಾಗವನ್ನು ನಾವು ಇಲ್ಲಿಗೆ ಪೂರ್ತಿಗೊಳಿಸಿ ಮುಂದೆ ೪ನೇ ಭಾಗವನ್ನು ಪ್ರಾರಂಭಿಸುವೆವು. ಹೀಗೆ ಪೂರ್ತಿಗೊಳಿಸುವ ಪೂರ್ವದಲ್ಲಿ ಜಂಗಮರು ಶೈವ ಮತ್ತು ವೀರಶೈವ ಸಂಸ್ಕೃತಿಯ ಪ್ರಸಾರಕ್ಕೋಸ್ಕರ ಮಾಡಿದ ಪ್ರಯತ್ನಗಳನ್ನು ಕುರಿತು ನಾವು ವಿವೇಚಿಸಲೆಣಿಸಿರುವೆವು. ನಾವು ಪ್ರಕಟಿಸಿದ ಶಿವಶರಣರ ಚರಿತ್ರೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಲ್ಲಿ ಜಂಗಮವರ್ಗದರು ಈ ವಿಷಯವಾಗಿ ಘನತರವಾದ ಕಾರ್ಯಗಳನ್ನು ಮಾಡಿದ್ದು ವಾಚಕರ ಲಕ್ಷಕ್ಕೆ ಬರದೆ ಇರಲಾರದು. ಇವುಗಳನ್ನು ನಾವು ಇಲ್ಲಿ ವಿವರಿಸುವೆವು.

**BOOK-POST**

R. N B 2554

*From:*
Shiv[illegible]ubhava
Office
Bijapur

ಶ್ರೀ ರಾ॥ ರಾ॥

ಅನ್ನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬನಹಟ್ಟಿ
ವ್ಹಾಯಾ-ಕುಡಚಿ ಸ್ಟೇಶನ್



ಈ ಪತ್ರಿಕೆಯನ್ನು ಇದರ ಸಂಪಾದಕರಾದ, [illegible] ಹಲಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾ[illegible] ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ [illegible] ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.



# ಶಿವಾನುಭವ

ಸಂಪುಟ ೨೪ [ ಸಂಚಿಕೆ ೩



ಫೇಬ್ರುವರಿ ೧೯೫೦

ವಿಜಾಪುರ

# ವಿಷಯಗಳು.







# ಶಿವಾನುಭವ

| ವರ್ಷ ೨೪ | ಫೆಬ್ರುವರಿ ೧೯೫೦ | ಸಂಚಿಕೆ ೫ |
| --- | --- | --- |


## ವಿಶ್ವಧರ್ಮ

(ಲೇ:- ಶ್ರೀಯುತ ಸಿ ಸಾ. ಮಹಾಂತಣ್ಣವರ ಮು-ಧಾರವಾಡ)

ವಿಶ್ವ ಕುಟುಂಬಿಗಳ ವಿಚಾರ ಲಹರಿಯಲ್ಲಿ ವಚನಕಾರರ ಮೂಲ ತತ್ವಗಳನ್ನು ಆಚಾರದಲ್ಲಿ ತಂದು ಅನುಭವಿಸಬೇಕು. ಅವರ ಎರಡೆಂಭತ್ತು ಕೋಟಿ ವಚನಗಳನ್ನು ಓದಿ ನಚಿಸಿ ಪಠಿಸಿದಲ್ಲಿ ಪರಮಾನಂದಾಬ್ಧಿಯಲ್ಲಿ ಮುಳುಗಿ ಮುಕ್ತನಾಗಲು ಮಾನವನಿಗೆ ಬಹು ಸುಲಭವಾದುದು. ಅವುಗಳಲ್ಲಿ ವಿಶ್ವಧರ್ಮವಿದೆ. ವಚನಕಾರರು ತಮ್ಮ ಹೊರದೃಷ್ಟಿಗೆ ದೃಷ್ಟವಾಗ ಈ ಸೃಷ್ಟಿಯ ಅಭ್ಯಾಸವನ್ನು ಮಾಡಿ ಈ ಸೃಷ್ಟಿಯಲ್ಲಿ ಕ್ರಮಸೃಷ್ಟಿಯೆಂತಲೂ ಯುಗಪಸೃಷ್ಟಿಎಂತಲೂವಿಭಾಗಿಸಿದ್ದಾರೆ. ಉತ್ಪತ್ತಿ ಸ್ಥಿತಿ, ಲಯ,ತಿರೋಧಾನ,ಅನುಗ್ರಹಗಳೆಂಬ ಕೃತ್ಯಗಳಿಗೊಳಪಟ್ಟ ಸೃಷ್ಟಿಯೇ ಕ್ರಮಸೃಷ್ಟಿಯೆಂತಲೂ ಇನ್ನಿತರ ಸೃಷ್ಟಿಯೇ ಯುಗಪ ಸೃಷ್ಟಿಯೆಂತಲೂ ಅವರ ಹೇಳಿಕೆ. ಈ ಕ್ರಮಸೃಷ್ಟಿಯ ಭಾಗವಾದ ಮಾನವ ಕೋಟಿಯ ಪಿಂಡ ಪ್ರಕೃತಿಗಳ ಬಗ್ಗೆ ಅವರ ವಿಚಾರವು ವೈಶಿಷ್ಟ್ಯವಾದುದು.

"ಪಿಂಡ ವಿಯೋಗಿಯಾಗಿ ಸೂಕ್ಷ್ಮತನುವಿನಿಂ ಪರಕ್ಕೆ ತೆರಳಿ ಅಲ್ಲಿ ಸುಖ ದುಃಖಗಳನ್ನನುಭವಿಸಿ ಅಲ್ಲಿಂದ ಗಗನವಾಯುವಿನಿಂ ಅಗ್ನಿಯಿಂ ಮೇಘದಿಂ ವೃಷ್ಟಿರೂಪದಿಂ ಸಕಲ ಧಾನ್ಯಂಗಳಾದವು. ಆ ಧಾನ್ಯದಿಂ ಅನ್ನವಾಯಿತ್ತು. ಆ ಅನ್ನ ರೂಪದಿಂ ಕ್ರಮದೊಳ್ಪಿದು ಬಗೆಯಾಗಿರ್ಪ ಪಂಚಭೂತಾತ್ಮಕ ಅನ್ನವೇ ಭಕ್ಷ್ಯಭೋಜ್ಯ ಲೇಹ್ಯ ಚೋಹ್ಯ ಪಿಚ್ಚಲ ಪಾನೀಯವೆಂಬ ಷಡ್ವಿಧವಾಗಿರ್ಪ ಅನ್ನವ ಭುಂಜಿಸಲು ಉದರಾಗ್ನಿಯಿಂದ

ಪಚಿಸಿ ಕಿಟ್ಟವೆಂದೂ ರಸನೆಂದೂ ಇತ್ತೆರವಾಯಿತು. ಕಿಟ್ಟವೇ ಮಲಮೂತ್ರವೆನಿಸಿ ಗುದಗುಹ್ಯ ದ್ವಾರದೊಳು ಅಪಾನವಾಯುವಿನ ವ್ಯಾಪಾರದಿಂದ ಹೊರವಟ್ಟು ಹೋಪುದು. ಮತ್ತ ಆ ರಸವನ್ನು ನಾಭಿಸ್ಥಾನದಲ್ಲಿರ್ದ ಸಮಾನ ವಾಯುವು ಸರ್ವಾಂಗಕ್ಕೆ ಹಂಚಿಬಿಡುವದು. ಆ ರಸವು ಅಲ್ಲಲ್ಲಿ ಪಚಿಸಿ ಮತ್ತೆ ಕಿಟ್ಟವೆಂದೂ ರಸನೆಂದೂ ಎರಡು ಪ್ರಕಾರವಹುದು. ಆ ಕಿಟ್ಟವೆ ಕಫ, ಸ್ವೇದ, ಮಲ, ಮೂತ್ರ, ಜಿಂಹ್ವೆಮಲ,ದಂಡಮಲ, ನಾಶಮಲ, ನೇತ್ರಮಲ, ಶ್ರೋತ್ರಮಲ, ಗುದಮಲ, ಗುಹ್ಯಮಲ, ನಖಮಲಗಳೆಂಬ ಮಲಂಗಳು ಆಯಾ ದ್ವಾರಂಗಳಿಂದ ಓಸರಿಸಿ ಹೋಗುವವು. ಮತ್ತು ಉಳಿದ ರಸವೇ ಸ್ಥೂಲರಸ ಸೂಕ್ಷ್ಮರಸವೆಂದು ದ್ವಿಪ್ರಕಾರವಹುದು. ಸೂಕ್ಷ್ಮ ರೂಪ ರಸದಿಂದ ಜ್ಞಾನೇಂದ್ರಿಯ ಕರಣಾದಿಗಳೆಲ್ಲವು ಪರಿತೋಷಿಸುವವು. ಉಳಿದ ಸ್ಥೂಲರಸವೇ ರಸ, ರುಧಿರ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜೆ, ಶುಕ್ಲಾದಿಯಾದ ಸಪ್ತ ಧಾತುಗಳು ವರ್ತಿಸುತಿಹುದು. ಆ ಜೀವನು ಧಾತುಮಯನಾಗಿ ಪುರುಷನ ಗರ್ಭದಲ್ಲ ಪ್ರಿಯಮಾನವಿರ್ದು ಸ್ತ್ರೀಪುರುಷರ ಸಂಭೋಗ ಸಮಯದೊಳು ಪಿಂಡನೇ ಕಾಲಕರ್ಮ ವಶದಿಂದ ಇಳಿದು ಸ್ತ್ರೀ ಋತುವಾದ ೧೬ ದಿವಸ ಪರ್ಯಂತರ ತಾರುಬಿಯು ಕುಸುಮದಂತೆ ವಿಕಸಿತವಾಗಿರ್ದು ನಿರ್ದೋಷವಾಗವೆ ಗರ್ಭಾಶಯವೆಂಬ ಕೋಶವಂ ವಾಯುವಶದಿಂ ಪ್ರವೇಶವಾಗಿ ಪಿಂಡವಾಗುತ್ತಿಹುದು.

"ಅಯ್ಯಾ ಒಂದು ಜೀವಾತ್ಮನೇ ನಾಲ್ಕು ತೆರನಾಗಿರ್ಪುದಯ್ಯ. ಅದೆಂತೆಂದೊಡೆ ಒಂದು ಜೀವನೇ ಅಂಡಜ ಪ್ರಾಣಿಯಾಗಿರ್ಪುದಯ್ಯ ಮತ್ತೊಂದು ಜೀವನೇ ಪಿಂಡಜ ಪ್ರಾಣಿಯಾಗಿರ್ಪುದಯ್ಯ. ಬಳಿಕೊಂದು ಜೀವನೇ ಉದ್ಭಿಜ ಪ್ರಾಣಿಯಾಗಿರ್ಪವಯ್ಯ. ಮಿಗಿಲೊಂದು ಜೀವನೇ ಜರಾಯುಜ ಪ್ರಾಣಿಯಾಗಿರ್ಪುದಯ್ಯ. ಈ ಚತುರ್ವಿಧ ಜೀವನೊಳಗೆ ೭ ಲಕ್ಷ ಮಲಜೀವನಯ್ಯ. ೭ಲಕ್ಷ ಜಡಜೀವನಯ್ಯ. ೭ ಲಕ್ಷ ಕುಜೀವನಯ್ಯ. ೭ಲಕ್ಷ ದುರ್ಜೀವನಯ್ಯ. ೭ಲಕ್ಷ ಕಪಟಜೀವನಯ್ಯ. ೭ಲಕ್ಷ ಸಂಚಲಜೀವನಯ್ಯ. ೭ಲಕ್ಷ ವಂಚಕ ಜೀವನಯ್ಯ ೭ಲಕ್ಷ ನಿರ್ಮಲ ಜೀವನಯ್ಯ. ೭ಲಕ್ಷ ಅಜಡ ಜೀವನಯ್ಯ. ೭ ಲಕ್ಷ ಸುಜೀವನಯ್ಯ. ೭ಲಕ್ಷ ಪರಮ ಜೀವನಯ್ಯ. ಈ ತೆರದ ೮೪ ಲಕ್ಷ ಜೀವ ಪ್ರಾಣಿಗಳೆಲ್ಲ ಶಿವನ ಪೂರ್ವಭಾಗ ಪ್ರವೃತ್ತಿ ಮಾರ್ಗದ ಕರ್ಮೇಂದ್ರಿಯ ಜ್ಞಾನೇಂದ್ರಿಯ ದ್ವಾದಶೇಂದ್ರಿಯಗಳಲ್ಲಿ ಜೀವಿಸುತಿಪ್ಪವಯ್ಯ. ಆ ದ್ವಾದಶ ಜೀವನ ವರ್ತನ

ಭೇದದಿಂದ ಒಂದು ಜೀವನೇ ೧೨ ತೆರನಾಗಿರ್ಪನಯ್ಯಾ. ಅದರ ಗುಣಭೇದ ವೆಂತೆಂದಡೆ – ಉಚ್ಚಿಷ್ಟವ ತಿಂದು ಬದುಕುವ ಜೀವನೇ ಮಲಜೀವನಯ್ಯಾ. ಮಾಂಸ ಭಕ್ಷಣದಿಂದ ಬದುಕುವ ಜೀವನೇ ಜಡಜೀವನಯ್ಯಾ. ಚೋರತನ ದಿಂದ ಬದುಕುವ ಜೀವನೇ ಕುಜೀವನಯ್ಯಾ. ಚಾಡಿ ಛಿದ್ರ ಚೋರತನದಿಂದ ಬದುಕುವ ಜೀವನೇ ಮಾರ್ಜೀವನಯ್ಯಾ. ಕದವು ಹೊಡೆದು ಬಡಿದು ಬಂಧಿಸಿ ಬದುಕುವ ಜೀವನೇ ಕಪಟ ಜೀವನಯ್ಯಾ. ಗಾರುಡಿಗ ವಿದ್ಯೆಯಿಂದ ಬದು ಕುವ ಜೀವನೇ ಸಂಚಲ ಜೀವನಯ್ಯಾ. ದೇಶಕ್ಕೊಂದು ಭಾಷೆ ವೇಷವ ಧರಿಸಿ ಅಜಾತತನದಿಂದ ಬದುಕುವ ಜೀವನೇ ವಂಚಕ ಜೀವನಯ್ಯಾ. ಪಟ್ಟುಸಿ ವ್ಯಾಪಾರದೊಳಗೆ ವ್ಯವಹರಿಸಿ ಸತ್ಯದಿಂದ ಬದುಕುವ ಜೀವನೇ ನಿರ್ಮಲ ಜೀವನಯ್ಯಾ. ಆವ ಮತವಾದರೇನು, ಆವ ಜಾತಿಯಾದರೇನು, ಕುಲ ಮಾಯಾ ಸಂಸಾರ ಬಂಧವಂ ತ್ಯಜಿಸಿ ಅಷ್ಟಾಂಗ ಯೋಗಾಭ್ಯಾ ಸಿಸೇ ಅಜಡ ಜೀವನೆನಿಸುವನಯ್ಯಾ. ಅಷ್ಟಾಂಗ ಯೋಗಮಂ ತ್ಯಜಿಸಿ ಶ್ರೀಗುರು ಪರಮಾರಾಧ್ಯನ ಉಪಾವಸ್ಥೆಯಂ ಮಾಡುವ ಜೀವನೇ ಸುಜೀವ ನಯ್ಯಾ. ಚಿದ್ಘನ ಶ್ರೀಗುರುದೇವನ ಪ್ರತ್ಯಕ್ಷವ ಮಾಡಿಕೊಂಡು ಘನ ಗುರು ಭಕ್ತಿಯಲ್ಲಿ ನೈಷ್ಠ್ಯತ್ವವುಳ್ಳಾತನೇ ಸಜೀವನೆನಿಸುವನಯ್ಯಾ. ಶ್ರೀಮದ್ಘನ ಗುರುವಿನ ಮೆಚ್ಚಿಸಿ ಇಷ್ಟ ಪ್ರಾಣ ಭಾವಲಿಂಗವ ಪಡೆದಾತನೇ ಪರಮ ಜೀವನೆನಿಸುವನಯ್ಯಾ. ಇಂತೀ ಜೀವನ ಬುದ್ಧಿಯ | ಗುರುಕಟಾಕ್ಷದಿಂ ನಿವೃತ್ತಿ ಮಾಡಿ ತ್ರಿವಿಧಾಂಗವೆಲ್ಲ ದೀಕ್ಷಾತ್ರಯಂಗಳಿಂದ ಶುದ್ಧ ಪ್ರಸಾದ ವಾಗಿ ತ್ರಿವಿಧ ಮನವೆಲ್ಲ ಶಿಕ್ಷಾತ್ರಯಂಗಳಿಂದ ಸಿದ್ಧಪ್ರಸಾದವಾಗಿ, ಭಾವ ತ್ರಯಂಗಳೆಲ್ಲ ಮೋಕ್ಷತ್ರಯಂಗಳಿಂದ ಪ್ರಸಿದ್ಧ ಪ್ರಸಾದವಾಗಿ, ಸತ್ಯವಾಣಿ, ಸತ್ಯಕ್ರಿಯೆ, ಉಳಿದ ಅವಯುವಗಳೆಲ್ಲ ಸತ್ಯವನ್ನೇ ಹಾಸಿ ಸತ್ಯವನ್ನೇ ಹೊದ್ದು ಸತ್ಯಕಾಯಕವನೇ ಮಾಡಿ ಮರ್ತ್ಯದಲ್ಲಿ ಬಂದೂ ಬಾರದಂತೆ ಸತ್ಯ ಸದಾ ಚಾರದಿಂದ ನಡೆನುಡಿ ಸಂಪನ್ನರೇ ಕೇವಲ ಪರಶಿವ ಗಣಂಗಳು ನೋಡಾ ಸಂಗನ ಬಸವೇಶ್ವರಾ"

ಶಿವಶರಣರು ಮಾನವನ ವೃತ್ತಿಯನ್ನೂ ಆತನ ಪ್ರವೃತ್ತಿಯ ಭೇದ ಗಳನ್ನೂ ಸ್ವಾನುಭಾವದಿಂದ ವಿಚಾರಿಸಿದಂತೆ ವಿಜ್ಞಾನ ಶಾಸ್ತ್ರ ಕೋವಿದರು ಶಾರೀರಿಕ ಮಾನಸಿಕ ನೈತಿಕ ತತ್ವಗಳನ್ನು ತಮ್ಮ ಬೌದ್ಧಿಕ ಶಕ್ತಿಯಿಂದ ಮಾನಸಶಾಸ್ತ್ರ, ಶರೀರ ಶಾಸ್ತ್ರಗಳನ್ನ ಬರೆದಿರಬಹುದು. ಆದರೆ ಶರಣರು ತನು ಮನ ಭಾವಗಳಲ್ಲಿ ಅಡಕವಾದ ಅಧ್ಯಾತ್ಮ ಜ್ಞಾನವನ್ನೂ ಆಚಾ

ರಾನುಭವಗಳಿಂದಲೂ ಭಕ್ತಿಕ್ರಿಯೆಗಳಿಂದಲೂ ಪರನು ಯೋಗಾನುಷ್ಠಾನ ದಿಂದಲೂ ಪಡೆದು ಅನುಭವಿಸಿ ಕಾಯ ದೇಹ ತನು ಅಂಗ ಪ್ರಾಣ ಕರ ಣಾದಿಗಳ ಸ್ಥೂಲ ಸೂಕ್ಷ್ಮ ಕಾರಣಾಂಗಗಳ ಅತಿ ಸೂಕ್ಷ್ಮ ತತ್ವಗಳನ್ನು ವಿಸ್ತರಿಸಿ ಮಾನವನು ನಿಜಾನಂದವನ್ನು ಪಡೆಯಲು ನಿಷ್ಕರ್ಷಿಸಿದ ನೂರೊಂದು ಮೆಟ್ಟಲುಗಳೂ ಷಟ್ ಸ್ಥಲಗಳೂ ಅವುಗಳಲ್ಲಿ ತೋರಿಬರುವ ೨೧೬ ಸಕೀಲಗಳೂ ದುರಾಚಾರಗಳಿಂದಲೂ ಅಷ್ಟಾವರಣ ಕ್ರಿಯೆಗಳಿಂದಲೂ ಶಿವಶರಣರ ಸಂಗಗಳಿಂದಲೂ ಶಿವಾನುಭವ ಮಂಟಪಗಳಿಂದಲೂ ಸಹಜ ವಾಗಿ ಶಿವಭಕ್ತರಿಗೆ (ದೇವಭಕ್ತರಿಗೆ) ಅವಗತವಾಗುವವು. ಅವರು ವಿಶ್ವದ ಅಣುಶಕ್ತಿಯಿಂದ ಮಹಾಶಕ್ತಿಯ ವರೆಗೆ ವಿಚಾರಿಸಿ ಆಧುನಿಕ ಖಗೋಲ ಶಾಸ್ತ್ರಜ್ಞರ ಮತದಂತೆ ಸೂರ್ಯ ಮಾಲೆಯಲ್ಲಿ ಸೂರ್ಯನ ಸುತ್ತಲೂ ಉಳಿದ ಗೋಲಗಳು ಚಕ್ರಿಸುವಂತೆ ಹಾಗು ಒಂದು ವಿಶಿಷ್ಟಾಣುವನ್ನು ಇನ್ನಿತರ ಅಣುಗಳು ಚಕ್ರಿಸುವಂತೆ ಬ್ರಹ್ಮಾಂಡವನ್ನು ಹೋಲುವ ಪಿಂಡಾಂಡ ದಲ್ಲಿ ಅಷ್ಟಾಂಗಯೋಗಿಗಳು ೯ ಚಕ್ರಗಳನ್ನು ಸಂಶೋಧಿಸಿದ್ದರೆ ಶಿವಶರ ಣರು ದಶಮವಾದ ಅಣುಚಕ್ರವನ್ನೂ ಅದರ ಶಕ್ತಿಯನ್ನೂ ಕಂಡುಹಿಡಿ ದಿದ್ದಾರೆ. ಮತ್ತು ಅಷ್ಟಾಂಗಯೋಗಸಾಧನಕ್ಕೆ ಗುಹೆ ಗಹ್ವರ ಅರಣ್ಯ ಗಳು ಸ್ಥಾನವಾದರೆ ಅಷ್ಟಾವರಣ ಕ್ರಿಯೆಗೆ ಲೌಕಿಕ ವ್ಯವಹಾರದಲ್ಲಿದ್ದ ತನ್ನ ಮನೆಯೇ ಸ್ಥಾನವಾಗಿದೆ. ಅಷ್ಟಾಂಗಯೋಗಕ್ಕೂ ಶಿವಯೋಗಕ್ಕೂ ಮಹ ದಂತರವು.

ಯೋಗದಲ್ಲಿ ಪೂರ್ವಯೋಗವೆಂತಲೂ ಉತ್ತರಯೋಗವೆಂತಲೂ ೨ವಿಧಗಳು. ಇಷ್ಟಲಿಂಗ ವಿರಹಿತರು ಮಾಡುವ ಕರ್ಮಯೋಗಗಳಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಇವು ಪೂರ್ವ ಯೋಗ. ಧ್ಯಾನ, ಧಾರಣ, ಸಮಾಧಿ, ಇವು ಉತ್ತರಯೋಗ. ಅವರು ಲಕ್ಷಿಸುವಂಥ ವಸ್ತುಗಳು ಮೂರುತೆರನಾಗಿಹವು. ನಾದಲಕ್ಷ್ಯ, ಬಿಂದುಲಕ್ಷ್ಯ, ಕಲಾಲಕ್ಷ್ಯಗಳೆಂಬವು- ನಾದವೇ ಸಾಕ್ಷಾತ್ ಪರತತ್ವವೆಂದೂ, ಬಿಂದುವೆ ಕೇವಲ ದಿವ್ಯ ಪ್ರಕಾಶವುಳ್ಳದ್ದೆಂದೂ ಲಕ್ಷಿಸುವರು. ಇನ್ನು ಕಲಾಲಕ್ಷ್ಯವು ಚಂದ್ರನ ಕಲೆಯಹಾಗೆ ಸೂರ್ಯನ ಕಿರಣಗಳ ಹಾಗೆ ಮಿಂಚಿನ ಪ್ರಕಾಶದ ಹಾಗೆ ನವರತ್ನಗಳ ದೀಪದಂತೆ ಪ್ರಕಾಶಮಯವಿರುವದೆಂದು ಲಕ್ಷಿಸುವರು.

ಶಿವಯೋಗವು ಷಟ್‌ಸ್ಥಲಾಂತರಾಳದ ನೂರೊಂದು ಸ್ಥಳಗಳಲ್ಲಿಯ ಪ್ರಾಣಲಿಂಗಿಯ ಒಂದು ಸ್ಥಳವು. ಈ ಶಿವಯೋಗ ಸಾಧನೆಯು ಕ್ರಮ

ದಿಂದ ಹೇಗೆ ಸಾಧ್ಯವಾಗುವದೆಂಬವನ್ನು "ಶಿವಯೋಗದಲ್ಲಿ ಸಂಸಾರಯೋಗ ವಾಬುದಯ್ಯ. ಸಂಸಾರಯೋಗ ಮಾದಲ್ಲಿ ಭಕ್ತಿಯನುಗ್ರಹ ಯೋಗವಯ್ಯ. ಭಕ್ತಿಯನುಗ್ರಹಯೋಗವಾದಲ್ಲಿ ಲಿಂಗಾನುಗ್ರಹಯೋಗವಯ್ಯ. ಲಿಂಗಾನುಗ್ರಹಯೋಗವಾದಲ್ಲಿ ಜಂಗಮಾನುಗ್ರಹಯೋಗವಯ್ಯ. ಜಂಗಮಾನುಗ್ರಹಯೋಗವಾದಲ್ಲಿ ಪ್ರಸಾದಾನುಗ್ರಹಯೋಗವಯ್ಯ. ಪ್ರಸಾದಾನುಗ್ರಹಯೋಗವಾದಲ್ಲಿ ತ್ರಿವಿಧಸನ್ಮತಯೋಗವಯ್ಯ. ತ್ರಿವಿಧಸನ್ಮತಯೋಗವಾದಲ್ಲಿ ಮನಮಗ್ನಯೋಗವಯ್ಯ. ಮನಮಗ್ನಯೋಗವಾದಲ್ಲಿ ಕೂಡಲಚನ್ನಸಂಗ ನಿಮ್ಮ ಸಂಯೋಗವಯ್ಯ" ಹೀಗೆ ವಿವರಿಸಿದ್ದಾಗಿದೆ.

## ಇಂತೀ ಕ್ರಮದಂತೆ ಲಿಂಗಾಂಗಿಗಳು ಅನುಸರಿಸುವ ಯೋಗದ ವಿವರಗಳು

**ಯಮಯೋಗಃ** ಅನೃತ, ಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ ಇಂತಿವನುಳಿದು ಲಿಂಗಪೂಜೆಯ ಮಾಡುವುದೇ ಯಮಯೋಗ.

**ನಿಯಮಯೋಗಃ-** ಬ್ರಹ್ಮಚಾರಿಯಾಗಿ ನಿರಾಪೇಕ್ಷೆಯಾಗಿ ಆಗಮಮತಾನುವರ್ತಿಯಾಗಿ ಶಿವನ ನಿಂದೆಯ ಕೇಳದವನಾಗಿ ಇಂದ್ರಿಯ ನಿಗ್ರಹವುಳ್ಳವನಾಗಿ, ಕಾಯಕ, ವಾಚಕ, ಮಾನಸಿಕಗಳಲ್ಲಿ ಶುದ್ಧನಾಗಿ ಪ್ರಣವ ಪಂಚಾಕ್ಷರಿ ಉಚ್ಚರಿಸುವವನಾಗಿ, ವಿಭೂತಿ ರುದ್ರಾಕ್ಷಿ ಧಾರಣನಾಗಿ, ಪಾಪವಿರಹಿತನಾಗಿ ಶಿವಲಿಂಗಾರ್ಚನಾತತ್ಪರನಾಗಿಹುದೇ ನಿಯಮಯೋಗವು

**ಆಸನಯೋಗವುಃ** - ಬದ್ಧಾಸನ, ಪದ್ಮಾಸನ, ಅರ್ಧಚಂದ್ರಾಸನ, ಪರ್ಯಂಕಾಸನ, ಸ್ವಸ್ತಿಕಾಸನ ಈ ಐದು ಆಸನಗಳಲ್ಲಿ ಕುಳಿತು ಲಿಂಗಪೂಜೆ ಮಾಡುವದು ಆಸನಯೋಗವು.

**ಪ್ರಾಣಾಯಾಮಃ—** ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಎಂಬಿವು ದಶವಾಯುಗಳು. ಪ್ರಾಣವಾಯು ಇಂದ್ರನೀಲವರ್ಣ, ಹೃದಯಸ್ಥಾನದಲ್ಲಿರ್ದು ಅಂಗುಷ್ಟ ತೊಡಿವಾಣ ನಾಸಾಗ್ರ ಪರಿಯಂತರ ಸತ್ಪ್ರಾಣಿಸಿ, ಉಶ್ವಾಸ, ನಿಶ್ವಾಸಸಂಗೈದು ಅನ್ನಜೀರ್ಣಕರಿಸುತ್ತಿಹುದು. ಅಪಾನವಾಯು ಹರಿತವರ್ಣ, ಗುದಸ್ಥಾನದಲ್ಲಿರ್ದು ಮಲಮೂತ್ರ ವಿಸರ್ಜನೆಯಂ ಮಾಡಿಸಿ ಅಧೋದ್ವಾರಮಂ ಬಲಿದು ಅನ್ನರಸಮಂ ಸಂವ್ಯಾಪ್ತಿಯಂ ಮಾಡಿಸುತ್ತಿಹುದು.

ವ್ಯಾನವಾಯು ಗೋಕ್ಷೀರವರ್ಣ, ಸಂಧಿ ಸಂಧಿಗಳಲ್ಲಿರ್ದು ನೀಡಿಸಿಕೊಂಡಿರ್ದುದನು ಮುದಡಿಸಿಕೊಂಡು, ಮುದಡಿಸಿಕೊಂಡಿರ್ದುದನು ನೀಡೀಕರಿಸಿ ಅನ್ನಪಾನ ತುಂಬಿಸುತಿಹುದು. ಉದಾನವಾಯು ಎಳೆನಿಂಬೆನವರ್ಣ, ಕಂಠ ಸ್ಥಾನದಲ್ಲಿರ್ದು ಸೀನು, ಕೆಮ್ಮು, ಮತ್ತು ಕನಸು ಕಾಣಿಸುವ, ಚರ್ವಣ ನಿರೋಧಂಗಳಂ ಮಾಡಿಸಿ ಅನ್ನ ಆಹಾರ ಸ್ಥಾಪನಂಗೈವುದು. ಸಮಾನ ವಾಯು ಮೇಘವರ್ಣ ನಾಭಿಸ್ಥಾನದಲ್ಲಿರ್ದು ಆಪಾದ ಮಸ್ತಕ ಪರ್ಯಂತರ ಪಸರಿಸಿ ಉಂಡ ಅನ್ನದ ರಸವನ್ನು ಎಲ್ಲ ರೋಮನಾಳಂಗಳಿಗೆ ಸಹ ಹಂಚುವದು. ಈ ಐದು ಪ್ರಾಣಪಂಚಕಗಳು. ಆತ್ಮನು ಘಟವಿಡಿದು ಹುಟ್ಟುವಾಗ ಆತ್ಮನೊಡನೆ ಹುಟ್ಟಿ ಆತ್ಮನು ಘಟದಲ್ಲಿ ಜೀವಿಸಿಕೊಂಡಿರುವ ಪರ್ಯಂತರವು ಆತ್ಮನ ಸಕಲ ವ್ಯವಹಾರಗಳಿಗೆ ತಾವೇ ಸಹಾಯಂಗಳಾಗಿ ಆತ್ಮನು ಘಟವ ಬಿಟ್ಟು ಹೋಗುವಾಗ ಸೂರ್ಯನ ಕಿರಣಂಗಳು ಸೂರ್ಯನೊಡನೈದುವ ಹಾಗೆ ಆತ್ಮನೊಡನೈದುತ್ತಿಹವು. ಆದಕಾರಣ ಇದಕ್ಕೆ ಪ್ರಾಣಪಂಚಕವೆಂಬ ಅಭಿಧಾನವು.

ಇನ್ನು ನಾಗವಾಯು ಪೀತವರ್ಣ ರೋಮನಾಳಂಗಳಲ್ಲಿರ್ದು ಚಲನೆ ಇಲ್ಲದೆ ಹಾರಿಸುವದು. ಕೂರ್ಮವಾಯು ಶ್ವೇತವರ್ಣ, ಉದರ ಲಲಾಟ ಗಳಲ್ಲಿರ್ದು ಶರೀರಮಂ ತಾಳ್ದು ದೇಹಮಂ ಪುಷ್ಟಿಯಂ ಮಾಡಿಕೊಂಡು ಬಾಯಿ ತೆರೆಯುತ್ತಮುಚ್ಚುತ್ತ ನೇತ್ರದಲ್ಲಿ ಉನ್ಮೀಲನಮಂ ಮಾಡಿಸುತ್ತಿಹುದು. ಕೃಕರವಾಯು ಅಂಜನವರ್ಣ ನಾಸಾಗ್ರದಲ್ಲಿರ್ದು ಕ್ಷುಧಾದಿ ಧರ್ಮಂಗಳಂ ಮಾಡಿ ಗಮನಾಗಮನಂಗಳಂ ಮಾಡಿಸುತಿಹುದು. ದೇವದತ್ತ ವಾಯು ಸ್ಫಟಿಕವರ್ಣ ಕಟಿಸ್ಥಾನದಲ್ಲಿರ್ದು ಕುಳ್ಳಿರ್ದಲ್ಲಿ ಮಲಗಿಸಿ, ಮಲಗಿರ್ದಲ್ಲಿ ಏಳಿಸಿ ನಿದ್ರಿಸಿ ಚೇತರಿಸಿ ಮಾತನಾಡಿಸುತಿಹುದು. ಧನಂಜಯ ವಾಯು ನೀಲವರ್ಣ ಬ್ರಹ್ಮರಂಧ್ರದಲ್ಲಿರ್ದು ಸಮುದ್ರಘೋಷಣಮಂ ಕರ್ಣದಲ್ಲಿ ಘೋಷಿಸಿ ಮರಣಕಾಲದಲ್ಲಿ ನಿರ್ಘೋಷಿಯಾಗಿ ಮರಣವಾದ ಮೂರು ದಿನಕ್ಕೆ ದೇಹವನ್ನು ಬಾಯಿಸಿ ಕೆಡಿಸಿ ಪೋಪುದು.

ಪವನದೊಡನೆ ಪ್ರಾಣ ಕೂಡಿ ಪ್ರಾಣದೊಡನೆ ಪರ ಕೂಡಿ ಹೃದಯ ಸ್ಥಾನದಲ್ಲಿರ್ದು ಹಂಸನೆನಿಸಿಕೊಂಡು ಆಧಾರ, ಸ್ವಾಧಿಷ್ಠ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯವೆಂಬ ಷಡ್‌-ಚಕ್ರಗಳಮೇಲೆ ಸುಳಿದು ನವನಾಳಂಗಳೊಳಗೆ ಚರಿಸುತಹುದು. ಅಷ್ಟದಳಗಳಾಶ್ರಯವಾಗಿ ಅಷ್ಟ

ದಳಂಗಳ ಮೆಟ್ಟಿ ಚರಿಸುವ ಹಂಸನು ವಿಶುದ್ಧಿ ಚಕ್ರವನ್ನೈದಿ ಅಲ್ಲಿಂದ ನಾಸಾಗ್ರದಲ್ಲಿ ಹನ್ನೆರಡು ಅಂಗುಲ ಪ್ರಾಣ ಹೊರಸೂಸಿ ನಂತರ ಒಳಗೆ ಹತ್ತು ಅಂಗುಲ ಪ್ರಾಣ ತುಂಬುತಿಹುದು. ಹೀಗೆ ಈಡೆ ಪಿಂಗಳದೊಳಗೆ ಚರಿಸುವ ಮಾರುತನು ಇದರಂತೆ ಚರಿಸುತ್ತಿರಲು ಸಮಸ್ತ ಪ್ರಾಣಿಗಳ ಆಯುಷ್ಯವು ದಿನ ದಿನಕ್ಕೆ ಕುಂದುತಿಹುದು. ಹೀಗೆ ಈಡೆ ಪಿಂಗಳಗಳಲ್ಲಿ ಚರಿಸುವ ರೇಚಕ ಪೂರಕಗಳ ಭೇದವರಿದು ಮನಪವನಂಗಳ ಮೇಲೆ ಲಿಂಗ ಸಂಬಂಧಿಸಿ ಮನ ಪವನ ಪ್ರಾಣಂಗಳು ಲಿಂಗದೊಡನೆ ಕೂಡಿ ಅವನ್ನು ಲಿಂಗಸ್ವರೂಪವ ಮಾಡಿ ವಾಯು ಪ್ರಾಣತ್ವಮಂ ಕಳೆದು ಲಿಂಗಪ್ರಾಣಮಂ ಮಾಡಿ ಹೃದಯ ಕಮಲದ ಮಧ್ಯದಲ್ಲಿ ಆ ಪ್ರಾಣವ ಚರಿಸುತ ಶಿವಧ್ಯಾನ ದಲ್ಲಿ ತರಹರನಾಗಿರ್ಪುದೇ ಪ್ರಾಣಾಯಾಮವು.

**ಪ್ರತ್ಯಾಹಾರಃ** – ಇಂದ್ರಿಯಂಗಳು ಆಹಾರದಿಂದ ಮತ್ತು ನಿದ್ರೆಯಿಂದ ಹಾಗು ವಿಷಯುಗಳಿಂದ ಕರ್ಮಂಗಳ ಮಿಗೆ ಮಾಡಿ ಜೀವಂಗೆ ಭವಬಂಧ ನಂಗಳನೊಡಗೂಡಿಸಿ ಆಯಾಸಂ ಬಡಿಸುತಿರ್ಪವು. ಅದರಿಂದ ಅಜ್ಞಾನಿ ಕರ್ಮಿಗಳು ಆಹಾರಮಂ ಉದರಕ್ಕೆ ಮೇಲಿಂದ ಮೇಲೆ ಹಾಕಲು ಹವಣಿಸು ತ್ತಿರುವವು. ಗುರುಕೃಪೆಯಿಂದ ಶಿವಲಿಂಗಮಂ ಪಡೆದ ಅಷ್ಟಾವರಣಾಚಾರ ದಲ್ಲಿ ಸರ್ವ ಇಂದ್ರಿಯಂಗಳನು ಲಿಂಗ ಮುಖದಿಂದ ಸಮಾಧಾನ ಮಾಡು ವದೇ ಪ್ರತ್ಯಾಹಾರವು. ಇವೈದು ಪೂರ್ವಯೋಗ. ಇನ್ನು ಧ್ಯಾನ, ಧಾರಣ ಸಮಾಧಿಗಳೆಂಬವು ಉತ್ತರಯೋಗ

**ಧ್ಯಾನಯೋಗ:** – ಶ್ರೀಗುರುವು ಅಂತರಂಗದ ಶುದ್ಧೀಕರಿಸಿ ಪರ ಮಾತ್ಮಲಿಂಗವನ್ನೇ ಶಿವಲಿಂಗಸ್ವರೂಪವನ್ನಾಗಿ ಮಾಡಿ ಕರಸ್ಥಲಕ್ಕೆ ಕೊಟ್ಟನಾಗಿ ಆ ಕರಸ್ಥಲದಲ್ಲಿಪ್ಪ ಶಿವಲಿಂಗವನೇ ಪರಮಾತ್ಮ ಚಿನ್ಹವೆಂದರಿದು ( ಆ ಲಿಂಗ ವನ್ನೇ ) ಆಧಾರ ಸ್ವಾಧಿಷ್ಟ ಮಣಿಪೂರಕ ಅನಾಹತ ವಿಶುದ್ಧಿ ಆಗ್ನೇಯ ಬ್ರಹ್ಮರಂಧ್ರ ಶಿಖಾ ಪಶ್ಚಿಮ ಸ್ಥಾನಗಳಲ್ಲಿ ಕಾಲವರಿತು ಜಪವರಿತು ಧ್ಯಾನಿ ಸುವದು ಧ್ಯಾನಯೋಗವು.

**ಧಾರಣಯೋಗಃ**— ಆ ಶಿವಲಿಂಗವನ್ನೇ ಭಾವ, ಮನ,ಕರ ಮುಖ್ಯ ವಾದ ಸರ್ವಾಂಗದಲ್ಲಿ ಧರಿಸಿ ಇಷ್ಟಲಿಂಗವನ್ನೇ ಷಟ್‌ಸ್ಥಲದಲ್ಲಿ ಧರಿಸುವ ದೆಂತೆನೆ— ಭಕ್ತನು ಬಗಲಲ್ಲಿ, ಮಹೇಶನು ಉದರದಲ್ಲಿ, ಪ್ರಸಾದಿಯು ದಕ್ಷಿಣ ಹಸ್ತದ ಭುಜದಲ್ಲಿ, ಪ್ರಾಣಲಿಂಗಿಯು ಹೃದಯ ಸ್ಥಾನದಲ್ಲಿ, ಶರಣನು

ಕಂಠಸ್ಥಾನದಲ್ಲಿ, ಐಕ್ಯನು ಉತ್ತಮಾಂಗದಲ್ಲಿ ಅಥವಾ ಅನುಳೋಕ್ಯದಲ್ಲಿ ಧರಿಸುವದೇ ಧಾರಣ ಯೋಗವು.

**ಸಮಾಧಿಯೋಗವು:—** ಸತ್ಕ್ರಿಯೆ ಸುಜ್ಞಾನಗಳಿಂದ ಪ್ರಾಣಕ್ಕೆ ರಿಪಕಳೆ ಸಂಬಂಧಿಸಿ ಇಷ್ಟಪ್ರಾಣ ಭಾವವೆಂಬ ಲಿಂಗತ್ರಯವನ್ನು ಏಕೀಕಾರ ಮಾಡಿ ಅಖಂಡ ಪರಿಪೂರ್ಣ ಕೇವಲ ಪರಂಜ್ಯೋತಿ ಸ್ವರೂಪವಪ್ಪ ಮಹಾಲಿಂಗದೊಳಗೆ ಸಂಯೋಗವಾಗಿ ಭಿನ್ನವಿಲ್ಲದೆ ಏಕಾರ್ಥವಾಗಿಪ್ಪುದೆಂತೆನೆ— ಕಂಡದಳಗಳಲ್ಲಿ ಚರಿಸುವ ಜೀವಹಂಸನು ಇಂದ್ರದಳದಲ್ಲಿರಲು ಭಕ್ತಿಯನ್ನೂ ಅಗ್ನಿದಳದಲ್ಲಿರಲು ಕ್ಷುಧಾದಿ ಧರ್ಮಂಗಳನ್ನೂ ದಕ್ಷಿಣದಳದಲ್ಲಿರಲು ಕ್ರೋಧಂಗಳನ್ನೂ ನೈಋತ್ಯದಳದಲ್ಲಿರಲು ದ್ವೇಷವನ್ನೂ ವರುಣದಳದಲ್ಲಿರಲು ನಿದ್ರೆಯನ್ನೂ ವಾಯವ್ಯದಳದಲ್ಲಿರಲು ಗಮನಾಗಮನಂಗಳನ್ನೂ ಉತ್ತರದಳದಲ್ಲಿರಲು ಧರ್ಮಕಾರ್ಯಗಳನ್ನೂ ಈಶಾನ್ಯದಳದಲ್ಲಿರಲು ವಿಷಯಂಗಳನ್ನೂ ಮಾಡಿಸುತ್ತಿಹನು. ಆ ಜೀವ ಹಂಸನನ್ನು ಕಂಡ ದಳಗಳಲ್ಲಿ ಹೋಗಗೊಡದೆ ಲಿಂಗಾಂಗ ಸಂಗಿಗಳು ಇಂದ್ರದಳ ಉತ್ತರದಳ ಮಧ್ಯದಳಗಳಲ್ಲಿ ಸ್ಥಾಪಿಸುವ ಸಾಧನೆಗೆಯ್ಯುವರ. ಅಷ್ಟದಳಕಮಲದ ಮಧ್ಯದಳದಲ್ಲಿರಲು ಸದ್ಭಾವಿಯಾಗಿ ಮೋಕ್ಷಾಪೇಕ್ಷೆಯುಳ್ಳವರಾಗುವರು.

ಇಂತು ಅಷ್ಟಾಂಗ ಯೋಗದಲ್ಲಿ ಲಿಂಗಾರ್ಚನೆಯ ಮಾಡಿ ಶಿವತತ್ತ್ವದೊಡನೆ ಕೂಡುವದು ಲಿಂಗಾಂಗಯೋಗವು. ವೀರಮಾಹೇಶ್ವರರ ಲಿಂಗಸಂಧಾನವೆಂತೆನೆ —ಬ್ರಹ್ಮರಂಧ್ರವಲ್ಲಿಪ್ಪ ನಾದ ಚೈತನ್ಯವಪ್ಪ ಪರಮ ಚಿತ್ಕಳೆಯನೆ ಭಾವ ಮನಕರದಲ್ಲಿ ಶ್ರೀಗುರುವು ತಂದು ಸಾಹಿತ್ಯ ಮಾಡಿದನಾಗಿ ಭಾವದಲ್ಲಿ ಸತ್ ಸ್ವರೂಪವಪ್ಪ ಭಾವಲಿಂಗವೆನಿಸಿ, ಪ್ರಾಣದಲ್ಲಿ ಚಿತ್ ಸ್ವರೂಪವಪ್ಪ ಪ್ರಾಣಲಿಂಗವೆನಿಸಿ, ಒಂದೇ ವಸ್ತುವು ತನುಮನ ಭಾವಗಳಲ್ಲಿರ್ದ ತ್ರಿವಿಧ ಭೇದಂಗಳನರಿದು ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ, ಭಾವಲಿಂಗವ ಭಾವಜ್ಞಾನದಿಂದ ಗ್ರಹಿಸಿ, ಇಷ್ಟಲಿಂಗ ತ್ರಯವಿಡಿದು ಆಚರಿಸಿ ಲಿಂಗದೊಡನೆ ಕೂಡಿ ಆ ಲಿಂಗವೆ ತಾನೆ ತಾನಾಗಿ ವಿರಾಜಿಸುತಿಪ್ಪುದೀಗ ಶಿವಯೋಗವು. ಇದು ಸಾಂಖ್ಯ, ತಾರಕ, ಅಮನಸ್ಕವೆಂದು ತ್ರಿವಿಧವಾಗಿಪ್ಪುದು. ಮೂವತ್ತಾರು ತತ್ತ್ವ ವಿಚಾರವೇ ಸಾಂಖ್ಯವೆನಿಸುವದು. ಪ್ರಾಣಲಿಂಗ ಸಂಯೋಗವೇ ತಾರಕವೆನಿಸುವದು. ಈ ಎರಡಾದ ಲಿಂಗ ಲಿಂಗ ಸಾಮರಸ್ಯವೇ ಅಮನಸ್ಕವೆನಿಸುವದು.

ವಿಶ್ವಧರ್ಮವೆಂದು ಹೇಳಲ್ಪಡುವ ಈ ವೀರಶೈವ ಮತದಲ್ಲಿ ಜೀವನಿಗೆ ಲಿಂಗ+ಆಯತ, ಲಿಂಗ+ಸ್ವಾಯತ, ಲಿಂಗ+ಸನ್ನಿಹಿತ ಕ್ರಿಯೆಗಳು ಮುಖ್ಯ. ಇವೆಂದರೆ ಕ್ರಿಯಾದೀಕ್ಷೆ, ಮನುದೀಕ್ಷೆ, ವೇಧಾದೀಕ್ಷೆಗಳು. ಕ್ರಿಯಾದೀಕ್ಷೆಯಲ್ಲಿ ಬೋಧಾದೀಕ್ಷೆಯು ಕೂಡಲ್ಪಟ್ಟಿರುವದು ಶ್ರೀಗುರುವು ತನ್ನ ಕೃಪಾಕಟಾಕ್ಷದಿಂದ ನಿರೀಕ್ಷಿಸಿ, ಶಿಷ್ಯನ ಮಸ್ತಕವ ಮೇಲೆ ಅಭಯ ಹಸ್ತಮಂ ಕರುಣಿಪುದೇ ವೇಧಾದೀಕ್ಷೆಯು. ನೀತಿ ಕ್ರಿಯಾಚಾರಗಳನ್ನು ಬೋಧಿಸುವದೇ ಬೋಧಾದೀಕ್ಷೆಯು. ಮೂಲ ಪಂಚಾಕ್ಷರ ಷಡಕ್ಷರವಂ ಕರ್ಣದಲ್ಲಿ ಬೋಧಿಸುವದೇ ಮನುದೀಕ್ಷೆಯು ಆಣವ ಮಲ, ಮಾಯಾ ಮಲ, ಕಾರ್ಮಿಕ ಮಲಗಳಿಂದ ಪವಿತ್ರೀಕರಿಸಿ ತ್ರಿವಿಧಾಂಗಕ್ಕೆ ತ್ರಿವಿಧ ಲಿಂಗಗಳನು ಅಳವಡಿಸುವದೇ ಕ್ರಿಯಾದೀಕ್ಷೆಯು. ಸ್ಥೂಲ ತನುವಿನಲ್ಲಿ ಇಷ್ಟಲಿಂಗ, ಸೂಕ್ಷ್ಮತನುವಿನಲ್ಲಿ ಪ್ರಾಣಲಿಂಗ, ಕಾರಣ ತನುವಿನಲ್ಲಿ ಭಾವ ಲಿಂಗ ಸಂಬಂಧಿಸಿದ್ದೇ ಕ್ರಮವಾಗಿ ಲಿಂಗಾಯತ, ಲಿಂಗಸ್ವಾಯತ, ಲಿಂಗ ಸನ್ನಿಹಿತಗಳು. ಶ್ರೀಗುರುವು ಅಷ್ಟಾಂಗದಲ್ಲಿ ಅಷ್ಟಾವರಣಗಳನ್ನು ಅಳವಡಿಸಿ, ಸ್ಥೂಲ (ಕ್ರಿಯೆ) ಸೂಕ್ಷ್ಮ ಕಾರಣ, ಜ್ಞಾನ, ಐಕ್ಯಗಳೆಂಬ ಅಷ್ಟಾವರಣಗಳನ್ನು ಆಚರಿಸಲು ಅರುಹುವನು.

ಮಜ್ಜಾ ಎಂಬುದು ಗುರುವು. ಅಸ್ಥಿಯೇ ಲಿಂಗ, ದೇಹವೇ ಜಂಗಮ, ಮೇಧಸ್ಸೇ ತೀರ್ಥ, ಮಾಂಸವೇ ಶೇಷ (ಪ್ರಸಾದ), ರಸವೇ ಭಸ್ಮ, ರುಧಿರವೇ ರುದ್ರಾಕ್ಷಿ, ರೇತುವೇ ಮಂತ್ರ. ಇವು ಸ್ಥೂಲ ಅಷ್ಟಾವರಣಗಳು.

ಶಿಖಿಯೇ ಗುರು, ನೇತ್ರವೇ ಲಿಂಗ, ಬ್ರಹ್ಮರಂಧ್ರವೇ ಜಂಗಮ, ಅಂಗುಳವೇ ಪಾದೋದಕ, ಗುಟುಕವೇ ಪ್ರಸಾದ, ಅಂಗವೇ ವಿಭೂತಿ, ಕಂಠವೇ ರುದ್ರಾಕ್ಷಿ, ವಾಕ್ಕುವೇ ಮಂತ್ರ. ಇವು ಸೂಕ್ಷ್ಮ ಅಷ್ಟಾವರಣಗಳು

ಚಂದ್ರನೇ ಗುರು, ಸೂರ್ಯನೇ ಲಿಂಗ, ಆತ್ಮನೇ ಜಂಗಮ, ಅಪ್ಪುವೇ ತೀರ್ಥ, ವಾಯುವೇ ಶೇಷ, ಪೃಥ್ವಿಯೇ ವಿಭೂತಿ, ತೇಜವೇ ರುದ್ರಾಕ್ಷಿ, ಆಕಾಶವೇ ಮಂತ್ರ. ಇವು ಕಾರಣಾಷ್ಟಾವರಣಗಳು.

ತನುವೇ ಗುರು, ಮನವೇ ಲಿಂಗ, ಧನವೇ ಜಂಗಮ, ಜ್ಞಾನವೇ ಪಾದೋದಕ, ಭಾವವೇ ಪ್ರಸಾದ, ಮಂಗಲವೇ ವಿಭೂತಿ, ಬುದ್ಧಿಯೇ ರುದ್ರಾಕ್ಷಿ, ಅರುಹೇ ಮಂತ್ರ. ಇವು ಸುಜ್ಞಾನಾಷ್ಟಾವರಣಗಳು.

ಸತ್ತವೇ ಗುರು, ಚಿತ್ತವೇ ಲಿಂಗ, ಆನಂದವೇ ಜಂಗಮ, ನಿತ್ಯವೇ ಪಾದೋದಕ, ಪರಿಪೂರ್ಣವೇ ಪ್ರಸಾದ, ಚಿದ್ಭಸಿತವೇ ವಿಭೂತಿ, ಕರುಣಾದಿಗಳೇ ರುದ್ರಾಕ್ಷಿ, ತನ್ನಾಮವೇ ಮಂತ್ರ. ಇವು ಐಕ್ಯಾಷ್ಟಾವರಣಗಳು.

ಲಿಂಗ ಪೂಜೆಯ ಮಾಡುವೆನಯ್ಯ ಜಂಗಮಲಿಂಗವು (ಜಂಗಮವು) ಮನೆಗೆ ಬರಬೇಕೆಂದು ಕಾಯಕವ ಮಾಡುವೆನಯ್ಯ ಗುರುಸೇವೆ (ಭಕ್ತಸೇವೆ) ಶಿವಭಕ್ತಿ ಆಳವಡಲೆಂದು. ಸತ್ಕಾಯಕವೆ ದೊರೆವ ಹಾಗದ ಹಣವನ್ನು ಸವೆಸುವೆನಯ್ಯ ಜಂಗಮಾರಾಧನೆ ಗುರುಲಿಂಗಜಂಗಮ ದಾಸೋಹಮಾಡಿ ತೀರ್ಥಪ್ರಸಾದವ ಪಡೆಯಬೇಕೆಂದು. ಇಂತು ದಿನದಿನಮುಚಿತ ವೇಳೆಯೊಳು ಉಪಚರಿಪುದು ಶಿವಭಕ್ತಶಿಖಾಮಣಿಯಾದ ಶಿವಯೋಗಿಗೆ ಅಷ್ಟಾವರಣಗಳೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಏಕಲಿಂಗ ನಿಷ್ಠಾಪರನಾಗಿರುವುದೇ ವಿಶ್ವಧರ್ಮವೆಂದೆನಿಸುವ ಪರಮವೀರಶೈವವು. ವೀರಶೈವನು ಕೈಕೊಂಡ ವ್ರತ ನೇಮ ಶೀಲ ಕ್ರಿಯೆ ಆಚಾರಗಳನ್ನು ಅವ್ಯಾಹತವಾಗಿ ನಡೆಯಿಸಿ ನಿಷ್ಕಾಮಿಯಾಗಿ ನಿಶ್ಶಂಕನಾಗಿ ನಿರ್ಮಲನಾಗಿ ನಿರ್ದೋಷಿಯಾಗಿ ಷಟ್‌ಸ್ಥಲಮಾರ್ಗಾನುಯಾಯಿಯಾಗಿ ನೂರೊಂದು ಸ್ಥಳಕುಳವರಿತು ೨೧೬ ಸಕೀಲಗಳ ಮರ್ಮ ತಿಳಿದು ಲಿಂಗಾಂಗಗಳ ಕುರುಹುವಿಡಿದಾತನ ಲಿಂಗಾನುಸಂಧಾನವನ್ನು ಅಂತಪ್ಪ ಆಚಾರಶ್ರೇಷ್ಠರೇ ಬಲ್ಲರಲ್ಲದೆ ಉಳಿದವರಿಗೆ ವೇದ್ಯವಾಗದು.

ಗುರು ಕೊಟ್ಟ ನಾದಬಿಂದು ಕಲಾತೀತವಾದ ಪರವಸ್ತುವ ತನ್ನ ಆಕೃತಿಯದೆಂದೇ ರೂಪಿಸಿದ ಇಷ್ಟಲಿಂಗವೇ ಪೀಠ, ಪ್ರಾಣಲಿಂಗವೇ ಗೋಮುಖ, ಭಾವಲಿಂಗವೇ ಗೋಳಕ, ಹಾಗು ಲಿಂಗದ ಷಟ್‌ಸ್ಥಲಗಳೆಂದರೆ ಪೀಠ, ಕಟಿ, ವರ್ತುಳ, ಗೋಮುಖ, ಗೋಳಕ, ನಾಳಗಳು. ಲಿಂಗವು ವಿಶ್ವದ ಪ್ರತಿಮೆಯು, ಅಥವಾ ತನ್ನ ಆಕೃತಿಯೇ ಲಿಂಗಾಕೃತಿಯು ಎಂತೆನೆ:—ಮಾನವನು ಪದ್ಮಾಸೀನನಾಗಿ ನೀಟಾಗಿ ಪೂರ್ವಾಭಿಮುಖನಾಗಿ ಕುಳಿತು ಎಡಗೈಯನ್ನು ಉತ್ತರದಿಕ್ಕಿಗೆ ಚೆನ್ನಾಗಿ ಚಾಚಿ ಬಲಗೈಯನ್ನು ಮುಷ್ಟಿಗೊಳಿಸಿ ಎಡಭುಜಕ್ಕೆ ವರ್ತುಲಾಕಾರವಾಗಿ ಮುಟ್ಟಿದರೆ, ಆತನ ಆಕೃತಿಯು ಲಿಂಗಾಕಾರನಾಗಿ ತೋರುವದು. ಕರಸ್ಥಲದ ಲಿಂಗದ ಮೂಲವೇ ಎರಡು ಪಾದ, ಲಿಂಗದ ತುದಿಯೇ ಮಸ್ತಕ. ಗೋಮುಖವೇ ಎಡದ ಹಸ್ತ. ವರ್ತುಳವೇ ಬಲದ

ಹಸ್ತ. ಮುಂಗೈ ಹರಡಿನ ಕಡೆಗೆ ಬೆನ್ನು, ಮಧ್ಯಮ ಅನಾಮಿಕಗಳ ಕಡೆಗೆ ವದನ. ಅಲ್ಲಿ ವೃಷಭೇಶ್ವರನಿಪ್ಪನೆಂದು ಅರಿವುದು ಆಸೀತ ಮುಂತಾದ ಕ್ರಿಯೆ ಗಳನ್ನು ಮಾಡುವವು ಸಜ್ಜವಳಯಂಕೆ ಬಿಜಯಂಗೈವಲ್ಲಿ ದಕ್ಷಿಣ ಕರದ ಕಬ್ಬೆರಳನ್ನು ಪೀಠವಲ್ಲಿಟ್ಟು ಮಧ್ಯಮಾಂಗುಲಿಯು ಮಸ್ತಕದಲ್ಲಿರಿಸಿ, ಗೋಮುಖ ಮೊದಲಾಗಿ ವರ್ತುಳ ಅಡಿಯಾಗಿ ಬಿಜಯಂಗೈಸಿಕೊಳ್ಳುವದು. ಲಿಂಗಾರ್ಚನೆಯ ಕಾಲದಲ್ಲಿ ೧೬ ಅಂಗುಲ ಪ್ರಮಾಣವು. ಲಿಂಗ ನೋಡುವ ಕಾಲವಲ್ಲಿ ೪ ಅಂಗುಲ ಪ್ರಮಾಣವಂತರವು ದೃಷ್ಟಿಯಿಂದ ಮೂರು, ಒಂದು, ನಾಲ್ಕು, ಐದು, ಆರು, ಎಂಟು, ಹತ್ತು, ಹನ್ನೆರಡು ಅಂಗುಲ ಪ್ರಮಾಣವಲ್ಲಿ ಕಿರುದೃಷ್ಟಿ, ಸೂಕ್ಷ್ಮದೃಷ್ಟಿ, ಸಹಜದೃಷ್ಟಿ, ಮಂದ ದೃಷ್ಟಿ, ಚಿತ್‌ಕಳೆದೃಷ್ಟಿ, ಅನುಮಿಷದೃಷ್ಟಿ, ಹಿರಿದೃಷ್ಟಿ, ಪ್ರಕೃತಿದೃಷ್ಟಿಗಳಿಂದ ವಿಶ್ವರೂಪಾದ ಮಹಾಮಂತ್ರ ಮೂರ್ತಿಯಾದ, ಇಷ್ಟಲಿಂಗವನ್ನು ಆಕೃತಿ, ಅಂಗ. ವರ್ಣ, ದಳ, ಮಂತ್ರ, ಜಪಸಂಖ್ಯೆಗಳನ್ನರಿತು ಜಪಿಸುತ್ತ ಏಕಾಗ್ರಚಿತ್ತದಿಂದ ನೋಟವೇ ಕೂಟಾಗಿ ಧ್ಯಾನಿಸಲು ಆ ಅಷ್ಟಾಂಗ ಮಂತ್ರಮೂರ್ತಿಯ ಅಷ್ಟಕಾಂತಿ ಪ್ರಕಾಶಗಳು ತಲೆದೋರುವವು.

ಒಂದು ಸ್ಥಳದಲ್ಲಿ ಫೋನ ಇಟ್ಟು ಒಬ್ಬನು ಆ ಫೋನದ ಸಹಾಯದಿಂದ ದೂರ ದೇಶದ ಮನುಷ್ಯನೊಡನೆ ಮಾತಾಡುವದಲ್ಲದೆ ಮಾತಾಡುವ ಆಯಾ ಮನುಷ್ಯರು ಒಬ್ಬರಿಗೊಬ್ಬರು ತೋರಬರುವಂತ ವಿಜ್ಞಾನಿಗಳು ರಚಿಸುವಹಾಗೆ ಭಾವ ಮನ ದೃಷ್ಟಿಕರಗಳಿಂದ ಲಿಂಗಾನುಸಂಧಾನಿಗಳು ಸಮಯವರಿತು ಲಿಂಗಕರಣಗಳಿಂದ ವಿಶ್ವಪ್ರಪಂಚವ ಅರುಹನ್ನು ಅವಗಾಹನೆಯೊಳು ತರಬಲ್ಲರು. ಅಂತೇ ಎಷ್ಟೋ ಶಿವಶರಣರು ತಾವು ಪಡೆದ ಪಂಚಪರುಷಗಳ ಬಲದಿಂದ ಪವಾಡಗಳನ್ನು ಪೃಥ್ವಿಯೊಳು ಪಸರಿಸಿ ಪವಾಡ ಪುರುಷರೆಂದು ಪ್ರಸಿದ್ಧರಾಗಿದ್ದಾರೆ.

ಶ್ರೀ ಬಸವಣ್ಣನವರು ಜಗದಗಲ ಮುಗಿಲಗಲವಿದ್ದ ವಿಶ್ವನಾಥ ಮೂರ್ತಿಯೇ ನೀನು ಲಿಂಗವಾಗಿ ಎನ್ನ ಕರಸ್ಥಲಕ್ಕೆ ಚುಳುಕಾದಿರಯ್ಯ ಎಂದು ಹೇಳಿದಂತೆ ಶ್ರೀಬಸವಣ್ಣನವರ ವಚನಾಮೃತ ಸರಸಿಗೆ ಭಾಮಿಕೆಯಾದ ಶ್ರೀ ದೇವರದಾಸಿಮಾರ್ಯರೂ "ಕರಸ್ಥಲದ ಜ್ಯೋತಿಯಿದು ಕನು ವಿಟ್ಟಿರಕದ ಪುತ್ಥಳಿಯಿದು ಇದರ ನೆಲೆಯತಿಳಿದರೆ ನಿಜಾನಂದವಿದು ಹೊಲಬು ದೋರದಿಹ ನಿಸ್ಸೀಮನ ಹೊಲಬನರಿದು ಕೂಡಿದಾತನೆ ವೃಡನು ಕಾಣಾ ರಾವ ನಾಥಾ" ಎಂದು ತಮ್ಮ ಆನಂದವನ್ನು ವ್ಯಕ್ತಪಡಿಸಿದ್ದಾರೆ. ಹಾಗು

ಶ್ರೀ ಸರ್ಪಭೂಷಣ ಶಿವಯೋಗಿಗಳು 'ಕರದೊಳಗೆ ಕಾಣಿಸುವ ಸಗನಸ್ತು' ಈ ನುಡಿಯಲ್ಲಿ ' ಗೋವಿನೊಳಗಿಹ ಘೃತವು ಗೋವಿನಿಂ ಪೊರಮಟ್ಟು ಗೋವಿನಂಗದ ರುಚಿಯ ಕೆಡಿಸುವಂತೆ|| ಜೀವ ಭಾವವ ಕಳೆಯಲಾ ವಿಮಲ ಚಿದ್ಬಿಂದುವಾವರಿಸಿ ಪೊರಮಿಷ್ಟಲಿಂಗತನಾಗಿ ||೧|| ಎಂದೂ ' ಬೆರೆಯ ಬಾರದೆ ತಿಳಿದು ಬೆರೆಯಬಾರದೆ ಮರೆರು ಬಾಹ್ಯವಸ್ತು ತನ್ನ ಕರದ ಅಖಂಡ ತೇಜಸೊಡನೆ ' ಎಂದೂ ಹಾಡಿಕೊಂಡಿದ್ದಾರೆ. ಇದರಿಂದ ವಿಶ್ವ ಧರ್ಮದ ರೂಹು ಸೋವು ತಾವುಗಳು ಹೊಳೆಯದೆ ಇರಲಾರವು

ಉತ್ತಮ ಗೋದಿ ಜೋಳ ಬೆಳೆಯುವ ಸುಧಾರಿಸಿದ ಕಾಡು. ಅದಕ್ಕೆ ಹಾಲು ತುಪ್ಪದ ಜೋಡು. ಶಿವಪೂಜೆ ಶಿವಾಚಾರಕ್ಕೆ ಸವಡು. ಶ್ರೀಬಸ ವಣ್ಣನ ನಾಡು. ಶಿವಶರಣರ ಬೀಡು. ಅವರು ದೇಹದೊಳು ಕಂಡು ಅರಿದು ಆಚರಿಸಿದ ಷಟ್‌ಸ್ಥಲವನ್ನು ಪ್ರದರ್ಶಿಸುವ ರಾವಬಹಾದ್ದೂರ ಹಳಕಟ್ಟಿಯವರು ಹಾಕಿದ ವಿಶ್ವಧರ್ಮದ ರೀತು. ಶಿವಯೋಗ ಮಂದಿರದ ಗೂಡು. ವಿಶ್ವವೇ ನಿಜಾನಂದವನ್ನು ಪಡೆಯಬಹುದಾದ ಕರಸ್ಥಲದ ಪಂಚ ಪರುಷದ ಓಡು. ಇಂಥ ಪವಿತ್ರವಾದ ನಾಡಿನ ಕೇಂದ್ರಸ್ಥಳವಾದ ವಿಜಯ ಪುರವೆಂಬ ಮಹನ್ನಗರ. ಅಲ್ಲಿ ಮಹಮ್ಮದೀಯ ಅರಸು ಕಟ್ಟಿಸಿದ ನೋಡ ತಕ್ಕ ಪ್ರಸಿದ್ಧ ಇಮಾರತುಗಳು. ಹಾಗು ಶ್ರೀಸಿದ್ಧೇಶ್ವರ ದೇವಾಲಯ ಮತ್ತು ಮಹಾಮಠಗಳು, ನೂತನ ಶಿಕ್ಷಣ ಧರ್ಮಶಿಕ್ಷಣ ಕೊಡುವ ಸಕಾಯಕದ ಹಾಗು ಅಕಾಯದ ವಿಶ್ವಧರ್ಮ ಪ್ರದರ್ಶಕ ಸಿನೇಮಾ ಮಂದಿರ ಇವು ಗಳಲ್ಲಿ ವಿಶ್ವವನ್ನು ವಿಸ್ಮಯಗೊಳಿಸುವ ಗೋಲಗುಮ್ಮಟ ಹಾಗು ಅಕಾಯ ಸ್ಥಳದ ಶಿವಸಿನೇಮಾ ಮಂದಿರಗಳು. ಗೋಲಗುಮ್ಮಟದ ಸಮೀಪವರ್ತಿ ಯಾದ ಸರ್ವಾಂಗ ಸುಂದರವಾದ ಉಪವನಗಳಿಂದ ಕೂಡಿದ ಶ್ರೀ ಷಣ್ಮುಖ ಸ್ವಾಮಿಯವರ ಮಠ. ಅದರಾಚೆಯ ವಿಶ್ವಾಂಗಣದ ಮಧ್ಯದಲ್ಲಿ ಪರಿಶೋಭಿ ಸುವ ಶ್ರೀ ವಿಶ್ವೇಶ್ವರ ಮೂರ್ತಿಯ ಶಿವಾಲಯ, ವಿಶ್ವದ ಪ್ರಕಾಶವನ್ನೇ ವ್ಯಕ್ತಪಡಿಸುವ ಪರಂಜ್ಯೋತಿ ಸ್ವರೂಪದ ಸ್ವಯಂಜ್ಯೋತಿರ್ಲಿಂಗ, ಆ ಮೂರ್ತಿಯ ದರ್ಶನದಿಂದ ವಿಶ್ವದ ವಿಶಾಲ ಜ್ಯೋತಿಯೇ ಇಲ್ಲಿ ಒಡಮೂಡಿದೆ ಯೆಂಬ ಭಾವನೆಯು ಹೊಳೆಗು.

ಆ ವಿಶ್ವಾಂಗಣದ ಪೂರ್ವಭಾಗದೊಳು ನಿರಂಜನ ಸ್ವಾಮಿಗಳ ವಿಶ್ವ ಧರ್ಮಾಭಿಧಾನದ ಮೂರಂತಸ್ತಿನ ಭವ್ಯವಾದ ಮಠ. ಆ ಮಠದ ಕೆಳಭಾಗ

ದಲ್ಲಿ ಥಳಥಳಿಸ ಐದು ಸುಂದರವಾದ ಲಿಂಗಾಚ್ಛಾದದ ಮಹಾಮಠಗಳೂ ಮೇಲ್ಭಾಗದ ಅಂತಸ್ತಿನಲ್ಲಿ ಅವುಗಳಿಗೆ ಸಂಬಂಧಪಟ್ಟ ಲಿಂಗಾಚ್ಛಾದದ ಪ್ರಕಾಶಿಪ ಐದು ಮಠಗಳೂ ಮೂರನೆಯ ಅಂತಸ್ತಿನಲ್ಲಿ ನಿರಂಜನ ಸ್ವಾಮಿಯ ವಿಶ್ರಾಂತಿಯ ಹಾಗು ವೈರಾಗ್ಯಸೂಚಕ ಕಂಬಗಳಿಲ್ಲದ ಕೋಣೆಗಳಿಲ್ಲದ ಮಹಾಸ್ಥಲಸೂಚಕವಾದ ಶಿವಯೋಗ ಮಂದಿರ. ಆ ಮಹಾಭವ್ಯವಾದ ಮಠದ ಕೆಳಭಾಗದಲ್ಲಿ ಬೇಕಾದವರು ಬೇಕಾದ ಸ್ಥಳಗಳಲ್ಲಿ ಕಾಲವರಿತು ಚರಿಸುವಂಥ ಹಾಗು ಆ ನಿರಂಜನ ಸ್ವಾಮಿಯ ಕರ್ಮೇಂದ್ರಿಯ ಧರ್ಮೇಂದ್ರಿಯಗಳನ್ನನುಕರಿಸುವ ವಿಶ್ವ ಧರ್ಮಾಧಿಕಾರಿಗಳಾದ ಶ್ರೀ ವಿಶ್ವರಾಧ್ಯ ಶ್ರೀ ಏಕೋರಾಮಾರಾಧ್ಯ ಶ್ರೀ ಪಂಡಿತಾರಾಧ್ಯ ಶ್ರೀ ಮರುಳಾರಾಧ್ಯ ಶ್ರೀ ರೇವಣಾರಾಧ್ಯರ ಪಟ್ಟಾಧಿಕಾರಿಗಳ ವಾಸ. ಇವರು ವಿಶ್ವಾಂಗಣದ ಚಚ್ಚೌಕಾದ ಕಂಪೌಂಡಿನಲ್ಲಿ ಸ್ವತಃ ಕಟ್ಟಿಸಿದ ೧೨೧ ಅಂಕಣವುಳ್ಳ ಪಾಳಿಯು. ಆ ಅಂಕಣಗಳ ಮೇಲಂತಸ್ತಿನಲ್ಲಿ ೧೫, ೯, ೭, ೫, ೪, ೪ ಸ್ಥಲಸೂಚಕ ಪಾಳಿಗಳ ಮೇಲ್ಮಾಳಿಗೆಯ ೬ ಕೋಣೆಗಳು. ಆ ಆರು ಕೋಣೆಗಳ ಮೇಲಂತಸ್ತಿನಲ್ಲಿ ಒಂಭತ್ತೊಂಭತ್ತು ಅಂಕಣದ ೬ ಕೋಣೆಗಳು. ಆ ಕೋಣೆಗಳ ಮೇಲಂತಸ್ತಿನಲ್ಲಿ ಒಂದೇಒಂದಾದ ಕಂಬಗಳಿಲ್ಲದ ಯೌಗಿಕ ಮಣಿ ಮಾಡೆಂದು ಹೇಳಿಸಿಕೊಳ್ಳುವ ಶಿವಯೋಗ ಮಂದಿರವು. ಕೆಳಗಿನ ಅಂತಸ್ತಿನ ಪ್ರತಿಯೊಂದು ಅಂಕಣದಲ್ಲಿ ಶಾರೀರಕ ಸ್ಥೂಲ ಸೂಕ್ಷ್ಮ ತತ್ವಗಳನ್ನು ಪ್ರದರ್ಶಿಸುವ ಅಚ್ಚುಕಟ್ಟಾಗಿಟ್ಟ ಶರೀರಾವಯವಗಳ ಭಾಗೋಪಭಾಗಗಳ ಮಾದರಿಗಳು. ಆ ಮಾದರಿಗಳ ನಾಂಕಿತಿಯನ್ನು ಕೊಡಲು ಮೊದಲನೆ ೧೫ ಅಂಕಣಾಂಕಿತ ಭಾಗಕ್ಕೆ ಶ್ರೀ ರೇವಣಾರಾಧ್ಯಾಧಿಕಾರಿಗಳೂ ೯ ಅಂಕಣಾಂಕಿತ ಭಾಗಕ್ಕೆ ಶ್ರೀ ಮರುಳಾರಾಧ್ಯಾಧಿಕಾರಿಗಳೂ ಇದರಂತೆ ೭, ೫, ೪, ೪ ಅಂಕಣವುಳ್ಳ ಭಾಗಕ್ಕೆ ಕ್ರಮದಿಂದ ಶ್ರೀ ಪಂಡಿತಾರಾಧ್ಯ ಶ್ರೀ ಏಕೋರಾಮಾರಾಧ್ಯ ಶ್ರೀ ವಿಶ್ವಾರಾಧ್ಯಾಧಿಕಾರಿಗಳೂ ಹಾಗೂ ನಿರಂಜನ ಮೂರ್ತಿಗಳೂ ತಯಾರಾಗಿ ತಮ್ಮ ತಮ್ಮ ಸ್ಥಲ ಸ್ಥಲಗಳ ತತ್ವಬೋಧಕ ಶಿಕ್ಷಣ ಕಾರ್ಯಕವನ್ನು ಜರುಗಿಸಲು ನಡಕಟ್ಟಿ ನಿಂತವರು. ಇವರಿಂದ ಶಿಕ್ಷಣ ಪಡೆದು ಆಯಾ ಸ್ಥಲಗಳಾನುಗ್ರಾಹಕರಾಗಿ ಮೇಲಂತಸ್ತಿನಲ್ಲಿ ತಮ್ಮ ಅನುಭವವನ್ನು ಸಾರುವ, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಳದ ಮಾಧ್ಯಮಿಕ ಶಿಕ್ಷಣದ ಶಿಕ್ಷಕರು. ಮಾನವನ ಶಾರೀರಕ ಮಾನಸಿಕ ಕರಣವೃತ್ತಿಗಳ ಕರ್ಮಧರ್ಮಗಳ ಜ್ಞಾನವನ್ನು ಅರಿದು ಆಚರಿಸುವಂಥವರು. ಈ ಕಟ್ಟಡದ ಸಂಬಂಧವಾದ ಲಿಂಗಸ್ಥಳದ ಮೇಲು

ಮಂದಿರದ ಅಂತರ್ಜ್ಞಾನದ (ಲಿಂಗಾಂಗಜ್ಞಾನದ) ಭಕ್ತಿಕ್ರಿಯೆ ಆಚಾರ ಅನುಭವ ಯೋಗ ನಿಯೋಗಗಳನ್ನು ಅರುಹುವ ಲಿಂಗಾಂಗ ಸಮರಸಿಗಳಾದ ಆಯಾ ಸ್ಥಳದ ಉಚ್ಚಶಿಕ್ಷಣಾದ ಶಿವಯೋಗಿಗಳು. ಲಿಂಗೈಕ್ಯದ ಪರಿಯನ್ನು ಪ್ರದರ್ಶಿಸುವರು.

ಶ್ರೀ ಪಂಚಾಚಾರ್ಯಾಧಿಕಾರಿಗಳು ವಿಶ್ವಜ್ಞಾನಿಗಳು ವಿಶ್ವವನ್ನು ಬೆಳಗುವರು. ಲಿಂಗ ದೇಹಿಗಳು ತಮ್ಮ ಮೂರಂತಸ್ತಿನ ಆದಿಮಧ್ಯ ಅಂತ್ಯ ಸೂಚಕಗಳಾದ ಅಡಿ ನಡು ಮುಡಿ, ರೂಪಲೇಖೆಗಳಿಂತಿರ್ದ ಕೆಳಮಠ ಮಧ್ಯಮಠ ಮೇಲಮಠಗಳಲ್ಲಿ ಆಯಾ ಲಿಂಗ ಲಿಂಗಾನು ಭಾವಿಗಳಾಗುತ ಮೇಲುಮಂದಿರದ ನಿರಂಜನ ಸ್ವಾಮಿಯಲ್ಲಿ ಸಮರಸವಾಗುವರು. ಇವರಲ್ಲಿ ಮೇಲುಕೀಳೆಂಬ ಭಾವನೆಯು ಬೇರು ಅಣುಮಾತ್ರವಿಲ್ಲ. ನಿರಂಜನ ಸ್ವಾಮಿಯವರು ವಿಶ್ವಧರ್ಮಾಂತರ್ಯಾಮಿಯಾಗಿ ಪಂಚಾಚಾರ್ಯರ ಪ್ರತಿಸ್ಥಾನಕ್ಕೂ ಅವರೋಹಣ ಆರೋಹಣಗಳಿಂದ ಏಕಜೀವವಾಗಿ ವರ್ತಿಸುವರು. ಇವರೆಲ್ಲರೂ ಷಟ್‌ಸ್ಥಲವನ್ನು ಪೂರ್ಣಬಲ್ಲವರು ಎಲ್ಲರಿಗೂ ಎಲ್ಲ ಸ್ಥಳಾನಂದವನ್ನು ಅನುಭವಿಸುವ ಅಧಿಕಾರವಿದೆ. ಇದರಂತೆ ಭಕ್ತ ಮಹೇಶಾದಿ ಎಲ್ಲ ಶಿವಾನುಭವಿಗಳೂ ಏಕಜೀವಿಗಳಾಗಿ ವಿಶ್ವಬಂಧುಗಳಾಗಿ ಆಚರಿಸುವರು.

ಈ ವಿಶ್ವಧರ್ಮಾಭಿಮಾನದ ಮಠದ ಹಿಂಬಗದಲ್ಲಿ ವಾಯುರಸದಿಂದ ರಚಿತವಾದ ಸಿನಿಮಾ ಮಂದಿರವು ಇಲ್ಲಿ ೨೪ತಾಸೂ ಚಲಚ್ಚಿತ್ರಗಳು ವಚನರೂಪದಿಂದಲೂ ಗದ್ಯರೂಪದಿಂದಲೂ ಉಪದೇಶಾಭಂಗಗಳಿಂದ ಎಸಾರಿ ತೋರಿಸಲ್ಪಡುವವು. ಇಲ್ಲಿ ತಿಕೇಟ ಪಡೆಯುವವನು ಮೊದಲು ರೇವಣಾರಾಧ್ಯಾಧಿಕಾರಿಯಿಂದ ಏಕಾಯನಾಗಿ ಅಜಾತನಾಗಿ ಬಲಗೈಯೊಳು ಪಂಚಾಂಗುಲಿಗಳಿಂದ ಪುರುಷಸೂಚಕ ಶಿವ ಪಂಚಭಕ್ತಿಯೊಡಗೂಡಿದ ಪಂಚ ಬಿಲ್ಲಿಗಳನ್ನಿತ್ತು ಪಂಚ ಕಲೆಗಳಿಂದೊಡಗೂಡಿದ ಬಿಸಾಡಿದರೆ ಬೀಳದ ಏಳವೆ ಅಗಳಾಡದ ಅಗಲವ ತನ್ನಂಗವ ಗೋಳಕಾಕೃತಿಯ ಇಷ್ಟಲಿಂಗವೆಂಬ ಹರಿಯದ ತಿಕೇಟನ್ನು ವಾಮಕರದಲ್ಲಿರಿಸಿಕೊಂಡು ಒಳಪೊಕ್ಕು ತಮ್ಮ ಇಷ್ಟಾನುಸಾರವಾದ ಸಿನೇಮೆಗಳನ್ನು ನೋಡಿ ನಲಿಯಬಹುದು ಭಕ್ತಸ್ಥಳದ ೧೫ ಫಿಲ್ಮಗಳುಳ್ಳ ಆಚಾರಲಿಂಗದ ಜಪಸಂಖ್ಯೆಯು ೧೭೨೮ ಇದ್ದು ವೇಳೆಯು ಮೂನ ೨ತಾಸು. ಈ ಎರಡು ತಾಸುಗಳಲ್ಲಿ ಅಂವತೆ ಮುಂಜಾನೆ

೬ ಗಂಟೆಯಿಂದ ೮ ಗಂಟೆಯವರೆಗೆ ಮಾನವರು ಸುಷುಪ್ತಾವಸ್ಥೆಯಿಂದ ಬೆಳಗು ಮುಂಜಾನೆ ೪ ಗಂಟೆಗೆ ಎದ್ದು ಸ್ಥೂಲಾಚರಣವನ್ನಾಚರಿಸಿ ೧೨ ಮಲಾಂಶಗಳನ್ನು ಸ್ನಾನಾದಿಗಳಿಂದ ಕಳೆಕೊಂಡು ತನು ಮನ ಮನೆ ನಿರ್ಮಲಂಗಳಿಂದ ಶಿವಪೂಜೆ ಮಾಡಿ ಶಿವಕಳೆ ಭರಿತನಾಗಿ ಸತ್ಕಾಯಕಕ್ಕೆ ಸಿದ್ಧನಾಗುವ ತ್ಯಾಗಾಂಗದ ಶ್ರೀ ಬಸವಣ್ಣನ ಮಹಾಮಂದಿರದಲ್ಲಿ ಒಂದುಲಕ್ಷ ತೊಂಬತ್ತಾರು ಸಾವಿರ ಗಣಂಗಳ ಸಚಿತ್ರ. ಇದರಂತೆ ಗುರುಲಿಂಗಸ್ಥಲದ ೨ನೇ ಸಾರೆಯು ಇತಿಹಾಸಮಹರ್ಷಿಗಳ ರಾವಬಹಾದ್ದೂರ ಪಿ. ಜಿ. ಹಳಕಟ್ಟಿಯವರು ರಚಿಸಿದ ಶಿವಾನುಭವ ಗ್ರಂಥಮಾಲಿಕೆಯಲ್ಲಿ ಶಿವಶರಣರ ಬೇರೆ ಬೇರೆ ಕಾಯಕವುಳ್ಳ ಬೇರೆ ಬೇರೆ ಶರಣರ ಸನ್ನಿವೇಶಗಳು. ಅವುಗಳಲ್ಲಿ ಮೋಳಿಗೆಯ ಮಾರಯ್ಯ, ದೇವರದಾಸಿಮಯ್ಯ, ಗಣದಾಸಿ ವೀರಣ್ಣ, ಸಂಗನಬಸವಣ್ಣ, ಶಿವದಾಸಿಮಯ್ಯ, ಶಂಕರದಾಸಿಮಯ್ಯ, ಮಡಿವಾಳ ಮಾಚಿದೇವ ಸತ್ಯಕ್ಕ ಮಹಾದೇವಿ, ನೀಲಾಂಬೆ, ಮುಕ್ತಾಯಕ್ಕ ಮುಂತಾದ ಶಿವಶರಣರ ಶರಣೆಯರ ಜೀವನ ಚರಿತಾರ್ಥಗಳು ವಿಶ್ವಧರ್ಮದ ತಿರುಳನ್ನು ಕರುಳಿಗೆ ಅಂಟಿಸಿಬಿಡುವವು.

ವಿಜಯಪುರದಲ್ಲಿ ನೋಡತಕ್ಕ ಇಮಾರತುಗಳ ಹಾಗು ವಿಶ್ವದಲ್ಲಿ ಲೌಕಿಕ ಪಾರಮಾರ್ಥಿಕ ವಿಶ್ವಾತ್ಮಕ ವಿಶ್ವವಿದ್ಯಾಲಯಗಳನ್ನು ನಿರೀಕ್ಷಿಸಲು ಭರತಖಂಡದ ಎಲ್ಲ ಭಾಗದ ಜನಸಂದಣಿಯ ದಟ್ಟಣಿ, ಇಷ್ಟೇ ಅಲ್ಲ. ಸುಧಾರಿಸಿದ ಎಲ್ಲ ರಾಷ್ಟ್ರಗಳ ಜನರ ಆಗಮನ. ವಿಶೇಷವಾಗಿ ನೂತನ ಶಿಕ್ಷಣದಲ್ಲಿ ಕಂಡುಬರುವ ಪ್ರವಾಸ ಪರ್ಯಟನಗಳನ್ನು ಪ್ರೇಮಪೂರ್ವಕ ಮಾಡುವ ತರುಣ ತರುಣಿಯರ ತಂಡ. ಅವರು ವಿಜಯಪುರಜಿಲ್ಲೆಯ ನೈಸರ್ಗಿಕವನ್ನಾಸ್ವಾದಿಸುತ್ತ ಸ್ಟೇಶನದ ಪ್ಲಾಟಫಾರ್ಮಿನ ಮೇಲೆ ಇಳಿದು ಅತ್ತಿತ್ತ ನೋಡುವಷ್ಟರಲ್ಲಿ ಅಥಿತಿಗಳನ್ನಾದರಿಸುವ ಶ್ರೀಷಣ್ಮುಖಸ್ವಾಮಿಯ ಸ್ವಯಂಸೇವಕರು ಬಂದು ಕೈಹಿಡಿದು ಕರಕೊಂಡು, ಅವರ ಗಂಟುಗದಡಿಗಳನ್ನು ಸಾಂಕೇತಿಕ ಬಸ್ ಟಾಂಗಾಗಳ ದ್ವಾರಾ ತಮ್ಮ ಮಠದ ಉತ್ತರ ಭಾಗದ ಹೊರಮುಗ್ಗಲಿನ ಶಾಂತಿನಿಕೇತನಗಳಿಗೆ ಸ್ವಾಗತಿಸುವ ಚಿತ್ರ. ಆ ಶಾಂತಿನಿಕೇತನಗಳಲ್ಲಿ ಆಯಾ ಧರ್ಮದ ಭೋಜನಶಾಲೆಗಳೂ ಉಪಹಾರ ಗೃಹಗಳೂ ಇರುವವಲ್ಲದೆ ವಿಶ್ವಧರ್ಮದ ವರ್ಣ ಜಾತ್ಯಾತೀತವಾದ ಜನಾಂಗಕ್ಕೆ ಸಹ ಪುಣೆ ಮುಂಬಯಿಪಟ್ಟಣಗಳ ವ್ಯವಸ್ಥೆಯನ್ನು ಹೀಯಾಳಿಸುವ ನೂತನ ಶಾಂತಿಸದನಗಳು. ಇವೆಲ್ಲವುಗಳ ವ್ಯವಸ್ಥಾಪಕರು ಪರ

ದೇಶದ ಪ್ರವಾಸ ಮಾಡಿ ವಿಶ್ವದ ಪ್ರಚಲಿತ ಭಾಷೆ ಬಲ್ಲವರು ದಿನಂಪ್ರತಿ ಈ ತರದ ಪ್ರವಾಸಿಕರ ಬರುಹೋಗುವ ಸಂಖ್ಯೆಗೆ ಲೆಕ್ಕವಿಲ್ಲ ಅದರಲ್ಲಿ ಚಿಕಿತ್ಸಾ ಬುದ್ಧಿಯ ತರುಣ ತರುಣಿಯರ ತಂಡವನ್ನು ವರ್ಣಿಸಲಳವಲ್ಲ. ಬೈತಲೆ ತೆಗೆದ ಹಿಕ್ಕಿದ ಕೂದಲುಳ್ಳ ಮಿಾಸೆಯಿಲ್ಲದ ತರುಣರು ಕೈಯಲ್ಲಿ ಕೈಚೀಲವನ್ನೂ ಕೈಗಡಿಯಾರವನ್ನೂ ಎತ್ತಲಾರದಷ್ಟು ಶಕ್ತಿಯುಳ್ಳವರು. ಕೈಯಲ್ಲಿ ಬಳೆಯಿಲ್ಲದ ತಲೆಯ ಮೇಲಿನ ಸೆರಗು ತೆಗೆದ ಉರುಬಾಕು ಮೂಲ ಪ್ರಾಂತದ ಪ್ರದರ್ಶದ ೧೦-೧೨ ವೊಳದ, ಜಿನಗುಳ್ಳ, ತರತರದ ಬಣ್ಣವನ್ನು ಬೀರುವ ಉಡುಗರೆಯ ತರುಣಿಯರು. ಅವರ ನುಣುಪು ಹೊಳಪುಗಳು ಸಬಕಾರ ಪಾಪಡರಗಳಿಂದಲ್ಲದೆ ತರತರದ ರಕ್ತದಿಂದಲ್ಲ. ಇಂತಹ ನಮ್ಮ ಭಾರತೀಯ ತರುಣ ತರುಣಿಯರ ಪ್ರವಾಸವೂ ನಡೆನುಡಿಗಳೂ ಸಿನೇಮಾ ದೊಳಗಿನ ಪ್ರತಿಬಿಂಬಗಳೆಂದು ಸುರಲು ಸಾಕು ಆದರೆ ಪರದೇಶದ ತರುಣ ತರುಣಿಯರು ತಮ್ಮ ದೇಶ ಕಾಲ ಪರಿಸ್ಥಿತಿಗಳಿಗನುಸಾರವಾದ ಆಹಾರ, ಉಡಿಗೆ, ತೊಡಿಗೆ, ಸ್ವತಂತ್ರ್ಯತೆಯ ಸತ್ಕಳೆಗಳಿಂದ ಉಕ್ಕುವವರು.

ವಿಜಯಪುರವನ್ನು ಈಕ್ಷಿಸ ಬಂದ ಎಲ್ಲ ಜನರಲ್ಲಿ ತರುಣ ತರುಣಿಯರ ತಂಡವು ಅಲ್ಲಿಯ ಗೋಲಗುಮ್ಮಟ, ಜುಮ್ಮಾ ಮಸೀದೆ, ಆಸಾರಮಹಾಲ ಇಬ್ರಾಹಿಮರೋಜಾ, ತಾಜಬಾವಡಿ, ಮುಲಖಮೈದಾನ ತೋಫುಗಳನ್ನು ನೋಡಿ ಬಂದು ತಮ್ಮ ವಿಶ್ರಾಂತಿ ಗೃಹಗಳಲ್ಲಿ ಚೈನಿಯಿಂದ ಕಾಲಕಳೆಯು ತ್ತಿರುವಾಗ ಶ್ರೀ ಷಣ್ಮುಖಸ್ವಾಮಿಯ ಮಠದ ಸ್ವಯಂ ಸೇವಕರು ಪ್ರದರ್ಶಿ ಸುವ ಆ ಮಠದಲ್ಲಿ ಸಾಂಖ್ಯ ಶಾಸ್ತ್ರವನ್ನೂ ಕರಣ ಹಸಿಗೆಯನ್ನೂ ಕೇಳಿ, ಬೇರೆ ಬೇರೆ ಭಾಷೆಗಳಲ್ಲಿ ನಡೆಯುವ ಕೀರ್ತನ ರೇಡಿಯೋ ಸಹಾಯದಿಂದ ೩೬ ತತ್ವಗಳ ಗುಟ್ಟು ಗೊತ್ತಾಗಿ, ಪ್ರವಾಸದ ದಿವಸಗಳನ್ನು ಬೆಳೆಸುವ ಪ್ರವಾಸಿಕರ ಹಿರಿದಾದ ನೋಟ. ಅದರಂತೆ ವಿಶ್ವಧರ್ಮಾಂಗಣದ ಮಧ್ಯ ದಲ್ಲಿ ಮಿರುಗುವ ಸಮಷ್ಟಿರೂಪದ ಜ್ಯೋತಿರ್ಲಿಂಗ. ಅದರ ಬಲಭಾಗ ದಲ್ಲಿ ಶಿವದಾಸೋಹ ಮಠ, ಹಾಗು ವಿಶ್ವಾತ್ಮಗ ವಿಶ್ವವಿದ್ಯಾಲಯದ ಪ್ರಾಥ ಮಿಕ ಮಾಧ್ಯಮಿಕ ಉಚ್ಚ ಶಿಕ್ಷಣಾಲಯಗಳ ಮಾನವನ ಸ್ಥೂಲ ಸೂಕ್ಷ್ಮ ಕಾರಣ ದೇಹದರ್ಶಿಗಳಾಗಿ ಪ್ರೇಕ್ಷಕರ ಮನವನ್ನು ಅಂಟಿಕೊಳ್ಳದೆ ಇರವು.

ಆ ಅಕಾಂಪುಕದ ಶಿವಯೋಗ ಮಂದಿರವೂ ಅದರ ಬೇರೆ ಬೇರೆ ಭಾಗ ಗಳೂ ಶಾರೀರಿಕ ಮಾನಸಿಕ ಬೌದ್ಧಿಕ ಭಾವಿಕ ಶಾಸ್ತ್ರಗಳನ್ನು ಆಯಾ

ಭಾಷೆಗಳಿಂದ ಜ್ಞಾನವನ್ನುಂಟುಮಾಡುವ ಆಚಾರ್ಯರಿಂದಲೂ ಶಿವಶರಣ ರಿಂದಲೂ ಶಿವಯೋಗಗಳಿಂದಲೂ ಆತ್ಮನ ಜೀವಭ್ರಾಂತಿಯನ್ನು ಬಿಟ್ಟು ವೀರಶೈವ ದೀಕ್ಷೆಯನ್ನು ಪಡೆಯುವ ತರುಣ ತರುಣಿಯರು ಶರಣರ ಶೋಧಕ ಬುದ್ಧಿಯನ್ನನುಸರಿಸಿ ಶಿವಶಕ್ತಿಗಳ ಏಕರೂಪಾದ ಶ್ರೀ ಸಿದ್ಧೇಶ್ವರ ಧರ್ಮ ಸಂಸ್ಥೆಯು ಕಲ್ಯಾಣವುಂಟುಪವಲ್ಲಿ ಕೈವಿಡಿದು ಅಕ್ಕನ ಬಳಗದ ಅಣ್ಣನ ಅನುಯಾಯಿಗಳ ಉಡಿಗೆ ತೊಡಿಗೆಗಳ ಧರಿಸಿ ತಮ್ಮ ಮುಂದಿನ ಜೀವನ ವನ್ನು ಅಕ್ಕ ಮಹಾದೇವಿಯಂತೆಯೂ ಅಣ್ಣ ಬಸವಣ್ಣನಂತೆಯೂ ಸವೆ ಯದ ಸುಖದ ಸುಗ್ಗಿಯಲ್ಲಿ ತೊಡಗಲು ತಯಾರಾಗಿ ಹೋಗುವ ನೋಟ.

ರಾವಬಹಾದ್ದೂರ ಹಳಕಟ್ಟಿಯವರು ಹುಳು ತಿಂದು ಹೋಗುತ್ತಿರುವ ವಿಶ್ವಧರ್ಮಧ್ವಜವನ್ನು ಎತ್ತಿ ಆ ಧ್ವಜಕ್ಕೆ ಹರಿಯದ ವಸ್ತ್ರವ ಅಲಂಕರಿಸಿ ಆ ಧ್ವಜದಲ್ಲಿ ಮುಖ್ಯಾಂಗಗಳಾದ ಮೂರು ಭಾಗದ ವಚನಸಾರದ ಮೂರು ಬಣ್ಣಗಳ ಥಳಥಳಿಸಿ ಅವುಗಳ ವಿವರಣೆಯ ಶಬ್ದಕೋಶವನ್ನು ರಚಿಸಿ ಭಕ್ತಿ, ಕ್ರಿಯೆ, ಆಚಾರ, ಜ್ಞಾನ, ಅನುಭವ, ಶಿವಯೋಗಗಳನ್ನು ಪ್ರಸ ರ್ಶಿಸುವ ೬೩ ಗ್ರಂಥಗಳನ್ನೊಳಕೊಂಡ ವಿಶ್ವದ ಅಂಗ, ಉಪಾಂಗ, ಅಂಗೋ ಪಾಂಗ ನಿರಂಗಗಳ ನಿಲುಕಡೆಯ ನಿಲ್ಲಿಸಿದ ವಿಶ್ವಧರ್ಮದ ಶಿವಾನುಭವವ ವಿರಾಜಿಪ ನೋಟವಿದು.

ಪರ ಪ್ರಾಣ ಪ್ರಕೃತಿಗಳಿಂದಾದ ದೇಹದರ್ಮ, ಆ ದೇಹಧರ್ಮವೇ ಮಾನವಧರ್ಮ. ಮಾನವಧರ್ಮವೇ ಸಮಾಜಧರ್ಮ ಸಮಾಜಧರ್ಮವೇ ವಿಶ್ವಧರ್ಮವೆಂದು ಸಾರುವ ಪತಾಕಿ ಇದು. ಮಾನವನ ಪ್ರಕೃತಿಯನ್ನನು ಸರಿಸುವ ಮಾನವಕೋಟಿಯಲ್ಲಿ ವಿಶ್ವಧರ್ಮವು ಕಂಡುಹಿಡಿದ ಮುಲಜೀವಿ ಜಡಜೀವಿ ಕುಜೀವಿ ಕಪಟಜೀವಿ ವಂಚಕಜೀವಿ ಸಂಚಲಜೀವಿಗಳ ದುಷ್ಟ ಪ್ರವೃತ್ತಿಗಳನ್ನು ಬಿಡಿಸಿ ಕ್ರಮದಿಂದ ನಿರ್ಮಲ ಜೀವಿ, ಅಜಡಜೀವಿ, ಸಜೀವಿ, ಸುಜೀವಿ, ಪರಮ ಜೀವಿಗಳಾಗಿ ಬದಲುವ ಶಾಂತಿಸಾಗರವಿದು.

೨೫ ವರ್ಷಗಳಿಂದ ಈ ವರೆಗೆ ಅವ್ಯಾಹತವಾಗಿ ನಡೆಯಿಸಿದ ಶಿವಾನು ಭವ ಮಾಸಪತ್ರಿಕೆಯಿಂದಲೂ ವಚನ ಶಾಸ್ತ್ರಗಳಿಂದಲೂ ಶಿವಾನುಭವ ಮಂಟಪಗಳಿಂದಲೂ ಅವಿಶ್ರಾಂತ ಶ್ರಮವಹಿಸಿ ಅನ್ಯಾಯ ಪಡ ನಾವು ಪಡೆ ಕ್ರಿಯಾಪದಗಳಿಂದ ಕೂಡಿದ ವಿಶ್ವಧರ್ಮದ ಪರಮಪದವೆಂಬ ಸೂರ್ಯನ ಬೆಳಗು ಪ ಧರ್ಮಗಳ ಪರಾಮ್ಯಗಳ ಮೇರೆ ಬಿಸ್ಸು ಗೆಯುವಂತೆ ಮಾಡಿದ

ಶ್ರೇಯಸ್ಸು ರಾವಬಹಾದ್ದೂರ ಹಳಕಟ್ಟಿಯವರದು. ಶ್ರೀ ದೇವರದಾಸಿಮಾರ್ಯರು ನೆಯ್ದ ಅಲೌಕಿಕ ಬಟ್ಟೆಯನ್ನು ಸತ್ವಪರೀಕ್ಷೆಗಾಗಿ ಶಿವನು ಜಂಗಮಮೂರ್ತಿಯಾಗಿ ಬಂದು ಹರಿದುಹಾಕಿದ್ದನ್ನು ಶ್ರೀ ಶಂಕರದಾಸಿಮಾರ್ಯನು ಜೋಡಿಸಿ ಹೊಲಿಗೆ ಹಾಕಿದಂತೆ ಸದ್ಯಕ್ಕೆ ನೂತನ ಶಿಕ್ಷಣ ಪಡೆದ ಡಾ|| ಜವಳಿಯವರು ರಾವಬಹಾದ್ದೂರರವರು ನೆಯ್ದ ಅತಿ ಸುಂದರವಾದ ಪಾರಮಾರ್ಥಿಕ ವಿಶ್ವಧರ್ಮದ ಬಟ್ಟೆಯನ್ನು ಸತ್ವಪರೀಕ್ಷೆಗಾಗಿ ಸದ್ಯದ ಗುರುವರ್ಗದವರು ಹರಿದಿಟ್ಟದ್ದನ್ನು ಪರಮೇಶನ ನೂತನ ಹೊಲಿಗೆಯ ಯಂತ್ರಗಳ ಸಹಾಯದಿಂದ ಹೊಲಿಹೊಲಿದು ವಿಶ್ವಕ್ಕೇನು ಬಾಲ ಬಾಲಕಿಯರಿಗೂ ಸ್ತ್ರೀಪುರುಷರಿಗೂ ಹಾಳತವಾಗುವಂತೆ ತೊಡಪುಗಳನ್ನು ತಯಾರಿಸಲು ವೀರಶೈವ ಸಮಾಜದ ಅಗ್ರಗಣ್ಯರು ಹಾಗು ಶ್ರೀ ಸ್ವಾಮಿಗಳ ಸಹಾಯ ಪಡೆದು ರಾವಬಹಾದ್ದೂರರವರನ್ನೊಡಗೊಂಡು ವಿಶ್ವಧರ್ಮ ಪ್ರಸಾರವನ್ನು ಪ್ರಚಲಿತ ಎಲ್ಲ ರಾಷ್ಟ್ರಗಳಿಗೆ ಆಕಾಶವಾಣಿ ಆಕಾಶಯಾನ ಮುಂತಾದ ಸುಧಾರಿಸಿದ ಯಂತ್ರಸಾಧನಗಳಿಂದ ಆಯಾ ಭಾಷೆಗಳಲ್ಲಿ ಮಾಡಿದಲ್ಲಿ ಶ್ರೀ ಶಂಕರದಾಸಿಮಾರ್ಯರ ಕಾಯಕವನ್ನು ಕಡೆಗಾಣಿಸಿದಂತಾಗುವದೆಂದು ಭಾವಿಸುವ ತಮ್ಮ ವಿಶ್ವಧರ್ಮದ ಅಣ್ಣ.

# ಪಾದೋದಕ ಪ್ರಸಾದಗಳು

[ಲೇಖಕರು:— ಶ್ರೀಯುತ ಬಸವಪ್ಪ ಚನ್ನಪ್ಪ ಪಟ್ಟೇದ ವಂಟಮುರಿ]

ಕಂದ|| ಕರುಣಂ ವಿನಯಂ ದಾಸ್ಯಂ | (ದಾಸೋಹಂ ಭಾವ)
ಪರತರ ಸಮಭಾವ ಸತ್ಯ ಸಮ್ಯಗ್ ಜ್ಞಾನಂ ||
ಇರಿವುದವಶ್ಯಂ ಲಿಂಗಯು |
ತರಿಗಿಲ್ಲಿದಿರವರ ಜನ್ಮ ವ್ಯರ್ಥಂ ಕಾಣ್ಯೆ ||೧||

ವೀರಶೈವರಿಗೆ ಅಷ್ಟಾವರಣಗಳಿರುವವಷ್ಟೇ! ಅವುಗಳಲ್ಲಿ ವಿಭೂತಿ, ರುದ್ರಾಕ್ಷಿ, ಮಂತ್ರಗಳ ಸಾಧನದಿಂದ; ಗುರುಲಿಂಗ ಜಂಗಮುಗಳ ಆರಾಧನೆಯನ್ನು ಮಾಡಿ, ಅವುಗಳ ಪಾದೋದಕ ಪ್ರಸಾದಗಳನ್ನು ಪಡೆಯುವದೇ ಲಿಂಗಾಯತರ ಮುಖ್ಯ ಧರ್ಮವು. ಈ ಧರ್ಮವನ್ನು ಸರಿಯಾಗಿ ಈಡೇರಿಸಿದರೆ ಮಾತ್ರ ಅವರ ಜನ್ಮವು ಸಫಲವಾಗುವದು. ಇದರಿಂದ ಅಷ್ಟಾವರಣಗಳು ಅದೆಷ್ಟು ಮಹತ್ವದವಿರುವದೆಂಬುದು ತಾನೇ ಕಂಡು ಬರುವದು ಈ ಎಂಟು ಆವರಣಗಳಲ್ಲಿಯೂ ಪಾದೋದಕ ಪ್ರಸಾದಗಳೇ ಹೆಚ್ಚು ಮಹತ್ವದವು. ಅವುಗಳನ್ನು ದೊರಕಿಸುವದಕ್ಕಾಗಿಯೇ ಗುರು-ಲಿಂಗ-ಜಂಗಮುಗಳ ಪೂಜೆಯನ್ನು ಮಾಡಬೇಕಾಗಿರುವದು. ಈ ಶ್ರೇಷ್ಠತರವಾದ ಪಾದೋದಕ ಪ್ರಸಾದಗಳನ್ನು ನಾವು ಗುರು-ಲಿಂಗ-ಜಂಗಮುಗಳಿಂದ ಪಡೆಯ ತಕ್ಕದ್ದುಂಟು. ಆದ್ದರಿಂದ ಈ ಗುರು-ಲಿಂಗ-ಜಂಗಮುಗಳ ಬಗೆಗೆ ನಿಜವಾದ ಜ್ಞಾನವು ಅವಶ್ಯಕವಷೆ.

## —ಃ ಗುರು :—

(೧ ಗುಕಾರಂ ಗುಣಾತೀತಂ ರೂಪಾತೀತಂ ರುಕಾರಕಂ |
ಗುಣಾತೀತಮರೂಪಂ ಚ ಯೋ ದದ್ಯಾತ್ ಸ ಗುರುಃ ಸ್ಮೃತಃ ||

ಅರ್ಥಃ ಗುರು-ವೆಂದರೆ ನಿರ್ಗುಣ ನಿರಾಕಾರವಾದ ಪರವಸ್ತುವು. ಇವೆರಡೂ ಅವಸ್ಥೆಗಳನ್ನು ಶಿಷ್ಯನಿಗೆ ಒದಗಿಸುವವನೇ ನಿಜವಾದ ಗುರುವು.

(೨ ಗುರುವೆ ಸರ್ವಲೋಕಾನಾಂ | ಭಿಷಜೋಭವರೋಗಿಣಾಮ್ |
ನಿಧಯೆ ಸರ್ವ ವಿದ್ಯಾನಾಮ್ | ದಕ್ಷಿಣಾ ಮೂರ್ತಯೇನಮಃ||

ಅರ್ಥ: ಭವರೋಗಿಗಳಾದ ಸರ್ವ ಮಾನವರ ವೈದ್ಯನಾದ ಎಲ್ಲ ವಿದ್ಯೆಗಳ ಉತ್ಪತ್ತಿ ಸ್ಥಾನವಾದ, ಮತ್ತು ಕರುಣಾಮೂರ್ತಿಯಾದ ಗುರುರಾಯನಿಗೆ ನಮಸ್ಕಾರವು.

ಇತ್ಯಾದಿ ಗುರುವಿನ ಬಗೆಗೆ ಅನೇಕ ವರ್ಣನೆಗಳುಂಟು. ಅವುಗಳಿಂದ ಗುರುರಾಯನ ನಿಜವಾದ ಸ್ವರೂಪವೂ ಯೋಗ್ಯತೆಯೂ ಸ್ಪಷ್ಟವಾಗುವವು.

ಇದರಿಂದ ಮರೆವುಗಳೆಮ ಅರಿವು ಹೊಂದಿದ ಮತ್ತು ಉತ್ಕೃಷ್ಟವಾದ ಆಚಾರವು ಅಳವಟ್ಟ ಮಾನವನೇ ಗುರುವೆನಿಸುವನು. ಹಾಗೂ ಅಜ್ಞಾನ ಮೊರೆದು ಸುಜ್ಞಾನ ವಿಡಿವ ಸಂಸ್ಕಾರವೇ ದೀಕ್ಷೆ ಎನ್ನಿಸುವದು.

ದೀಯತೆ ಲಿಂಗ ಸಂಬಂಧಸ್ | ಕ್ಷೀಯತೇ ಚ ಮಲತ್ರಯಮ್ |
ದೀಯತೆ ಕ್ಷೀಯತೆ ಯಸ್ಮಾತ್ | ಸಾ ದೀಕ್ಷಾ ಇತಿ ನಿಗದ್ಯತೆ ||

ಅರ್ಥ:— ಯಾವ ಸಂಸ್ಕಾರದಿಂದ, ಲಿಂಗ ಸುಜ್ಞಾನ ಸಂಬಂಧವು ಕೊಡಲ್ಪಡುವದೋ; ಮತ್ತು ಆಣವ-ಮಾಯಾ-ಕಾರ್ಮಿಕಗಳೆಂಬ ಮಲತ್ರಯಗಳು ನಷ್ಟಗೊಳಿಸಲ್ಪಡುವವೋ ಆ ಸಂಸ್ಕಾರವೇ ದೀಕ್ಷೆ ಎನ್ನಿಸುವದು.

ಇಂಥ ಉತ್ತಮ ಸ್ಥಿತಿಗೆ ಶಿಷ್ಯನನ್ನು ಒಯ್ಯುವ ಗುರುವಿನಲ್ಲಿ ಮೂರು ತರಗಳು ಇರುವವು. ಅವು ಯಾವವೆಂದರೆ, ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು. ಎಂಬವು ಈ ಗುರುವು ಮಾನವನಿಗೆ ಲಿಂಗ ಸುಜ್ಞಾನ ಸಂಬಂಧವನ್ನು ಕೊಟ್ಟು ಮಲತ್ರಯಗಳನ್ನು ನಾಶಮಾಡುತ್ತಾನೆ. ಆಗ ಅವನು ದೀಕ್ಷಾಗುರುವೆನ್ನಿಸುವನು. ಆ ಬಳಿಕ ಆ ದೀಕ್ಷಬದ್ಧನಿಗೆ ಶಿವ ಮಾರ್ಗದ ರೀತಿಯನ್ನು ಒಳಿತಾಗಿ ಬಿತ್ತರಿಸಿ, ಚನ್ನಾಗಿ ಬೋಧಿಸುವ ಗುರುವೇ ಶಿಕ್ಷಾಗುರುವೆನ್ನಿಸುವನು. ಹೀಗೆ ಶಿಕ್ಷಿತನಾದ ಶಿಷ್ಯನಿಗೆ ಶಿವಾನುಭವ ಜ್ಞಾನವು (ತಾನು – ಜಗತ್ತು – ಈಶ್ವರ ಈ ಮೂರು ನಿಜವಾದ ಜ್ಞಾನವು ಮನಂಬೊಕ್ಕು, ತದನುಸಾರ ವರ್ತಿಸುವಂತೆ ಅಣಿಗೊಳಿಸುವ ಗುರುವೇ ಜ್ಞಾನಗುರುವು. ಈ ತ್ರಿವಿಧ ಗುರುತ್ವವು ಸಾಮಾನ್ಯ ನರನಿಗೆ ಸಂಭವಿಸನು — "ನೀನು ಜಂಗಮನಾಗಿ ನನ್ನ ಭವನ ಕೊಲ್ಲುವೆನೆಂದು ಉದಿಸಿ ಬಂದಡೆ ನಾನು ಭಕ್ತನಾಗಿ ನಿನ್ನನ್ನು ಧರಿಸುವೆ" ಎಂದು ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿದ್ದಾರೆ. ಅಂತಹ ಶಿವನೇ [illegible] ರೂಪ ದಿಂದ ಜಗತ್ತಿಗೆ ಬಂದರೆ ಅವನೇ ಜಂಗಮನೆನ್ನಿಸುವನು. ಇಂತಹ

ಭಕ್ತೋದ್ಧಾರಿ ಜಂಗಮನೇ ನಿಜವಾದ ಗುರುವು. “ ಶಿಷ್ಯನ ಹೃತ್ತಾಪಗಳೆಯದೆ ಬರಿಯ ವಿತ್ತಾಪಹರಣೆ ಮಾಡುವ ” ಕೃತ್ರಿಮ ಗುರುಗಳೇ ಎಲ್ಲೆಡೆಯಲ್ಲಿ ವಿಪುಲವಾಗಿ ತುಂಬಿಕೊಂಡು ನಾವೇ ಗುರುಗಳೆಂದು ಅವರು ಹೇಳುತ್ತಿರುವರು. ಇವರನ್ನು - “ಬಲ್ಲಗುರುಡರು ಕೂಡಿ ಹಳ್ಳವನು ಬಿದ್ದಂತೆ - ” ಎಂದು ಸರ್ವಜ್ಞ ಮೂರ್ತಿಯು ಬಣ್ಣಿಸಿ, ಸಮಾಜವನ್ನು ಎಚ್ಚರಿಸಿದ್ದಾನೆ.

## —ಃ ಲಿಂಗ ಃ—

ಗುರುವು ತ್ರಿವಿಧವಾಗಿರುವಂತೆ ಲಿಂಗವಾದರೂ ತ್ರಿವಿಧವಾಗಿರುವದು (೧) ಕ್ರಿಯಾಲಿಂಗ, (೨) ಭಾವಲಿಂಗ, (೩) ಜಂಗಮಲಿಂಗ ಎಂಬವೇ ಆ ಮೂರು ವಿಧಗಳು. ಈ ಲಿಂಗದ ಮಹಿಮೆಯನ್ನು ಕೆಳಗಿನಂತೆ ವರ್ಣಿಸಿರುವರು

(೧) ಲೀಯತೇ ಗಮ್ಯತೆ ಯತ್ರ । ಜಗದೇತಚ್ಚರಾ ಚರಮ್ ।
ತದೇವಂ ಲಿಂಗಮ್ — — — ॥

ಈ ಚರ ಹಾಗೂ ಅಚರ ಸ್ವರೂಪವಾಗಿರುವ ಎಲ್ಲ ಜಗತ್ತು ಎಲ್ಲಿ ಉದಯಿಸುವದೋ ಮತ್ತು ಲೀನವಾಗುವದೋ ಆ ಸ್ಥಾನವೇ ಲಿಂಗವು.]

(೨) ಲಿಂಗಮಧ್ಯೆ ಜಗತ್ ಸರ್ವಂ ! ತ್ರೈಲೋಕ್ಯಂ ಸಚರಾಚರಂ ।
ಲಿಂಗ ಬಾಹ್ಯಾತ್ ಪರಂ ನಾಸ್ತಿ — — ॥

[ ಸಚರ ಮತ್ತು ಅಚರನಾದ ತ್ರಿಲೋಕಸ್ವರೂಪದ ಎಲ್ಲ ವಿಶ್ವವು ಲಿಂಗದೊಳಗೆ ವಾಸಿಸುತ್ತದೆ. ಲಿಂಗದ ಹೊರಗೆ ಏನೂ ಇರುವದಿಲ್ಲ.]

ಮನುಷ್ಯನ ಅಂತರ್ಯದಲ್ಲಿ ಅಂತರಾತ್ಮನೆಂಬ ಪರಮಾತ್ಮನ ಅಂಶವು ಸೇರಿರುವದು. ಅದೇ ಪ್ರಾಣಲಿಂಗವು. ಈ ಪ್ರಾಣರೂಪಿ ಆತ್ಮನೇ ದೇಹಸಂಗತಿಯಿಂದ ತನ್ನ ಪೂರ್ವದ ಶುದ್ಧ ಸ್ವರೂಪವನ್ನು ಕಳೆದುಕೊಂಡು, ದೇಹರಕ್ಷಣೆಗೆ ಅವಶ್ಯವಾದ ಸಕಲ ವಿಷಯುಗಳ ಬೆನ್ನುಹತ್ತುವನು. ಆಗ ಅವನಿಗೆ ಜೀವಾತ್ಮನೆಂಬ ಹೆಸರು ಬರುವದು. ಜೀವಾತ್ಮನ ಇಂತಹ ಬಲವೇ ಮನಸ್ಸೆಂದು ಹೇಳಲ್ಪಟ್ಟಿದೆ. ಈ ಮನವು ತನ್ನ ವಿಷಯಾಸೆ ತ್ಯಜಿಸಿ ಲಿಂಗವೆಂದರೆ ಸುಜ್ಞಾನವನ್ನೀಸುವ ಪ್ರಾಣಲಿಂಗದಲ್ಲಿ ಬೆರೆದು ತನ್ಮಯವಾಗದಿ

ದ್ದರೆ ಮಾನವನ ಜೀವಭಾವನೆಯು ಹೋಗಲಾರದು. ಆದುದರಿಂದ "ಮನವೇ ಲಿಂಗವು; ಪ್ರಾಣವೇ ಲಿಂಗವು" ಎಂದು ಭಿನ್ನ ಶಬ್ದಗಳಲ್ಲಿ ವಿವರಿಸಿದ್ದಾರೆ. ಮನಸ್ಸು ಸದಸದ್ವಿವೇಕ ಉಳ್ಳದ್ದಾಗಿ, ಅಸತ್ತದ (ತೋರಿ ಯಡಗುವ) ವಿಷಯಗಳನ್ನು ಪರಿತ್ಯಕ್ತಗೊಳಿಸಿ, ಸತ್ (ನಿತ್ಯ)ವೆನ್ನಿಸುವ ಲಿಂಗ (ಸುಜ್ಞಾನ)ದಲ್ಲಿ ಸ್ಥಿರವಾಗಿ ನೆಲೆಸಿ, ಅದು ಲಿಂಗರೂಪವಾದರೆ ಮಾತ್ರ ಆತ್ಮೋದ್ಧಾರಕ್ಕೆ ಎಡೆಯುಂಟು. ಇದನ್ನೇ ಶ್ರೀ ಬಸವೇಶ್ವರರು— "ಪ್ರಾಣವು (ಆತ್ಮವು) ಸ್ವಸ್ಥಿರವಾಗದನ್ನಕ್ಕರ ಪ್ರಾಣಲಿಂಗಿ ಎಂತೆಂಬೆ" ಎಂದು ಉದ್ಗಾರವೆತ್ತಿದ್ದಾರೆ. ಪ್ರಾಣಕ್ಕೆ ಒದಗಿದ ಜೀವಭಾವನೆಯೆ "ಸ್ವ" ಎಂದೆನಿಸುವದು ಅದರ ಈ ಜೀವಭಾವನೆ ಹೋದರೆ ಮಾತ್ರ ಮನಸ್ಸು ಶುದ್ಧವಾಗುವದು. (ವೇದಾಂತಿಗಳ ಮತದಂತೆ ಮನದಲ್ಲಿಯೇ ವಿಜ್ಞಾನವು ಅಡಕವಾಗಿದೆ.) ಮನವು ಶುದ್ಧವಾಗದೇ ಹೋದರೆ, ಸುಜ್ಞಾನವು ಲಭಿಸುವದು ದೂರಾಪಾಸ್ತವೇ ಸರಿ. ಆದುದರಿಂದ ಮನವು ಪರಿಶುದ್ಧ ಆತ್ಮನಲ್ಲಿ (ಪ್ರಾಣಲಿಂಗದಲ್ಲಿ ಇಲ್ಲವೆ ಸುಜ್ಞಾನದಲ್ಲಿ) ಬೆರೆಯುದೆ ಅದು ಲಿಂಗವೆನ್ನಿಸದು.

ಲಿಂಗವು ಮೂರು ತೆರನಾಗಿರುವವೆಂದು ಮೇಲೆ ಹೇಳಿದೆಯಷ್ಟೇ ! ಕ್ರಿಯಾ (ಆಚಾರ) ಲಿಂಗವೇ ಮೊದಲನೆಯದು. ಮನುಷ್ಯನು ತನ್ನ ಜನ್ಮದಲ್ಲಿ ಆಚರಿಸುವ ಅನೇಕ ಕ್ರಿಯೆಗಳನ್ನು ಬಹು ಎಚ್ಚರದಿಂದ ಜ್ಞಾನಪೂರ್ವಕವಾಗಿ, ಆಚರಿಸುತ್ತ ತನ್ನ ಇಷ್ಟಲಿಂಗದಲ್ಲಿ ತನ್ನನ್ನು ಸಂಯೋಗಪಡಿಸುವದಕ್ಕೆ ಲವಮಾತ್ರವೂ ಅಡ್ಡಿಯು ಉಪಸ್ಥಿತವಾಗದಂತೆ ಮಾಡುತ್ತ ಹೋಗುವದೇ ಕ್ರಿಯಾಲಿಂಗದ (ಇಷ್ಟಲಿಂಗದ ಆರಾಧನೆಯು. ಆ ಸತ್ ಕ್ರಿಯೆಗಳೇ (ಸದಾಚಾರವೇ) ಇಷ್ಟಲಿಂಗ. ಈ ಇಷ್ಟಕ್ರಿಯೆಗಳನ್ನು ಬಿಟ್ಟು ಸರ್ವದಾ ಅನಿಷ್ಟಕ್ರಿಯೆಗಳಲ್ಲಿಯೇ ನಿಮಗ್ನರಾಗಿರುವ ಬರಿಯ ಅಡ್ಡಹೆಸರಿನ ಕ್ರಿಯಾಲಿಂಗಧಾರಿಗಳೇ — ಎಲ್ಲೆಡೆಯಲ್ಲಿ ತುಂಬಿಬಿಟ್ಟಿರುವದು ಬಹು ಶೋಚನೀಯವು. ಎಚ್ಚರದಿಂದ ವರ್ತಿಸುವವರು ತೀರ ಸ್ವಲ್ಪ ಜನರು. ತನುವಿಗೆ ಸದಾಚಾರವನ್ನಂಟಿಸಿಕೊಂಡು, ಸನ್ಮಾರ್ಗದಲ್ಲಿ ವರ್ತಿಸುವದೇ ಕ್ರಿಯಾಲಿಂಗಧಾರಣೆಯು. ತನುವಿನ ದ್ವಾರವಾಗಿಯೇ ಎಲ್ಲ ಕಾರ್ಯ (ಆಚಾರ)ಗಳನ್ನು ಮಾಡಬೇಕಾಗಿರುವದರಿಂದ ನಿಜವಾಗಿ ಅದೇ ಇಷ್ಟಲಿಂಗವೂ ಆಗಿರುವದು. ತನುವು ತನಗೆ ಸತ್‌ಕ್ರಿಯಾಚರಣೆಗಳನ್ನು ಸಂಬಂಧಿಸಿಕೊಳ್ಳದಿದ್ದರೆ, ಅದು ಅನಾಚಾರೀ ದೇಹವಾಗುವದೇ ವಿನಃ ಇಷ್ಟಲಿಂಗ ಸ್ವರೂಪವಾಗಲಾರದು.

ಭಾವಲಿಂಗವೇ ಎರಡನೆಯದು. ಇದೇ ಪ್ರಾಣಲಿಂಗವೇ ಎರಡನೆಯದು. ಇಲ್ಲಿ ಮುಖ್ಯವಾಗಿ ಮನವೇ ಲಿಂಗವಾಗಿರುವದು. ಆದರಿಂದ, ಇದನ್ನು ಭಾವಲಿಂಗವೆಂದು ಏಕೋತ್ತರ ಶತಸ್ಥಾನದಲ್ಲಿ ಕರೆದಿರುವರು. ಭಾವವೆಂದರೆ ಮನವೆಂದು ಎಲ್ಲರೂ ತಿಳಿಯುವರು. ಅದು ದುರ್ಭಾವ ಸದ್ಭಾವವೆಂದು ಎರಡು ವಿಧವಾಗಿದೆ. ಭಾವವು ಅಸತ್ತಿನಕಡೆಗೆ ಹೋಗುವದೇ ದುರ್ಭಾವವು. ವಿಷಯ ತ್ಯಾಗಮಾಡಿ ಅದು ಸತ್ (ಸತ್ಯ) ವಸ್ತುವಾದ ಜ್ಞಾನವನ್ನು ಅನುಸರಿಸುವದೇ ಸದ್ಭಾವವಾಗುವದು. ಇಂತಹ ಸದ್ಭಾವದಿಂದ ಭಜಿಸುವ ಸುಜ್ಞಾನ ಲಿಂಗವೇ ಪ್ರಾಣಲಿಂಗವು.

ಜ್ಞಾನಲಿಂಗವೇ ಮೂರನೆಯದು. ಸಾಧಾರಣವಾಗಿ ಇದನ್ನೆ ಭಾವಲಿಂಗವೆಂದೇ ಎಲ್ಲರೂ ಒಪ್ಪುತ್ತಿದ್ದಾರೆ ಆದರೆ ಚನ್ನಬಸವಣ್ಣನವರು ಏಕೋತ್ತರ ಶತಸ್ಥಲದಲ್ಲಿ ಇದಕ್ಕೆ ಜ್ಞಾನಲಿಂಗವೆಂದಿರುವರು. ಜಗದಾಕಾರವಾಗಿರುವ ಈ ಜ್ಞಾನಮಯ (ಶಿವಮಯ) ಲಿಂಗವನ್ನು ಕೇವಲ ಭಾವದಿಂದಲೇ ಊಹಿಸಬೇಕಾಗಿರುವದರಿಂದ, ಜನರು ಇದಕ್ಕೆ ಭಾವಲಿಂಗವೆಂದು ಹೇಳುತ್ತಿರುವದು ಸಹಜಿಕವಾಗಿದೆ. ಇದು ಪ್ರಜ್ಞಾನ ಸಮ್ಯಕ್‌ಜ್ಞಾನ ಸ್ವರೂಪವಾಗಿರುವದರಿಂದ ಜ್ಞಾನಲಿಂಗವೆಂಬ ಹೆಸರೂ ಅನ್ವರ್ಥಕವಾಗಿರುವದು.

## —: ಜಂಗಮ :—

(೧) ಜಾನಂತ್ಯತಿ ಶಯಾದ್ಯೇತು । ಶಿವಂ ವಿಶ್ವಪ್ರಕಾಶಮ್ ।
ಸ್ವ ಸ್ವರೂಪ ತಯಾತೇತು । ಜಂಗಮಾ ಇತಿ ಕೀರ್ತಿತಾಃ ॥

[ಅರ್ಥಃ— ವಿಶ್ವರೂಪದಿಂದ ಬೆಳಗುವ ಶಿವನನ್ನು ಯಾರು ತಮ್ಮ ಸ್ವರೂಪದ ಮೇಲಿಂದಲೇ ಅತ್ಯಂತ ಉತ್ತಮ ರೀತಿಯಿಂದ ತಿಳಿಯುವರೋ ಅವರೇ ಜಂಗಮರೆನ್ನಿಸಿಕೊಳ್ಳುವರು.]

(೨) ಸರ್ವಲೋಕೋಪಕಾರಾಯ । ಯೋ ದೇವಃ ಪರಮೇಶ್ವರಃ।
ಚರತ್ಯ ತಿಥಿ ರೂಪೇಣ । ತಸ್ಮೈ ಜಂಗಮಾಯ ನಮಃ ॥

[ಅರ್ಥಃ— ದೇವನೆನ್ನಿಸುವ ಯಾವ ಪರಮಾತ್ಮನು, ಎಲ್ಲ ಜನರ ಉದ್ಧಾರಕ್ಕಾಗಿ ಅತಿಥಿ ರೂಪದಿಂದ ಸಂಚರಿಸುವನೋ ಅಂತಹ ಜಂಗಮನಿಗೆ ನಮಸ್ಕಾರವು.]

ಗುರು - ಲಿಂಗಗಳು ಮೂರು ಮೂರು ತೆರನಾಗಿರುವಂತೆ ಜಂಗಮನಾದರೂ ಮೂರು ತೆರನಾಗಿರುವನು. ಅವು ಯಾವವೆಂದರೆ (೧) ಸ್ವಯ (ಜಂಗಮು) (೨) (ಚರ) ಜಂಗಮ (೩) ಪರ ಜಂಗಮ

ಸ್ವಯ ಜಂಗಮು:— ಕ್ರಿಯಾಲಿಂಗ ಭಾವಲಿಂಗ ಜ್ಞಾನಲಿಂಗಗಳನ್ನು ಸರಿಯಾಗಿ ಪೂಜಿಸಿ,ತದನುಸಾರ ವರ್ತಿಸುವ ಸದ್ಭಕ್ತನೇ ಸ್ವಯಜಂಗಮನು. ತನ್ನನ್ನು ಜಂಗಮ ರೂಪಕ್ಕೊಯ್ಯುವವನೇ ಸ್ವಯ ಜಂಗಮನು.

ಚರ ಜಂಗಮು: – ತಾನೊಬ್ಬನೇ ಜಂಗಮ ಸ್ವರೂಪನಾದರೆ ತೀರದು ಇಡೀ ಜಗತ್ತನ್ನು ತನ್ನಲ್ಲಿ ವಿಲೀನ ಗೊಳಿಸಿಕೊಳ್ಳುವದೇ ಚರ ಜಂಗಮ ಸ್ವರೂಪವು. ಇಲ್ಲವೆ ಮೇಲಿನ ಎರಡನೆಯ ಪದ್ಯದಲ್ಲಿ ಹೇಳಿದಂತೆ ವರ್ತಿಸುವವನೇ ಚರ ಜಂಗಮನು.

ಪರಜಂಗಮು— ಈತನು ಅತ್ಯಂತ ಶ್ರೇಷ್ಠನಾದ ಜಂಗಮನು.

"ನ ಹಿ ಜ್ಞಾನಾಯ ಸದೃಶಂ ಪವಿತ್ರಮಿಹ ವಿದ್ಯತೆ" ಎಂಬ ಗೀತಾ ವಾಕ್ಯದಂತೆ ಕೇವಲ ಮಹಾಜ್ಞಾನಿಯಾದ ಶರಣನೇ ಪರಜಂಗಮನು. ಮೇಲಿನ ಮೊದಲನೆಯ ಪದ್ಯವೇ ಇದಕ್ಕೆ ಸಾಕ್ಷ್ಯವಾಗಿದೆ.

ಈ ಎಲ್ಲ ವಿವೇಚನೆಯಿಂದ ಗುರು-ಲಿಂಗ-ಜಂಗಮಗಳ ನಿಜವಾದ ಕಲ್ಪನೆಯು ತುಸುವಾದರೂ ಹೊಳೆದಿರಲಿಕ್ಕೆ ಸಾಕು. ಸ್ವಭಾವವಾದ ತನು-ಪ್ರಾಣ-ಜ್ಞಾನಗಳೇ ಈ ಗುರು-ಲಿಂಗ-ಜಂಗಮಗಳು. ಇವುಗಳ ಸೇವೆಯನ್ನು ಆಜನ್ಮವಾಗಿ ಮಾಡಿ ಆತ್ಮೋದ್ಧಾರ ಹೊಂದುವದೇ ಭಕ್ತನ (ಅದೇಕೆ ಸರ್ವರ) ಕರ್ತವ್ಯವು. ಇರಲಿ ಇಂತಹ ಗುರು ಲಿಂಗ ಜಂಗಮಗಳಿಂದಲೇ ನಾವು ಪಾದೋದಕ ಪ್ರಸಾದ ಪಡೆಯಬೇಕಾಗಿದೆ. ಇವೇನೂ ಸಾಮಾನ್ಯ ವಿಷಯಗಳಲ್ಲ ಬರಿಯ ಪಾದದ ಇಲ್ಲವೇ ಪಾದಾಂಗುಷ್ಠದ ಜಲವನ್ನು ಸೇವಿಸಿ ಮುಂದಿರುವ ಎಡೆಯನ್ನು ಸಮಂತ್ರಕ ಹಸ್ತಸ್ಪರ್ಶದಿಂದ ವಿಧಿಯಾಗಿ ಇಲ್ಲವೆ ವೆಗ್ಗಳವಾಗಿ ಭೋಗಿಸಿ, ತೃಪ್ತಿಪಡೆದರೆ ಅವು ನಿಜವಾದ ಪಾದೋದಕ ಪ್ರಸಾದಗಳಾಗಲಾರವು. ಅವುಗಳ ನಿಜವಾದ ಸ್ವರೂಪವು ಕೆಳಗೆ ತೋರಿಸಲ್ಪಟ್ಟಿದೆ.

## ಪಾದೋದಕ

ಪಾದೋದಕ ಈ ಶಬ್ದವು ಪಾದ+ಉದಕಗಳ ಸಂಧಿಯಿಂದ ಉಂಟಾಗಿದೆ. ಲಿಂಗಾಯತರು ಪರಶಿವ (ಪರಬ್ರಹ್ಮ) ನಿಗೆ ಸ್ಥಳವೆಂದು ಹೆಸರಿ

# ಇತರ ಹಿಂದುಸ್ತಾನದಲ್ಲಿಯ ಶಿವಶರಣರು

ಶಿವಶರಣರು ಇತರ ಹಿಂದುಸ್ತಾನ ಅಂದರೆ ವಿದರ್ಭ (ಮಧ್ಯದೇಶ) ಹಿಮಾಚಲ, ಪ್ರದೇಶ ಕಾಶ್ಮಿರ, ಮಗಧ (ಬಿಹಾರದ ದಕ್ಷಿಣಭಾಗ) ಕಾಶೀ ಕ್ಷೇತ್ರ, ಪಾಂಡ್ಯನಾಡು (ತಮಿಳುದೇಶ) ಸಿಂಧ ಪ್ರಾಂತ ಮುಂತಾದ ಕಡೆಗೂ ತಲೆದೋರಿದ್ದಾರೆ. ಅವರಲ್ಲಿ ಆಯಾ ಪ್ರಾಂತಗಳಲ್ಲಿ ಮುಖ್ಯರಾದವರ ಚರಿತ್ರೆಯನ್ನು ಮಾತ್ರ ನಾವು ಇಲ್ಲಿ ವಿವರಿಸುತ್ತೇವೆ.

---

## ಧನಸೇನಸೆಟ್ಟಿ

ಮಗಧಃ— ಮಗಧ ದೇಶದಲ್ಲಿ ವಿಜಯಭೂಪಾಲನೆಂಬ ರಾಜನ ಆಳುತ್ತಿದ್ದ ಜೈಮಿನಿಪುರವು ಅವನ ರಾಜಧಾನಿಯಾಗಿತ್ತು. ಅಲ್ಲಿ ಧನಸೇನಸೆಟ್ಟಿ ಎಂಬ ವರ್ತಕನು ಸಕಲೈಶ್ವರ್ಯದಿಂದ ಕೂಡಿಕೊಂಡಿರಲು ಅವನು ವ್ಯಾಪಾರಕ್ಕೋಸ್ಕರ ಪರದೇಶಕ್ಕೆ ಹೋದನು. ಆಗ ಅವನ ಹೆಂಡತಿ ಭಾವತಿ ಎಂಬವಳು ಒಬ್ಬ ವೋಟನಿಗೆ ಮರುಳಾಗಿ ಮನೆಯ ಕಾವಲುಗಾರನನ್ನು ಒಳಗು ಮಾಡಿಕೊಂಡು ಮನೆಯಲ್ಲಿ ಎರಡು ಹೆಣಗಳನ್ನಿಟ್ಟು ಮನೆಗೆ ಕಿಚ್ಚುಹಿಕ್ಕಿ ತಾವು ಸತ್ತರೆಂಬುದ ಮಾಡಿ ತಾವು ಕಾವಲುಗಾರನ ಸಹವಾಗಿ ಧರ್ಮರಾಜನೆಂಬ ಅರಸನು ಆಳುತ್ತಿದ್ದ ಮದನವತಿ ಎಂಬ ಪಟ್ಟಣಕ್ಕೆ ಹೋಗಿ ಅಲ್ಲಿ ವಾಸಿಸ ಹತ್ತಿದರು. ಇತ್ತ ಧನಸೇನಸೆಟ್ಟಿಯು ಜೈಮಿನಿಪುರಕ್ಕೆ ಮರಳಿ ಬರಲು ಅಲ್ಲಿ ತಳವಾರನನ್ನು ಆಕಸ್ಮಾತ್ತಾಗಿ ಕಂಡು ಅವನಿಂದ ತನ್ನ ಸತಿಯು ಒಬ್ಬ ವೋಟನನ್ನು ಕೂಡಿಕೊಂಡು ಮದನವತಿ ಎಂಬ ಪಟ್ಟಣದಲ್ಲಿ ಇದ್ದಾಳೆಂಬುದನ್ನು ತಿಳಿದನು. ಆಗ ಅವನು ಅಲ್ಲಿಗೆ ಹೋಗಿ ತನ್ನ ಸತಿ ಇರುವದನ್ನು ಕಂಡನು. ಆದರೆ ಅವಳನ್ನು ನೋಡಿ ಅವನಿಗೆ ಎಷ್ಟು ಮಾತ್ರವೂ ಸಿಟ್ಟು ಬರಲಿಲ್ಲ. ಅವನಲ್ಲಿ ವೈರಾಗ್ಯವು ಉತ್ಪನ್ನವಾಯಿತು. ಆಗ ಅವನು ತನ್ನ ಧನವೆಲ್ಲ ಧರ್ಮಾರ್ಥ ವೆಚ್ಚ ಮಾಡಿದನು ಮತ್ತು ತಪಸ್ಸನ್ನಾಚರಿಸಲು ಅರಣ್ಯಕ್ಕೆ ಹೋದನು. ಮತ್ತು ಶಿವಾನುಭವವನ್ನು ಆಚರಿಸುತ್ತ ಶಿವನಲ್ಲಿ ಐಕ್ಯಪದವನ್ನು ಹೊಂದಿದನು

ಮಗಧ ದೇಶವು ಬಿಹಾರ ಪ್ರಾಂತದ ದಕ್ಷಿಣ ಭಾಗವಾಗಿದೆ ಸ್ತ್ರೀಹತ್ಯ ಮಾಡಕೂಡದೆಂಬದಕ್ಕೆ ಇದು ಶಿವಶರಣರ ಚರಿತ್ರೆಗಳಲ್ಲಿ ಒಂದು ಪ್ರಸಿದ್ಧ ಕಥೆಯಾಗಿದೆ. ಶಿವಶರಣರು ಸ್ತ್ರೀಯರನ್ನು ಎಂದೂ ಬಾಧಿಸಕೂಡದೆಂಬ ನಿಯಮವಿದೆ. ಗಟ್ಟಿವಾಳಿಯನ ಚರಿತ್ರೆಯನ್ನು ನೋಡಿರಿ.

---

## ಘಂಟಾಕರ್ಣ

ಹಿಮಾಚಲ ಪ್ರದೇಶ:— ಕನಕಾದ್ರಿಯಲ್ಲಿ ಘಂಟಾಕರ್ಣನೆಂಬ ಗಣೇಶ್ವರನು ಪರಮ ವೀರಶೈವಾಚರನಿಷ್ಠನಾಗಿ ಸದ್ಭಕ್ತಿಯಿಂದ ಲಿಂಗಾರ್ಚನೆಯನ್ನು ಮಾಡುವಲ್ಲಿ ಮೊಲ್ಲೆ ಮಲ್ಲಿಗೆ ಸುರಹೊನ್ನೆ ಪಾರಿಜಾತ ಮೊದಲಾದ ಪುಷ್ಪಗಳಿಂದ ಶಿವಪೂಜೆಯನ್ನು ಮಾಡಿ ಪ್ರಸಾದವನ್ನು ಕೊಳ್ಳುತ್ತಾ ಇದ್ದನು. ಆಗ ಅವನ ಪೂಜೆಯ ಪುಷ್ಪಗಳು ಎಂದೂ ಬಾಡುತ್ತಿರಲಿಲ್ಲ. ಅವನಿದ್ದಲ್ಲಿ ಕಾಡ್ಗಿಚ್ಚು ಉರಿಯುತ್ತಿರಲಿಲ್ಲ. ಹೀಗಿರುವಲ್ಲಿ ಒಂದು ದಿವಸ ಅವನ ಪುಷ್ಪಗಳು ಸೂರ್ಯನ ಕಿರಣಗಳಿಂದ ಒಣಗಿದ್ದು ಅವನಿಗೆ ಕಂಡು ಬಂದಿತು. ಆಗ ಆ ಗಣೇಶ್ವರನು ಸೂರ್ಯನಿಗೆ ನಮ್ಮ ನಿರ್ಮಾಲ್ಯವನ್ನು ಈವರೆಗೂ ನೀವು ಒಣಗಿಸಲಿಲ್ಲ, ಈಗೇಕೆ ಒಣಗಿಸಿದೆ ಎಂದು ಕೇಳಲು ಸೂರ್ಯನ— ಸರ್ವಸಾರವನ್ನು ಒಣಗಿಸುವದೇ ನನ್ನ ಗುಣವು. ನಿಮ್ಮ ನಿರ್ಮಾಲ್ಯವೆಂದರಿಯದೆ ಒಣಗಿಸಿದೆನು ಎಂದು ಹೇಳಲು ಆಗ ಮುನಿಯು ನಿನ್ನ ತಪ್ಪಿಗೋಸ್ಕರ ನೀನು ಕುಷ್ಠರೋಗಿಯಾಗು ಎಂದು ಶಪಿಸಿದನು. ಆಗ ಸೂರ್ಯನು ತನ್ನ ಅಜಾಗ್ರತೆಯನ್ನು ತಿಳಿದವನಾಗಿ ತನಗೆ ಶಾಪ ವಿಮೋಚನೆ ಹೇಗಾಗುವದೆಂದು ಕೇಳಿಕೊಳ್ಳಲು ಆಗ ಘಂಟಾಕರ್ಣ ಗಣೇಶ್ವರನು— ನೀನು ಮನೋಹರ ಗಣೇಶ್ವರನ ಪಾದೋದಕವನ್ನು ಸ್ವೀಕರಿಸಲು ಶುದ್ಧಾಂಗನಾಗುವಿ ಎಂದು ಹೇಳಲು ಸೂರ್ಯನು ಕಾಶಿಗೆ ಹೋಗಿ ಅಲ್ಲಿ ಬಾಲಾರ್ಕೇಶ್ವರನೆಂಬ ಲಿಂಗವನ್ನು ಸ್ಥಾಪಿಸಿ ಪೂಜಿಸಿ ತನ್ನ ರೋಗವನ್ನು ಪರಿಹಾರ ಮಾಡಬೇಕೆಂದು ಲಿಂಗಕ್ಕೆ ಕೇಳಿಕೊಳ್ಳಲು, ಆ ಲಿಂಗವು ಘಂಟಾಕರ್ಣ ಮುನೀಶ್ವರನು ಹೇಳಿದ ಮನೋಹರ ಗಣೇಶ್ವರನು ಮಂದಾರ ಪರ್ವತದಲ್ಲಿದ್ದಾನೆ, ಅಲ್ಲಿಗೆ ಹೋಗೆಂದು ಹೇಳಲು ಅಲ್ಲಿಗೆ ಹೋಗಿ ಮನೋ

ಹರ ಗಣೇಶ್ವರನನ್ನು ಕಂಡು ಅವನ ಪಾದಾರ್ಚನೆಯನ್ನು ಮಾಡಿ ಅವನ ಪಾದೋದಕವನ್ನು ಸ್ವೀಕರಿಸಿ ತನ್ನ ಮೈಗೆ ತೊಡೆದುಕೊಳ್ಳಲು ಅವನ ಕುಷ್ಠ ರೋಗವು ಹೋಗಿಬಿಟ್ಟಿತು.

ವಚನ ಶಾಸ್ತ್ರದಲ್ಲಿ ಘಂಟಾಕರ್ಣ ಮತ್ತು ಮನೋಹರ ಗಣೇಶ್ವರರ ಹೆಸರುಗಳು ಆಗಿಂದಾಗ್ಗೆ ಬರುತ್ತವೆ. ಅವರು ಮೇಲಿಂದಮೇಲೆ ಲೋಕೋದ್ಧಾರಕ್ಕೋಸ್ಕರ ಭೂಮಿಗವತರಿಸುವದುಂಟು. ಆದ್ದರಿಂದ ಅವರ ಚರಿತ್ರೆಗಳನ್ನು ನಾವು ಇಲ್ಲಿ ನಿರೂಪಿಸಿದ್ದೇವೆ.

---

## ಸೋಮಾಸಿಮಾರ

**ಕಾಶ್ಮೀರ:**— ಕಾಶ್ಮೀರದಲ್ಲಿ ಶಿವಾಚಾರ ಸಂಪನ್ನನೂ ಶಾಸ್ತ್ರಜ್ಞನೂ ಆದ ಸೋಮಾಸಿಮಾರನೆಂಬ ಶಿವಭಕ್ತನು ವಾಸಿಸುತ್ತಿದ್ದನು. ಅವನು ಶೈವ ಶಾಸ್ತ್ರದಲ್ಲಿ ಅತ್ಯಂತ ಪಂಡಿತನಾಗಿ ಧನವಂತನೂ ಆಗಿದ್ದನು. ಅವನು ಈ ಧನದಿಂದ ಏನೂ ಪ್ರಯೋಜನವಿಲ್ಲವೆಂದು ಅದನ್ನು ಬುಧಜನರಿಗೆಲ್ಲ ದಾನಮಾಡಿ ತನ್ನ ಗ್ರಂಥಗಳನ್ನು ೧೨ ಕುದುರೆಗಳ ಮೇಲೆ ಹೇರಿ ಕಾಶೀಯಾತ್ರೆಗೆ ಹೊರಟನು. ಅವನು ಕಾಶಿಗೆ ಬಂದು ವಿಶ್ವೇಶ್ವರ ದರ್ಶನವನ್ನು ಹೊಂದಿ ಅಲ್ಲಿದ್ದ ೧೬ಸಾವಿರ ವಿಪ್ರರಿಗೆ ತನ್ನಲ್ಲಿದ್ದ ಧನವನ್ನೆಲ್ಲ ದಾನ ಮಾಡಿ ಬೇರೆ ಕ್ಷೇತ್ರಗಳಿಗೆ ಹೊರಟನು. ಅವನು ಕೇದಾರ ಕ್ಷೇತ್ರದ ಸಂದರ್ಶನ ಮಾಡಿ ಒಂದು ಅರಣ್ಯದಲ್ಲಿ ಬರುತ್ತಿರುವಾಗ್ಗೆ ದಾರಿಯಲ್ಲಿ ಸುಲಿಯಲಿಕ್ಕೆ ನಿಂತ ಒಬ್ಬ ಬೇಡನನ್ನು ಕಂಡು ಅವನನ್ನು ಮಾತಾಡಿಸಲು ಸೋಮಾಸಿಮಾರನ ಸಾನ್ನಿಧ್ಯದ ಬಲದಿಂದ ಆ ಬೇಡನಲ್ಲಿ ಜ್ಞಾನೋದಯವಾಗಿ ಅವನು ಕಯ್ಯಲ್ಲಿದ್ದ ಬಿಲ್ಲನ್ನು ಚೆಲ್ಲಿಕೊಟ್ಟು ಅವನಿಗೆ ನಮಸ್ಕರಿಸಿದನು. ಅದನ್ನು ನೋಡಿ–, ನೀನಾರು, ನಿನಗೇನುಬೇಕು, ಬೇಡು ಎಂದು ಸೋಮಾಸಿಮಾರನು ಕೇಳಲು ಅವನು ನನ್ನ ಹೆಸರು ಶ್ವಪಚನು. ನನಗೆ ಉಪದೇಶವನ್ನು ಕೊಡು ಎಂದು ನುಡಿದನು. ಅದಕ್ಕೆ ಅವನು— ವೇದಬಾಹಿರನಾದ ಶ್ವಪಚಕನಿಗೆ ಎಂದಾದರೂ ಉಪದೇಶವನ್ನು ಮಾಡಿದ್ದುಂಟೇ ಎಂದೆನ್ನಲು ಅವನು— ನನಗೆ ವೇದಪಠಣವು ಬರುತ್ತದೆ ಎಂದು ಸ್ವರ ಸಹಿತ ವೇದ ಪಠಣ ಮಾಡಹತ್ತಿದನು. ಸೋಮಾಸಿಮಾರನು ಆಶ್ಚರ್ಯಬಟ್ಟು

ಅದನ್ನು ಕೇಳುವವನಾದನು. ಆಗ ಆ ಶ್ವಪಚನು ಉಪದೇಶವಿಲ್ಲದೆ ಇಂಥ ಪಠಣವು ನಿಷ್ಪ್ರಯೋಜನವಾದದ್ದು. ಆದ್ದರಿಂದ ನನಗೆ ಉಪದೇಶವನ್ನು ಕೊಡಬೇಕೆಂದು ಸೋಮಾಸಿಮಾರನಿಗೆ ಬಿನ್ನವಿಸಿಕೊಳ್ಳಲು ಇವನು ನನ್ನನ್ನು ಬಿಡುವದಿಲ್ಲ ಎಂದು ತಿಳಿದು ಅವನಿಗೆ ಉಪದೇಶವನ್ನು ಕೊಟ್ಟನು.

ಆಮೇಲೆ ಉಭಯತರು ಸ್ಥಾನಪುರವೆಂಬ ಗ್ರಾಮಕ್ಕೆ ಬರಲು ಅಲ್ಲಿದ್ದ ಬ್ರಾಹ್ಮಣರು-ವಿಪ್ರರು ಹೊಲೆಯನ ಕೂಡಿಕೊಂಡು ಬರಬಹುದೇ ಎಂದು ಪ್ರಶ್ನಿಸಲು, ಸೋಮಾಸಿಮಾರನು ಒಂದು ಸಭೆಯನ್ನುಸೇರಿಸಿ ಶ್ವಪಚನಿಂದ ವೇದ ಪಠಣವನ್ನು ಮಾಡಿಸಲು ಅಲ್ಲಿದ್ದ ಗರ್ವಿಷ್ಠನಾದ ಬ್ರಾಹ್ಮಣರು ಅವನ ವಿದ್ವತ್ತೆಯನ್ನು ಕೊಂಡಾಡುವವರಾದರು.

ಅಲ್ಲಿಂದ ಸೋಮಾಸಿಮಾರನು ದಕ್ಷಿಣ ದೇಶಕ್ಕೆ ಹೊರಟು, ಶ್ರೀಶೈಲ ಮಲ್ಲಿಕಾರ್ಜುನನನ್ನು ಕಂಡು, ಅಲ್ಲಿ ಪೂಜೆಯ ಮಾಡಿ ಅಲ್ಲಿಂದ ಪಂಪಾ ಕ್ಷೇತ್ರಕ್ಕೆ ಬಂದು, ವಿರೂಪಾಕ್ಷ ಸ್ವಾಮಿಯನ್ನು ಕಂಡು, ನಮಿಸಿ ಆತನ ರಾಣಿಯಾದ ಪಂಪಾ ದೇವಿಗೆ ನಮಸ್ಕಾರ ಮಾಡಿ ಇರುತ್ತಿರಲು, ಆಗ ಒಬ್ಬ ವಿಪ್ರನು ಉತ್ತುಂಗ ಚೋಳನ ರಾಣಿಯ ಅಸ್ತಿಗಳನ್ನು ತೆಗೆದು ಕೊಂಡು ಕಾಶಿಗೆ ಒಯ್ಯುತ್ತಿರಲು, ಅವನು ಸೋಮಾಸಿಮಾರನನ್ನು ಕಂಡು ತಾನು ಕಾಶಿಗೆ ಹೋಗಬೇಕಾದ ಸಂದರ್ಭವನ್ನು ತಿಳಿಸಿದನು. ಆದರೆ ಅಷ್ಟರಲ್ಲಿ ಸೋಮಾಸಿಮಾರನ ಮಹಿಮೆಯ ಮೂಲಕ ಆ ವಿಪ್ರನಲ್ಲಿದ್ದ ಅಸ್ತಿಗಳೆಲ್ಲ ಚೆಂಗಣಿಗಿಲು ಪುಷ್ಪಗಳಾಗಿದ್ದವು. ಇದನ್ನು ಆ ಬ್ರಾಹ್ಮಣನು ನೋಡಿ ಇವನನ್ನು ಕಂಡದ್ದೇ ಕಾಶಿ ಎಂದು ತಿಳಿದು ಹಿಂದುರುಗಿ ಆದ ಸಂಗತಿಯನ್ನು ಚೋಳ ರಾಜನಿಗೆ ಅರಿಕೆ ಮಾಡಿಕೊಂಡನು.

ಸೋಮಾಸಿಮಾರನು ಮುಂದೆ ಕಾವೇರಿ ತೀರದಲ್ಲಿದ್ದ ಪೊನ್ನಾಂಬಲ ಕ್ಷೇತ್ರಕ್ಕೆ ಬಂದು ಪೊನ್ನಾಂಬಲಾಧೀಶನನ್ನು ಕಂಡನು. ಅಲ್ಲಿ ಕಾವೇರೀ ಯುದಕವನ್ನು ಸಹಸ್ರ ಕೊಡಗಳಿಂದ ಲಿಂಗಕ್ಕೆ ಮಜ್ಜನವೆರೆದು ಪೂಜಿಸಿ ಕೆಲವು ಕಾಲ ಅಲ್ಲಿದ್ದನು.

ಹೀಗಿರಲು ಚೋಳರಾಜನು ಲಿಂಗನನ್ನು ಪೂಜಿಸಿದ ನಿರ್ಮಾಲ್ಯ ಪುಷ್ಪದಿಂದ ಸೋಮಾಸಿಮಾರನು ಲಿಂಗ ಪೂಜೆಯನ್ನು ಮಾಡುತ್ತಿರುವ ದನ್ನು ಸೇವಕರಿಂದ ತಿಳಿದು ರಾಜನು ಅವನನ್ನು ಬರಮಾಡಿಕೊಂಡು, ಇಂಥ ನಿರ್ಮಾಲ್ಯ ಕುಸುಮವು ಪೂಜೆಗೆ ಸಲ್ಲದೆನಲು ಅದಕ್ಕೆ ಸೋಮಾಸಿ

ಮಾರನು — ಪರಮಾತ್ಮನು ನೀನು ಅರ್ಪಿಸುವ ಪುಷ್ಪಗಳನ್ನು ಕೈಕೊಳುವ ದಿಲ್ಲವೆಂದ ಲು ಅದಕ್ಕೆ ಚೋಳನೇನು ಕಾರಣವೆನಲು ನಿನಗುಪದೇಶವಿಲ್ಲ. ಆದ್ದರಿಂದ ನಿನ್ನ ಪೂಜೆಯನ್ನು ಕೈಕೊಳ್ಳನು ಎಂದೆನಲು, ಇದಕ್ಕೆ ದೃಷ್ಟಾಂತವನ್ನು ತೋರಿಸು ಎಂದು ರಾಜನು ಅವನಿಗೆ ಹೇಳಿದನು. ಆಗ ಸೋಮಾಸಿಮಾರನು — ನಿರ್ಮಾಲ್ಯ ಪುಷ್ಪಗಳಿಂದ ಲಿಂಗವನ್ನು ಮೊದಲು ಪೂಜಿಸಿ ನೂರೆಂಟು ನಮಶ್ಶಿವಾಯ ಮಂತ್ರಗಳಿಂದ ಪುಷ್ಪಗಳನ್ನು ಹೊಳೆಗೆ ಹಾಕಲಾಗಿ ಆ ಹೊಳೆಯು ಕಟ್ಟೇ ಕಟ್ಟಿದಂತೆ ಮುಂದೆ ಹರಿಯದೆ ವಿಶಾಲ ವಾದ ಸರೋವರವಾಗಿ ಅಲ್ಲಿಯೇ ನಿಂತಿತು. ಅದನ್ನು ಚೋಳರಾಜನು ಕಂಡು, ತಾನೂ ಹಾಗೆಯೇ ಮಾಡಬೇಕೆಂದು, ನೂರೆಂಟು ಬಿಂಡು ಪುಷ್ಪ ಗಳನ್ನು ತಗೆದುಕೊಂಡು ಹೊಳೆಗೆ ಹಾಕಲು ಅವು ಪ್ರವಾಹವಲ್ಲ ಹರಿದು ಹೋದವು ಚೋಳನು ಆಶ್ಚರ್ಯ ಪಟ್ಟು, ಹೀಗೇಕೆಂದು ಕೇಳಲು, ನಿನಗೆ ಉಪದೇಶವಿಲ್ಲದ್ದರಿಂದ ಹಿಗಾಯಿತೆಂದನು. ಆಗ ಚೋಳರಾಜನು ಸೋಮಾಸಿ ಮಾರನಿಂದ ಉಪದೇಶವನ್ನು ಹೊಂದಿದವನಾದನು.

ಮುಂದೆ ಕೆಲವು ದಿವಸಗಳಾದ ಮೇಲೆ ಸೋಮಾಸಿಮಾರನ ಮನಸಿನಲ್ಲಿ ಶಿವಯಾಗವನ್ನು ನಡಿಸಬೇಕೆಂತಲೂ ಈ ಯಾಗಕ್ಕೆ ಪರಶಿವನನ್ನೇ ಬರಮಾಡಿಕೊಳ್ಳಬೇಕಂತಲೂ ಒಂದು ಅಭಿಲಾಷೆಯು ಉಂಟಾಯಿತು. ಹಾಗೆಯೇ ಚಿಂತಿಸುತ್ತ ನಿದ್ರೆಹೋಗಿರಲು, ಇದು ಸುಂದರ ನಿಂಬೆಣ್ಣನಿಂದ ಆದೀತೆಂದು ಅವನಿಗೆ ಸ್ವಪ್ನವಾಯಿತು. ತಿರುವಾವಾರೂರು ಪಟ್ಟಣವಲ್ಲಿ ನಂಬೆಣ್ಣನೂ ಅವನ ಪ್ರೀತಿಗೆ ಪಾತ್ರಳಾದ ಪರವಿನಾಚಿಯೂ ಇರುತ್ತಿರಲು ಸೋಮಾಸಿಮಾರನು ಅಲ್ಲಿಗೆ ಹೋಗಿ ಪರವಿನಾಚಿಗೆ ಮೂರುವರ್ಷ ಚಿಂಗಣಿ ಗಿಲು ಮತ್ತು ಇರುವಂತಿಗೆ ಪುಷ್ಪಗಳನ್ನು ತಂದು ಕೊಡುತ್ತ ಇದ್ದನು. ಇದನ್ನು ಸಂಬೆಣ್ಣನು ನೋಡಿ ಅವನಿಗೆ ಹೊನ್ನು ಕೊಡೆಂದು ಪರಿಚಾರ ಕನಿಗೆ ಹೇಳಿದನು. ಅದನ್ನು ಸೋಮಾಸಿಮಾರನು ಕೇಳಿ — ನಾನು ಹೊನ್ನನ್ನೊಲ್ಲೆನು, ಯಜ್ಞಕ್ಕೆ ನೀವು ಶಿವನನ್ನು ಕರತರಬೇಕೆಂದು ವಿಜ್ಞಾಪಿಸಿ ಕೊಂಡನು. ಸುಂದರ ನಂಬಿಯು ಇದಕ್ಕೆ ಒಪ್ಪಿಕೊಂಡು ತಿರುವಾರೂ ರೇಶ್ವರನ ಸನ್ನಿಧಿಗೆ ಬಂದು — ಶಂಕರನೇ ತಿರುಪಂಬರದಲ್ಲಿ ಸೋಮಾಸಿ ಮಾರನು ಯಾಗವನ್ನು ನಡಿಸುತ್ತಾನೆ. ಅಲ್ಲಿ ನೀನು ಹೋಗಿ ಅವನಿಂದ ಪೂಜೆಯನ್ನು ಕೈಕೊಳ್ಳಬೇಕೆಂದು ಪ್ರಾರ್ಥಿಸಿದನು. ಅದಕ್ಕೆ ಈಶ್ವರನು ಒಪ್ಪಿಕೊಂಡು ಒಬ್ಬ ಹೊಲೆಯನ ವೇಷವನ್ನು ತಾಳಿ ತಲೆಯಲ್ಲಿ ಮಿಣಿ,

ಕಯ್ಯಲ್ಲಿ ಸಂಬಳಗೋಲು ಹಿಡಿದುಕೊಂಡು ಸೋಮಾಸಿಮಾರನು ತಿರುವಂಬರದಲ್ಲಿ ನಡಿಸಿದ ಯಾಗ ಮಂಟಪಕ್ಕೆ ಬಂದನು. ಅವನನ್ನು ಸೋಮಾಸಿಮಾರನು ಕಂಡು ಶಿವನು ಈ ವೇಷದಿಂದ ನನ್ನ ಮನವನ್ನು ಪರೀಕ್ಷೆ ಮಾಡಲು ಬಂದಿರುವನೆಂದು ತಿಳಿದು ಅವನನ್ನು ನಮಸ್ಕರಿಸಿದನು. ಆಗ ಶಿವನು— ನಾನು ಹೊಲೆಯನು, ಅಸ್ಪೃಶ್ಯನು ಎಂದು ಹೇಳಿದರೂ ಸೋಮಾಸಿಮಾರನು ಅವನನ್ನು ಲಕ್ಷಿಸದೆ— ನಿಮ್ಮ ನಿಜವನ್ನು ನಾನು ಬಲ್ಲೆ. ನನಗೆ ಕೃಪೆ ಮಾಡಿರಿ, ಯಾಗ ಶಾಲೆಗೆ ನಡೆಯಿರಿ, ಎಂದು ಪೂಜಾಮಂಟಪಕ್ಕೆ ಕರೆತಂದನು. ಆಗ ವಿಪ್ರರು ಆ ಶ್ವಪಚನನ್ನು ನೋಡಿ ಇಲ್ಲಿ ನಾವು ಇರಕೂಡದೆಂದು ಎಲ್ಲರೂ ಹೊರಟು ಹೋದರು. ಆಗ ಸೋಮಾಸಿಮಾರನು ಅವನನ್ನು ಭಕ್ತಿ ಪೂರ್ವಕವಾಗಿ ಪೂಜಿಸಿ ಅವನ ಪಾದತೀರ್ಥವನ್ನು ಸ್ವೀಕರಿಸಿದನು. ಆಗ ಪರಮಾತ್ಮನು ಆತನ ನಿಷ್ಕಪಟ ಭಕ್ತಿಗೆ ಸಂತೋಷಪಟ್ಟು ತನ್ನ ನಿಜರೂಪದಿಂದ ವಿರಾಜಿಸಿದನು. ಆ ಸಮಯದಲ್ಲಿ ಆ ಯೋಗಶಾಲೆಯೇ ಪುಷ್ಪಕವಿಮಾನವಯಿತು. ಆ ವಿಮಾನದ ಮೂಲಕ ಶಿವನು ಸೋಮಾಸಿಮಾರನನ್ನು ಕೈಲಾಸಕ್ಕೆ ಕರದೊಯ್ದು ಅವನಿಗೆ ಗಣಪದವಿಯನ್ನು ಕೊಟ್ಟನು.

ಸೋಮಾಸಿಮಾರನ ಚರಿತ್ರೆಯು ಹರಿಹರ ಕವಿಯ ರಗಳೆಯಲ್ಲಿಯೂ ಇತರ ಶಿವಶರಣ ಚರಿತ್ರ ಗ್ರಂಥಗಳಲ್ಲಿಯೂ ಬರುತ್ತದೆ. ಸೋಮಾಸಿಮಾರನು ಬ್ರಾಹ್ಮಣನಿದ್ದರೂ ಅವನು ಅಸ್ಪೃಶ್ಯತ್ವವನ್ನು ಪೂರ್ಣವಾಗಿ ತೊರೆದವನನಾಗಿದ್ದನು. ಅವನು ಕೇವಲ ಕರ್ಮಠತನದ ನ್ನತ್ತ್ರಯನ್ನು ಹೋಗಲಾಡಿಸಿ ಭಕ್ತಿಗೆ ಮಹತ್ವಕೊಟ್ಟಿದ್ದಾನೆ. ಗುರೂಪದೇಶವು ಅವಶ್ಯವಾದುದೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಸೋಮಾಸಿಮಾರನು ೬೩ ಪುರಾತನರಲ್ಲಿ ಒಬ್ಬನೆಂದು ಎಣಿಸಲ್ಪಟ್ಟಿದ್ದಾನೆ. ಆದರೆ ಅವನು ಕಾಶ್ಮೀರ ದೇಶದಿಂದ ಹೊರಟು ಚೋಳ ದೇಶದವರೆಗೆ ಬರುವವರೆಗೆ ನಡೆದ ಸಂಗತಿಗಳು ತಮಿಳು ಗ್ರಂಥಗಳಲ್ಲಿ ಹೇಳಲ್ಪಟ್ಟಿರುವದಿಲ್ಲ. ಶಿವಶರಣರ ಅನೇಕ ನಡೆಗಳು ಅವನ ಚರಿತ್ರೆಯಲ್ಲಿರುವದು ಕಂಡುಬರುತ್ತದೆ. ಆದರೆ ಉದ್ಭಟನ ಮತ್ತು ಈತನ ಚರಿತ್ರೆಗಳಿಂದ ಹಿಂದಿನ ಕಾಲದ ಶಿವಬ್ರಾಹ್ಮಣರು ಯಜ್ಞ ಮಾಡುತ್ತಿದ್ದರೆಂದು ತಿಳಿದುಬರುತ್ತವೆ. ಆದರೆ ಕರ್ನಾಟಕದ ಶಿವಶರಣರು ಈ ಪದ್ಧತಿಯನ್ನು ಸಂಪೂರ್ಣವಾಗಿ ತ್ಯಜಿಸಿದ್ದಾರೆ.

# ಸಿಂಧುಮರಾಳ

**ಸಿಂಧುದೇಶಃ—** ಕಾಶ್ಮೀರ ಅಫಗಾಣಿಸ್ತಾನ, ಗುಜರಾಥ ದೇಶ ಗಳಲ್ಲಿ ಒಂದುಕಾಲದಲ್ಲಿ ಹೀಗೆ ಹಿಂದೆ ಹೇಳಿದಂತೆ ಶಿವಶರಣರು ಉದಯ ವಾದರೋ ಹಾಗೆಯೇ ಸಿಂಧೂದೇಶದಲ್ಲಿಯೂ ಕೂಡ ಉದಯವಾಗಿದ್ದಾರೆ. ಇದು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುತ್ತದೆ. ಈಗ ಅಲ್ಲಿ ಇಸ್ಲಾಮ ಧರ್ಮವು ನೆಲೆಗೊಂಡಿರುತ್ತದೆ. ಆದರೆ ಪುರಾತನಕಾಲದಲ್ಲಿ ಅಲ್ಲಿ ಶಿವಧರ್ಮ ವಿತ್ತೆಂಬುದು ಅಲ್ಲಿಯ ಪ್ರದೇಶಗಳಲ್ಲಿ ಮುಖ್ಯವಾಗಿ ಮಹೆಂಜೋದಾರೋ ಮುಂತಾದಕಡೆಗೆ ದೊರೆತಿರುವ ಅವಶೇಷಗಳಿಂದ ತಿಳಿದುಬರುತ್ತದೆ. ಅಲ್ಲಿ ಕೆಲವು ಶಿವಶರಣರೂ ಉಂಟಾಗಿದ್ದಾರೆ. ಅವರಲ್ಲಿ ಸಿಂಧುಮರಾಯ ಅಥವಾ ಸಿಂಧುಮರಾಳ ಈತನು ಮುಖ್ಯನಾಗಿದ್ದಾನೆ. ಈತನ ಹೆಸರು ಶಿವಶರಣರ ಚರಿತ್ರ ಗ್ರಂಥಗಳಲ್ಲಿ ಯಾವಾಗಲೂ ಬರುವದುಂಟು.

ಸಿಂಧುಮರಾಯ ಅಥವಾ ಸಿಂಧುಮರಾಳನು ಸಿಂಧುದೇಶದ ಅರಸ ನಾಗಿದ್ದನು. ಅವನು ಸಕಲೈಶ್ವರ್ಯ ಸಂಪತ್ತಿನಿಂದ ಕೂಡಿದವನಾಗಿದ್ದನು. ಅವನು ಕಟ್ಟಾಚರಣೆಯುಳ್ಳವನಾಗಿ ಜಂಗಮಪ್ರೇಮಿಯಾಗಿದ್ದನು. ಅವನು ಬೇಡಿದವರಿಗೆ ಎಂದೂ ಇಲ್ಲೆನ್ನನು. ಹೀಗಿರಲು ಅವನ ದಾಯಾದಿಗಳು ಅವನ ರಾಜ್ಯವನ್ನು ಸಾಧಿಸಬೇಕೆಂದು ಅವನೊಡನೆ ಕದನ ಹೂಡಿದರು. ಆದರೆ ಅವನೊಡನೆ ಅವರು ಕಾದಲಾರದೆ ಕೆಟ್ಟೋಡಿದರು. ಹೀಗಿರಲು ಒಂದುದಿವಸ ಕೆಲವು ಚರಮೂರ್ತಿಗಳು ಅವನಲ್ಲಿಗೆ ಬಂದು ಈ ದೇಶವು ನಮಗರ್ಪಿತವಾದದ್ದು. ಆದ್ದರಿಂದ ಅಷ್ಟ ಮಹಾಭೋಗವನ್ನು ನಮಗೆ ಸಲ್ಲಿಸಬೇಕೆಂದು ಅವನಿಗೆ ಕೇಳಲು ಅವನು ಅವೆಲ್ಲವನ್ನು ಅವರಿಗೆ ಸಲ್ಲಿಸಿದನು. ಮುಂದೆ ಅವರು ಅವನ ದೇಶ ಕೋಶವನ್ನು ಸಹ ಬೇಡಿದರು. ಆಗ ಅವನು ಅವನ್ನೂ ಅವನಿಗೆ ಕೊಟ್ಟು ತಾನು ಒಬ್ಬ ಚರವೇಷ ಧಾರಣ ಮಾಡಿ ದೇಶಾಂತರವನ್ನು ಮಾಡುವೆನೆಂದು ರಾಜ್ಯ ಬಿಟ್ಟು ಹೊರಟನು. ಆಗ ಪರದೇಶಗಳಲ್ಲಿದ್ದ ಅವನ ದಾಯಾದಿಗಳು ಇದನ್ನು ತಿಳಿದು ತಾವು ಜಂಗಮ ವೇಷಧಾರಿಗಳಾಗಿ ಅವನೊಡನೆ ಹಿತವಚನಗಳನ್ನಾಡುತ್ತ ಅವ ನನ್ನು ಕಂಡರು. ಆದರೆ ಅವರ ಕೃತಕ ವೇಷವನ್ನು ಅರಸನು ತಿಳಿಯ ದವನಾದೆ ಹೋಗಿ, ನಿಮಗೇನುಬೇಕು ಬೇಡಿರಿ ಎಂದು ಕೇಳಲು ಅವರು ಅವ ನಿಗೆ ನೀನು ನಿನ್ನ ರಾಜ್ಯವನ್ನು ಚರಮೂರ್ತಿಗಳಿಗೆ ಈ ಮೊದಲಿಗೆ

ಕೊಟ್ಟು ಬಿಟ್ಟ. ಇನ್ನು ಮೇಲೆ ನಮಗೇನು ಕೊಡುವೆ ಎಂದು ಕೇಳಲು ಅವನು ಅವರಿಗೆ — ನನ್ನ ತನುವನ್ನು ನಿಮಗೀವೆನು ಎಂದು ನುಡಿದನು. ಆಗ ಅವರು ಅವನಿಗೆ — ನೀನು ನಿನ್ನ ಅರ್ಧಾಂಗವನ್ನು ನಮಗೆ ಕೊಡಬೇಕು. ಅಂದರೆ ನೀನು ನಿಜವಾದ ಭಕ್ತನೆಂದೆನ್ನಲು ಅವನು ಹಾಗೆಯೇ ಆಗಲೆಂದು ಅನ್ನಲು, ಅವರು ಒಂದು ಕರಗಸವನ್ನು ತೆಗೆದುಕೊಂಡು ಅವನನ್ನು ಸೀಳ ಹತ್ತಿದರು. ಆಗ ಅವನ ವೈಯ್ಯ ಎಡಭಾಗದಿಂದ ಕಂಬನಿಗಳು ಉದುರ ಹತ್ತಿದವು. ಅದಕ್ಕೆ ಅವರು ಹೀಗೇಕಂದು ಕೇಳಲು, ಅರಸನು ಅವರಿಗೆ – ಬಲಭಾಗವು ನಿಮಗೆ ಸಲ್ಲತೆಂದು ಸಂತೋಷದಲ್ಲಿದೆ. ಆದರೆ ವಾಮ ಭಾಗವು ತಾನು ವ್ಯರ್ಥವಾದೆನೆಂದು ಚಿಂತೆಯಲ್ಲಿದೆ ಎಂದು ನುಡಿದನು. ಇದನ್ನು ಕೇಳಿ ಶಿವನು ಅವನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಕರಗಸವನ್ನು ಹೊರಗೆ ತೆಗೆದು, ಎರಡೂ ಭಾಗಗಳನ್ನು ಕೂಡಿಸಲು ದಾಯಾದಿಗಳು ನಡಿಸಿದ ಕಾಪಟ್ಯವು ಅರಸನಿಗೆ ತಿಳಿದು ಬಂದಿತು. ಆಗ ಶಿವನು ಅರಸನಿಗೆ ನಿನಗೇನು ಬೇಕು ಬೇಡೆಂದು ಕೇಳಲು ನನ್ನ ಬಂಧುಗಳು ಮಾಡಿದ ಅಪರಾಧವನ್ನು ಕ್ಷಮಿಸಬೇಕು, ಮತ್ತು ಅವರನ್ನೊಡಗೊಂಡು ನಮ್ಮೆಲ್ಲರನ್ನು ನಿನ್ನಲ್ಲಿ ಇಂಬಿಟ್ಟುಕೊಳ್ಳಬೇಕು ಎಂದು ಹೇಳಲು ಶಿವನು ಅವನ ಭಕ್ತಿಗೆ ಮೆಚ್ಚಿ ಎಲ್ಲರನ್ನೂ ಕೈಲಾಸಕೊಯ್ದನು.

---

## ಸಿಂಧುಸೇನ.

ವಿದರ್ಭ :— ಮೊದಲಿನ ಕಾಲದಲ್ಲಿ ಈಗಿನ ವರ್ಹಾಡ ಪ್ರಾಂತಕ್ಕೆ ವಿದರ್ಭ ವೆಂಬ ಹೆಸರಿತ್ತು, ಇಲ್ಲಿ ಸೂರ್ಯ ಕಪುರವೆಂಬ ಪಟ್ಟಣದಲ್ಲಿ ಸಿಂಧುಸೇನನೆಂಬ ರಾಜನು ರಾಜ್ಯವಾಳುತ್ತಿದ್ದನು. ವಿದರ್ಭ ದೇಶಕ್ಕೆ ಹೊಂದಿಯೇ ವಿಂಧ್ಯ ದೇಶವಿದ್ದು ಅಲ್ಲಿ ಶ್ರೀ ಕಾಳಾಪುರ ವೆಂಬಲ್ಲಿ ಸಿಂಹರಾಜನೆಂಬ ರಾಜನು ಆಳುತಿದ್ದನು. ಆಗ ಉಭಯತರಲ್ಲಿ ಮನಸ್ತಾಪವು ಉಂಟಾಗಲು ಅವರಿಬ್ಬರೂ ಕಾಳಗವನ್ನು ಪ್ರಾರಂಭಿಸಿದರು. ಕಾಳಗವಾರಂಭವಾಗಲು ಸಿಂಧಸೇನನು ಚತುರಂಗ ಬಲ ಸಮೇತವಾಗಿ ಕಾಳಗಕ್ಕೆ ಹೊರಟನು. ಆ ಕಾಲದಲ್ಲಿ ಒಬ್ಬ ಶಿವ ಭಕ್ತನು ಅವನಿಗೆ ಒಂದು ಮುತ್ತಿನ ಸರವನ್ನು ಕಾಣಿಕೆಯಾಗಿ ಕೊಟ್ಟನು. ಅದರಲ್ಲಿ ಒಂದು ರುದ್ರಾಕ್ಷಿಮಣಿಯು ಇತ್ತು.

# ಶಿವಾನುಭವದ ಸತ್ವಮಾರ್ಗ

ಶಿವಶರಣರ ಶಿವಾನುಭವದ ತತ್ವಗಳನ್ನು ಅರುಹುವ ಗ್ರಂಥವು ಇದಾಗಿದೆ. ಶ್ರೀ ಶಿವಯೋಗಿಗಳು ಬಂಥನಾಳ, ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗ ಸ್ವಾಮಿಗಳು ವಿಜಾಪುರ, ಶ್ರೀ ಮಹಾದೇವ ಸ್ವಾಮಿಗಳು ಸರ್ಪಭೂಷಣ ಮಠ ಬೆಂಗಳೂರ, ರಾ॥ ಬ॥ ಪಿ ಜಿ. ಹಳಕಟ್ಟಿ ವಿಜಾಪುರ, ಶ್ರೀಯುತ ಕಲ್ಯಾಣಪ್ಪ ಬ್ಯಾಳಿ, ಬಿ. ಎ ಬಿ. ಟಿ ಈ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಮಾಡಿದ ಮಹತ್ವದ ಲೇಖಗಳು ಇದರಲ್ಲಿವೆ. ಶಿವಶರಣರ ತಾತ್ವಿಕ ವಿಚಾರಗಳನ್ನು ತಿಳಿಯಲು ಬಹು ಉಪಯುಕ್ತವಾದ ಗ್ರಂಥವು. ಉತ್ತಮ ಕಾಗದ, ಮತ್ತು ಉತ್ತಮ ಬಾಯಿಂಡವುಳ್ಳದ್ದಿದೆ.

**ದೊರೆಯುವ ಸ್ಥಳ:— ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ**

**ಬೆಲೆ:— ೧ ರೂ. ೧೦ ಆಣೆ ( ೧೩೮ ಪುಟಗಳು )**

---

# ಶ್ರೀ ಬಸವೇಶ್ವರನ ತತ್ವಗಳು

ಕೈ. ವ. ಸಿದರಾಮಪ್ಪ ಪಾವಟೆ, ಕೈ. ವಾ ವೀರಪ್ಪ ಬೆಳೆಜಂಗಡಿ, ರಾ॥ ಬ॥ ಪಿ ಜಿ. ಹಳಕಟ್ಟಿ, ಶ್ರೀಯುತ ವೀರಪ್ಪ ಯಾಗಟಿ ಬಿ. ಎ. ಎಲ್. ಎಲ್ ಬಿ ಮೊದಲಾದ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ ಮಹತ್ವದ ಲೇಖಗಳು ಇದರಲ್ಲಿವೆ. ಇದರಲ್ಲಿ ಬಸವೇಶ್ವರನ ನೈತಿಕ ಮತ್ತು ಸಾಮಾಜಿಕ ವಿಚಾರಗಳು, ಅವನು ಮಾಡಿದ [illegible] ಕ್ರಾಂತಿ. ಇವೇ ಮೊದಲಾದ ಮಹತ್ವದ ವಿಷಯಗಳ ಮೇಲೆ ಲೇಖಗಳು ಬಂದಿರುತ್ತವೆ ಉತ್ತಮ ಕಾಗದ, ಉತ್ತಮ ಬಾಯಿಂಡವುಳ್ಳದ್ದಿರುತ್ತದೆ

**ದೊರೆಯುವ ಸ್ಥಳ:— ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ**

**ಬೆಲೆ:— ೧ ರೂ. ೮ ಆಣೆ ( ೧೦೫ ಪುಟಗಳು )**

# ಶಿವಾನುಭವ.

ವರ್ಷ 24 | ಸಪ್ಟೆಂಬರ 1950 | ಸಂಚಿಕೆ 8-9

ವಿಷಯಾನುಕ್ರಮಣಿಕೆ.

# ಶಿವಾನುಭವ

| ವರ್ಷ ೨೪ | ಸಪ್ಟಂಬರ ೧೯೫೦ | ಸಂಚಿಕೆ ೮ |
| --- | --- | --- |

## ಷಟ್ ಸ್ಥಲಗಳೂ ಏಕೋತ್ತರ ಶತಸ್ಥಲಗಳೂ.

( ಲೇಖಕರು:- ಶ್ರೀಯುತ ಬಸಪ್ಪ ಚನ್ನಪ್ಪ ಪಟ್ಟೇದ-ಒಂಟಮೂರಿ )

### ಲೇಖಾಂಕ ೨

### ಭಕ್ತನೂ ಆತನ ಆಚಾರಲಿಂಗವೂ

ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಇವರು ಷಟ್‌ಸ್ಥಲಗಳಲ್ಲಿ ಅಂಗರೆನಿಸುವರು. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಇವು ಕ್ರಮವಾಗಿ ಅವರು ಪೂಜಿಸತಕ್ಕ ಲಿಂಗಗಳಾಗಿವೆ ಅಂಗರಲ್ಲಿ ಭಕ್ತನೇ ಮೊದಲಿಗನಾಗಿದ್ದು, ಅವನ ಲಿಂಗವು ಆಚಾರಲಿಂಗವೆಂಬುದು ಇದರಿಂದ ಕಂಡು ಬರುವದು. ಈ ಷಟ್‌ಸ್ಥಲಗಳಾದರೂ ಆರು ಪಾವಟಿಗೆಗಳಂತೆ ಏರುತ್ತ ಹೋಗುತ್ತವೆಂಬ ಕಲ್ಪನೆಯಾದರೂ ರೂಢವಾಗಿದೆ. ಆದುದರಿಂದ 'ಭಕ್ತನೂ ಅವನ ಆಚಾರಲಿಂಗವೂ, ತೀರ ಕೆಳಗಿನ ತರಗತಿಯವು' ಎಂಬ ಭಾವನೆಯು ಬಹುತರ ಎಲ್ಲರಲ್ಲಿ ಮನೆ ಮಾಡಿಕೊಂಡಿರುವದು. ಇದರಿಂದ ಬಲ್ಲವರು ಸಹ ಅನೇಕರು ದಿಗ್ಭ್ರಮೆ ಹೊಂದಿರುವದು ಕಂಡುಬರುತ್ತದೆ. ಆದುದರಿಂದ ಈಗ ಭಕ್ತ ಹಾಗೂ ಅವನ ಆಚಾರಲಿಂಗಗಳನ್ನು ಕುರಿತು ಹೆಚ್ಚಿಗೆ ವಿವೇಚಿಸ ಬೇಕಾಗಿದೆ.

ಸಿದ್ಧಾಂತ ಶಿಖಾಮಣಿಯಲ್ಲಿ, ಷಟ್ ಸ್ಥಲಗಳಲ್ಲಿ ಪ್ರಗತಿ ಹೊಂದುತ್ತಾ ನಡೆದಂತೆ ಭಕ್ತನೇ ಮಹೇಶ್ವರನೂ, ಮಹೇಶ್ವರನೇ ಪ್ರಸಾದಿಯೂ, ಪ್ರಸಾದಿಯೇ ಪ್ರಾಣಲಿಂಗಿಯೂ, ಪ್ರಾಣಲಿಂಗಿಯೇ ಶರಣನೂ, ಶರಣನೇ ಐಕ್ಯನೂ, ಆಗುವನೆಂದು ಉಲ್ಲೇಖವಿದೆ. ಇದರಿಂದ ಷಡಂಗರಲ್ಲಿ ಭಕ್ತನೇ ತೀರ ಕಡಿಮೆ ಯೋಗ್ಯತೆಯುವನು ಎಂಬುದು ಸುಸ್ಪಷ್ಟವಾಗುವದು.

ಅದೇ ಗ್ರಂಥದಲ್ಲಿ ಮಹೇಶ್ವರ ಸ್ಥಲದೊಳಗೆ " ಭಕ್ತದೇಹಿಕ ಲಿಂಗ ಸ್ಥಳ " (ಭಕ್ತನ ದೇಹವೇ ಲಿಂಗವಿರುವ ಸ್ಥಳವು.) ಎಂದು ಹೇಳಿದೆಯೇ ಹೊರತು " ಮಹೇಶ್ವರ ದೇಹಿಕ ಲಿಂಗಸ್ಥಳ " ಎಂದು ಬರೆಯಲಿಲ್ಲ. ಭಕ್ತನಿಗಿಂತ ಮಹೇಶ್ವರನು ಮೇಲ್ತರಗತಿಯವನಾಗಿದ್ದರೆ ಹಾಗೆ ಬರೆಯಲು ಏನು ಅಡ್ಡಿ ಇದ್ದಿತು.? ಅಡ್ಡಿಯಿಲ್ಲವಷ್ಟೇ ಅಲ್ಲದೆ ಮೇಲಾಗಿ ಹೆಚ್ಚು ಶೋಭಿಸುತ್ತಿದ್ದಿತು.

ಪ್ರಸಾದಿ ಸ್ಥಳದಲ್ಲಿ ಗುರು ಮಹಾತ್ಮ್ಯ,ಲಿಂಗಮಹಾತ್ಮ್ಯ ಜಂಗಮ ಮಹಾತ್ಮ್ಯ ಎಂಬವುಗಳ ತರುವಾಯ ಭಕ್ತ ಮಹಾತ್ಮ್ಯ ಎಂದು ಕ್ರಮಗೊಳಿಸಿದ್ದಾರೆ. ಇದನ್ನು ನೋಡಿದರೆ ಭಕ್ತನು ತಾತ್ವಿಕ ದೃಷ್ಟಿಯಿಂದ ಗುರು-ಲಿಂಗ-ಜಂಗಮರಿಗಿಂತ ಮೇಲಿನವನೆಂಬುದು ಸುಸ್ಪಷ್ಟವಾಗುತ್ತದೆ. " ಮಮ ಭಕ್ತೋ ಮಮಾಧಿಕಃ " ಎಂದು ಶಿವನು ಹೇಳಿದುದು ಆಗಮಗಳಲ್ಲಿಯೂ ಕಂಡುಬರುತ್ತದೆ. ಭಕ್ತನೇ ಇಲ್ಲದಿದ್ದರೆ ಗುರು ಲಿಂಗ ಜಂಗಮಗಳ ಅಸ್ತಿತ್ವವೇ ಇರುತ್ತಿದ್ದಿಲ್ಲ. ಇವಕ್ಕೆಲ್ಲ ಭಕ್ತನ ಹೊರ ದೇಹ, ಲಿಂಗಶರೀರ, ಜ್ಞಾನಗಳೇ ಆಧಾರವಾಗಿವೆ. ಇವರಿಗೂ ಭಕ್ತನಿಗೂ ಇರುವ ಸಂಬಂಧವು ತಂದೆ ಮಕ್ಕಳಂತೆ ಇರುವದಾದರೂ ಮಗನು ತಂದೆಗೆ ಹೆಚ್ಚು ಪ್ರಿಯನೂ, ಅವನ ಆಸ್ತಿಗೆಲ್ಲ ತರುವಾಯದ ಒಡೆಯನೂ ಇರುವದರಿಂದ ತಂದೆಯು ಆ ಮಗುವನ್ನು ಕಿಲಮಾತ್ರವೂ ಅಲಕ್ಷಿಸನು. ಮತ್ತು ತಿರಸ್ಕರಿಸನು. ಆದುದರಿಂದ ಮೇಲಿನ ವಿವೇಚನೆಯಿಂದ ಭಕ್ತಾಧಿಕ್ಯವು ವಿಶದವಾಗಿ ಪ್ರಸ್ಥಾಪಿತವಾಗುವದು.

ಪ್ರಾಣಲಿಂಗಿಯ ಸ್ಥಳದಲ್ಲಿ ''ಅಂಗ ಲಿಂಗಿಸ್ಥಳ" ಅಂದರೆ ಅಂಗವೇ ಲಿಂಗವಿರುವ ಸ್ಥಳವೆಂದು ಪುನಃ ಬರೆಯಲ್ಪಟ್ಟದೆ. ಒಂದು ರೀತಿ

ಯಿಂದ ಭಕ್ತ ದೇಹಿಕ ಲಿಂಗ ಸ್ಥಳದ ಪುನರಾವೃತ್ತಿಯೇ ಇದೆನ್ನ ಬಹುದು. ಇಲ್ಲಿ 'ಲಿಂಗ' ಈ ಶಬ್ದವು ಹೆಚ್ಚು ವ್ಯಾಪಕವಾಗಿದ್ದರೂ ಸಹ ಅದರ ಉದಯವು ಭಕ್ತದೇಹಿಕ ಲಿಂಗ ಸ್ಥಲದಿಂದಲೇ ಆದು ದೆಂಬುದು ನಿಜವಿದೆ.

ಶರಣ ಸ್ಥಳದಲ್ಲಿ 'ಶೀಲ ಸಂಪಾದನ ಸ್ಥಳ' ಎಂದು ಬಂದಿದೆ. ಇಲ್ಲಿ ಶೀಲ ಎಂದರೆ ಲಿಂಗನಲ್ಲಿ ಟಿರಿಯುವ ಆಚಾರವೇ ಹೊರತು ಬೇರೊಂದಿಲ್ಲ.

ಐಕ್ಯಸ್ಥಳದಲ್ಲಿ 'ಸರ್ವಾಚಾರ ಸಂಪತ್ತಿ ಸ್ಥಳ' ಎಂಬುದುಂಟು. ಇಲ್ಲಿಯೂ ಆಚಾರವೇ ಅಂಟಿಕೊಂಡಿದೆ. ಇದೆಲ್ಲವನ್ನು ಗಮನಿಸಿದರೆ ಭಕ್ತಾಧಿಕ್ಯವೂ ಆಚಾರ ಲಿಂಗಾಧಿಕ್ಯವೂ ಕಂಡುಬರುವಂತಿದೆ. ಇದ ಲ್ಲದೆ ಅಂಗಸ್ಥಲಗಳೂ ಅಂತುಕೊಳ್ಳುವಂಥವುಗಳೂ, ಆಚರಿಸತಕ್ಕಂಥವು ಗಳೂ ಇರುವದರಿಂದ ಆಚಾರಲಿಂಗಕ್ಕೇನೇ ಹೆಚ್ಚು ಪ್ರಾಶಸ್ತ್ಯವುಂಟೆಂಬುದು ಒಡೆದು ಕಾಣುವಂತಿರುವದು. ಆಚಾರಲಿಂಗಕ್ಕೆ ವೇಲ್ಮೈ ಬಂದೊಡ ನೆಯೇ ಭಕ್ತನಿಗಾದರೂ ಪರಿಷ್ಕೃತ್ವ ಬರದೇ ಇರಲಾರದು. ಇನ್ನು ಸಿದ್ಧಾಂತ ಶಿಖಾಮಣಿಯನ್ನು ಬಿಟ್ಟು ವಚನ ಗ್ರಂಥಗಳತ್ತ ತಿರುಗುವಾ.

ಶ್ರೀ ಬಸವೇಶ್ವರ ವಚನಃ- (೧) "ವಿಪ್ರನೊದಲ್ಗೊಂಡು ಅಂತ್ಯಜ ಕಡೆಯಾಗಿ ಲಿಂಗವುಳ್ಳವರನ್ನು ಒಂದೇ ಎಂಬೆ; ಬ್ರಾಹ್ಮಣ ವೊದಲ್ಗೊಂಡು ಶ್ವಪಚ ಕಡೆಯಾಗಿ ಲಿಂಗವಿಲ್ಲದವರನ್ನು ಒಂದೇ ಎಂಬೆ ಕೂಡಲ ಸಂಗಮ ದೇವಾ." ಇಲ್ಲಿ ಲಿಂಗವೆಂದರೆ ಮೈಮೇಲೆ ಧರಿಸಿದ ಇಷ್ಟಲಿಂಗವೆಂದೇ ಕಂಡುಬರಬಹುದು. ಆದರೆ ನಮ್ಮ ಮತದಲ್ಲಿ ಆ ಹೊರಗೆ ಧರಿಸಿದಲಿಂಗವು "ಒಳಗಿನದೇ ಹೊರಗೆ ಬಂದಿದೆ" ಎಂದು ಸಿದ್ಧಾಂತ ಮಾಡಿರುವ ರೆಂಬುದನ್ನು ಮರೆಯಲಾಗದು. ಬಸವಣ್ಣನವರು ಹೀಗೆ ಹೇಳುವಾಗ ಈ ತಾತ್ವಿಕ ದೃಷ್ಟಿಯನ್ನೇ ಮುಂದಿಟ್ಟುಕೊಂಡಿರುವರೆಂಬುದು ಸ್ಪಷ್ಟವದೆ.

(೨) "ಲಿಂಗ ವಿಭೂತಿಯುಳ್ಳವನ ಕಂಡರೆ ಸಂಗಾ ನೀನೆಂದು ನಂಬುವುದೆನ್ನ ಮನವು"

(೩) "ಲಿಂಗಸಹಿತ ಭಕ್ತನು ಮನೆಗೆ ಬಂದಡೆ ನಿನ್ನ ಕುಲ ವಾವುದೆಂದು ಕೇಳಿದೆನಾದೊಡೆ ತಲೆದಂಡ ತಲೆದಂಡ ಕೂಡಲ ಸಂಗಮದೇವಾ"

ಈ ವಚನಗಳಿಂದಲೂ "ಭಕ್ತ ದೇಹಿಕ ಲಿಂಗಸ್ಥಳ" ವೆಂಬುದೇ ನಿಷ್ಪನ್ನವಾಗುವದು. "ಭಕ್ತ ಕಾಯೋ ಮಮ ಕಾಯಃ" ಎಂಬ ಆಗಮ ವಚನವಾದರೂ ಶಿವನಿರುವ ಸ್ಥಳವು ಭಕ್ತನ ದೇಹವೆಂಬು ದನ್ನೇ ಹೇಳುವದು.

ಸ್ವತಂತ್ರ ಸಿದ್ಧ ಲಿಂಗೇಶ್ವರ ವಚನಃ— ಆಧಾರದಲ್ಲಿ ಆಚಾರ ಲಿಂಗವ ಪೂಜಿಸಿ ಆಚಾರಲಿಂಗದ ಭಕ್ತನಾದನಯ್ಯಾ ನಿಮ್ಮ ಶರಣ. ಸ್ವಾಧಿಷ್ಠಾನದಲ್ಲಿ ಗುರುಲಿಂಗವ ಪೂಜಿಸಿ ಗುರುಲಿಂಗ ದೇವರ ಭಕ್ತ ನಾದನಯ್ಯಾ ನಿಮ್ಮ ಶರಣ. ಮಣಿಪೂರಕದಲ್ಲಿ ಶಿವಲಿಂಗವ ಪೂಜಿಸಿ ಶಿವಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಅನಾಹತದಲ್ಲಿ ಜಂಗಮ ಲಿಂಗವ ಪೂಜಿಸಿ ಜಂಗಮ ಲಿಂಗದೇವರ ಭಕ್ತನಾದನಯ್ಯಾ ನಿಮ್ಮ ಶರಣ. ವಿಶುದ್ಧಿಯಲ್ಲಿ ಪ್ರಸಾದ ಲಿಂಗವ ಪೂಜಿಸಿ ಪ್ರಸಾದ ಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಆಜ್ಞಾ ಚಕ್ರದಲ್ಲಿ ಮಹಾಲಿಂಗವ ಪೂಜಿಸಿ ಮಹಾಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಇಂತು ಷಟ್ ಚಕ್ರಗಳಲ್ಲಿ ಷಡ್ಲಿಂಗವ ಪೂಜಿಸಿ, ಷಟ್ ಸ್ಥಲ ಭಕ್ತನಾದನಯ್ಯಾ ನಿಮ್ಮ ಶರಣ ನಿಜಗುರು ಸ್ವತಂತ್ರ ಶಿದ್ಧ ಲಿಂಗೇಶ್ವರಾ." ಎಂದು ಹೇಳಿದ್ದಾರೆ.

ಇದನ್ನು ಆರೂ ಅಂಗರಿಗೆ ಭಕ್ತರೆಂದು ನಿಃಸಂದೇಹವಾಗಿ ನಂಬು ವಂತೆ ವರ್ಣಿಸಿದ್ದಾರೆ. ಇದರಿಂದ ಷಡಂಗರಲ್ಲಿ 'ಭಕ್ತನು' ಕಿರಿಯು ನೆಂಬುದನ್ನು ತಿಳಿಯದೆ ಷಡಂಗರೆಲ್ಲರನ್ನೂ ಒಳಗೊಂಡಿರುವನೆಂಬುದು ಯಾರಿಗಾದರೂ ತೋರದೆ ಇರದು.

ಬಸವೇಶ್ವರ ವಚನಃ – "ಮೆಲ್ಲ ಮೆಲ್ಲನೆ ಷಟ್‌ಸ್ಥಳಗಳನ್ನು ಹೊಂದುವೆನೆಂದಡೆ, ನಾನೇನು ಚಿರಜೀವಿಯೇ! ಅಮೃತವ ಸೇವಿಸಿದ

ವನೇ! ಮರುಜೀವಣಿಯು ಕೊಂಡೆನೇ! ಇಲ್ಲ ಇಲ್ಲ ............. ನಾನು ನಿಂತ ಸ್ಥಳದಲ್ಲಿಯೇ ಷಟ್‌ಸ್ಥಳಗಳು ಬಂದು ಇಂಬುಗೊಳದಿದ್ದರೆ ಸುಡುವೆನೀ ತನುವನು " ಕೂಡಲಸಂಗಮದೇವಾ.

ಇಲ್ಲಿ ಪ್ರತಿಯೊಬ್ಬ ಅಂಗನಿಗೆ; ಅವನಾವ ಸ್ಥಳದವನಿದ್ದರೂ, ಅಲ್ಲಿಯೇ ಷಟ್‌ಸ್ಥಳಗಳನ್ನು ಪಡೆಯುವಂತೆ, ಮುಂದೃಷ್ಟಿಯನ್ನಿಟ್ಟು ನಡೆಯಬೇಕೆಂದು ಸೂಚಿಸಿದ್ದಾರೆ. ಇದನ್ನು ಲಕ್ಷಿಸಿದರೆ, ಪ್ರತಿಯೊಬ್ಬ ಲಿಂಗಾಂಗಿಯು ಷಡಂಗನಾಗಲು ಅರ್ಹನೆಂಬುದು ವಿಶದವಾಗು ವದು. ಇದೆಲ್ಲವನ್ನು ನೋಡಿದರೆ, ಭಕ್ತನು ಕೆಳಗಿನ ಪ್ರತಿಯುವನೂ ಅಲ್ಲ ತಿರಸ್ಕೃತನೂ ಅಲ್ಲ. ಮೇಲಾಗಿ ಎಲ್ಲ ಅಂಗರು ಅವನಲ್ಲಿಯೇ ಸಮಾವೇಶವಾಗುವರೆಂಬುದು ಕಂಡುಬರುವದು.

**ಉಭಯ ಸ್ಥಲ:**— ಉಭಯ ಅಂದರೆ ಎರಡು. ಭಕ್ತಜಂಗಮ ಗಳ್ನ್ ಉಭಯಸ್ಥಳವೆಂದು ವಚನಗ್ರಂಥಗಳಲ್ಲುಂಟು ಆದರೆ ಸಿ. ಶಿ. ಮಣಿಯು ಗುರುಲಿಂಗಗಳು ಉಭಯಸ್ಥಳಗಳೆಂದು ಹೇಳಿದೆ. ಎರಡೂ ಒಂದೇ. ಭಕ್ತನ ಸ್ಥೂಲದೇಹವೇ ಗುರು. ಜಂಗಮವೇ ಲಿಂಗ. ಷಟ್‌ಸ್ಥಲ ಪಟವನ್ನು ನೋಡಿದರೆ, ಅಂಗಲಿಂಗಗಳು ಉಭಯಸ್ಥಲಗ ಳೆಂದು ಕಂಡು ಬರುವದು. ಹೇಗೆಂದರೂ ಸರಿಯೇ! ದೀಕ್ಷೆ ಮಾಡಿದ ಗುರು. ಇಷ್ಟಲಿಂಗಳನ್ನು ಕುರಿತು ಸಿ. ಶಿ ಮಣಿಯು ಪ್ರಸ್ತಾಪಿಸಿದೆ. ಅದನ್ನು ಬಿಟ್ಟು ಈಗ ಭಕ್ತ ಜಂಗಮಗಳ ವಿಷಯ ವಿಚಾರಿಸುವಾ.

ಭಜ್ ( ಭಜಿಸು ) + ತ = ಭಕ್ತ ಅಂದರೆ ಭಜಿಸುವವ. ಇಲ್ಲಿ ಭಕ್ತನು ಭಜಿಸತಕ್ಕ ವಸ್ತುವಾವುದೆಂಬುದನ್ನು ವಿವರಿಸದಿದ್ದರೆ, ತೊಂದರೆಯುಂಟಾಗುವದು.

" ಶ್ರವಣಂ ಕೀರ್ತನಂಚೈವ ಸ್ಮರಣಂ ಪಾದಸೇವನಂ।
ಅರ್ಚನಂ ವಂದನಂ ದಾಸ್ಯ ಸಖ್ಯ ಮಾತ್ಮ ನಿವೇದನಂ"॥

ಎಂದು ನವವಿಧ ಭಕ್ತಿಯನ್ನು ಎಲ್ಲರೂ ಹೇಳಿದ್ದರೆ, ಅಲಿಂ ಗಿಗಳು ಇಂತಹ ತರತರದ ಭಕ್ತಿಯನ್ನು ಅನುಸರಿಸಿ, ತಮ್ಮ ಇಷ್ಟ

ಮೂರ್ತಿಯನ್ನು ಭಜಿಸಿ, ಅವನಿಂದ ತನಗೆ ಬೇಕಾದ ಇಷ್ಟ ವಿಷಯ ಗಳನ್ನು ( ಹೊನ್ನು, ಹೆಣ್ಣು, ಮಣ್ಣು, ಹೆಂಡಿರು ಮಕ್ಕಳು, ಮೊದ ಲಾದವನ್ನು ) ಪಡೆಯಬಹುದು. ಆದರೆ ಲಿಂಗಾಂಗಿಯು ಅಂತಹ ನಲ್ಲ. ಸಂಸಾರವು ಹೇಯವೆನಿಸಿ ಅದರಿಂದ ವಿಮುಖನಾಗಿ ಅವನು ಲಿಂಗವಿಡಿದಿರುವನು. ಇವನು ಅದಾವ ವಿಷಯ ವಸ್ತುವನ್ನು ಬಯ ಸದೆ ಕೇವಲ ನಿತ್ಯಾನಂದವನ್ನು ಮಾತ್ರ ಕೋರುವನು. ತಾನೇ ತನ್ನ ಲ್ಲಿದ್ದುದನ್ನು ಪರರು ಬೇಡಿದರೆ ಹಿಂದೆ ಮುಂದೆ ನೋಡದೆ ಕೊಟ್ಟು ಬಿಡುವವನು. ಗುರುಲಿಂಗ ಜಂಗಮಕ್ಕೆ ತನುಮನಧನವನ್ನರ್ಪಿಸು ವದೇ ಈತನ ಪರಮ ಭಕ್ತಿಯು. ಹೀಗೆ ಒಳಹೊರಗಿನದೆಲ್ಲವನ್ನೂ ತ್ರಿಪುಟಿ ಸಾಧಿಸಿ, ಅರ್ಪಿತರ್ನಾಡಿ, ತಾನು ಲಿಂಗೈಕ್ಯನಾಗಿ ನಿತ್ಯ ತೃಪ್ತ ನಾಗುವದೇ ಆತನ ಭಕ್ತಿಯ ಗುರಿಯು. ಇಂತಹ ಪರಮೋತ್ಕೃಷ್ಟ ಭಕ್ತಿಯೇ ಭಕ್ತನದು. ಕೆಳಗಿನ ವಚನವನ್ನನೋಡಿರಿ.

" ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನ ವಾಗಿರ್ದೆ. ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿರ್ದೆ. ನೀನು ಆಕಾರವಿಡಿದರೆ ನಾನು ವೃಷಭ ನೆಂಬ ವಾಹನವಾಗಿರ್ದೆ. ನೀನು ನನ್ನ ಭವವ ಕೊಲ್ಲುವೆ ನೆಂದು ಜಂಗಮ ಲಾಂಛನವ ಹಿಡಿದು ಬಂದರೆ, ನಾನು ಭಕ್ತನೆಂಬ ವಾಹನವಾಗಿರ್ದೆ ಕೂಡಲಸಂಗಮದೇವಾ! ".

ಈ ವಚನದಿಂದ ಭಕ್ತಜಂಗಮರ ಸಂಬಂಧವು ಸುಸ್ಪಷ್ಟವಾ ಗುವದು. ಭಕ್ತನ ಭವವನ್ನು ನಾಶಗೊಳಿಸುವದೇ ಜಂಗಮನ ಕರ್ತ ವ್ಯವು ( ಕಿಂಕಲನವು ). ಅದರಂತೆ ಆ ಜಂಗಮನನ್ನು ಸರ್ವವಿಧ ದಿಂದಲೂ ಸೇವಿಸಿ, ಕಿಂಕುರ್ವಾಣತೆಯಿಂದ ನಡೆಯುವದೇ ಭಕ್ತನ ಕರ್ತವ್ಯವು. ಇಂತು ನಡೆಯುದಾದರೆ ಭಕ್ತನು ಆ ಜಂಗಮ ಸ್ವರೂಪ ನಾಗಿ ಅವರಿಬ್ಬರೂ ಒಂದೇ ಆಗುವರು. ಭಕ್ತನನ್ನು ತನ್ನಂತೆಯೇ ಮಾಡಿ, ಅವನನ್ನು ತನ್ನಲ್ಲಿ ಐಕ್ಯಗೊಳಿಸಿಕೊಂಬುವವನೇ ಜಂಗಮ ನೆಂಬುದು ಇದರಿಂದ ತಾನೇ ತೋರಿಬರುವದು. ಭಕ್ತನಲ್ಲಿ ಜಂಗ ಮನೂ, ಜಂಗಮನಲ್ಲಿ ಭಕ್ತನೂ, ಯಾವಾಗಲೂ ಇದ್ದೇ ಇರುವರು. ಇದೇ ಉಭಯ ಸ್ಥಲವು.

ಇನ್ನು ಅಂಗಲಿಂಗದ ಕಡೆಗೆ ಹೊರಳುವಾ :— ಅಂಗವೆಂದರೆ ಭಕ್ತನ ದೇಹ. ಲಿಂಗವೆಂದರೆ ಅವನಲ್ಲಿರುವ ಪರಮಾತ್ಮನ ಅಂಶ. ಈ ಪರಮಾತ್ಮನ ಅಂಶವನ್ನು 'ಅಂತರಾತ್ಮ' ನೆನ್ನುವರು. ಇದು ದೇಹದಲ್ಲಿ ಸೇರಿದೊಡನೆಯೇ ದೇಹದ ಸಂಗದಿಂದ ಜೀವವಾಗುವದು. ದೇಹ ಹಾಗೂ ಅದರೊಳಗಿರುವ ಅಂತರಾತ್ಮ ಇವೆರಡೂ ಒಂದೇ ವಸ್ತುವು. ಒಳಗಿನ ಪರಮಾತ್ಮಗೂಸಿ ಚೈತನ್ಯವೇ ಬೆಳೆದು, ನೀರು ಬರ್ಫವಾದಂತೆ ದೇಹಾಕಾರ ಪಡೆದಿದೆ. ಬರ್ಫದಲ್ಲಿ ನೀರೂ ನೀರಿನಲ್ಲಿ ಬರ್ಫವೂ ಇದ್ದದ್ದನ್ನು ನಾವುಪ್ರತ್ಯಕ್ಷವಾಗಿ ನೋಡುವೆವು ಇದೇ ಅಂಗಲಿಂಗಗಳ ಉಭಯಸ್ಥಳವು.

ತ್ರಿವಿಧ ಸಂಪತ್ತು ಸ್ಥಳ: — ಹೊರಗಿನ ದೇಹ, ಅದರೊಳಗೆ ಜೀವ, ಅದರೊಳಗೆ ಜ್ಞಾನ, ಇವನ್ನೇ ಗುರುಲಿಂಗಜಂಗಮವೆಂದು ಹೇಳುವರು. ತನುವೇ ಗುರು ಪ್ರಾಣವೇ ಲಿಂಗ ಜ್ಞಾನವೇ ಜಂಗಮ ಎಂದು ವಚನಶಾಸ್ತ್ರವು ಬಿತ್ತರಿಸಿದೆ. ಈ ಮೂರನ್ನು ಒಂದಗೊಳಿಸುವದೇ ತ್ರಿವಿಧ ಸಂಪತ್ತಿಯು. ಉಭಯಸ್ಥಳದಲ್ಲಿ ಜೀವವು ಪರಮಾತ್ಮನ ಅಂಶದಿಂದಲೇ ಆಗಿದೆ ಎಂಬುದು ಬಂದಿದೆ. ಆ ಜೀವದಿಂದಲೇ ದೇಹವಾಗಿದೆ ಎಂಬುದು ಸಹ ಬಂದಿದೆ. ಪರಮಾತ್ಮನ ಅಂಶವೇ ಜೀವ ಜೀವವೇ ಬಲಿದು ಹೊರಗೆ ಕಾಣಿಸಿಕೊಂಬುದೇ ದೇಹ. ಅಂದಮೇಲೆ ಈ ಮೂರೂ ಒಂದಾದವು. ಬೀಜದಿಂದ ಅಂಕುರ, ಅಂಕುರದಿಂದಲೇ ವೃಕ್ಷವಾದಂತೆಯೇ ಇವು ಇರುವವು. ಇದೇ ತ್ರಿವಿಧ ಸಂಪತ್ತು.

ಚತುರ್ವಿಧ ಸಾರಾಯ :— ಗುರು, ಲಿಂಗ, ಜಂಗಮ ಹಾಗು ಪ್ರಸಾದ ಈ ನಾಲ್ಕಕ್ಕೆ ಕೂಡಿಯೇ ಈ ಹೆಸರು ಬಂದಿದೆ. ತನು, ಜೀವ, ಅಂತರಾತ್ಮ, ಪರಮಾತ್ಮಗಳೇ ಮೇಲಿನ ಚತುರ್ವಿಧ ಹೆಸರನ್ನು ಪಡೆದಿವೆ. ಅಂತರಾತ್ಮನೆಂಬ ಪರಮಾತ್ಮನ ಅಂಶವು. ಪರಮಾತ್ಮನಿಂದ ಹೊರಟು ಚರಿಸಿ, ದೇಹದಲ್ಲಿ ಸೇರಿದುದರಿಂದ, ಅದು

ಜಂಗಮವೆಂಬುದು ನಿರ್ವಿವಾದವು. ಇನ್ನು ಪರಮಾತ್ಮನೆಂದರೆ ಪ್ರಸಾದವೆಂತು ? ಎಂಬುದು ಉಳಿಯಿತು. ಅದರ ವಿವರಣೆಯು ಈ ಪ್ರಕಾರವದೆ: — ಸ್ಥಲದಿಂದ ಮೂಲಪ್ರಣವ ಓಂಕಾರವು ಉದ್ಭವಿಸಿತು. ಆ ಓಂಕಾರದಲ್ಲಿ ಅ. ಉ ಮ್ ಎಂಬ ಚಿನ್ನಾದ, ಚಿದ್ಬಿಂದು, ಚಿತ್ಕಳೆಗಳು ಕೂಡಿವೆ. ಈ ಮೂರು ಹಾಗೂ ಮೂಲಪ್ರಣವ ಈ ನಾಲ್ಕು ಗಟ್ಟಿಗೊಂಡು ಮಹಾಲಿಂಗವಾಗಿದೆ. ಅದೇ ವಿಶ್ವದ ಒಳಹೊರಗೆಲ್ಲ ಬೆಳಗುತ್ತದೆ ಈ ಸೃಷ್ಟಿಯು ಮಾನವನಿಗೆ ಬಹು ಉಪಕಾರವಾಗಿದೆ. ಅದೇ ಅವನ ಜೀವಿತ ಸಾಧನವು. ಆದುದರಿಂದ ಅದೇ ಅವನ ಮಹಾಪ್ರಸಾದವು. ಮಹಾಲಿಂಗಕ್ಕೆ ಮಹಾದೇವ, ಪರಮಾತ್ಮ ಎಂತಲೂ ಹೆಸರುಗಳಿರುವವು. ಇದರಿಂದ ಪರಮಾತ್ಮನೇ ಪ್ರಸಾದವೆಂಬ ಅರಿಕೆಯಾಗುವಂತಿದೆ. ಪರಮಾತ್ಮನಿಂದ ಅಂತರಾತ್ಮ, ಅದರಿಂದ ಜೀವ, ಅದರಿಂದ ದೇಹ, ಹೀಗೆ ಕ್ರಮವಾಗಿ ಅವು ಇರುವದರಿಂದ, ಅವೆಲ್ಲ ಒಂದೇ ಅಂದರೆ ಪರಮಾತ್ಮ ಅಥವಾ ಶಿವಸ್ವರೂಪವು ಹೀಗೆ ಅರಿತುಕೊಳ್ಳುವದೇ ಚತುರ್ವಿಧ ಸಾರಾಯವು.

( ಇವುಗಳ ವಿವರಣೆಯ ಪಟವನ್ನು ಈ ಲೇಖದ ಕೊನೆಯಲ್ಲಿ ನೋಡಿರಿ)

**ಉಪಾಧಿ ಮಾಟ:** — ನಿರುಪಾಧಿ ಮಾಟ ಸಹಜ ಮಾಟ ಗಳು ಭಕ್ತನ ಅಂಗಸ್ಥಳಗಳಲ್ಲಿ ಕೊನೆಯವಾಗಿ ಹೇಳಲ್ಪಟ್ಟಿವೆ. ಇವನ್ನಿಷ್ಟು ಪರಿಶೀಲಿಸುವಾ.

ಮಾಡು + ಅ = **ಮಾಟ** ಎಂಬುದು ಭಾವನಾಮ. ಇದರ ಅರ್ಥ — ಕ್ರಿಯೆ ಇಲ್ಲವೆ ಆಚಾರ ಇದರಲ್ಲಿ ದಾನವೆಂಬುದೊಂದೇ ಅಲ್ಲ. ಅದರೆ ಎಲ್ಲತರದ ಕಾರ್ಯಗಳೂ ಬರುವವು. ಉಪಾಧಿ ಎಂದರೆ ದೇಹ ಆಕಾರಣ ಉಪಾಧಿ ಮಾಟವೆಂದರೆ ದೇಹ ಮೂಲಕವಾಗಿ ಮಾಡುವ ಆಚಾರಗಳು. ಇಷ್ಟಲಿಂಗ ಪೂಜಿಸುವ ತ್ಯಾಗಾಂಗನಲ್ಲಿ ಬರುವ ಈಶ್ವರ ಮಹೇಶ್ವರರಿಬ್ಬರಿಗೂ ಇದು ಸಂಬಂಧಿಸಿದೆ. ಹೀನಕಾರ್ಯಗಳನ್ನು ದೂರೀ ಕರಿಸಿ ಒಳ್ಳೆಯವುಗಳೆನಿಸಿವವುಗಳನ್ನಷ್ಟೇ ಇವರು ದೇಹ ಮುಖಾಂತರ ಮಾಡತಕ್ಕವರು

**ನಿರುಪಾಧಿ ಮಾಟ**: ಉಪಾಧಿಯಿಲ್ಲದುದೇ ನಿರುಪಾಧಿಯು ದೇಹವನ್ನು ಬಿಟ್ಟರೆ ಅದರೊಳಗಿರುವ ಲಿಂಗವೆಂಬುದೇ ನಿರುಪಾಧಿಯು. ನಿರುಪಾಧಿ ಮಾಟವೆಂದರೆ ದೇಹದೊಳಗಿರುವ ಶಿವನೇ ಎಲ್ಲ ಕಾರ್ಯಗಳನ್ನು ನಡೆಸುವನು. ನಾನು ಮಾತ್ರ ಯಾವದನ್ನೂ ಮಾಡುವದಿಲ್ಲ ಎಂಬ ಭಾವನೆಯಿಂದ ಆಚರಿಸುವದೇ ನಿರುಪಾಧಿ ಮಾಟವು. ಇದು ಅಂತರ್ಲಿಂಗದ ಪೂಜೆಮಾಡುವ ಭೋಗಾಂಗನಲ್ಲಿ ಸಮಾವಿಷ್ಟವಾಗಿರುವ ಪ್ರಸಾದಿ ಪ್ರಾಣಲಿಂಗಿಗಳಿಗೆ ಸಂಬಂಧಿಸಿದುದು.

**ಸಹಜ ಮಾಟ**:— ಸಹಜವೆಂದರೆ ನಾನು ಇಲ್ಲವೆ ಶಿವನೆಂದರಿಯದೆ ಆವೆರಡನ್ನೂ ದಾಟಿ ನೈಸರ್ಗಿಕತೆವಿಡಿವುದು. ಈ ರೀತಿ ಮಾಡುವ ಕ್ರಿಯೆಗಳು ಸಹಜ ಮಾಟವೆನಿಸುವವು. ಭಾವಲಿಂಗ ಪೂಜಿಸುವ ಯೋಗಾಂಗನೊಳಗೆ ಸೇರುವ ಶರಣ ಐಕ್ಯರು ಅನುಸರಿಸುವ ಮಾಟವಿದು.

ಈ ಆರು ಸ್ಥಳಗಳು ದುರ್ಲಭವಾದವುಗಳು. ಇವು ಎಂತೆಂತಹರನ್ನೇ ದಂಗು ಬಡಿಸಿ ಉರುಳಾಡಿಸುವಾಗ ಪಾಪ! ಹೊಸದಾಗಿ ದೀಕ್ಷೆ ಹೊಂದಿದ ಮಹೇಶ್ವರನ ಪೂರ್ವದ ಸ್ಥಳದಲ್ಲಿರುವ ಲಿಂಗಾಯತ ತತ್ವಗಳಲ್ಲಿ ಅದೇ ಕಾಲಿಟ್ಟ ಈಶ್ವರನಿಗೆ ಇವು ಸಾಧ್ಯವಾಗುವ ಸ್ಥಳಗಳೇ ಅಲ್ಲ! ಎಂದೂ ಅಲ್ಲ! ಹಾಗಾದರೆ ಅವನ್ನು ಪೂರ್ವಜರು ಭಕ್ತ ಸ್ಥಳದಲ್ಲಿಯೇ ಹೇಗೆ ಸೇರಿಸಿರುವರು ? ಇದಕ್ಕೆ ಉತ್ತರವಿಷ್ಟೇ. ಅವರು ನಮ್ಮಂತೆ ಭಕ್ತನೆಂದರೆ ಹೊಸದಾಗಿ ಲಿಂಗವಿಡಿದವನಷ್ಟೇ ಮಾತ್ರ ಎಂದು ತಿಳಿಯದೆ ಷಡಂಗರೆಲ್ಲರೂ ಭಕ್ತರು ಎಂದು ತಿಳಿದೇ ಇವನ್ನೆಲ್ಲ ಹೇಳಿದ್ದಾರೆ. ಭಕ್ತ ಸ್ಥಳವೆಂದರೆ ಸರ್ವಲಿಂಗಾಂಗಿಗಳನ್ನು ಒಳಗೊಂಡ ಸ್ಥಳವೆಂಬುದೇ ಅವರ ಗ್ರಹಿಕೆ. ಲಿಂಗಧಾರಿಗಳೆಲ್ಲರೂ ಹೊಂದಬೇಕಾದ ಧ್ಯೇಯವನ್ನೇ ಅವರ ಮುಂದಿಡುವ ಉದ್ದೇಶದಿಂದಲೇ ಈ ಆರೂ ಸ್ಥಳಗಳನ್ನು ಇಲ್ಲಿ ವಿಶದೀಕರಿಸುವರು. ಹಾಗಾದರೆ ಆ ಪ್ರಥಮ ಮೆಟ್ಟಿಲಿನಲ್ಲಿರುವ ಮಹೇಶ್ವರನ ಪೂರ್ವದವನಿಗೆ ಏನೆಂದು ಕರೆಯಬೇಕೆಂಬುದು ಇಲ್ಲಿ ಮುಂದೆ ಬಂದು ನಿಲ್ಲುತ್ತದೆ. ಅವನು ಮಹೇಶ್ವರನ ಪೂರ್ವದವನಾದುದರಿಂದ, ಅವನನ್ನು ಈಶ್ವರ ಸ್ಥಳದವನೆಂದು ಅರಿಯುವದು ಸಯು

ಕ್ತವೆನ್ನಿಸುತ್ತದೆ. ತಾವೆಲ್ಲರೂ ಸಮಾಲೋಚಿಸಿ ಹೆಚ್ಚು ಯೋಗ್ಯವಾದ ಶಬ್ದ ದೊರೆತರೆ ಹಾಗೆ ಕರೆಯಲಡ್ಡಿ ಇಲ್ಲ.

## ಆಚಾರ ಲಿಂಗ.

ವೀರಶೈವರಲ್ಲಿ ಬರಿಯ ಮಾತಿಗೆ ಮಹತ್ವವಿಲ್ಲ. ಅದರಂತೆ ಆಚರ ಣೆಯು ಅವಶ್ಯವಾಗಿ ಆಗಲೇಬೇಕು. ಈ ಆಚಾರವು ದೇಹ, ಮನ, ಸದ್ಭಾವಗಳ ಮುಖಾಂತರವಾಗಿ ಮೂರು ವಿಧವಾಗಿ ಪ್ರಕಟವಾಗುವದು. ಇಂತಹ ಆಚಾರವೇ ಆಚಾರಲಿಂಗವೆಂದು ಹೇಳಲ್ಪಡುವದು. ದೇಹ ದ್ವಾರವಾಗಿ ತ್ಯಾಗಾಂಗನೂ, ಮನೋ ಮೂಲಕವಾಗಿ ಭೋಗಾಂಗನೂ, ಸದ್ಭಾವನೆಯ ಮುಖದಿಂದ ಯೋಗಾಂಗನೂ ತಮತಮಗೆ ತಕ್ಕುದಾದ ಆಚಾರವನ್ನು ಅನುಸರಿಸುತ್ತಿರುವರು. ಇವರೇ ಷಟ್‌ಸ್ಥಳದಲ್ಲಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯರೆಂದೂ ಅವರ ಪೂಜಿ ಸುವ ಲಿಂಗಗಳು ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವ ಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳೆಂದೂ ಹೆಸರು ತಳೆದಿರುವವು. ಷಡಂಗರು ತಮ್ಮ ತಮ್ಮ ಲಿಂಗದಲ್ಲಿ ಬೆರೆಯಬೇಕಾದರೆ ಆಯಾ ಲಿಂಗಗಳಿಗೆ ಹೇಳಿದ ಲಿಂಗಸ್ಥಳಗಳಂತೆ ಆಚರಿಸದಿದ್ದರೆ ಗತಿಯೇ ಇಲ್ಲ. ಇದರ ಮೇಲಿಂದ ಅವರೆಲ್ಲರೂ ಆಚಾರಲಿಂಗವನ್ನೇ ಆಚರಿಸುತ್ತಿ ರುವರೆಂಬುದು ನಿರ್ವಿವಾದವಾಗಿ ಸಿದ್ಧವಾಗುವದು. ಅಂತೇ ಷಟ್‌ಸ್ಥಲ ದಲ್ಲಿ ಭಕ್ತನಲಿಂಗವು ಆಚಾರಲಿಂಗವೆಂದು ಹೇಳಲ್ಪಡುವದು. ಯಾರೇ ಇರಲಿ ಅವರು ಆಚಾರಲಿಂಗವನ್ನು ಪೂಜಿಸುವದನ್ನು ಬಿಟ್ಟರೆ ಅವರ ಆಟವೇ ನಿಂತುಹೋಗುವದು. ಆ ಕಾರಣ ಉಳಿದ ಗುರುಲಿಂಗಾದಿ ಲಿಂಗ ಗಳು ಬೇರೆ ಹೆಸರುಳ್ಳವಾಗಿದ್ದರೂ, ಅವೆಲ್ಲ ಆಚಾರಲಿಂಗದ ಅಂತರ್ಗತ ಗಳೇ ಹೊರತು ಅದನ್ನು ಬಿಟ್ಟಿರಲಾರವು. ಅದೇ ಮೇರೆಗೆ ಮಹೇ ಶ್ವರಾದಿ ಅಂಗರೆಲ್ಲರೂ ಭಕ್ತನ ಒಡಲಲ್ಲಿ ಬರುವರೇ ವಿನ ಹೊರಗಿರು ವವರಲ್ಲ. ಭಕ್ತತ್ವದ ಪರಮೋಚ್ಚ ಧ್ಯೇಯದ ಪೂರ್ತತೆಗಾಗಿಯೇ ಅವೆಲ್ಲ ಇರುವವಲ್ಲದೆ ಭಕ್ತತ್ವಕ್ಕಿಂತ ಮೇಲ್ಮೆಯನ್ನು ಪಡೆಯುವದಕ್ಕಲ್ಲ. ಎಂಬುದನ್ನು ಸಮಾಜವು ಗಮನಿಸುವದೆಂದು ಕೋರುವೆನು.

ಭಕ್ತನು ಜ್ಞಾನಪರವಾದ ಒಣಮಾತುಗಳನ್ನು ಆಡಿಬಿಡುವವನಲ್ಲ. ಪ್ರತ್ಯಕ್ಷ ತದನುಸಾರ ಆಚರಿಸಿಯೇ ತೃಪ್ತನಾಗುವನು. ಆದುದರಿಂದಲೇ ನಮ್ಮ ಪ್ರಮಥ ಪುಂಗವರು ಆಚಾರ ಸೌಗಂಧಿಕ ಮೂಲದಿಂದ ರಸಾಸ್ವಾದನೆ ಮಾಡಿ ಪರಿಪುಷ್ಟವಾದ ಗಗನ ಭೇದೀ ಮಹಾಲಿಂಗ ಮಲಯವೃಕ್ಷವನ್ನು ನಿಯೋಜಿಸಿರುವದು ನಮ್ಮ ಅತ್ಯಂತ ಸುದೈವವೇ ಸರಿ.

ಜಂಗಮಕ್ಕೆ ಚರವೆಂತಲೂ ಜಂಗಮ ಲಿಂಗಕ್ಕೆ ಚರಲಿಂಗವೆಂತಲೂ ಹೆಸರುಗಳುಂಟು. ಇಲ್ಲಿ ಗಮ್. ಹಾಗು ಚರ್ ಎಂಬ ಧಾತುಗಳು ಬಂದಿವೆ. ಗಮನಾರ್ಥಕ ಧಾತುಗಳೆಲ್ಲ ಉಭಯಾರ್ಥಗಳಲ್ಲಿ ಅಂದರೆ ಜ್ಞಾನಾರ್ಥಕವಾಗಿಯೂ ಚಲನಾರ್ಥಕವಾಗಿಯೂ ಇರುತ್ತವೆಂದು ಸಾಧಾರಣವಾಗಿ ಹೇಳಿದುದುಂಟು. ಆ ಕಾರಣ ಗಮ್ ಹಾಗೂ ಚರ್ ಧಾತುಗಳೆರಡೂ ಒಂದೇ ಎಂದು ಹೇಳಬಹುದು. ಅಂತೆಯೇ ಜಂಗಮ ಲಿಂಗಕ್ಕೂ ಆಚಾರ ಲಿಂಗಕ್ಕೂ ಅಂತರವಿಲ್ಲೆಂಬುದು ಇದರಿಂದ ತಿಳಿಯುತ್ತದೆ.

ವೀರಶೈವರಲ್ಲಿ ಲಿಂಗಾಚಾರ, ಶಿವಾಚಾರ, ಸದಾಚಾರ, ಗಣಾಚಾರ, ಹಾಗೂ ಭೃತ್ಯಾಚಾರ ಎಂದು ಆಚಾರವು ಐದು ತೆರನಾಗಿರುವದು. ಆಚಾರ ಲಿಂಗದಲ್ಲಿಯೇ ಇವು ಸಮಾವಿಷ್ಟ ವಾಗುವವು. ಇಂತು ಆಚಾರಲಿಂಗವು ಬಹು ಮುಖವಾಗಿದ್ದು ಅದೇ ಪ್ರಮುಖ ಸ್ಥಾನವನ್ನು ಹೊಂದಿರುವದನ್ನು ಸಮಾಜವು ಗಮನಿಸಬೇಕು.

ಈ ವಿವರಣೆಯಿಂದ ಷಟ್‌ಸ್ಥಲದಲ್ಲಿ 'ಭಕ್ತನೂ ಅವನ ಆಚಾರ ಲಿಂಗವೂ, ಇವೇ ಮುಖ್ಯವಾಗಿ ವಿವರಿಸಲ್ಪಟ್ಟವೆಂಬುದನ್ನು ನಿರಾತಂಕವಾಗಿ ಹೇಳಬಹುದು.

ಇದೇ ಪ್ರಕಾರ ಭಕ್ತನ ಆಚಾರಲಿಂಗ ಸ್ಥಳದಲ್ಲಿ ಅವನು ಬೆರೆಯುವ ಬಗೆಗೆ ಕೊಟ್ಟಿರುವ ಲಿಂಗಸ್ಥಳಗಳು. "ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು, ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ, ಸ್ವಯಜಂಗಮ, ಚರಜಂಗಮ, ಪರಜಂಗಮ" ಎಂದು ಇರುತ್ತವೆ. ಹೀಗೆ ಅವು ಒಂದಕ್ಕೊಂದು ಸಂಬಂಧವಿಲ್ಲದೆ ಹೇಳಲ್ಪಟ್ಟಿರುವದರಿಂದ ಅವುಗಳ ಅರ್ಥವನ್ನು ಗ್ರಹಿಸ

ವದು ಮೊದಲು ದುಷ್ಕರವೆನ್ನಿಸುತ್ತದೆ. ಹಾಗೆಂದರೆ:— ಭಕ್ತನು ಆ ಮೂವರೂ ಗುರುಗಳಿಂದ ಕ್ರಮವಾಗಿ ಆ ಮೂರೂ ಲಿಂಗಗಳನ್ನು ಪಡೆದು ಪೂಜಿಸಿ, ತಾನು ಸ್ವತಃ ( ಸ್ವಯ ) ಜಂಗಮನಾಗುವದಲ್ಲದೆ ತನ್ನಂತೆ ಜೀವಿಗಳಾಗಿರುವ ಚರಸೃಷ್ಟಿಯನ್ನೆಲ್ಲ ಜಂಗಮವಾಗಿ ಅರಿದು, ಚರಜಂಗಮ ನಾಗಬೇಕು. ಮತ್ತೆ ಆ ಚರ ಸೃಷ್ಟಿಯನ್ನು ಸಹ, ಅದೂ ಸಹ ಚೈತನ್ಯ ಮಯವೆಂದರಿದು, ಜಂಗಮವೆಂದೇ ತಿಳಿದುಕೊಂಡು, ಪರಜಂಗಮನಾಗ ಬೇಕು ಎಂದು ತಿಳಿಯುವದು.

ಚರಜಂಗಮಃ – ಚರವಸ್ತುವನ್ನೆಲ್ಲ ಜಂಗಮವೆಂದರಿತವ.

ಪರಜಂಗಮಃ— ಆ ಚರಸೃಷ್ಟಿಯನ್ನು ಸಹ ಜಂಗಮವೆಂದು ಭಾವಿಸಿದವ. ಹೀಗೆ ತನ್ನ ಜ್ಞಾನದಿಂದ, ಮಹೇಶ್ವರನಿಗಿಂತ ಪೂರ್ವದವ ನಾದ ಲಿಂಗಾಂಗಿಯು ಅರಿಯುವದು ಶಕ್ಯವಿದೆಯೇ ? ಎಂದೂ ಆಗದ ಮಾತು. ಪ್ರಾಣಲಿಂಗಿಯು ತನ್ನ ಜಂಗಮಲಿಂಗದಲ್ಲಿ ಬೆರೆದಾಗ ಮಾತ್ರ ಅವನು ಸ್ವಯಜಂಗಮತ್ವ ಪಡೆಯುವನು. ಬಳಿಕ ತನ್ನಲ್ಲಿದ್ದಂತೆಯೇ ಪ್ರಾಣವುಳ್ಳ ಇತರ ಅಸಂಖ್ಯ ವಸ್ತುಗಳೇ ಜಗತ್ತಿನಲ್ಲಿ ಇರುವವು. ತಾನು ಜಂಗಮನೆನ್ನಿಸಿದರೆ ಅವು ಸಹ ಏಕೆ ಜಂಗಮವಲ್ಲ ? ಎಂಬ ವಿಚಾರವು ತಲೆದೋರಿ ಅವನ್ನು ಸಹ ಜಂಗಮವೆಂದು ನಂಬುವನು. ಆ ತರುವಾಯ ಆ ಚರಪದಾರ್ಥಗಳಾದ ಕಲ್ಲು ಮಣ್ಣು ಮೊದಲಾದವುಗಳಲ್ಲಿ ಜೀವ ವಿದ್ದದ್ದು ಕಂಡುಬಾರದಿದ್ದರೂ ಜೀವದುತ್ಪತ್ತಿಗೆ ಹಾಗೂ ಜೀವದ ರಕ್ಷಣೆಗೆ ಬೇಕಾಗುವ ಚೈತನ್ಯವು ಗೂಢ ರೀತಿಯಿಂದ ವಾಸಿಸುತ್ತದೆ. ಕಲ್ಲು ಹುಡಿ ಯಾಗಿಯೇ ಮಣ್ಣಾಗುವದು. ಆ ಮಣ್ಣಿನಲ್ಲಿಯೇ ವನಸ್ಪತಿಯುದ್ಭವಿಸಿ ಅವುಗಳಿಂದ ಕಾಳು, ಕಂದಮೂಲ, ಹಣ್ಣು ಹಂಪಲಗಳಾಗುತ್ತವೆ. ಇವೇ ಮನುಷ್ಯನ ಆಹಾರ. ಇವನ್ನು ಭೋಗಿಸಿಯೇ ಅವನು ಜೀವಿಸುವನು. ಆದುದರಿಂದ ಆ ಚರ ಪದಾರ್ಥಗಳು ಸಹ ಜಂಗಮಗಳೇ ಇರುತ್ತವೆಂದು ತಿಳಿದುಕೊಳ್ಳುವನು. ಹೀಗೆ ಗುಪ್ತ ರೀತಿಯಿಂದ ಚೈತನ್ಯವಿರುವದನ್ನು ಕಂಡುಹಿಡಿದುದರಿಂದಲೇ ಅವನ ಜಂಗಮತ್ವವು ಪರಜಂಗಮವೆಂದು ಅನ್ನಿಸಿಕೊಳ್ಳಲು ತಕ್ಕುದಾಯಿತು. ಈ ಚರ ಹಾಗೂ ಅಚರಗಳು ಜಂಗಮ ವೆಂಬುದನ್ನು ಪ್ರಸಾದ ಲಿಂಗದ ಅರ್ಚಕನಾದ ಶರಣನು ಅರಿದು ಮುಂದೆ ಐಕ್ಯತ್ವ ಪಡೆಯುವನು.

ಈ ಮೇರೆಗೆ ಭಕ್ತನಿಗೆ ಹೇಳಿದ ಅಂಗಸ್ಥಳಗಳನ್ನಾಗಲೀ ಆತನ ಆಚಾರಲಿಂಗವನ್ನಾಗಲೀ, ಆ ಆಚಾರಲಿಂಗದಲ್ಲಿ ಬೆರೆಯಲು ಕೊಟ್ಟಿರುವ ಲಿಂಗಸ್ಥಳಗಳನ್ನಾಗಲೀ ವಿಚಾರಿಸಿ ನೋಡಿದ್ದಾದರೆ ಅವೆಲ್ಲ ಷಡಂಗರನ್ನುದ್ದೇಶಿಸಿ ಹೇಳಿದ್ದು ಸ್ಪಷ್ಟವಾಗಿ ಕಂಡು ಬರುವದು. ಹೀಗಿದ್ದು ಸಿ. ಶಿ. ಕಾರರು ಭಕ್ತನೆಂದರೆ ಮಹೇಶ್ವರನಿಗಿಂತ ಕೆಳಗಿನ ಮೆಟ್ಟಲದವನೆಂದು ಬಗೆದು ತಾವೂ ಗೋಳಿಗೆ ಬಿದ್ದಿರುವರು. ಮತ್ತು ಎಲ್ಲ ಲಿಂಗಾಯತರನ್ನು ದಿಙ್ಮೂಢರನ್ನಾಗಿ ಮಾಡಿರುವರು.

ಭಕ್ತನ ಧ್ಯೆಯವೇ ಜಂಗಮತ್ವವನ್ನು ಪಡೆಯತಕ್ಕದ್ದಿದ್ದು ಅದನ್ನು ಪಡೆದಮೇಲೆ ಆತನು ಪುನಃ ಮಹೇಶ್ವರತ್ವದ ಗುರುಲಿಂಗದಲ್ಲಿ ಬೆರೆಯಲು ಮುಂದುವರಿಯುವದೆಂತು ? ಇದೆಲ್ಲವೂ ವಿಚಿತ್ರವೇ ಆಗಿರುವದು. ಏಕೋತ್ತರ ಶತಸ್ಥಲದ ಬಗೆಗೆ ಬರೆದವರೆಲ್ಲರೂ ಈ ಶಿದ್ಧಾಂತ ಸಿಖಾಮಣಿಯನ್ನೇ ಮುಂದಿಟ್ಟುಕೊಂಡು ಬರೆದವರಿರುವದರಿಂದ ಅವರೂ ಸಹ ಹಾಗೇ ಹೇಳಿರುವರು. ಈ ವಿಷಯವನ್ನು ಶಿವಾನುಭವದ ನಮ್ಮ ವಾಚಕರು ಮನಮುಟ್ಟಿ ಪರೀಕ್ಷಿಸುವರೆಂದು ನಂಬಿರುವೆನು.

# ಚತುಃಸ್ಥಲ.

ಸ್ಥಳ ...... .... (ಏಕಮೇವ ಸ್ಥಳ )೧

| | | |
|---|---|---|
| ಅಂಗ | ಲಿಂಗ | ಸ್ಥಲದ್ವಯ ೨ |
| ಶಕ್ತಿ | ಶಿವ | |
| ದೇಹ | ಪ್ರಾಣ | |
| ಹೊರಗೆ | ಒಳಗೆ | |
| ಆಕಾರ | ನಿರಾಕಾರ | |
| ಸತಿ | ಪತಿ | |
| ಭಕ್ತ | ಜಂಗಮ | |

— ಮುಂತಾದವು. —

| | | | |
|---|---|---|---|
| ಸ್ಥೂಲಾಂಗ | ಸೂಕ್ಷ್ಮಾಂಗ | ಕಾರಣಾಂಗ | ಸ್ಥಲತ್ರಯ ೩ |
| ತ್ಯಾಗಾಂಗ | ಭೋಗಾಂಗ | ಯೋಗಾಂಗ | |
| ತನು | ಪ್ರಾಣ | ಜ್ಞಾನ (ಭಾವ) | |
| ಹೊರಗೆ | ಒಳಗೆ | ಒಳಒಳಗೆ | |
| ಆಚಾರ | ವಿಚಾರ | ಸಂಚಾರ | |
| ಅರುಹು | ಸುಜ್ಞಾನ | ಅನುಭವಜ್ಞಾನ | |
| ಗುರು | ಲಿಂಗ | ಜಂಗಮ | |

— ಮುಂತಾದವು. —

| | | | | |
|---|---|---|---|---|
| ಸ್ಥೂಲದೇಹ | ಸೂಕ್ಷ್ಮದೇಹ | ಕಾರಣದೇಹ | ಮಹಾಕಾರಣವಸ್ತು | ಸ್ಥಲಚತುಷ್ಟಯ ೪ |
| ತ್ಯಾಂಗಾಂಗ | ಭೋಗಾಂಗ | ಯೋಗಾಂಗ | ಸಹಜಾಂಗ | |
| ಶರೀರ | ಲಿಂಗಶರೀರ | ಪ್ರಾಣ, ಮನ | ಜ್ಞಾನ, ಭಾವ | |
| ಹೊರಗೆ | ಒಳಗೆ | ಒಳಒಳಗೆ | ತೀರಒಳಗೆ | |
| ಆಚಾರ | ವಿಚಾರ | ಸಂಚಾರ | ಪ್ರಚಾರ | |
| ಅರುಹು | ಸುಜ್ಞಾನ | ಅನುಭವಜ್ಞಾನ | ಮಹಾಜ್ಞಾನ | |
| ಗುರು | ಲಿಂಗ | ಜಂಗಮ | ಪ್ರಸಾದ | |

ಚತುಃಸ್ಥಳ—ಷಟ್‌ಸ್ಥಳ

**ಏಕೀಕರಣ.**




ಸೂಚನೆಃ— (೧) ಉಭಯ ಸ್ಥಳದಲ್ಲಿ ಅಂಗನು ಲಿಂಗದಲ್ಲಿ ಬೆರೆದು ಒಂದಾಗುವದು.

(೨) ತ್ರಿವಿಧ ಸಂಪತ್ತಿಯಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗ ರೂಪ ಗುರು ಲಿಂಗ ಜಂಗಮಗಳುಂಟು. ಅವರು ತಮ್ಮ ತಮ್ಮ ಲಿಂಗಗಳಲ್ಲಿ ಬೆರೆದು ಒಂದಾಗುವದು.

(೩) ಚತುರ್ವಿಧ ಸಾರಾಯದಲ್ಲಿ ತ್ರ್ಯಂಗದ ಉಪಾಂಗರೆನಿಸುವ ಷಡಂಗರು ತಮ್ಮ ತಮ್ಮ ಷಡ್ಲಿಂಗಗಳಲ್ಲಿ ಬೆರೆಯುವದು. ಹೀಗೆ ಬೆರೆದು ಒಂದಾಗುವದೇ ಪ್ರಸಾದವು.

# ಸಾಮಾಜಿಕ ವಿಷಮತೆಗೆ ಮಾನಸ ಶಾಸ್ತ್ರದ ಮದ್ದು.

( ಬರೆದವರುಃ— ಶ್ರೀ. ಅನ್ನದಾನೀಶ್ವರ ವಿರಕ್ತಮಠ.
ಶ್ರೀ ಬಸವೇಶ್ವರ ಕನ್ನಡ ಟ್ರೇನಿಂಗ ಕಾಲೇಜ, ಬಾಗಲಕೋಟೆ.)

ಭಾರತೀಯ ಸಮಾಜ ರಚನೆಯಲ್ಲಿ ವಿಷಮತೆ ತುಂಬಿದೆ. ಪ್ರತಿಯೊಂದು ಹಳ್ಳಿಯಲ್ಲಿ ಊರಹೊರಗೆ ಹೊಲಗೇರಿಗಳಿವೆ. ಅಲ್ಲಿ ವಾಸಿಸುವವರು ನಮ್ಮಂತೆಯೇ ಆತ್ಮ ಜೀವ ಸಮಾಯುಕ್ತರಾದ ಮಾನವರೇ ಆಗಿರುವರು. ಅವರ ಹೀನ, ದೀನ, ಶೋಚನೀಯ, ಪರಿಸ್ಥಿತಿಯನ್ನು ನೋಡಿದರೆ, ಅವರ ಶಾರೀರಿಕ ಬೌದ್ಧಿಕ, ಆರ್ಥಿಕ, ರಾಜಕೀಯ ತೀರ ಕೆಳಗಿನ ಮಟ್ಟವನ್ನು ನೋಡಿದರೆ, ಅವರಿಗೆ ಸಮಾಜದಲ್ಲಿರುವ ಕೀಳ, ಹೀನ, ನೀಚ ಸ್ಥಾನವನ್ನು ನೋಡಿದರೆ, ಅವರಿಗೆ ಮನಸ್ಸಿಗೆ ಬಹಳೇ ನೋವಾಗುವದು. ವಿಷಮತೆಯು ಸಮಾಜರಚನೆಮಾಡಿದ ವರ್ಣವಾದಿಗಳ ಬಗೆಗೆ ಅನಾದರ ಉತ್ಪನ್ನವಾಗುವದು. ಚತುರ್ವರ್ಣಗಳ ಸ್ಥಾಪನೆಯು ಅಸ್ಪೃಶ್ಯತೆಯನ್ನು ಶೂದ್ರರ ಒಂದು ಗುಲಾಮಗಿರಿ ವರ್ಗವನ್ನು ಶಾಶ್ವತಗೊಳಿಸಿಬಿಟ್ಟಿರುವದು. ಅಯ್ಯೋ ! ನಾವೆಂಥ ನಿರ್ದಯರು! ನಾವಂಥ ಸ್ವಾರ್ಥದಿಂದ ಕುರುಡರು! ನಾವೆಂಥ ವಿಚಾರ ಶೂನ್ಯರು ! ನಾವೆಂಥ ಅಮಾನುಷರು! ಎಂಬ ಭಾವನೆ ಬಂದು, ನವ ಸಮಾಜ ರಚನೆಯನ್ನು - ವರ್ಣಗಳಿಲ್ಲದ, ವರ್ಗಗಳಿಲ್ಲದ, ಜಾತಿಗಳಿಲ್ಲದ, ಸಮಾಜ ರಚನೆಯನ್ನು ಮಾಡಬೇಕೆಂಬ ಬಲವತ್ತರವಾದ ಭಾವನೆಗೆ ಪುಷ್ಟಿದೊರೆಯುವದು. ಕೀಳು-ಮೇಲು, ಉಚ್ಚ-ನೀಚ ಎಂಬ ಸ್ವಾರ್ಥಯುಕ್ತ ಕೊಳಕು ಕಲ್ಪನೆಗಳಿಗೆ ಚತುರ್ವರ್ಣಗಳೇ ಮೂಲ ಕಾರಣಗಳು. ಮಾನಸ ಶಾಸ್ತ್ರದೃಷ್ಟಿಯಿಂ ಈ ಕೀಳು ಮೇಲು ಭಾವನೆಯನ್ನು ಹೇಗೆ ಕಳೆಯಬೇಕೆಂಬುದನ್ನೂ ಅದೆಲ್ಲಕ್ಕೆ ಕಾರಣವಾದ ವರ್ಣವ್ಯವಸ್ಥೆಯನ್ನು ನಾಶಮಾಡಬೇಕೆಂಬುದನ್ನೂ ಕುರಿತು ಈಗ ವಿಚಾರಿಸೋಣ.

ಮನುಷ್ಯನಲ್ಲಿ ಆತ್ಮಗೌರವದ ಸಹಜ ಪ್ರವೃತ್ತಿ ಇದೆ. ಈ ಪ್ರವೃತ್ತಿಯ ಉದಾತ್ತೀಕರಣವನ್ನು ಹೇಗೆ ಮಾಡಬೇಕು ? ಒಳಗಿನ ಶಕ್ತಿಗಳ

ವಿಕಾಸಕ್ಕೆ 'ಅನುವು ಮಾಡಿ ಕೊಡಬೇಕು. ಆತ್ಮಾಭಿವ್ಯಕ್ತಿ, ಆತ್ಮಪ್ರಸರಣಕ್ಕೆ ಸ್ವಾತಂತ್ರ್ಯವಿರಬೇಕು. ವಿಚಾರ ಸ್ವಾತಂತ್ರ್ಯ, ಉಚ್ಚಾರ ಸ್ವಾತಂತ್ರ್ಯ, ಕೃತಿ ಸ್ವಾತಂತ್ರ್ಯ, ಉದ್ಯೋಗ ಸ್ವಾತಂತ್ರ್ಯಗಳಿಗೆ ಪೂರ್ಣಾವಕಾಶವಿರಬೇಕು ಅಂದರೆ ಆತ್ಮಗೌರವದ ಪ್ರವೃತ್ತಿಯು ಉದಾತ್ತವಾಗುವದು. ಈ ತರದ ಸ್ವಾತಂತ್ರ್ಯಗಳಿಲ್ಲದಿದ್ದರೆ, ಮಾನವನಲ್ಲಿ ತಾನು ಕೀಳೆಂಬ ವಿನಾಶಕಾರಕ ಬೀಜಗಳು ಬಿತ್ತಲ್ಪಡುತ್ತವೆ. ಮಾನಸಿಕ ಗುಲಾಮಗಿರಿಯು ದೃಢಪಡುತ್ತಾ ಬರುತ್ತದೆ. ಮೊದಲು ಈ ಸ್ವಾತಂತ್ರ್ಯಗಳಿಗೆ ಪ್ರತಿಬಂಧಕವಾಗಿರುವ ವರ್ಣಗಳನ್ನು ರದ್ದುಗೊಳಿಸಬೇಕು. ಆಮೇಲೆ ಪೋಷಕ ವಾತಾವರಣವನ್ನುಂಟುಮಾಡಿಕೊಡಬೇಕು. ಈ ದೃಷ್ಟಿಯಿಂದ ಹರಿಜನರ ಮಾನಸಿಕ ಗುಲಾಮಗಿರಿಯನ್ನು ದೂರ ಮಾಡಬೇಕು.

**ಆತ್ಮವಿಶ್ವಾಸದ ಬೆಳವಣಿಗೆ:** – ಮನುಷ್ಯನಲ್ಲಿ ಆತ್ಮಾಭಿವ್ಯಕ್ತಿಯ ಸ್ವಾತಂತ್ರ್ಯ, ಅದಕ್ಕೆ ಪೋಷಕ ವಾತಾವರಣ ಹುಟ್ಟಿಸಿದ ಮೇಲೆ ಅವನಲ್ಲಿ ಆತ್ಮವಿಶ್ವಾಸವನ್ನು ಬೆಳಸಬೇಕು ಅವನನ್ನು ಎಷ್ಟೂ ಹೆದರಿಸಬಾರದು. ಧಿಕ್ಕರಿಸಬಾರದು. ಹಾಗೆ ಮಾಡಿದರೆ ಗಾಳಿ ಬೆಳಕುಗಳಿಂದ ಬೆಳೆಯುವ ಸಸಿಗೆ ವಿನಾಶ ಕೀಟಕಗಳು ಹತ್ತಿದಂತಾಗುತ್ತದೆ. ಸಮಾಜದಲ್ಲಿ ನಾಗರಿಕ ಕರ್ತವ್ಯಗಳನ್ನು ಆತ್ಮಸಂತೋಷದಿಂದ ಮಾಡುವಂತೆ ಮಾಡಲು ಮುಂದೆಬರುವಂತೆ, ತನ್ನ ಶಕ್ತಿಗಳ ಪ್ರದರ್ಶನಕ್ಕೆ ಹಾತೊರೆಯುವಂತೆ, ಆತ್ಮವಿಶ್ವಾಸವನ್ನು ಬಲಪಡಿಸಲಿಕ್ಕೆ ಬೇಕು. ಹರಿಜನರಲ್ಲಿ ಆತ್ಮವಿಶ್ವಾಸ ಬೆಳಿಸಿದರೆ ಅವರು ಮಹಾತ್ಮರಾಗುವರು.

**ಉತ್ಪಾದಕ ಶಕ್ತಿಯ ವಿಕಾಸ:** — ಅನುಕರಣಕ್ಕಿಂತಲೂ ಉತ್ಪಾದಕ ಶಕ್ತಿ ದೊಡ್ಡದು. ಈ ಮಾತನ್ನು ಚನ್ನಾಗಿ ಲಕ್ಷಿಸತಕ್ಕದ್ದು. ಹರಿಜನರ ವೈಯಕ್ತಿಕ ಅಭಿರುಚಿ, ಅವಧಾನಗಳಿಗೆ ತಕ್ಕಂತೆ ಅವರು ವಸ್ತುಗಳನ್ನು ಉತ್ಪಾದಿಸಬಹುದು. ಅವರು ಇಂಥ ಉದ್ಯೋಗವನ್ನೇ ಮಾಡಬೇಕೆಂಬ ಬಂಧನವಿರಬಾರದು. ಅನುಕರಣ ಮಾಡಿದರೆ ಉತ್ತಮವಾದ ಮಹಾನುಭಾವರ ತತ್ವಗಳ ಅನುಕರಣ ಮಾಡಿಸಬೇಕು. ಅಪೂರ್ಣರಾದ, ಡಾಂಭಿಕರಾದ, ನಮ್ಮ ಅನುಕರಣಮಾಡಲಿಕ್ಕೆ ಹಚ್ಚಬಾರದು.

**ಶಿಕ್ಷಣದ ಮಹತ್ವ :—** ಪ್ರೇಮದಿಂದ ಹರಿಜನರಿಗೆ ಶಿಕ್ಷಣಕೊಡಲಿಕ್ಕೆ ಬೇಕು. ಅಸಹಿಷ್ಣುತೆಯಿಂದ, ಸಿಡುಕಿನಿಂದ, ಸಿಟ್ಟಿನಿಂದ ಅವರ ತಪ್ಪುಗಳನ್ನು ತಿದ್ದಬಾರದು. ಅವರಲ್ಲಿ ದ್ವೇಷಭಾವನೆ ಬರದಂತೆ ಆದರ್ಶ ಪ್ರೇಮದಿಂದ ಸ್ವಭಾವ ತಿದ್ದಬೇಕು. ಈ ಕಾರ್ಯಕ್ಕೆ ಆದರ್ಶ ಶಿಕ್ಷಕರು ಬೇಕು.

**ಜಾತೀಯತಾ ನಿರ್ಮೂಲನ :—** ಗುಣಕರ್ಮ ವಿಶಿಷ್ಟವಾಗಲೀ, ಜನ್ಮವಿಶಿಷ್ಟವಾಗಲೀ, ಯಾವದೇ ರೀತಿಯಿಂದ ಜಾತಿಗಳು ಇರಬಾರದು. ಜಾತೀಯತೆಯು ತಾನು ಕೀಳೆಂಬ ಮನಸಿಕ ಗುಲಾಮಗಿರಿಯನ್ನು ಹರಿಜನರಲ್ಲಿ ಹುಟ್ಟಿಸುತ್ತದೆ. ಕಾರಣ 'ನಾನು ಅಲ್ಪ ನನ್ನಿಂದೇನಾಗಬೇಕು ?' ಎಂಬ ಘಾತುಕ ಕಲ್ಪನೆ ಕನಸಿನಲ್ಲಿ ಸಹ ಮೂಡದಂತೆ ನಾವು ಅವರೊಡನೆ ವರ್ತಿಸಬೇಕು. ಅವರಿಗೆ ಸಾಮಾಜಿಕ ಸೌಕರ್ಯಗಳೆಲ್ಲವನ್ನು ಒದಗಿಸಬೇಕು. ಅವರು ಊರೊಳಗೆ ಸಮಾನ ರೀತಿಯಿಂದ ಇರುವಂತೆ ಅವರ ಹೊಲಗೇರಿಗಳು ಹೋಗುವಂತೆ ಮಾಡಬೇಕು. ಮನುಷ್ಯನು ಒಬ್ಬನೇ ಇದ್ದರೆ ಅಸಾಮಾಜಿಕನೂ,ಅಸಭ್ಯನೂ,ಗುಲಾಮನೂ ಆಗಿ ಬೆಳೆಯುತ್ತಾನೆ. ಹರಿಜನರೊಡನೆ ಊಟ ಉಪಚಾರ, ಶರೀರಸಂಬಂಧ ಮಾಡಲಿಕ್ಕೆ ಬೇಕು. ಅವರನ್ನು ಸಮರಸ ಜೀವನಕ್ಕೆ ತಯಾರ ಮಾಡಲಿಕ್ಕೆ ಬೇಕು. ಶಿಕ್ಷಣದ, ಆಧ್ಯಾತ್ಮಿಕ ಚಳವಳಿಯ, ಸಂಕಾರದ, ಸಹಾಯಗಳಿಂದ ಸಾಮಾಜಿಕ ಕ್ರಾಂತಿಯನ್ನು ಮಾಡದಿದ್ದರೆ ಅಸ್ಪೃಶ್ಯತೆ ಎಂದೂ ಹೋಗಲಾರದು.

ಆಧ್ಯಾತ್ಮಿಕ ಕ್ರಾಂತಿಯು ಸಾಮಾಜಿಕ ಕ್ರಾಂತಿಯ ತಳಹದಿಯಾಗಿದ್ದರೆ ಭಾರತದಲ್ಲಿ ಸಾಮಾಜಿಕ ವಿಷಮತೆ ಬಲುಬೇಗ ನಾಶವಾಗಬಹುದು. ಸಾಮಾಜಿಕ ವಿಷಮತೆಗೆ ಮಾನಸಶಾಸ್ತ್ರವು ದಿವ್ಯವಾದ ಔಷಧವಾಗಿದೆ. ಈ ಮಾನಸ ಶಾಸ್ತ್ರದ ತತ್ವಗಳನ್ನು ವ್ಯವಹಾರದಲ್ಲಿ ಬೆಳಸಬೇಕಾದರೆ ಆಧ್ಯಾತ್ಮಿಕ ನೈತಿಕ ಶಕ್ತಿ ಬೇಕು.

---

# ವಿಶ್ವಧರ್ಮ.

## ಲೇಖಾಂಕ ೩.

( ಲೇ:- ಶ್ರೀಯುತ ಸಿ. ಸಾ. ಮಹಾಂತಣ್ಣವರ ಮು-ಧಾರವಾಡ. )

---

ವಿಶಾಲ ಹೃದಯರು ವಿಶ್ವವನ್ನು ವಿಸ್ತೃತ ದೃಷ್ಟಿಯಿಂದ ನಿರೀಕ್ಷಿಸಿ, ಸೂರ್ಯ ಚಂದ್ರ ನಕ್ಷತ್ರಗಳೂ, ಗ್ರಹಗಳೂ, ತೋರಿಕೆಯ ಆಕಾಶವೂ, ಗಿಡಮರಗಳ ಆಕಾರವೂ, ಪ್ರಾಣಿಗಳ ತಲೆಯೂ, ನೀರಿನ ಹನಿಯೂ, ಸಸಿಗಳ ಮುಗುಳೂ, ವೃಕ್ಷಗಳ ಹೀಚುಗಳೂ, ರಕ್ತದ ಕಣಗಳೂ, ಎಲ್ಲ ಸೃಷ್ಟ ಪದಾರ್ಥಗಳ ಅಣುವೂ ಗೋಲಾಕಾರವಾಗಿರುತ್ತವೆಂಬದನ್ನು ಕಂಡು ಹಿಡಿದಿದ್ದಾರೆ. ಇಷ್ಟೇ ಅಲ್ಲ, ಅಂಕಡೊಂಕಾದ ಕಲ್ಲುಗಳು ಸಹ ಪ್ರವಾಹದ ಹೊಡತದಿಂದ ಬೆನಕಗಳಾಗುವದನ್ನೂ ಗೋಲಾಕಾರವಾಗುವದನ್ನೂ ನೋಡಬಹುದು. ಶ್ರೀಶೈಲದ ಹತ್ತರ ಲಿಂಗದ ಹೊಳೆಯೆಂದು ಹೆಸರುಗೊಂಡ ನದಿಯ ಒಡಲಲ್ಲಿ ಕಲ್ಲುಗಳು ಬರೇ ಗೋಳಕಾಕಾರವಾದ ಲಿಂಗವೆಂಬ ಅಭಿಧಾನದಿಂದ ಸೃಷ್ಟಿಯ ಸ್ವಾಭಾವಿಕ ಆಕಾರವನ್ನು ವ್ಯಕ್ತಪಡಿಸುತ್ತವೆ. ಇದನ್ನರಿತು ವಿಶ್ವದ ತತ್ವಜ್ಞಾನಿಗಳು ವಿಶ್ವವನ್ನು ವ್ಯಾಪಿಸಿದ ವಿಶ್ವಾಂತರ್ಯಾಮಿಯು ವಿಶ್ವಾಕಾರವಾಗಿ ಅರ್ಥಾತ್ ಗೋಲರೂಪಾಗಿ ಅಂದರೆ ಲಿಂಗರೂಪಾಗಿ ಕಂಗೊಳಿಸುವನೆಂದು ಕಂಡುಹಿಡಿದಿದ್ದಾರೆ. ಅಂತೆಯೇ ಪುರಾತನ ಕಾಲದ ದೇವಾಲಯಗಳಲ್ಲಿಯೂ ಆಧುನಿಕ ಕಾಲದ ಗುಡಿಗಳಲ್ಲಿಯೂ ಭಾರತದ ಪ್ರತಿಯೊಂದು ಗ್ರಾಮದಲ್ಲಿಯೂ ಸಹ ಲಿಂಗಾಕಾರವನ್ನು ಅಂದರೆ ವಿಶ್ವಾಕಾರವನ್ನು ವ್ಯಕ್ತಗೊಳಿಸುವ ಶಿವಲಿಂಗಗಳು ಶೋಭಿಸುನವು. ಭರತಖಂಡದಲ್ಲಿ ದ್ವಾದಶ ಜ್ಯೋತಿರ್ಲಿಂಗಗಳು ಪ್ರಕಾಶಿಸುವದನ್ನೂ ಆ ಲಿಂಗಗಳ ಸ್ಮರಣೆಯು ಪ್ರತಿಯೊಬ್ಬ ಭಾರತೀಯನ ಹೃದಯ ಪಟದಲ್ಲಿ ನಿದ್ರೆಯಿಂದೆದ್ದ ಶಾಂತಕಾಲದಲ್ಲಿ ಪಠನವಾಗುವದೆಂಬದನ್ನೂ ಎಲ್ಲರೂ ಅರಿತ ಸಂಗತಿಯು.

ವಿಶ್ವದ ಸಮಷ್ಟಿ ರೂಪಾದ ಶಿವಲಿಂಗದ ಕಳೆಯು ಸಮಾಜದ ಎಲ್ಲ ಜನರಿಗೆ ಸಾಮಾನ್ಯವಾಗಿ ಗ್ರಾಮದ ಶಿವಾಲಯಗಳಿಂದ ಹೊಳೆದು,

ಸಮಾಜದ ಘಟಕಗಳಾದ ಪ್ರತಿಯೊಂದು ವ್ಯಕ್ತಿಯಲ್ಲಿ ಆ ಲಿಂಗವು ವ್ಯಷ್ಟಿ ರೂಪದಿಂದ ಇಷ್ಟಲಿಂಗವೆಂದೆನಿಸಿ ತನುವಿನಲ್ಲಿ ವ್ಯಾಪಕವಾಗಿದ್ದು ಅದರ ಕುರುಹು ಕರದಲ್ಲಿ, ಅರಹು ಪ್ರಾಣದಲ್ಲಿ, ಜ್ಞಾನವು ಭಾವದಲ್ಲಿ ಬಲಗೊಂಡು ಕುರುಹು ಅರಹು ಜ್ಞಾನಗಳು ಏಕರೂಪಾಗಿ ಇಷ್ಟಲಿಂಗ ( ಫಲಪದಗಳನ್ನೀಯುವ ಲಿಂಗ ) ವಾಗಿ ಮಾನವ ಜಾತಿಯ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಅವ್ಯಕ್ತವಾಗಿ ಇರುತ್ತವೆ. ಇಂಥ ಮಾನವ ಕುಲದ ಸುಖ ಸೌಭಾಗ್ಯವನ್ನು ನೀಡುವ ಇಷ್ಟಲಿಂಗವನ್ನು ಮಾನವನ ಹೃದಯದೊಳಗಿಂದ ಭಾವಕ್ಕೂ, ಭಾವದಿಂದ ಮನಕ್ಕೂ ಮನದಿಂದ ದೃಷ್ಟಿಗೂ ದೃಷ್ಟಿಯಿಂದ ಕರಸ್ಥಲಕ್ಕೂ ತಂದುಕೊಡುವ ಕಲೆಯನ್ನರಿತವರೇ ಕ್ರಿಯಾಮೂರ್ತಿಗಳು, ಅಥವಾ ಮಂತ್ರಮೂರ್ತಿಗಳು, ಅರ್ಥಾತ್ ದೀಕ್ಷಾಗುರುಗಳು. ಅಂದರೆ ಮಹೇಶ್ವರರು ಕೇವಲ ಭಕ್ತದೇಹಿಕದೇಹಿಗಳು. ಇವರು ವಿಶ್ವವ್ಯಾಪಿಯಾದ ನಿರಾಕಾರವಾದ ನಿರಂಜನ ಮೂರ್ತಿಯನ್ನು ಸಾಕಾರಗೊಳಿಸಿ, ವ್ಯಕ್ತಿಯ ಕರಕಮಲದಲ್ಲಿ ಕೊಡುವ ಬಗೆಯು ಹೇಗಿರಬಹುದು ? ಇದು ಅಶಕ್ಯವೆಂದು ಆಧುನಿಕ ವಿದ್ಯಾಧರರು ಊಹಿಸಬಹುದು. ಆದರೂ ಈ ವಿಷಯವಾಗಿ ಸ್ವಲ್ಪ ಮಟ್ಟಿಗೆ ವಿಚಾರಿಸುವಾ.

ಒಬ್ಬ ಹುಡುಗನಿಗೆ ಪಾದದಿಂದ ಮೊಳಕಾಲ ಪರಡೆಯ ವರೆಗೆ ಹುಣ್ಣು ಆಗಿದ್ದವು. ಆ ಹುಣ್ಣು ಹೋಗುವದಕ್ಕಾಗಿ ಆ ಹುಡುಗನ ತಂದೆಯು ಅನೇಕ ಡಾಕ್ಟರರಿಂದ ಔಷಧ ಇಂಜಕ್ಶನ್ ಕೊಡಿಸುತ್ತ ಮೂರು ನಾಲ್ಕು ವರ್ಷ ಒಂದೇ ಸವನೆ ರೋಗಿಯ ಉಪಚಾರ ಮಾಡಿದರೂ ಆ ಹುಣ್ಣು ರೋಗವು ವಾಸಿಯಾಗಲಿಲ್ಲ ಕಡೆಗೆ ಒಬ್ಬ ಹುಣ್ಣು ಕಳೆಯುವ ಒಬ್ಬ ಪ್ರಸಿದ್ಧ ಡಾಕ್ಟರರನ್ನು ಹುಡುಕಿ ಆತನ ಕಡೆಯಿಂದ ಹುಡುಗನ ಹುಣ್ಣಿನ ಚಿಕಿತ್ಸೆಯನ್ನು ಮಾಡಿಸಲು ಆ ಡಾಕ್ಟರನು ತನ್ನಲ್ಲಿರುವ ಪ್ರಕಾಶಕೊಡುವ ಗೋಲಿನಿಂದ ಆ ಹುಡುಗನ ಕಾಲಿನ ಮೇಲಿನ ಹುಣ್ಣಿಗೆ ಸಹಿಸುವಷ್ಟು ಪ್ರಕಾಶೋಷ್ಣತೆಯನ್ನು ಮೊದಲು ಕೊಟ್ಟನು. ಬಳಿಕ ಬರಿದಾದ ಇಂಜಕ್ಶನ ನಳಿಯಿಂದ ಹುಡುಗನಿಗೆ ನೋವಾಗದಂತೆ ಆತನ ರಟ್ಟೆಯೊಳಗೆ ಚುಚ್ಚಿ, ಮೈಯೊಳಗಿನ ರಕ್ತವನ್ನು ಹೀರಿ ಹೊರಗೆ ತೆಗೆದುಕೊಂಡು ಆ ರಕ್ತದಲ್ಲಿ ತನ್ನಲ್ಲಿರುವ ಔಷಧವನ್ನು ಬೆರೆಸಿ ಪುನಃ ಅದರಿಂದ ಹುಡುಗನಿಗೆ ಇಂಜಕ್ಶನ್ ಕೊಟ್ಟನು. ಹೀಗೆ ಪ್ರತಿದಿನಕ್ಕೊಮ್ಮೆ ಮೂರುವಾರ

ಮಾಡುವಷ್ಟರಲ್ಲಿ ಆ ಹುಡುಗನಲ್ಲಿ ನೆಲೆಗೊಂಡ ಹುಣ್ಣುರೋಗವು ವಾಸಿಯಾಯಿತು.

ಪಾರಮಾರ್ಥಿಕ ವಿಷಯದಲ್ಲಿ ಶಿಷ್ಯನ ಪರಿಪಕ್ವ ಕಾಲವರಿತು ಸದ್ಗುರುವು ಈ ಸತ್ಕ್ರಿಯೆಯ ಕಲೆಯನ್ನು ಕರತಳಾಮಳಕ ಮಾಡುವದು ಜಾಣತನವು. ಅಂತೆಯೇ ಶ್ರೀ ದೇವರದಾಸಿಮಾರ್ಯರು " ಸಣ್ಣನನೆಯೊಳಗಣ ಪರಿಮಳವ ಹೊರಸೂಸಿ ಇದಿರಿಂಗರುಹಿಸಬಲ್ಲುದೆ ವಾಯು ? ಕೊಡಗೂಸಿನೊಳಗಣ ಮೊಲೆಮುಡಿಯ ಹಡೆದ ತಾಯಿತಂದೆಗಳೆಂದರೆ ಕಾಣಿಸಿ ಕೊಡಬಲ್ಲರೆ ಕಾಂಬವರ ಕಣ್ಣಿಗೆ ? ಪಕ್ವಕ್ಕಲ್ಲದೆ ಪರಿಣಾಮದೋರದು ರಾಮನಾಥಾ " ಎಂದು ಅರುಹಿದ್ದಾರೆ. ಇದನ್ನರಿತು ದೀಕ್ಷಾಗುರುವು ಪ್ರಫುಲ್ಲಿತವಾದ ಪುಷ್ಪದೊಳಗಿನ ಮಕರಂದ ರಸವನ್ನು ಜೇನ್ನೊಣವು ದೇವರು ಪಾಲಿಸಿದ ತನ್ನ ಸೂಕ್ಷ್ಮ ನಾಲಿಗೆಯ ಸಹಾಯದಿಂದ ಪುಷ್ಪಕ್ಕೆ ಧಕ್ಕೆಯಾಗದಂತೆ ಹೀರಿ ಹೊರಸೂಸುವಂತೆ, ಆ ಕಳದ ಕೆಚ್ಚಲೊಳಗಿನ ಹಾಲನ್ನು ತನ್ನ ಕರುಣಾರಸದ ಮೂರ್ತಿಯಾದ ಕರುವು ಹೀರುವಂತೆ, ಶಿಷ್ಯನ ದೃಷ್ಟಿಯೂ ಗುರು ದೃಷ್ಟಿಯೂ ಏಕಾಕಾರವಾಗಿ, ನೋಟವೇ ಕೂಟವಾಗಿ ಕೂಟವೇ ಪ್ರಾಣವಾಗಿ ಪ್ರಾಣವೇ ಏಕಾಗಿ ಏಕವೇ ಸಮರಸವಾಗಿ ಸಮರಸವೇ ಲಿಂಗವಾಗಿ ಹಸ್ತಮಸ್ತಕ ಸಂಯೋಗದಿಂದ ಭಾವ ಮನ ದೃಷ್ಟಿ ಮಾರ್ಗವಾಗಿ ಕರಸ್ಥಲಕ್ಕೆ ಏಕೆ ಬರಬಾರದು? ಇದು ಸೃಷ್ಟಿಯ ಕಾರ್ಯಕ್ಕೆ ವಿರುದ್ಧವಾದ ಆಚರಣೆಯಾಗದೆ ಶಿವಾಚಾರದ ಸತ್ಕ್ರಿಯೆಯ ಸಮ್ಯಜ್ಞಾನದ ಅಸಾಧ್ಯ ಸಾಧ್ಯದ ಅಭೇದ್ಯ ಭೇದಕದ ವಿಶ್ವಧರ್ಮದ ವಿಶ್ವನಾಥನ ವಿಶ್ವಶಕ್ತಿಯ ಗೋಪ್ಯವಾದ ಗೂಢವಾದ ಅಗಮ್ಯವಾದ ನಿರಾಕಾರ ಪರತತ್ವವನ್ನು ಕರಸ್ಥಲದಲ್ಲಿ ತಂದುಕೊಡುವ ಅರ್ಥಾತ್ ಶಿವತತ್ವವನ್ನು ಭೂಮಿಯೊಳು ಬಿತ್ತುವ ವಿಶ್ವಾರಾಧ್ಯರ ವಿಶ್ವ ಕುಟುಂಬಿಗಳ ಶಿವಶರಣರ ಕರುಣಾ ರಸದ ಮಹಿಮಾಚಾರವು. ಇದನ್ನರಿತ ದೇವರ ದಾಸಿಮಾರ್ಯರು " ಹೂವಿನೊಳಗಣ ಕಂಪ ಹೊರಸೂಸಿ ಸುಳಿವ ಅನಿಲನಂತೆ ಅಮೃತದೊಳಗಣ ರುಚಿಯ ನಾಲಿಗೆಯ ತುದಿಯಲ್ಲಿ ಅರಿವನ ಚೇತನದಂತೆ, ನಿಲವಿಲ್ಲದ ರೂಪ ಕಳೆಯಲ್ಲಿ ವೇಧಿಸುವವನ ಪರಿ ರಾಮನಾಥಾ" ಎಂದು ತಮ್ಮ ಸ್ವಾನುಭಾವವನ್ನು ಸ್ಪಷ್ಟಗೊಳಿಸಿದ್ದಾರೆ

ಈ ಇಷ್ಟಲಿಂಗ ಸಂಬಂಧವು ತಾಯಿಯ ಗರ್ಭದಲ್ಲಿರುವ ಶಿಶುವಿಗೆ ವೇಧಿಸುವಂತೆ, ತಾಯಿಯ ಗರ್ಭಕ್ಕೂ ತೊಟ್ಟಿಲಲ್ಲಿರುವ ಶಿಶುವಿಗೆ

ಪಸರಿಸುವಂತೆ ತೊಟ್ಟಿಲಕ್ಕೂ ಅಂಬೆಗಾಲಿಕ್ಕಿ ಹರಿದಾಡುವ ಶಿಶುವಿಗೆ ಕೊರಳಿಗೂ ಕದಲದಂತೆ ಕಟ್ಟುವದರಿಂದ ಪರುಷ ಮುಟ್ಟಲು ಲೋಹ ಹೊನ್ನಾಗುವಂತೆ, ಸೂಜಿಗಲ್ಲಿನ ಸನ್ನಿಧಾನದಿಂದ ಕಬ್ಬಿಣವು ಸೂಜಿಗಲ್ಲಾಗುವಂತೆ, ಆ ಶಿಶುವು ಲಿಂಗಾಯತನಾಗಿ ಲಿಂಗಸಂಗಿಯಾಗಿ ಲಿಂಗ ಕುಟುಂಬಿಯಾಗಿ ಬಾಳುವದು. ಈ ಕೂಸು ಹುದುಗಿನೊಳಗಿಂದ ಹೊರ ಬೀಳುವಂತೆ, ಎಂಟು ವರ್ಷದ ಹುಡುಗರಾದ ಬಳಿಕ ಲಿಂಗವನ್ನು ಸಜ್ಜೆಯದಿಂದ ಹೊರಹೊಮ್ಮಿಸಿ ಲಿಂಗಪೂಜಾ ವಿಧಾನ ಕ್ರಮವು ಕಲಿಸಲಾರಂಭಿಸಲ್ಪಡುತ್ತದೆ. ವೀರಶೈವರು ಮಗುವಿಗೆ ೮ ನೇ ವರ್ಷಕ್ಕೆ ಮಾಡುವ ದೀಕ್ಷೆಯೇ ಕ್ರಿಯ್ಯಾಚಾರವು. ಅಯ್ಯ ಈ ಶಬ್ದವು ವಿಶ್ವವ್ಯಾಪಕವಾದದ್ದು. ಮಗನಿಗೆ ತಂದೆಯಂತೆ, ವಿಶ್ವಕ್ಕೆ ಅಪ್ಪನಾಗಿ ಜೀವಿಸುವ(ಆಚರಿಸುವ) ಲಿಂಗಸೂತ್ರವಿದು.

ಎಂಟು ವರ್ಷದ ವಿದ್ಯಾರ್ಥಿಯು ತಾಯಿ ತಂದೆಗಳೆಂಬ ಶಿಕ್ಷಕ ಗುರುಗಳಿಂದಲೂ ವಿರಶೈವೋಪದೇಶ ಮಾಡಿದ ದೀಕ್ಷಾಗುರುಗಳಿಂದಲೂ ಲೌಕಿಕ ಧಾರ್ಮಿಕ ಶಿಕ್ಷಣಪಡೆಯುತ್ತ ಪ್ರೌಢನಾಗಿ ಕಾಯಕವ ಕೈಕೊಂಡು ಭಕ್ತಿಶಕ್ತಿಯ ಕೈವಿಡಿದು, ಲೌಕಿಕ ಪಾರಮಾರ್ಥಿಕ ಪ್ರಪಂಚವನೆಸಗುತ್ತಿರಲು ಗುರುವಿನ ಗುರುವಾದ ಮೋಕ್ಷಾಗುರುವು ದಂಪತಿಗಳ ಆಚಾರಕ್ಕೂ ಭಕ್ತಿಗೂ ಒಲಿದು ಪ್ರಾಣಲಿಂಗಾನುಸಂಧಾನವ ಮಾಡುವ ಅನುವನ್ನು ಅನುಗ್ರಹಿಸುವನು. ಮೇಲೆ ವಿವರಿಸಿದ ಇಷ್ಟಲಿಂಗವನೊಳಕೊಂಡ ಪ್ರಾಣಲಿಂಗಾನು ಸಂಧಾನವು ಹೆಚ್ಚು ಸೂಕ್ಷ್ಮವಾದದ್ದು. ತನುವಿನೊಳಗಾದ ಇಷ್ಟಲಿಂಗ, ಮನದೊಳಗಾದ ಪ್ರಾಣಲಿಂಗ, ಧನದೋಪಾದಿಯಾದ ಭಾವದೊಳು ಬೆರೆಸಿರ್ದ ಭಾವಲಿಂಗದ ಪರಿಯನ್ನು ಅರುಹಲು ಜಡದೇಹಿಗಳಿಗಸಾಧ್ಯ. ಅಂತೆಯೇ ಪ್ರಾಣಲಿಂಗವನ್ನು ಕುರಿತು ದಾಸಿಮಾರ್ಯರು "ಎಣ್ಣೆ ಇದ್ದು ಎಳ್ಳು ನೆನೆಯದ ಭೇದವ, ಕಾಮವಿರ್ದು ಕನ್ನೆಯನನುಭವಿಸದ ಭೇದವ, ಪರವಿದ್ದು ಪ್ರಾಣನ ಪ್ರಕೃತಿಯು ಹರಿಯದ ಭೇದವ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ" ಎಂದು ಹಾಡಿಕೊಂಡಿದ್ದಾರೆ. ಮತ್ತು ಕರಸ್ಥಲದ ಲಿಂಗವನ್ನು ಕುರಿತು ತಮ್ಮ ಸ್ವಾನುಭಾವದಿಂದ ಶಿಷ್ಯನಲ್ಲಿ ಅಡಗಿರ್ದ ಪರವಸ್ತುವನು ಹುದುಗಿಸಿ ಹೊರಪಡಿಸುವ ಕ್ರಮದಲ್ಲಿ "ಹಸ್ತಾಬ್ಜಮಥನದಿಂದೊತ್ತಿಭಸ್ಮವನೆ ಮಾಡಿ ಚಿತ್ರ

ಶ್ರೋತ್ರದೊಳು ಪಂಚಾಕ್ಷರಿಯ ಮರುಜೀವಣಿಯ ಧಾರೆಯನೆರೆಯಲು ಆತ ನಿನ್ನಂತೆ ಕಾಣಾ ರಾಮನಾಥಾ" ಎಂಬ ವಚನಾಮೃತವ ಸುರಿಸು ವಲ್ಲಿ ಇಷ್ಟಲಿಂಗದೊಳಗಡಕವಾದ ಪ್ರಾಣಲಿಂಗದ ಕಳೆಯೂ ಪ್ರಭಾವಿಸುವದು. ಹಾಗು ಪರಮ ಗುರುಗಳಾದ, ಪರಮಾರಾಧ್ಯರಾದ ಜಂಗಮ ಲಿಂಗಾನುಭಾವಿಗಳಾದ ಶ್ರೀ ಸ್ವಾಮಿಗಳು ಪ್ರಸನ್ನರಾಗಿ ಶಿಷ್ಯನ ಯೋಗ್ಯತೆಯನ್ನೂ ಆತನ ಆಚರಣೆಯಲ್ಲಿ ಭಕ್ತ ಮಾಹೇಶ್ವರ ಸ್ಥಲಗಳು ಅಳವಟ್ಟಿದ್ದನ್ನೂ ತಿಳಗೊಂಡು ಪ್ರಸಾದವೇ ಪ್ರಾಣ, ಪ್ರಸಾದವೇ ಜ್ಞಾನ, ಪ್ರಸಾದವೇ ಧ್ಯಾನ, ಪ್ರಸಾದವೇ ಗುರು, ಪ್ರಸಾದವೇ ಲಿಂಗ, ಪ್ರಸಾದವೇ ಜಂಗಮ, ಪ್ರಸಾದವೇ ಪರಾತ್ಪರ, ಪ್ರಸಾದವೇ ಪರಿಪೂರ್ಣವೆಂಬದನ್ನು ಅಳವಡಿಸುವ ಪ್ರಸಾದಿಸ್ಥಳದ ಮಹಾತ್ಮೆಯನ್ನು ವಿವರಿಸಿ ಪ್ರಸನ್ನ ಪ್ರಸಾದವ ಕರುಣಿಸುವರು.

ಪ್ರಸಾದದ ವಿಷಯವಾಗಿ ದಾಸಿಮಾರ್ಯರು "ಮಹಾಘನವಪ ಬೋನವನು ಒಂದನುವಿನ ಪರಿಯಾಣದಲ್ಲಿ ಹಿಡಿದು, ಗುರುಲಿಂಗಕ್ಕೋಳಗಾದ ಲಿಂಗವ ಆರೋಗಿಸಿದಲ್ಲದೆ ಮಿಕ್ಕುದು ಪ್ರಸಾದವೇ? ಅಲ್ಲಲ್ಲ! ಮಹಾಘನವಪ್ಪ ಲಿಂಗವನೊಂದನುವಿನಲ್ಲಿ ತಂದಿರಿಸಿದಾತನ ಮನವೇ ಪ್ರಸಾದ ಕಾಣಾ ರಾಮನಾಥಾ" ಎಂದು ಪ್ರಸಾದದ ಅಂತರ್ಜ್ಞಾನವನ್ನು ಬಹಿಃಕ್ರಿಯೆಗಳೊಂದಿಗೆ ಪ್ರಸಾದಿಗಳಿಗೆ ತಿಳಿಯುವಂತೆ ಹೊಳೆಯುವಂತೆ ಉಳಿಯುವಂತೆ ಉಗ್ಗಡಿಸಿದ್ದಾರೆ. ಇದರಂತೆ ಪ್ರಾಣಲಿಂಗಿಸ್ಥಳದಲ್ಲಿ "ಪ್ರಾಣನ ಕಳೆ ಪ್ರಕೃತಿಯಲ್ಲಡಗಿ, ಪ್ರಕೃತಿಯ ಕಳೆ ಪ್ರಾಣದಲ್ಲಿ ಅಡಗಿ ಪ್ರಾಣನ ಕಳೆಯು ಪ್ರಕೃತಿಯ ಕಳೆಯು ಲಿಂಗವೆಂದರಿದು ಲಿಂಗೈಸಿ ಅನುಭವಿಸಬಲ್ಲವರ ಲೆಂಕ ನಾನಾಗಿಪ್ಪೆನಯ್ಯಾ ರಾಮನಾಥಾ" ಎಂದು ಪ್ರಾಣಲಿಂಗಾನುಭವವನ್ನು ಪ್ರಸಿದ್ಧಿಸಿದ್ದಾರೆ. ಮತ್ತು ಶರಣ ಸ್ಥಲದಲ್ಲಿ "ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು, ಹೊಂದಿಯೂ ಹೊಂದಿರ್ದ ಭೇದವನು, ಲೋಕದ ಸಂದೇಹಿಗಳೆತ್ತಬಲ್ಲರೈ ರಾಮನಾಥಾ" ಎಂದು ಲಿಂಗಾಂಗ ಸಾಮರಸ್ಯಜ್ಞಾನವನ್ನು ಉಸುರಿದ್ದಾರೆ. ಹಾಗು ಐಕ್ಯಸ್ಥಳದಲ್ಲಿ "ಆದಿ ಅರರ ಭೇದ ತನುಗುಣವ ಮೂವತ್ತಾರುವ ಮೀರಿ, ತೋರದುದ ತೋರಿ, ಮತ್ತೆ ಆರೂಢನೆಂದರೆ ಮೇಲೆ ನಿನ್ನಿಚ್ಛೆ ಕಾಣಾ ರಾಮನಾಥಾ" ಎಂಬದಾಗಿ ಅಂಗ

ಲಿಂಗ ಸ್ಥಳಕುಳನ್ನರುಹುತ್ತ ಕಡೆಯದಾದ ಜ್ಞಾನಶೂನ್ಯ ಸ್ಥಳವನ್ನು ವ್ಯಕ್ತ ಪಡಿಸಿದ್ಧಾರೆ. ಈ ಅಂಗಲಿಂಗ ಜ್ಞಾನವು ಅಥವಾ ಸ್ಥಳಕುಳಜ್ಞಾನವು ಪ್ರತಿಯೊಬ್ಬ ವಿಶ್ವಧರ್ಮಿಯಾದ ವೀರಶೈವನ ಅವಗಾಹನೆಯೊಳು ಅನುಗಾಲ ಉಳಿದು ಆಚರಣೆಯೊಳು ಆಗಮಿಸಲೆಂದು ಒಬ್ಬ ಶಿವಶರಣರು ವಿವರಿಸಿದ್ದೇನಂದರೆ :—

ಪ್ರರಬ್ರಹ್ಮ ಅನಾದಿವಸ್ತುವೇ ಅನಿರ್ವಾಚ್ಯಮಪ್ಪ ಮಹಾಶೂನ್ಯವಸ್ಥೆದಿ ಅನಂದದಿಂ ಸಹಜವಸ್ತುವಾಗಿರ್ದ ನಿಮ್ನ ಮಹಾತ್ಮೆಯು ಅನಿರ್ವಾಚ್ಯದಿಂ ಸ್ವಯಂಭು ಮೂರ್ತಿಯಾಗಿ ನಿಂದುದು. ಇಂತೀ ಸ್ವಯಂಭೂಮೂರ್ತಿಯು ಪಂಚಮುಖಗಳಿಂ ಪಂಚಭೂತಂಗಳಾಗಿರ್ದುದು. ಆ ಪಂಚಭೂತಂಗಳಿಂದವೇ ಪಂಚಭೌತಿಕ ತತ್ವವಾಗಿ ಮಾಯಾಂಶ ಲೀಲಾವಿಲಾಸ ಶರೀರವಾಗಲು ಈ ಲೀಲಾವತಾರವೆಂತಾಯಿತ್ತೆಂದರೆ —

ಆ ಲೀಲಾವಿಲಾಸದ ನಾದಶಕ್ತಿಯೇ ಅಂಗವಾಗಿ, ಆ ಅಂಗದಲ್ಲಿ ಮೋಹನ ವಿಲಾಸ ಬಿಂದುವೇ ಜೀವವಾಗಿ, ಆನಂದ ಪ್ರಕಾಶ ಮರವೆಯೇ ಆತ್ಮಹೇತುವಾಗಿ, ನಿಂದ ಮಾಯೆ ಮತ್ತು ಚಿತ್‌ಶಕ್ತಿಕೂಡಿದಲ್ಲಿ ಆತ್ಮನಾಗಿ ಭೌತಿಕತತ್ವದಲ್ಲಿ ಬೆರೆದು ಮರಹು ತಲೆದೋರಿ, ಪಾಶಬಂಧತ್ವದಿಂ ಜೀವನೆನಿಸಿ ಅಜ್ಞಾನ ಸಂಬಂಧವಾಗಿ ಮಾಯಾಶರೀರವಾದಲ್ಲಿ ಉತ್ಪತ್ತಿ, ಸ್ಥಿತಿ, ಲಯ, ವ್ಯಾಪ್ಯ ಉಂಟಾದ ಆತ್ಮಂಗೆ ಆ ಪರಬ್ರಹ್ಮವು ತಾನೇ ಶ್ರೀಗುರುವಾಗಿ ಬಂದು ತನ್ನಂಶವಾದ ಆತ್ಮಂಗೆ ನಿಜಾವಯುವ ಸೃಜಿಸಲಾಗಿ ಆತ್ಮನು ತನ್ನ ಮರೆದು ನಿಜಾನಂದ ಸುಖದಲ್ಲಿ ತನ್ನ ಸಂಬಂಧವಪ್ಪ ಕಾಯ ಜೀವ ಆತ್ಮಪ್ರಾಣ ಮನಂಗಳಿಗೆ ಆಶ್ರಯವಾದ ಪಂಚತತ್ವಾಂಗಮಂ ಸಹಜದಲ್ಲಿ ಸಂಬಂಧ ಮಾಡಿದ ಪರಿ ಎಂತೆಂಬೊಡೆ;

ಪ್ರಥ್ವಿ, ಆಪ್, ತೇಜ, ವಾಯು, ಆಕಾಶ, ಆತ್ಮ ಎಂಬೀ ಷಡ್ಭೂತಂಗಳ ಸಂಬಂಧದಿಂದ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ವಿಷಯೇಂದ್ರಿಯ, ಪವನೇಂದ್ರಿಯ, ಕರಣೇಂದ್ರಿಯಂಗಳೇ ಸ್ಥಳಕುಳಂಗಳಾಗಿ, ಸ್ಥಳವಾರು, ಅಂಗವಾರು, ಲಿಂಗವಾರು, ಅಂಗಲಿಂಗದ್ವಯೋರೈಕ್ಯತ್ವದಿಂ, ಮಂತ್ರವಾಗಿ, ಆ ಮಂತ್ರವೇ ಷಟ್‌ಸ್ಥಲ ಬ್ರಹ್ಮಮೂರ್ತಿಯು ಸಹಜಾನಂದ ವಸ್ತುವೇ ತಾನಾದ ಲೀಲೆ ಎಂತೆಂದೊಡೆ.

ಪೃಥ್ವಿಯಲ್ಲಿ ಕಠಿಣಗುಣ, ಅಪ್ಪುವಿನಲ್ಲಿ ಮೃದುಗುಣ, ಅಗ್ನಿಯಲ್ಲಿ ಉಷ್ಣಗುಣ, ವಾಯುವಿನಲ್ಲಿ ಸ್ಪರ್ಶಗುಣ, ಆಕಾಶವಲ್ಲಿ ಸಂಚಲಗುಣ, ಆತ್ಮನಲ್ಲಿ ಮರಹುಗುಣ, ಇಂತೀ ಷಡ್ಭೂತಂಗಳು ಅಂಗದಲ್ಲಿ ಸಂಬಂಧವೆಂತೆಂದೊಡೆ, ಪೃಥ್ವಿಯಲ್ಲಿ ಕಠಿಣಗುಣ ಸ್ಥೂಲಕಾಯದ ಕರ್ಮೇಂದ್ರಿಯಂಗಳಲ್ಲಿ ತಿಳಿದು, ಅಪ್ಪುವಿನಲ್ಲಿ ಮೃದುಗುಣ ಸೂಕ್ಷ್ಮಜೀವದ ಜ್ಞಾನೇಂದ್ರಿಯಂಗಳಲ್ಲಿ ತಿಳಿದು, ಅಗ್ನಿಯಲ್ಲಿ ಉಷ್ಣಗುಣ ಕಾರಣಾತ್ಮನ ವಿಷಯೇಂದ್ರಿಯಂಗಳಲ್ಲಿ ತಿಳಿದು, ವಾಯುವಿನಲ್ಲಿ ಸ್ಪರ್ಶಗುಣ ಜಾಗ್ರತ್‌ಪ್ರಾಣ ಪವನೇಂದ್ರಿಯಂಗಳಲ್ಲಿ ತಿಳಿದು, ಆಕಾಶವಲ್ಲಿ ಸಂಚಲಗುಣ ಸ್ವಪ್ನದ ಮನ ಕರಣೇಂದ್ರಿಯಂಗಳಲ್ಲಿ ತಿಳಿದು, ಆತ್ಮನಲ್ಲಿ ಮರಹುಗುಣ ಸುಷುಪ್ತಿಯ ಜ್ಞಾನದ ವಿವೇಕದಲ್ಲಿ ತಿಳಿದು, ವಾಕ್, ಪಾಣಿ, ಪಾದ, ಗುದ, ಗುಹ್ಯವೆಂದು ಸ್ಥೂಲಕಾಯಾವಸ್ಥೆಯ ಕರ್ಮೇಂದ್ರಿಯಗಳ ಕಠಿಣಗುಣ ತಿಳಿದು ಕಾಮ ಕರ್ಮನಾಸ್ತಿಯಾಗಿ ಭೃತ್ಯಭಕ್ತಿಯೆಂಬ ಧರ್ಮವ ನೆಲೆಗೊಳಿಸಿದಲ್ಲಿ ಭಕ್ತಸ್ಥಲ. ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣವೆಂಬ ಸೂಕ್ಷ್ಮಜೀವಾವಸ್ಥೆಯ ಜ್ಞಾನೇಂದ್ರಿಯಂಗಳ ಮೃದುಗುಣವಳಿದು ಕ್ರೋಧ ಕರ್ಮನಾಸ್ತಿಯಾಗಿ, ನಿಷ್ಠಾಭಕ್ತಿಯೆಂಬ ಧರ್ಮವ ನೆಲೆಗೊಳಿಸಿದಲ್ಲಿ ಮಾಹೇಶ್ವರಸ್ಥಲ. ಶಬ್ದ, ಸ್ಪರ್ಶ, ರೂಪ, ರುಚಿ, ಗಂಧಗಳೆಂಬ ಕಾರಣಾತ್ಮಾವಸ್ಥೆಯ ವಿಷಯೇಂದ್ರಿಯಂಗಳ ದಹನಗುಣವಳಿದು, ಲೋಭಕರ್ಮನಾಸ್ತಿಯಾಗಿ. ವಿಶ್ವಾಸ ಭಕ್ತಿಯೆಂಬ ಧರ್ಮವ ನೆಲೆಗೊಳಿಸಿದಲ್ಲಿ ಪ್ರಸಾದಿಸ್ಥಲ. ಪ್ರಾಣ, ಅಪಾನ, ಸಮಾನ ವ್ಯಾನ ಉದಾನಗಳೆಂಬ ಜಾಗ್ರಾವಸ್ಥೆಯ ಪವನೇಂದ್ರಿಯಂಗಳ ಸ್ಪರ್ಶನ ಗುಣವಳಿದು ಮೋಹಕರ್ಮನಾಸ್ತಿಯಾಗಿ ನಿರ್ಮಲ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಪ್ರಾಣಲಿಂಗಿ ಸ್ಥಲ. ಜ್ಞಾನ, ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಮನಾವಸ್ಥೆಯ ಕರಣೇಂದ್ರಿಯಂಗಳ ಸಂಚಲಗುಣವಳಿದು ಮದಕರ್ಮ ನಾಸ್ತಿಯಾಗಿ ಆನಂದ ಭಕಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಶರಣಸ್ಥಲ. ಅಷ್ಟಾತ್ಮಂಗಳ ಮರಹುಗುಣವೆಂಬ ಸುಷುಪ್ತಾವಸ್ಥೆಯ ಅಜ್ಞಾನದ ಅಂಧಕಾರದ ಪ್ರಪಂಚುಗುಣವಳಿದು ಮತ್ಸರ ಕರ್ಮ ನಾಸ್ತಿಯಾಗಿ ಸಮರಸ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಐಕ್ಯಸ್ಥಲ. ಇಂತೀ ಷಡ್ಭೂತಂಗಳ ಗುಣ ಕರ್ಮಧರ್ಮಂಗಳೇ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ವಿಷಯೇಂದ್ರಿಯ ಪವನೇಂದ್ರಿಯ, ಕರಣೇಂದ್ರಿಯಂಗಳಲ್ಲಿ ತಿಳಿದು, ಅರುಹು ತಲೆದೋರಿದವುಗಳಾದ ಆರು ಸ್ಥಲವೇ ಅಂಗವಾಗಿ.

ಮತ್ತು ಅಮಂಗಲ, ಪರದಾರ, ದುರ್ಮಾರ್ಗ, ಸ್ತ್ರೀಯಾಲಿಂಗನ, ನಿಂದೆ ಇಂತೀ ದುಷ್ಕ್ರಿಯೆಯ ಕುಚಿತ್ತವಳಿದು, ಶೌಚಶುದ್ಧಿ, ಸ್ವಸ್ತ್ರೀ ಗಮನ, ಗುರುಮಾರ್ಗ, ಲಿಂಗಧಾರಣ, ಪಂಚಾಕ್ಷರೀಪಠಣ, ಇಂತೀ ಸತ್ಕ್ರಿಯೆಯಲ್ಲಿ ಚಿತ್ತವ ನೆಲೆಗೊಳಿಸಿ ನಿಂದುದೇ ಆಚಾರಲಿಂಗ. ದುರ್ವಾಸ. ನಾಪೇಕ್ಷೆ, ಪರಪಾಕ ಭಕ್ಷಣ, ಭವಿನಿರೀಕ್ಷಣ, ಸ್ಥಾವರ ಮೂರ್ತಿಪೂಜಾ ಸ್ಪರ್ಶನ, ಅನ್ಯ ದೈವಮತ ಪುರಾಣ ಶ್ರವಣ, ಇಂತೀ ಅಜ್ಞಾನದ ಕುಬುದ್ಧಿ ಯಳಿದು, ಇಷ್ಟಲಿಂಗ ನಿರ್ಮಾಲ್ಯಗಂಧ ಸುವಾಸನೆ, ಚರಪ್ರಸಾದಭಕ್ಷಣ ಸಜ್ಜನ ಭಕ್ತನಿರೀಕ್ಷಣ, ಗುರುಪಾದ ಪೂಜಾಸ್ಪರ್ಶನ, ಶಿವಾಗಮ ಶ್ರವಣ, ಇಂತೀ ಸುಜ್ಞಾನದಲ್ಲಿ ಸುಬುದ್ಧಿಯ ನೆಲೆಗೊಳಿಸಿ ನಿಂದುದೇ ಗುರುಲಿಂಗ. ಚಂದ್ರನಾಗರ, ಕರ್ಪೂರ, ಮೃಗನಾಭಿಪತ್ರ ಪುಷ್ಪಾದಿ ಫಲಂಗಳ ನಾನಾ ದಿವ್ಯ ಗಂಧ ಪರಿಮಳಗಳಿಂದ ನಾಸಿಕ ಲಂಪಟ, ಭಕ್ಷ್ಯ-ಭಕ್ಷ್ಯಾದಿ ಷಡ್ರುಚಿ ಗಳು ಹಾಗು ಅದರ ಪಾನಾದಿ ರುಚಿಗಳ ಜಿಹ್ವಾಲಂಪಟ; ನಾಟ್ಯ, ಚಿತ್ರಾ ಭರಣ, ವರ್ಣಾದಿ ರೂಪುಗಳ ನೇತ್ರಲಂಪಟ; ವೀಣಾ ಮೃದಂಗದೇಹ ಸ್ಪರ್ಶನಾದಿ ಸ್ಪರ್ಶನತ್ವ, ಗೀತ ಹಾಸ್ಯರಸ ಪ್ರಸಂಗರಾಗಾದಿ ವಚನಶ್ರೋತ್ರ ಲಂಪಟ, ಇಂತೀ ಅಹಂಕಾರದಿಚ್ಛೆಯಂ ಬಿಟ್ಟು, ಗುರುನಿರ್ಮಾಲ್ಯಗಂಧ ಸುವಾಸನಾವಿಷಯ, ತೀರ್ಥಪ್ರಸಾದವೇ ರುಚಿವಿಷಯ, ಪಂಚಪ್ರಣಮಪಂಚ ಬೀಜ ರೂಪುವಿಷಯ, ತ್ರಿವಿಧಪ್ರಸಾದವೇ ಸ್ಪರ್ಶನವಿಷಯ, ಪ್ರಣವನಾದವೇ ಶಬ್ದವಿಷಯ, ಇಂತೀ ನಿರಹಂಕಾರದ ಶಿವೇಚ್ಛೆಯಿಂ ನೆಲೆಗೊಳಿಸಿ ನಿಂದುದೇ ಶಿವಲಿಂಗ. ಸ್ವಗೃಹ ಸ್ವದೇಶ ಸ್ವಕ್ಷೇತ್ರಂಗಳಿಂದವೇ ಪ್ರಾಣವಾಯುವಾಗಿ, ಸಂಚಿತವ ಮಾಳ್ಪ ಸಾಧನಾಭಿಮಾನಪದ ರೇಷಣ ಪುತ್ರೇಷಣ ಮಿತ್ರೇ ಷಣ ತ್ರಯಂ ಳೇ ಅಪಾನವಾಯುವಗಿ, ಸಂಚಿತವ ಮಾಳ್ಪ ಸಾಧನಾ ಭಿಮಾನಮಂ ಧನಕನಕ ವಸ್ತ್ರಾಭರಣಂಗಳ ವ್ಯಾನವಾಯುವಾಗಿ, ಸಂಚಿತವ ಮಾಳ್ಪ ಸಾಧನಾಭಿಮಾನಮಂ ಜಾಗ್ರತ್ ಸ್ವಪ್ನ ಸುಷುಪ್ತಿ ತುರೀಯಂಗಳ ಸಮಾನವಾಯುವಾಗಿ, ಇಂತೀ ವಾಯು ವ್ಯಾಕುಲ ಮನೋವ್ಯಾಧಿಗಳ ಬಿಟ್ಟು ಶ್ರೀಗುರುವಿನಲ್ಲಿ ಪ್ರಾಣಾಭಿಮಾನಮಂ ನಿಲ್ಲಿಸಿ, ಷಡುಲಿಂಗಂಗ ಳಲ್ಲಿ ಅಪಾನ ವಾಯುವಭಿಮಾನಮಂ ನಿಲ್ಲಿಸಿ ಭಕ್ತಜಂಗಮದಲ್ಲಿ ವಾಯುವಭಿ ಮಾನಮಂ ನಿಲ್ಲಿಸಿ ಇಷ್ಟ ಪ್ರಾಣಭ ವಂಗಳಲ್ಲಿ ಉದಾನ ವಾಯುವಾಭಿ ಮಾನಮಂ ನಿಲ್ಲಿಸಿ, ಮಂತ್ರ ಧ್ಯಾನತೂರ್ಯಂಗಳಲ್ಲಿ ಸಮಾನವಾಯುವಭಿ ಮಾನಮಂ ನಿಲ್ಲಿಸಿ ಇಂತೀ ಆದಿಮೂಲಸ್ಥಾನದಿಂ ಸುಮನವ ನೆಲೆಗೊಳಿಸಿ ನಿಂದುದೇ ಜಂಗಮಲಿಂಗ.

ಯಮನಿಯಮ ಅಷ್ಟಾಂಗ ಯೋಗಂಗಳ ಅಂಗ ಸಾಧನ ತನುಸಂಚಲವಹ ಹವ್ಮಿನ ಮತ್ತತ್ವಮಂ ಬಿಟ್ಟು, ಚತುರ್ಮುದ್ರಾಂಗ ಲಕ್ಷಣ ಜೀವ ಮನ ಸಂಚಲ ಹವ್ಮಿನ ಮತ್ತತ್ವಮಂ ಬಿಟ್ಟು, ಅಣಿಮಾದ್ಯಷ್ಟ ಸಿದ್ಧಿಗಳಿಂದಾತ್ಮ ಬುದ್ಧಿಹೀನತ್ವದ ಸಂಚಲದ ಹವ್ಮಿನ ಮತ್ತತ್ವಮಂ ಬಿಟ್ಟು, ವಾಯು ಯೋಗ, ಮನಯೋಗ, ಲಯಯೋಗಂಗಳ ತಸ್ಕರ ಭ್ರಾಂತಿ ಸಂಚಲ ಹವ್ಮಿನ ಮತ್ತತ್ವಮಂ ಬಿಟ್ಟು, ಪಿಂಡ ಬ್ರಹ್ಮಾಂಡಯೋರೈಕಂ ಬ್ರಹ್ಮೋಹಂ ಎಂಬ ಅವಧೂತ ಸಂಚಲ ಹವ್ಮಿನ ಮತ್ತತ್ವಮಂ ಬಿಟ್ಟು, ಮತಿ ಯೋಗ ಸಿದ್ಧತ್ವ, ಮುದ್ರಾಲಕ್ಷಣ, ಭ್ರಾಂತ ವೇದಾಂತವೆಂಬ ಅಂಗ ಯೋಗ ಮಾರ್ಗಂಗಳ ಹವ್ಮಿನ ಮತ್ತತ್ವಮಂ ಬಿಟ್ಟು, ಭೃತ್ಯಾಚಾರ, ಲಿಂಗಾಚಾರ, ಶಿವಾಚಾರ, ಗಣಾಚಾರ, ಸದಾಚಾರಗಳೆಂಬ ಪಂಚ ಆಚಾರಂಗಳ ಪರಾಶಕ್ತಿ ತಂತ್ರದ ಸುಜ್ಞಾನವ ನೆಲೆಗೊಳಿಸಿ ನಿಂದುದು ಪ್ರಸಾದ ಲಿಂಗ. ಪ್ರಪಂಚ, ಸಂಕಲ್ಪ, ಆಶೆ, ಅಜ್ಞಾನ, ಮರಹು, ಇಂತಿವು ಮಾಯಾ ಮಿಥ್ಯವಂ ಬಿಟ್ಟು, ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಇಂತಿವರಲ್ಲಿ, ಅರುಹು ಎಂಬ ಪರಂಜ್ಯೋತಿ ಚಿತ್ ಶಕ್ತಿ ಸಾವಧಾನವ ನೆಲೆಗೊಳಿಸಿ ನಿಂದುದೇ ಮಹಾಲಿಂಗ. ಇಂತೀ ಭಾವ, ಜ್ಞಾನ, ಮನ, ಬುದ್ಧಿ, ಚಿತ್ತ, ಅಹಂಕಾರಗಳಡಗಿ, ಅರುಹು ತಲೆದೋರಿದ ಕುಳಂಗಳೇ ಲಿಂಗವಾಗಿ, ಇಂತೀ ಸ್ಥಳ ಕುಳಂಗಳೇ ಅಂಗ ಲಿಂಗವಾಗಿ, ಆ ಅಂಗ ದಲ್ಲಿ ಆರು ಸ್ಥಳ ಸಂಬಂಧವಾದ ಪರಿಯೆಂತೆಂದೊಡೆ,

ಪಾದಾದಿ ಗುದಪರಿಯಂತರ ಪೃಥ್ವಿತತ್ವ, ಆ ತತ್ವದ ಕಠಿಣ ಗುಣ ವಳಿದು ಕರ್ಮಸಾದಾಖ್ಯದಿಂ ಭೃತ್ಯತ್ವವೇ ಭಕ್ತಸ್ಥಲ. ಗುದಾದಿ ಗುಹ್ಯ ಪರಿಯಂತರ ಅಪ್ಪು ತತ್ವ, ಆ ತತ್ವದ ಮೃದುಗುಣವಳಿದು, ಕರ್ತೃ ಸಾದಾಖ್ಯದಿಂ ನಿಷ್ಠತ್ವವೇ ಮಹೇಶ್ವರ ಸ್ಥಲ. ಗುಹ್ಯಾದಿ ನಾಭಿಪರ್ಯಂತರ ಅಗ್ನಿತತ್ವ, ಆ ತತ್ವದ ದಹನಗುಣವಳಿದು ಮೂರ್ತಿಸಾದಾಖ್ಯದಿಂ ವಿಶ್ವಾಸವೇ ಪ್ರಸಾದಿಸ್ಥಲ. ನಾಭ್ಯಾದಿ ಹೃದಯ ಪರ್ಯಂತರ ವಾಯುತತ್ವ ಆ ತತ್ವದ ಸ್ಪರ್ಶನಗುಣವಳಿದು ಅಮೂರ್ತಿ ಸಾದಾಖ್ಯದಿಂ ನಿರ್ಮಲವೇ ಪ್ರಾಣಲಿಂಗಿ ಸ್ಥಲ. ಹೃದಯಾದಿ ಕಂಠ ಪರ್ಯಂತರ ಆಕಾಶತತ್ವ. ಆ ತತ್ವದ ಸಂಚಲಗುಣವಳಿದು ಶಿವಸಾದಾಖ್ಯದಿಂ ಆನಂದವೇ ಶರಣಸ್ಥಲ. ಕಂಠಾದಿ ಭ್ರೂಮಧ್ಯ ಪರ್ಯಂತರ ಆತ್ಮತತ್ವ, ಆ ತತ್ವದ ಮರಹು ಗುಣವಳಿದು ಮಹಾ ಸಾದಾಖ್ಯದಿಂ ಸಮರಸತ್ವವೇ ಐಕ್ಯಸ್ಥಲ.

ಇಂತೀ ಪಾದಾದಿ ನಾಲ್ವತ್ತೆಂಟು ಅಂಗುಲ ಪ್ರಮಾಣದಿಂದೂರ್ಧ್ವ ಭಕ್ತಸ್ಥಲ. ಆ ಭಕ್ತಸ್ಥಲದಿಂದ ನಾಲ್ಕಂಗುಲ ಊರ್ಧ್ವ ಮಹೇಶ್ವರ ಸ್ಥಲ. ಆ ಮಹೇಶ್ವರ ಸ್ಥಲದಿಂದ ಆರಂಗುಲ ಊರ್ಧ್ವ ಪ್ರಸಾದಿಸ್ಥಲ. ಆ ಪ್ರಸಾದಿ ಸ್ಥಲದಿಂದ ಎಂಟಂಗುಲ ಊರ್ಧ್ವ ಪ್ರಾಣಲಿಂಗಿಸ್ಥಲ. ಆ ಪ್ರಾಣ ಲಿಂಗಿ ಸ್ಥಲದಿಂದ ದ್ವಾದಶಾಂಗುಲ ಊರ್ಧ್ವ ಶರಣಸ್ಥಲ. ಆ ಶರಣಸ್ಥಲ ದಿಂದ ಷೋಡಶಾಂಗುಲ ಊರ್ಧ್ವ ಐಕ್ಯಸ್ಥಲ. ಆ ಐಕ್ಯಸ್ಥಲದಲ್ಲಿ ದ್ವಿ ಅಂಗುಲ ಪ್ರಮಾಣದಲ್ಲಿ ಪ್ರಣವ. ಇಂತೀ ತೊಂಭತ್ತಾರು ಅಂಗುಲವೇ ಅಂಗವಾಗಿ ಆ ಅಂಗಮುಖದಲ್ಲಿ ಲಿಂಗಕುಳವಾರು ಅಡಗಿದ ಪರಿ ಎಂತೆಂದೊಡೆ.

ಸುಚಿತ್ತದಿಂ ಘ್ರಾಣದಿಂದ ಗಂಧವನಂಗೀಕರಿಸುವದು ಆಚಾರಲಿಂಗ. ಸುಬುದ್ಧಿಯಿಂ ಜಿಹ್ವೆಯಿಂದ ರುಚಿಯನಂಗೀಕರಿಸುವದು ಗುರುಲಿಂಗ, ನಿರಹಂಕಾರದಿಂ ನೇತ್ರದಿಂದ ರೂಪನಂಗೀಕರಿಸುವದು ಶಿವಲಿಂಗ, ಸುಮ ನದಿಂ ಹಸ್ತದಿಂದ ಸ್ಪರ್ಶನ ಅಂಗೀಕರಿಸುವದು ಜಂಗಮಲಿಂಗ, ಸುಜ್ಞಾ ನದಿಂ ಶ್ರೋತ್ರದಿಂದ ಶಬ್ದವನಂಗೀಕರಿಸುವದು ಪ್ರಸಾದಲಿಂಗ, ಸಾವ ಧಾನದಿಂ ಹೃದಯದಿಂದ ತೃಪ್ತಿಯನಂಗೀಕರಿಸುವದು ಮಹಾಲಿಂಗ.

ಇಂತೀ ಹದಿನಾರು ಅಂಗುಲ ಪ್ರಮಾಣದಿಂದ ನಾಸಿಕದಿಂ ಇಷ್ಟ ಲಿಂಗದ ಪೀಠದಲ್ಲಿ ಆಚಾರ ಲಿಂಗವಡಗಿ, ದ್ವಾದಶಾಂಗುಲ ಪ್ರಮಾಣದಿಂ ಜಿಹ್ವೆಯಿಂದ ಇಷ್ಟಲಿಂಗದ ಕಲೆಯಲ್ಲಿ ಗುರುಲಿಂಗವಡಗಿ, ಅಷ್ಟಾಂಗುಲ ಪ್ರಮಾಣದಿಂ ನೇತ್ರದಿಂದ ಇಷ್ಟಲಿಂಗದ ಉದರದಲ್ಲಿ ಶಿವಲಿಂಗವಡಗಿ, ಷಡಂಗುಲ ಪ್ರಮಾಣದಿಂ ತ್ವಕ್ಕಿನಿಂದ ಇಷ್ಟಲಿಂಗದ ಗೋಮುಖದಲ್ಲಿ ಜಂಗಮಲಿಂಗವಡಗಿ, ಚತುರಂಗುಲ ಪ್ರಮಾಣದಿಂ ಶ್ರೋತ್ರದಿಂದ ಇಷ್ಟ ಲಿಂಗದ ನಾಳದಲ್ಲಿ ಪ್ರಸಾದಲಿಂಗವಡಗಿ, ದ್ವಿಯಂಗುಲ ಪ್ರಮಾಣದಿಂದ ಇಷ್ಟಲಿಂಗದ ಮಸ್ತಕದಲ್ಲಿ ಮಹಾಲಿಂಗವಡಗಿ, ಇಂತೀ ನಾಲ್ವತ್ತೆಂಟು ಅಂಗುಲ ಪ್ರಮಾಣದಲ್ಲಿ ಆ ಇಷ್ಟಲಿಂಗದಲ್ಲಿ ಆರು ಕುಳವಡಗಿ, ಇಂತೀ ಸ್ಥಳಕುಳಂಗಳ ಗರ್ಭೀಕರಿಸಿಕೊಂಡಿಪ್ಪ ಅಂಗಲಿಂಗವೆರಡು, ಈ ಅಂಗ ಲಿಂಗವೆರಡು ಮಂತ್ರವಾದ ಪರಿಯೆಂತೆಂದೊಡೆ

ಇಂತೀ ಅಂಗ ತೊಂಭತ್ತಾರಂಗುಲ ಪ್ರಮಾಣವನಂಗೀಕರಿಸಿ ಕೊಂಡಿಪ್ಪುದೇ ಓಂಕಾರ ಪ್ರಣವ. ಆ ಪ್ರಣವವೇ ನಾದ, ಆ ನಾದದಲ್ಲಿ

ಬಿಂದು ನಿಂದು ಷಟ್ಕೃತಿಗಳೇ ಪ್ರಾಣವಾಗಿ ಗರ್ಭೀಕರಿಸಿಕೊಂಡಿಪ್ಪ ಪಂಚಾಕ್ಷರಂಗಳು; ಇಂತೀ ಪಂಚಾಕ್ಷರಂಗಳಿಗೆ ಅಂಗವಾಗಿ ಗರ್ಭೀಕರಿಸಿಕೊಂಡಿಪ್ಪ ಷಟ್ಕೃತಿಗಳೇ ಷಡುಲಿಂಗವಾಗಿ, ಆ ಷಡು ಲಿಂಗಂಗಳಿಗೆ ಷಡಕ್ಷರಂಗಳೇ ಪ್ರಾಣವಾಗಿ, ಓಂಕಾರವೇ ನಾದಮಯಾಂಗವಾಗಿ ಪಂಚಾಕ್ಷರಂಗಳೇ ಪಂಚಾಕೃತಿ ಬಿಂದುಮಯ ಪ್ರಾಣವಾಗಿ, ಮಂತ್ರಾಂಗವಾಗಿ ನಾದ ಬಿಂದು ಕಳಾಕ್ಷರದಲ್ಲಿ ಪ್ರಣವ ಮಂತ್ರವಡಗಲು, ಆ ಕಳೆಯೇ ಬಿಂದುವಾಗಿ, ಆ ಬಿಂದುವೇ ನಾದವಾಗಿ, ನಾದವೇ ನಿಶ್ಯಬ್ದವಾಗಿ ನಿಶ್ಯಬ್ದವೇ ಪರಬ್ರಹ್ಮವಾಗಿ ಆ ಪರಬ್ರಹ್ಮವೇ ನಿಜವಾಗಿ, ಆ ನಿಜವೇ ಸಹಜಾನಂದ ವಸ್ತುವಾದ ಘನವೇದ್ಯ ಶರಣನ ಚರಣಕ್ಕೆ ನಮೋ ನಮೋಎಂಬೆ ಕೂಡಲ ಸಂಗಮದ್ಗುರು ಬಸವಲಿಂಗಪ್ರಭುವೇ.

ವಿಶ್ವದೊಳು ವಿರಮಿಸುವ ಜೀವಕೋಟಿಗಳಲ್ಲಿ ಮಾನವಕೋಟಿಯು ಮಿಗಿಲಾದುದು. ಆ ಮಾನವರೊಳು ಮತಿಯುತರಾಗಿ ಸಕಲ ನಿಷ್ಕಲಗಳನ್ನು ಅರಿತು ಆಶ್ರಯಿಸಿದ ವಿಶ್ವಧರ್ಮದ ವೀರಶೈವ ಜನಾಂಗವು ಸ್ವಾಭಾವಿಕವಾದ ಜೀವನದ ದುಷ್ಟ ಗುಣಧರ್ಮಗಳನ್ನು ನಷ್ಟಗೊಳಿಸಿ ಶಿಷ್ಟವಾದವುಗಳನ್ನು ಸ್ವೀಕರಿಸಿ ಸದಿಷ್ಟದ ಸಾಧನವಾದ ಇಷ್ಟಲಿಂಗವನ್ನು ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂದ ಪೂಜಿಸಿ ಇಹ ಪರಗಳಲ್ಲಿ ಸವೆಯದ ಸುಖವನ್ನುಹೊಂದುವ ಸತ್ಯವಾದ ಸನ್ಮಾರ್ಗವಿದು.

ಇಷ್ಟಲಿಂಗದ ನೆಲೆಕಲೆಯರಿತು ಭಕ್ತಿಬೆಳೆದು ಮನದೊಳಗಾದ ಪ್ರಾಣಲಿಂಗಪೂಜೆಯ ಅನುವರಿತು ಇಹವು ಕೆಡುತ, ಪರವು ನಿಲ್ಲುತ ಮನವು ಸಂತಸಂಗೊಳುತ, ತನುವನು ಮರೆಯುತ ಪ್ರಾಣಲಿಂಗಾನುಸಂಧಾನವನು ಸಾಧಿಸುವ ಸುಲಭವಾದ ಸಜ್ಜೀವನದ ಶಿವಯೋಗವಿದು.

ಸತ್ಕ್ರಿಯಾಜ್ಞಾನದಿಂದ ತನುತ್ರಯದೊಳು ಗುರುತ್ರಯಂಗಳ ಸಂಬಂಧಿಸಿಕೊಂಡು ಮಹಾಜ್ಞಾನದಿಂದ ಮನತ್ರಯಂಗಳೊಳು ಲಿಂಗತ್ರಯಂಗಳ ಸಂಬಂಧಿಸಿಕೊಂಡು, ಮಹಾಜ್ಞಾನದಿಂದ ಭಾವತ್ರಯಂಗಳಲ್ಲಿ ಜಂಗಮತ್ರಯಂಗಳ ಸಂಬಂಧಿಸಿಕೊಂಡು , ಪ್ರಸಾದತ್ರಯಂಗಳಂ ಪಡೆಯುತ ಪರಿಪೂರ್ಣಮೊಳು ಪರಿಣಮಿಸುವ ಲಿಂಗಾಂಗ ಸಾಮ್ಯರಸ್ಯವಿದು.

---

# ಸಾವಧಾನದ ಸ್ಪಷ್ಟವಾದಿಗೆ ಕೆಲವು ಪ್ರಶ್ನೆಗಳು

( ಬರೆದವರು :— ಶ್ರೀ ಅನ್ನದಾನೀಶ್ವರ ವಿರಕ್ತ ಮಠ
( ಶಿಕ್ಷಕರು:— ಶ್ರೀ. ಬಸವೇಶ್ವರ ಟ್ರೇನಿಂಗ ಕಾಲೇಜ ಬಾಗಲಕೋಟೆ )

ಗದಗ ಹಡಗಲಿ ಮಠದಲ್ಲಿ ಶ್ರೀನಾಗ ಭೂಷಣ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಹೊರಡುವ "ಸಾವಧಾನ" ಎಂಬ ಪಾಕ್ಷಿಕ ಪತ್ರಿಕೆಯಲ್ಲಿ ದಿನಾಂಕ ೨೫-೬-೫೧ನೇ ದಿನ ಲಿಂಗಾಗಿಯು ನಡುವಳಿಕೆ" ಎಂಬ ವಿಷಯದ ಮೇಲೆ ಸ್ಪಷ್ಟವಾದಿ ಎಂದು ಕರೆದುಕೊಳ್ಳುವ ಒಬ್ಬಲೇಖಕರು ಒಂದು ಸಂಕುಚಿತ ಮತ್ತು ದ್ವೇಷಪೂರಿತ ಲೇಖನನ್ನು ಬರೆದಿರುವರು. ಅದು ಸನಾತನೀ ದೃಷ್ಟಿಕೋನದ, ಜಾತ್ಯಾಭಿಮಾನದ ಲೇಖನವು. ಅದರಲ್ಲಿ ಲೇಖಕರು ಹೇಯ ಶಬ್ದಗಳನ್ನು ಉಪಯೋಗಿಸಿರುವರು. ಕೆಲವು ಶಬ್ದಗಳು ಹೀಗಿರುತ್ತವೆ:— "ಅಸೂಯಾಂಧರಾದ ಪರಮತ ಪಂಡಿತ-ರು ಜಾತ್ಯಾದಿವಾಂಧರು ಭ್ರಷ್ಟಗುಣದ ನಡತೆ" ಇತ್ಯಾದಿ ಇತ್ಯಾದಿ ಇಂಥ ಹೀನ ಶಬ್ದಗಳನ್ನು ದ್ವೇಷದಿಂದ ಪೂರ್ಣ ವಿಚಾರಮಾಡದೆ ಉಪಯೋಗಿಸುವದು ಲೇಖನ ವ್ಯವಸಾಯಕ್ಕೆ ಭೂಷಣವೇ? ಅನ್ಯರ ಮನನೋಯಿಸುವಂಥ, ಅವರ ಗೌರವಕ್ಕೆ ಧಕ್ಕತಗಲುವಂಥ, ಜಾತಿ-ದ್ವೇಷವನ್ನು ಹಬ್ಬಿಸುವಂಥ, ಶಬ್ದಗಳನ್ನು ಉಪಯೋಗಿಸುವದರಿಂದಲೇ ತಮ್ಮ ಉದ್ದೇಶವು ಸಾರ್ಥಕವಾಗುವದೆಂದು ಲೇಖಕರು ತಿಳಿದಿದ್ದರೆ ಅದು ಶುದ್ಧ ಭ್ರಮೆಯೇ ಸರಿ.

ಇನ್ನು ಲೇಖಕರ ಪ್ರತಿ-ಗಾಮಿ, ಜಾತ್ಯಾಭಿಮಾನದ, ಸಂಕುಚಿತ ವಿಚಾರಗಳ ಕಡೆಗೆ ತಿರುಗೋಣ

ಲೇಖಕರ ಶಬ್ದಗಳಲ್ಲಿ ಹೇಳಬೇಕೆಂದರೆ ಶಿವಲಿಂಗ ಧಾರಕರು ಶಿವಲಿಂಗ ಹೀನ ಭವಿಗಳಿಗೆ ನಮಸ್ಕರಿಸುವದು ಮಹಾ ಪ್ರಮಾದವಂತೆ, ಮಹಾ ದ್ರೋಹವಂತೆ- ಹಾಗಾದರೆ ಲೇಖಕರೇ ಕಲ್ಯಾಣದ ಬಸವಣ್ಣನು ಬಿಜ್ಜಳರಾಜನಿಗೆ ಏಕೆ ನಮಸ್ಕರಿಸುತ್ತಿದ್ದನು?

ಓ ನಿಷ್ಠ್ರ ಉತ್ತರ ಇಲ್ಲಿದೆ! "ರಾಜಸಭೆಯಲ್ಲಿ ತನ್ನ ನಂದಿಮುದ್ರೆಯ ಉಂಗುರಕ್ಕೆ ಬಸವಂಣನು, ನಮಸ್ಕರಿಸುತ್ತಿದ್ದನಲ್ಲದೆ, ಭವಿ ಬಿಜ್ಜಳನಿಗಲ್ಲ." ನಂದಿಮುದ್ರೆಯ ಉಂಗುರಕ್ಕೇನೇ ನಮಸ್ಕರಿಸುತ್ತಿದ್ದರೆ, ಬಿಜ್ಜಳನ ಎದುರಿಗೆ ನಿಂತು ಏಕೆ ನಮಸ್ಕರಿಸಬೇಕು? ವ್ಯವಹಾರದಲ್ಲಿ ಬಿಜ್ಜಳರಾಜನಿಗೆ ನಮಸ್ಕರಿಸಿದಂತೆ ತೋರುತ್ತಿದ್ದರೂ, ಬಸವಂಣನು ಭಾವದಲ್ಲಿ ನಂದಿಗೆ ನಮಸ್ಕಾರ ಸಲ್ಲಲಿ ಎಂದು ಭಾವಿಸುತ್ತಿದ್ದನು. ಹೀಗೆ ಅನ್ನುವದು ಸಮಂಜಸವಲ್ಲವೇ? ಹಾಗಾದರೆ ಬಸವಂಣನು ಹೀನ ಜಾತಿಯ ಜನರಿಗೆ ನಮಸ್ಕರಿಸಿದರೂ ನಂದೀ ಭಾವನೆಯಿಂದಲೇ ನಮ್ಸ್ಕರಿಸುತ್ತಿದ್ದನೆಂದು ನಾವು ಹೇಳಿದರೆ ದೋಷವೇನು? ಬಾಹ್ಯದಲ್ಲಿ ಬಸವಣ್ಣನ ನಂದೀಭಾವವು ಎಲ್ಲರಿಗೂ ಕಾಣದಿದ್ದರೂ ಅವನು ನಮ್ರತೆಯಿಂದ ನಮಸ್ಕರಿಸುವದನ್ನು ಎಲ್ಲರೂ ನೋಡುತ್ತಿದ್ದರು.

ಬಸವಣ್ಣನಂಥ ಮುಖ್ಯ ಮಂತ್ರಿಯು ಆಸ್ಥಾನದಿಂದ ತನ್ನ ಮಂದಿರಕ್ಕೆ ಹೋಗುವಾಗ, ಬರುವಾಗ, ಕೇವಲ ಲಿಂಗಭಕ್ತರೇ ಅವನಿಗೆ ಭೆಟ್ಟಿಯಾಗುತ್ತಿದ್ದರೋ? ಅನ್ಯ ಜಾತಿಯವರು ಭೆಟ್ಟಿಯಾದರೆ, ಆಗ ಅವರು ಬಸವಣ್ಣನವರಿಗೆ ನಮಸ್ಕರಿಸಿದರೆ, ಅವರು ಬಸವಣ್ಣನವರು ಶರಣರಿಗೆ ಶರಣು ಅನ್ನುತ್ತಿದ್ದಿಲ್ಲವೆ? ಭವಿಗಳಿಗೆ ನಮಸ್ಕರಿಸಿದರೆ ಲಿಂಗಾಂಗಿಯ ನಡವಳಿಕೆಗೆ ಚ್ಯುತಿ ಬಂದರೆ ಅಂಥ ಲಿಂಗಾಂಗಿಯ ನಡವಳಿಕೆಯು ದುರ್ಬಲವಿರಲಿಕ್ಕೇಬೇಕು ಶರಣು ಅಂದವರಿಗೆ ಶರಣು ಅನ್ನಬಾರದೆಂದು ಲಿಂಗಾಂಗಿ ನಡುವಳಿಕೆಯು ಹೇಳುವದೇ?ಛೇ ಎಂದಿಗೂ ಹೇಳಲಾರದು "**ಸರ್ವಂ ಶಿವಮಯಂ ಜಗತ್**" ಎಲ್ಲ ಜಗತ್ತು ಶಿವಮಯವಾಗಿದೆ. ಎಲ್ಲವನ್ನು ಶಿವಸ್ವರೂಪವೆಂದು ಭಾವಿಸಿರಿ. ಎಂದೇಲಿಂಗಾಂಗೀ ಧರ್ಮವು ಹೆಳುತ್ತದೆ. ವಿಶ್ವಸಮಾನತೆಯ ರಹಸ್ಯವೇ ಇಲ್ಲಿದೆ "ಆಕಳು ಕಳ್ಳರು ಕೊಂಡೊಯ್ದರೆಂದು ಅನಬೇಡಲವೋ ಅಲ್ಲಿಯುಂಬನು ಸಂಗ ಇಲ್ಲಿಯುಂಬವನು ಸಂಗ-"ಎಂದು ಬಸವಣ್ಣನವರು ನುಡಿದಿರುವರು. ಕಳ್ಳನು ಸಹ ಸಂಗಮನಾಥನ ಸ್ವರೂಪವೆಂದು ಭಾವಿಸಿದ್ದರು. ತನ್ನ ಹೆಂಡತಿಯ ಆಭರಣಗಳನ್ನು ಕಳವು ಮಾಡಲಿಕ್ಕೆಬಂದಾಗ ಕಳ್ಳನ ಮನೆಗೊಬ್ಬ ಕಳ್ಳ ಬಂದರೆ ಕೂಡಲಸಂಗಮದೇವನಲ್ಲದೆ ಯಾರೂ ಅಲ್ಲಾ ಎಂದೇ ಬಸವಣ್ಣನವರು ವಚನಿಸಿರುವರು. ಇದರಿಂದ ಬಸವಣ್ಣನವರ ಸರ್ವಾತ್ಮಭಾವನೆಯು ವ್ಯಕ್ತವಾಗುವದಿಲ್ಲವೆ? ಈ ಕಳ್ಳರು ಲಿಂಗಧಾರಿಗಳಾಗಿದ್ದ ಕಳ್ಳ

ರೆಂದು ಸ್ಪಷ್ಟವಾದಿಯು ಸಿದ್ಧಮಾಡಬಲ್ಲನೋ? ಭವಿಗಳನ್ನು ಅವರ ಸ್ಥಿತಿಯಲ್ಲಿರಿಸಿ ಬಸವಣ್ಣನು ನಮಸ್ಕರಿಸುತ್ತಿದ್ದಿಲ್ಲವೆಂದು ಸ್ಪಷ್ಟವಾದಿಯು ಅನ್ನುತ್ತಾನಲ್ಲವೆ? ಹಾಗಾದರೆ ಬಿಜ್ಜಳರಾಜನಿಗೆ ಲಿಂಗಕಟ್ಟಿ ಅವನಿಗೆ ನಮಸ್ಕರಿಸುತ್ತಿದ್ದನೇ?

ಶಿವಲಿಂಗ ಹೀನರೇ ಭವಿಗಳು ಎಂದು ಸ್ಪಷ್ಟವಾದಿಯು ಅನ್ನುತ್ತಾರೆ. ಹಾಗಾದರೆ ಲಿಂಗವಿದ್ದ ಭವಿಗಳು ಇರುವರೆಂದು ವಚನಕಾರರು ಶರಣ ಶರಣೆಯರು ಅನೇಕ ವಚನಗಳಲ್ಲಿ ನುಡಿದಿರುವರಲ್ಲ! ಆದ್ದರಿಂದಲೇ ಸ್ಪಷ್ಟವಾದಿಯು ಹೇಳಿದ್ದೇ ಲಿಂಗವಂತರ ನಡವಳಿಕೆಯಲ್ಲ ಎಂದು ನಾನು ಹೇಳುತ್ತೇನೆ. ಬಸವಣ್ಣನನ್ನೂ ಲಿಂಗಾಗೀ ಧರ್ಮವನ್ನೂ ಸಂಕುಚಿತ ಜಾತಿಯ ಕಟ್ಟಿನಲ್ಲಿ ಕೂಡ್ರಿಸಲಿಕ್ಕೆ ಯತ್ನಿಸುವ ಸನಾತನೀ ಜಾತ್ಯಾಭಿಮಾನಿಗಳನ್ನು ಕಂಡು ಅತ್ಯಂತ ಕನಿಕರವಾಗುತ್ತದೆ.

"ರಾಜನಿಗೇ ನಮಸ್ಕರಿಸದ ಬಸವೇಶ್ವರನು ಸಮಗಾರ, ಡೋಹರನಿಗೆ ನಮಸ್ಕರಿಸುತ್ತಿದ್ದನೆಂದು ಬರೆಯುವದು ಮಹಾಪ್ರಮಾದ" ಎಂದು ಸ್ಪಷ್ಟವಾದಿಯು ಬರೆದಿದ್ದಾನೆ. ಅಯ್ಯೋ ಸ್ಪಷ್ಟವಾದಿಯ ದೃಷ್ಟಿಯಲ್ಲಿ ರಾಜನು ಶ್ರೇಷ್ಠನಾಗಿರಬಹುದು. ಆದರೆ ಬಸವೇಶ್ವರನ ದೃಷ್ಟಿಯಲ್ಲಿ ಹಾಗಿದ್ದಿಲ್ಲ. ಬಿಜ್ಜಳ ರಾಜನಿಗೆ ನಮಸ್ಕರಿಸದೇ ಮುಖ್ಯಮಂತ್ರಿಯ ಕೆಲಸ ಮಾಡುವದು ಬಸವಣ್ಣನಿಗೆ ಸಾಧ್ಯವಿತ್ತೆಂದೂ ಅವನಲ್ಲಿ ಅಂಥ ಪವಾಡಗಳಿದ್ದವೆಂದೂ ಇತಿಹಾಸವು ಹೇಳುತ್ತಿದೆಯೇ?

ಬಸವಣ್ಣನು ಠಕ್ಕರ ಬದನೇಕಾಯಿಗಳನ್ನು ಲಿಂಗಗಳನ್ನಾಗಿಮಾಡಿ ಬಿಜ್ಜಳನ ಸಿಂಹಾಸನಕ್ಕೆ ಬೆಂಕಿಹತ್ತಿದ ಪವಾಡಗಳನ್ನು ಸ್ಪಷ್ಟವಾದಿಯು ಉದಾಹರಿಸಿದ್ದಾನೆ. ಈ ಮೇಲಿನ ಪೌರಾಣಿಕ ಪವಾಡಗಳಲ್ಲಿ ಸ್ಪಷ್ಟವಾದಿಯು ಪ್ರಾಮಾಣಿಕ ನಂಬಿಗೆ ಇದ್ದರೆ ಇರಲಿ! ನಾನು ಮಾತ್ರ ನಂಬುವದಿಲ್ಲೆಂದು ಹೇಳಿದರೆ ಸಾಕು! ಜಗತ್ತಿನ ಪ್ರಗತಿಯು ಗೊಡ್ಡಪುರಾಣ ಹೇಳುವ ಶಾಸ್ತ್ರಿಗಳನ್ನು ಲೆಕ್ಕಿಸದೇ ಮುಂದೆ ಮುಂದೆ ನುಗ್ಗುತ್ತದೆ.

ಮಾದರ ಚನ್ನಯ್ಯ ಡೋಹರ ಕಕ್ಕಯ್ಯ ಇವರಿಗೆ ನಾನು ಹೀನ ಜಾತಿಯ ಜನರೆಂದು ತತ್ವದೃಷ್ಟ್ಯಾ ಅನ್ನದಿದ್ದರೂ ಇತಿಹಾಸ ದೃಷ್ಟಿ

ಯಿಂದ ಅನ್ನಬೇಕಾಗುತ್ತದೆ. ಮುಖ್ಯ ಮಂತ್ರಿಯು ಹೀನ ಜಾತಿಯ ಜನರಿಗೆ ನಮಸ್ಕಾರ ಮಾಡಬಾರದೆಂದು ಬಿಜ್ಜಳರಾಜನ ಆಗಿನಜನರ ತಿಳಿವಳಿಕೆಯಾಗಿದ್ದಿಲ್ಲವೆ? ಈ ಐತಿಹಾಸಿಕ ಸತ್ಯವನ್ನು ಸ್ಪಷ್ಟವಾದಿಯು ಸುಳ್ಳೆಂದು ಸಿದ್ಧಮಾಡಲಿಕ್ಕೆ ಸಿದ್ಧನಿರುವನೋ? ನಾಲ್ಕು ಉದಾಹರಣೆಗಳನ್ನು ದಾಹರಿಸಿದ ಮಾತ್ರಕ್ಕೆ ಸಿದ್ಧ ಮಾಡಿದಂತಾಯಿತೇ? ಕಲ್ಯಾಣದ ಎಂಟುಲಕ್ಷ ಜನರು ಮಾದರ ಚನ್ನಯ್ಯ ಡೋಹರ ಕಕ್ಕಯ್ಯ ಇವರಿಗೆ ಹೀನ ಜಾತಿಯ ಜನರೆಂದು ಅನ್ನುತ್ತಿದ್ದಿಲ್ಲವೆ? ನನ್ನ ವೈಯಕ್ತಿಕ ಅಭಿಪ್ರಾಯ ಕೇಳಿದರೆ ಮಾದರ ಚನ್ನಯ್ಯ ಡೋಹರ ಕಕ್ಕಯ್ಯ ಇವರಿಗೇ ಏಕೆ? ಯಾರಿಗೂ ಹೀನ ಜಾತಿಯವರೆಂದು ಕರೆಯಲಿಕ್ಕೆ ನಾನು ಸಿದ್ದನಿಲ್ಲ. ಭಕ್ತ ಎಂಬ ಶಬ್ದವು ಆಧ್ಯಾತ್ಮಿಕ ಉನ್ನತಿಯನ್ನೂ ಸೂಚಿಸುತ್ತಿದ್ದರೆ, ಭವಿ ಎಂಬ ಶಬ್ದವು ಆಧ್ಯಾತ್ಮಿಕ ಪತನವನ್ನು ಸೂಚಿಸುತ್ತದೆ. ಈ ವಿಶಾಲವಾದ ಅರ್ಥದಲ್ಲಿ ಭಕ್ತ, ಭವಿ, ಶಬ್ದಗಳನ್ನು ವಿಚಾರಿಸಬೇಕು, ಮತ್ತು ಶರಣರು ಮುಖ್ಯವಾಗಿ ಹಾಗೆ ಭಾವಿಸಿದ್ದರು ಎಂದು ನನ್ನ ಅಭಿಪ್ರಾಯ. ಸ್ಪಷ್ಟವಾದಿಯು ಹೇಳುವ ಸಂಕುಚಿತ ರೀತಿಯಲ್ಲಿ ಭಕ್ತ, ಭವಿ, ತಿಳಿದುಕೊಳ್ಳಲಿಕ್ಕೆ ನನ್ನ ಒಪ್ಪಿಗೆಯಿಲ್ಲ. ತಜ್ಞರನ್ನು ವಿಚಾರಿಸಿ ಲೇಖ ಬರೆಯಬೇಕೆಂದೂ ಅಪ್ರತ್ಯಕ್ಷವಾಗಿ ಸ್ಪಷ್ಟವಾದಿಯು ನನಗೆ ಸೂಚಿಸಿದ್ದಾನೆ. ನನ್ನ ಸ್ವತಂತ್ರ, ನ್ಯಾಯಶೀಲ, ಸಮತಾಭಾವದ, ವಿಚಾರಗಳಿಗನುಸರಿಸಿ ಬುದ್ಧಿಹೇಳುವ ತಜ್ಞರಲ್ಲಿ ಸದಾ ನನ್ನನ್ನು ಶರಣಾರ್ಥಿಗಳಿರುತ್ತವೆಂಬುದನ್ನು ಸ್ಪಷ್ಟವಾದಿಯು ಮರೆಯದಿರಲಿ.

---

# ಭಕ್ತಿ ಭಾಂಡಾರಿ ಬಸವಣ್ಣನವರು.

(ಲೇ :— ಶ್ರೀಯುತ, ಎಸ್. ಸಿ. ಹಿರೇಮಠ, ಬಾಗಲಕೋಟೆ.)

ವೀರಶೈವ ಸಾಹಿತ್ಯವು ಸರ್ವತೋಮುಖವಾಗಿ ಮುಂದುವರಿಯು ಹತ್ತಿದಂತೆ ಪಂಡಿತರಲ್ಲಿ, ಪಾಮರರಲ್ಲಿ, ವಿಮರ್ಶಕರಲ್ಲಿ ವಿವಿಧ ಸಮಸ್ಯೆಗಳು ಮುಂದೆ ಬಂದು ನಿಲ್ಲಹತ್ತಿವೆ. ಅದರಲ್ಲಿ ಭಕ್ತಿ-ಭಾಂಡಾರಿ ಬಸವಣ್ಣನವರ ಬಗೆಗೆ ಅನೇಕ ತರ್ಕವಿತರ್ಕಗಳು ನಡೆಯು ಹತ್ತಿವೆ. ಸುಮಾರು ೯೬೦ ವಚನಗಳನ್ನೂ 'ಮಂತ್ರಗೋಪ್ಯ' ವೆಂಬ ಶೈವ ಸಿದ್ಧಾಂತವನ್ನೂ ಬರೆದು 'ಅನುಭವ' ಮಂಟಪದಲ್ಲಿ ಅಗ್ರಸ್ಥಾನ ಪಡೆದು, ಮುಕುಟ ಮಣಿಯಂತೆ ಶೋಭಿಸುತ್ತಿದ್ದ ಅಣ್ಣ ಬಸವಣ್ಣನಿಗೆ ಸಂಸ್ಕೃತವು ಬರುತ್ತಿರಲಿಲ್ಲವಾದ್ದರಿಂದ ಕನ್ನಡದಲ್ಲಿ ಭೋಧ ಮಾಡಿದರು ಎಂದು ಶ್ರೀ ಎಮ್. ಆರ್. ಶ್ರೀನಿವಾಸ ಮೂರ್ತಿಯವರು ತಮ್ಮ 'ಭಕ್ತಿ-ಭಾಂಡಾರಿ ಬಸವಣ್ಣನವರು' ಎಂಬ ಶಿರೋನಾಮದ ಸತ್ಯಶೋಧನ ಪ್ರಕಟನ ಮಂದಿರ ಬೆಂಗಳೂರ, ಅವರ ಪ್ರಕಟನೆಯ ಪುಸ್ತಕದಲ್ಲಿ ಪುಟ ೧೬೦ ನೇಯ ೧೧-೧೨ ಓಳಿಯಲ್ಲಿ ಮುದ್ರಿತವಾಗಿದೆ ಈ ಮಾತಿನ ಸತ್ಯತೆ ಎಷ್ಟಿದೆಂಬುದನ್ನು ಅವರ ವಚನಗಳ ಆಧಾರದಿಂದಲೇ ವಿಚಾರಿಸೋಣ.

ಹನ್ನೆರಡನೆಯ ಶತಮಾನದ ಆದಿಯಲ್ಲಿ ಕರ್ನಾಟಕದಲ್ಲಿ ಜಾತಿಯ ಒಂದು ಗಲಭೆ ನಡೆದಿತ್ತೆಂದು ಇತಿಹಾಸದಿಂದ ಕಂಡುಬರುತ್ತದೆ. ವರ್ಣಾಶ್ರಮ ಧರ್ಮ ಒಂದೆಡೆ, ವೀರಶೈವ ಧರ್ಮ ಇನ್ನೊಂದೆಡೆ, ಆಳ್ವರಸರ ಧರ್ಮ ಮತ್ತೊಂದೆಡೆ ಹೀಗೆ ಅನೇಕ ಧರ್ಮ ಸಂಕಟಗಳ ಮಧ್ಯದಲ್ಲಿ ಜನಿಸಿದ ಬಸವಣ್ಣನವರು ವೀರಶೈವ ಧರ್ಮದ ಪುನರುದ್ಧಾರ ಮಾಡುವುದು ಸುಲಭ ಸಾಧ್ಯವಾಗಿರಲಿಲ್ಲ. ಅವರು ಬೋಧಿಸಬೇಕಾಗಿದ್ದುದು ಜನಸಾಮಾನ್ಯರಲ್ಲಿ, ಪಂಡಿತರಲ್ಲಿಯಲ್ಲ. ಪಂಡಿತರಿಗಾಗಿ ಅನೇಕ ಉದ್‌ಗ್ರಂಥಗಳು ಆಗಲೇ ಪ್ರಸಿದ್ಧಿಸಲ್ಪಟ್ಟಿದ್ದವು.

ಶ್ರೀ ಬಸವಣ್ಣನವರು ಅನೇಕ ಗ್ರಂಥಗಳನ್ನು ಓದಿ ತಿಳಿದು ಕೊಂಡಿದ್ದರೆಂಬುದೂ, ಅವರಿಗೆ ಸಂಸ್ಕೃತವು ಬರುತ್ತಿತ್ತೆಂಬುದೂ ಅವರ ವಚನಗಳಿಂದಲೇ ಕಂಡು ಬರುತ್ತದೆ. ಸಮಯಕ್ಕೆ ಅನುಗುಣವಾಗಿ, ಅವರು ವೇದ, ಆಗಮ, ಶ್ರುತಿಗಳಲ್ಲಿಯ ಶ್ಲೋಕಗಳನ್ನು ಕೊಡುತ್ತಾರೆ. ವೇದದ ಮಾರ್ಗವನ್ನು ಅವರು ಜರಿಯುತ್ತಾರೆ. ಶ್ರುತಿಯನ್ನು ಖಂಡಿಸುತ್ತಾರೆ. ಓದಿದಲ್ಲದೆ, ತಿಳದೊಡಲ್ಲದೆ ಅಂಥ ಗ್ರಂಥಗಳನ್ನು ಆ ಮಹಾನುಭಾವರು ಜರಿಯುವರೆ? ಇನ್ನು ವಚನಗಳಲ್ಲಿ ಬರುವ ಅವರ ಸಂಸ್ಕೃತ ಶ್ಲೋಕ, ಅದರ ಸಂದರ್ಭ ಇದರ ವಿಷಯವಾಗಿ ಸ್ವಲ್ಪ ವಿಚಾರಿಸೋಣ.

ಭಕ್ತಸ್ಥಲದಲ್ಲಿದ್ದ ಬಸವಣ್ಣನವರು ದೇವ ಸಂಗಮನಾಥನ ಇರವನ್ನು ಅರಿಯದೆ, 'ಎಂತಕ್ಕೆ ನಾ ನಿಮ್ಮ ದೇವನೆಂದರಿದೆನು? ........

ಯಥಾ ಭಾವ ಸ್ತಥಾ ಲಿಂಗಂ। ಸತ್ಯಂ ಸತ್ಯಂ। ನ ಸಂಶಯಃ।
ಯಥಾ ಭಕ್ತಿ ಸ್ತಥಾ ಸಿದ್ಧಿಃ। ಸತ್ಯಂ ಸತ್ಯಂ। ನ ಸಂಶಯಃ॥

ಲಿಂಗ ದೇವನನ್ನು ಪೂಜಿಸುವದನ್ನು ಕುರಿತು —

ವರಂ ಪ್ರಾಣ ಪರಿತ್ಯಾಗ। ಛೇದನಂ ಶಿರಸೋಪಿವಾ।
ನತ್ವನಭ್ಯರ್ಚ್ಯ ಭುಂಜೀಥ। ಭಗವಂತಂ ತ್ರಿಲೋಚನಂ॥

ಎಂಬುದಾಗಿ ದೇಹಧರ್ಮ 'ತನ್ನ ಆದಂತೆ ಆಗಲಿ. ಕೂಡಲ ಸಂಗನ ಪೂಜಿಸಿದಲ್ಲದೆ ಇರಲಾರೆ' ಎಂದು ಹೇಳುತ್ತಾರೆ.

ಇನ್ನು ಮಾನವನಿಗೆ ಸದಸದ್ವಿವೇಕ ಬುದ್ಧಿ ಹಾಗು ಸದ್ವರ್ತನಗಳು ಅವಶ್ಯವಾಗಿ ಬೇಕೆಂದರಿತ ಬಸವಂಣನವರು *'Fame is the food that dead men eat'* ಎಂದು ಚನ್ನಾಗಿ ತಿಳಿದಿದ್ದರು. ಅಂತೆಯೇ "ಲೇಸೆನಿಸಿಕೊಂಡು ಐದು ದಿನ ಬದುಕಿದರೇನು? ಎರಡು ದಿನ ಬದುಕಿದರೇನು?" ಎಂದು ಹೇಳುವಾಗ — ಜೀವಿತಂ ಶಿವ ಭಕ್ತಾನಾಂ। ವರಂ ಪಂಚ ದಿನಾನಿಚ। ಅಜಕಲ್ಪ ಸಹಸ್ರೇಭ್ಯೋ। ಭಕ್ತಿಹೀನಂತುಶಾಂಕರಿ॥ ಎಂದು ಹೇಳಿದರು.

'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂಬ ನುಡಿಯನ್ನು ಮಾರ್ಮಿಕವಾಗಿ ಹೇಳುವಾಗ ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ ಆಕಳ ಹಾಲನೆರೆದು, ಜೇನತುಪ್ಪ ಹೊಯ್ದಡೆ ಸಿಹಿಯಾಗಬಲ್ಲುದೆ? ಎಂದು.

ದಂಡಕ್ಷೀರದ್ವಯಂ ಹಸ್ತೇ । ಜಂಗಮೋ ಭಕ್ತಿಮಂದಿರಂ । ಅತಿ
ಭಕ್ತ್ಯಾಲಿಂಗ ಸಂತುಷ್ಟಿಃ । ಅಪಹಾಸ್ಯಂ ಯಮದಂಡನಂ ॥

ಎಂದು ಹೇಳುತ್ತಾರೆ.

ಇನ್ನು ಬಸವಣ್ಣನವರು ಪಾರಮಾರ್ಥವನ್ನು ಪ್ರಪಂಚದಲ್ಲಿದ್ದು ಸಾಗಿಸುವವರಾಗಿದ್ದರು. ಯಾಕಂದರೆ, ಸಂಸಾರದಿಂದ ಸದ್ಗತಿಯುಂಟೆಂದೂ ದೇವಲೋಕವೆಂಬುದು ಕರ್ತಾರನ ಕಮ್ಮಟವೆಂದೂ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರೆಂದೂ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರೆಂದೂ ಅವರು ಸಾರಿದ್ದರು.

ಅವರು ಮನಕಂಜಿ ನಡೆಯುತ್ತಿದ್ದರು. ಅಂತೆಯೇ ಒಳಗೆ ಕುಟಿಲ ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯ ನಮ್ಮ ಕೂಡಲಸಂಗಮದೇವ ಎಂದು ಹೇಳಿದ ವಿಚಾರವು ಬಾಯಬಲ್ಲಿನಲ್ಲಿ *Be true to thyself internally and externally* ಮತ್ತು *'Be pious'* ಎಂಬ ನಡಿಗೆ ಸರಿಹೋಗವವು ಅದಕ್ಕೆ ಅವರ ವಚನದಲ್ಲಿ 'ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯ...... ........... ಅಭ್ಯಾಸಾಚ್ಚ ವಿಹೀನಸ್ಯ ತಸ್ಯ ಜನ್ಮನಿರರ್ಥಕಂ, ಗುರೋರಪಿ ಸಮಂ ಹಾಸ್ಯಂ, ಕರ್ತವ್ಯಂ ಕುಟಿಲಂ ವಿನಾ

ಮಾನವನಿಗೆ ಸಹಜವಾದ ಗರ್ವವನ್ನು ಕೆಡೆದು ಹಾಕಲು ಅವರು ಪ್ರಯತ್ನಿಸಿದ್ದಾರೆ. ಹಾವತಿಂದವರ ನುಡಿಸಬಹುದು ಗರ ಹೊಡೆದವರ ನುಡಿಸಬಹುದು ಆದರೆ ಸಿರಿಯು ಕೊತ್ತವರ ನುಡಿಸಬಾರದೆಂದು "ವೇದಾದೀನಾಂತು ನಿರ್ವಾಣ ಮಹತ್ವಂ" ಮಹದೈಶ್ವರಂ ಗುರೂಕ್ತಮಂತ್ರಮಾರ್ಗೇಣ ಇಷ್ಟಲಿಂಗಂತು ಶಾಂಕರೀಎಂದೂ ಸ್ಪಷ್ಟಪಡಿಸಿರುವರು.

ಇನ್ನು ಗರ್ವಬಿಟ್ಟು ವಿನಯ ಮುಳ್ಳಕ್ಕತನಾಗೆನ್ನುವದಕ್ಕೆ ಕರ್ಮಾವಲಂಬನಾಃ ಕೇಚಿತ್ ಜ್ಞಾನಾವಲಂಬನಾಃ ವಯಂತು ಶಿವಭಕ್ತಾನಾಂ ಪಾದುಕಸ್ಯಾವಲಂಬನಾಃ.

ಜಗತ್ತಿನಲ್ಲಿ ಪ್ರಾಣಿಗಳೆಲ್ಲರಿಗೂ ಅವಶ್ಯವಾಗಿರುವ ದಯೆಯನ್ನು ಕುರಿತು ಬಸವಣ್ಣನವರು ದಯವೇ ಧರ್ಮದ ಮೂಲವೆಂದರು. ದಯವಿರಬೇಕು ಸಕಲಪ್ರಾಣಿಗಳಲ್ಲಿ ಸಾಕಾರದೊಳು ನಿಷ್ಠೆ ಭೂತಂಗಳೊಳು ದಯೆ, ಇರಬೇಕು ಎಂದು ಸಾರಿದರು. ಅದನ್ನೆ ಒಂದು ವಚನದಲ್ಲಿ—ಯತ್ರ ಜೀವ ಸ್ತತ್ರಶಿವ ಎಂದು ನುಡಿದರು.

"ಆಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೊ ಮಹಾರಿಪುಃ" ಎಂದು ಬಸವಣ್ಣನವರು 'ಸದಾ ಕಾಯಕ ನಡಿಯುತ್ತಿರಬೇಕು. ಅವಕಾಯಕವಾದಡೇನು?ಎಂದು ಸಾರಿದರು. ಇಪ್ಪತ್ತನೆಯ ಶತಮಾನದಲ್ಲಿ 'work is worship ಎಂಬುದನ್ನು ' ೨ನೆಯ ಶತಮಾನದಲ್ಲಿ ಆ ಮಹಾನುಭಾವರು ಸಾರಿದರು ಇಂತು 'ಕಾಯಕವೇ ಕೈಲಾಸ 'ಯ ದ್ಯಪಿಸ್ಯಾತ್ ತ್ರಿಕಾಲಜ್ಞಃ ತ್ರೈಲೋಕ್ಯಾಕರ್ಷಣಕ್ಷಮಃ। ತಥಾಪಿ ಲೌಕಿಕಾಚಾರಂ। ಮನಸಾಪಿ ನ ಲಂಘಯೇತ್॥೩೯॥ 'ಬರುವ ಸುಖ ದುಃಖಗಳಿಗೆ ಅಂಜಬಾರದೆಂದೂ, ಮರಣವು ಎಲ್ಲರಿಗೂ ಕಟ್ಟಿಟ್ಟದ್ದೆಂದೂ ಹೇಳುವಾಗ 'ನಾಳೆ ಬಪ್ಪುದು ನಮಗೆ ಇಂದೇಬರಲಿ .... ...'ಜಾತಸ್ಯ ಮರಣಂ ಧ್ರುವಂ ಎಂಬ ನುಡಿಯನ್ನು ಸಾರಿರುವರು.

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ? ಎಂದು ಜಗತ್ತಿಗೆಲ್ಲ ಒಬ್ಬನೇ ದೇವರು ಇರುವನೆಂದೂ ಶ್ರುತಿಯ ವಾಕ್ಯವನ್ನು ಇಲ್ಲಿ ಉದಾಹರಿಸಿದ್ದಾರೆ. ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತನಾಡಬೇಡ ಜಗಕೆಲ್ಲ ಒಬ್ಬನೇ ದೇವ, ಅನ್ಯದೈವಕ್ಕೆರಗಿದರೆ ಕಿವಿ ಮೂಗನೇ ಕೊಯ್ಯುವ ನಮ್ಮ ಕೂಡಲ ಸಂಗಮದೇವ. 'ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ। ಇಂತೆಂದುದಾಗಿ ಹೇಳಿದ್ದಾರೆ.

ಇನ್ನು ಶ್ರುತಿಯ ವಿಚಾರ ವಿಷ್ಣುಕವಿ.ೞ ... ...ಓಂ ವಿಷ್ಣು ಕರ್ಮಾಣಿ ಪಶ್ಯತೆ ಯತೋ ವ್ರತಾನಿ ಪಶ್ಯತೆ ಇಂದ್ರಸಾಯುಜ್ಯಃ ಸಂಖ್ಯಾತ್ರೀಣಿ ಪದ ವಿಚಕ್ರಮೆ। ವಿಷ್ಣೋರ್ಗೋಪಾಲತಾಭ್ಯಃ ಅತೋ ಕರ್ಮಾಣಿ ಧಾರಯ್ಯೆತ್ ತದ್ವಿಪ್ರಾಸೋ ವಿಪನ್ಯಾವೋಜಾಂ ಗೃಹವಾಸಃ ಸಮಂಧತೆ ವಿಷ್ಣೋರ್ಯತ್ಪರಮಂ ಪದಂ॥ಎಂಬ ನುಡಿಯನ್ನು ಸಾರಿದರು.

ಹೀಗೆ ಪ್ರತಿನಿತ್ಯದ ಆಗು ಹೋಗುಗಳನ್ನು, ಪಾರಮಾರ್ಥಿಕ ವಿಷಯಗಳನ್ನು ಹೇಳುವಾಗ ಅವರು ಕೊಡುವ, ವೇದ, ಆಗಮ ಶ್ರುತಿಯ ಉದಾಹರಣೆಗಳು ಅವರ ಪಾಂಡಿತ್ಯವನ್ನು ಸೂಚಿಸುತ್ತವಲ್ಲದೆ ಅವರಿಗೆ ಸಂಸ್ಕೃತದಲ್ಲಿ ಆಳವಾದ ಜ್ಞಾನವಿತ್ತೆಂಬುದನ್ನು ವ್ಯಕ್ತಪಡಿಸುತ್ತವೆ. ವೇದವಾಕ್ಯಗಳು, ಶ್ರುತಿಯ ಶ್ಲೋಕಗಳು ಅವರ ಜಿಹ್ವೆಯ ಮೇಲೆ ಕುಣಿದಾಡುತ್ತವೆ. ಅವುಗಳನ್ನು ಮನನ ಮಾಡಿ ಅದರಲ್ಲಿಯ ತತ್ವಗಳು ಮನಕ್ಕೆ ಬಾರದ್ದರಿಂದಲೇ 'ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನಬಾರನೆತ್ತುವೆ. ಆಗಮದ ಮೂಗ ಕೊಯ್ವೆ, ಎಂದು ಧೈರ್ಯವಾಗಿ ಸಾರಿದರು. ಹಾಗಿಲ್ಲದಿದ್ದರೆ ಆಗಿನ ಸಂಸ್ಕೃತ ಪಂಡಿತರು ಬಸವಣ್ಣನವರನ್ನು ಸುಮ್ಮನೆ ಬಿಡುತ್ತಿದ್ದರೆ? ಬಸವಣ್ಣನವರು ಉಪಯೋಗಿಸಿದ ಕನ್ನಡ ಭಾಷೆ ಜನಸಾಮಾನ್ಯರಿಗಾಗಿ ಮಾತ್ರ. ತಮ್ಮ ವಿದ್ವತ್ತ್ವವನ್ನು ಪ್ರದರ್ಶಿಸಲಿಕ್ಕಲ್ಲ!

ಇವೆಲ್ಲ ಕಾರಣಗಳಿಂದ ಅವರ ವಿಷಯಕ್ಕೆ ಇದ್ದ ತಪ್ಪು ಕಲ್ಪನೆಗಳು ದೂರವಾಗಬಹುದೆಂದು ನಮ್ಮ ಕೋರಿಕೆ.

# ಬಸವನಘನತೆ

( ಲೇ: – ವೆ. ಮೂ ಗುರುಸಿದ್ಧಶಿವಾಚಾರ್ಯರು–ಗುರುವಿನಪುರಮಠ. )

ಸತ್ಪುರುಷರು ಸತ್ಯಸಂಕಲ್ಪದಿಂದ ಜಗತ್ತಿನ ಮೋಕ್ಷಕ್ಕಾಗಿ ಅವತರಿಸಿ ಪರಮ ಉಪಕಾರಿಗಳಾಗಿ ಜೀವನದ ಅಂಧಕಾರದಲ್ಲಿ ಅರಿವುದಪ್ಪಿ ಕಣ್ಗಾಣದವರೋಪಾದಿಯಲ್ಲಿ ಚಡಪಡಿಸುತ್ತಿರುವ ಮಾನವರ ಉದ್ಧಾರಕ್ಕಾಗಿ ಅವತಾರ ಮಾಡುತ್ತಾರೆ. ಭರತ ಭೂಮಿಯಲ್ಲಿ ಅನೇಕ ವಿಭೂತಿಪುರುಷರು ಅವತಾರಮಾಡಿ ಇಂದಿಗೂ ಯಶಕಾಯರಾಗಿ ಕಂಗೊಳಿಸುತ್ತಲಿರುವುದು ವಿದಿತವಷ್ಟೇ?

ಬುದ್ಧ, ರಾಮಾನುಜಾಚಾರ್ಯ ಶಂಕರಾಚಾರ್ಯ ಮೊದಲಾದ ವಿಭೂತಿಪುರುಷರೂ ಬಸವೇಶ್ವರ, ಚನ್ನಬಸವೇಶ್ವರ, ಪ್ರಭುದೇವರು, ಇನ್ನೂ ಮುಂತಾದ ಅನೇಕ ಮಹನೀಯರ ಯಶಸ್ಸು ದಿಗಂತ ವ್ಯಾಪಿಸಿದೆ. ಇವರಲ್ಲಿ ಪ್ರತಿಯೊಬ್ಬರೂ ತಮಗೆ ಯುಕ್ತ ತೋರಿದಂತೆ ಜನರಿಗೆ ಸನ್ಮಾರ್ಗವನ್ನು ಸೂಚಿಸಿ ಮಹೋಪಕಾರ ಮಾಡಿದ್ದಾರೆ. ಪೂಜ್ಯರಾದ ಆ ಸತ್ಪುರುಷರೇ ಜಗತ್ತಿನಲ್ಲಿ ದೇದೀಪ್ಯಮಾನವಾಗಿ ಬೆಳಗುವ ದಿವ್ಯಜ್ಯೋತಿಗಳು. ಅವರ ಅಮೃತ ವಾಣಿಗಳೇ ಸಂಸಾರ ಸಮುದ್ರ ಮಧ್ಯದಲ್ಲಿ ಯಾರೊಬ್ಬರೂ ದಿಕ್ಕುಗೆಡದಂತೆ ಬೆಳಕನ್ನು ಬೀರುತ್ತಿರುವ ಶುಭ ತಾರೆಗಳು. ಮಹಾನುಭಾವರಾದ ಆ ಪುಣ್ಯಪುರುಷರೇ ಶಾಶ್ವತ ಯಶಕಾಯದಿಂದ ರಾರಾಜಿಸುತ್ತಿರುವ ಲೋಕೋದ್ಧಾರಕರು

ಮಹಾನುಭಾವರೆಲ್ಲ ಬಸವೇಶ್ವರನ ನೆನವು ಅತಿ ಮಹತ್ವವಾದುದು. ವೀರಶೈವ ಧರ್ಮದ ಇತಿಹಾಸದಲ್ಲಿ ಆತನು ಅದ್ವಿತೀಯ ಪುರುಷನಾಗಿದ್ದಾನೆ. ಆತನ ಜ್ಞಾನ, ದೃಷ್ಟಿ, ತತ್ವಗಳು ನಮ್ಮ ಹೃದಯಗಳನ್ನು ಭೇದಿಸಿ ಗುಪ್ತವಾದ ಆಲೋಚನೆಗಳನ್ನು ಲೋಪದೋಷಗಳನ್ನು ಹಿಡಿದೆಳೆಯುತ್ತವೆ. ಆತನ ಶಕ್ತಿ ನಮ್ಮ ಮನೋಭಿತ್ತಿಯ ಮೇಲೆ

ಮೂರ್ತಿಗೊಂಡು ನಮ್ಮ ಆತ್ಮವನ್ನು ಜಾಗ್ರತಗೊಳಿಸುತ್ತವೆ. ಆತನ ವಚನಗಳ ಬೋಧೆಯನ್ನು ಪಠಿಸಿದವರು ಆ ಮಹಾತ್ಮನ ಸ್ವರೂಪವನ್ನು ಆ ಮೂರ್ತಿಯ ವ್ಯಕ್ತಿತ್ವವನ್ನು ಎಂದಿಗೂ ಮರೆಯರು. ಆತನನ್ನು ಶಿವಶರಣರು ಜೀವಿತ ಕಾಲದಲ್ಲಿಯೇ ಸಾಕ್ಷಾತ್ ಪರಶಿವನ ಅವತಾರವೆಂದು ತಿಳಿದಿದ್ದರು. ಅವನು ಶಿವಶರಣರಲ್ಲೆಲ್ಲ ಅತ್ಯಂತ ಮೇಧಾವಿಯೂ ಜ್ಞಾನಸಂಪನ್ನನೂ ವೈರಾಗ್ಯಪರನೂ ಆದ ಮಹಾತ್ಮನು. ಆತನು ವೀರಶೈವ ಮಾರ್ಗೋಪದೇಶ ಮಾಡಿದನಾದರೂ ತತ್ವದಲ್ಲಿ ಮತಾಭಿಮಾನದ ಸಂಕುಚಿತ ಹೃದಯವಿರಲಿಲ್ಲ. ಸತ್ಯದ ಬೆಳಕನ್ನು ಕಂಡ, ನಿರ್ವಿಕಲ್ಪ ಸಮಾಧಿ ಸ್ಥಿತಿಯನ್ನೈದಿದ ಆ ಮಹಾತ್ಮನ ಹೃದಯವು ವಿಶ್ವವಿಶಾಲವಾದುದು, ಅಖಂಡವಾದುದು. ಆತನ ಭವ್ಯ ಮೂರ್ತಿಯು ಎಲ್ಲರ ಹೃದಯದಲ್ಲೂ ಇರುವುದಾದ್ದರಿಂದ ಪ್ರತಿವರ್ಷ ಆ ಮಹಾತ್ಮನ ದಿನಾಚರಣೆಯನ್ನು ಆಚರಿಸುವುದು.

ಇಂತಹ ಪುಣ್ಯ ಪುರುಷನ ಶ್ರೇಷ್ಠ ಗುಣಗಳನ್ನು ಕೊಂಡಾಡುವುದು ಅತ್ಯಂತ ಅವಶ್ಯಕ ಇರುತ್ತದೆ. ಬಸವೇಶ್ವರನು ತಾನು ನುಡಿದಂತೆ ನಡೆದು ಇತರರಿಗೆ ಮಾರ್ಗದರ್ಶಕನಾಗಿದ್ದಾನೆ. ಅನೇಕ ಪವಾಡಗಳನ್ನು ಮಾಡಿ ಇತರರಿಗೆ ಮೇಲ್ಪಂಕ್ತಿಯಾಗಿದ್ದಾನೆ,

ಬಸವೇಶ್ವರನು ಅವತಾರ ಮಾಡುವ ಕಾಲಕ್ಕೆ ವೀರಶೈವ ಮತದ ಸ್ಥಿತಿ ತುಂಬಾ ಚಿಂತಾಜನಕವಾಗಿತ್ತು. ಇಂಥಾ ಬಿಕ್ಕಟ್ಟಿನ ಸಮಯದಲ್ಲಿ ದ್ವಿತೀಯ ಶಂಭುವಾದ ಬಸವೇಶ್ವರನು ಅವತರಿಸಿ ಚಿಂತಾಜನಕವಾಗಿದ್ದ ವೀರಶೈವ ಮತದಲ್ಲಿ ನವ ಚೈತನ್ಯವನ್ನುಂಟು ಮಾಡಿದನು. ಕೇವಲ ಧಾರ್ಮಿಕದಲ್ಲಿಯೇ ಈತನು ಕಾಲ ಕಳೆಯಲಿಲ್ಲ ರಾಜಕೀಯದಲ್ಲೂ ಅದ್ವಿತೀಯನಾಗಿ ಬಿಜ್ಜಳನ ಪ್ರಧಾನ ಮಂತ್ರಿಯಾಗಿ ತನ್ನ ಬುದ್ಧಿ ಸಾಮರ್ಥ್ಯದಿಂದ ಎಲ್ಲರಿಗೂ ಶ್ರೇಷ್ಠನಾದನು.

ತಂದೆ ತಾಯಿಗಳು ಬಸವೇಶ್ವರನಿಗೆ ತಮ್ಮ ಧರ್ಮಕ್ಕನುಸಾರವಾಗಿ ಉಪನಯನವನ್ನು ಮಾಡಬೇಕೆಂದು ಪ್ರಯತ್ನ ಪಟ್ಟಾಗ ತಂದೆ ತಾಯಿಗಳನ್ನು ತನ್ನ ವಾಕ್‌ಸಾಮರ್ಥ್ಯದಿಂದ ದಂಗುಬಡಿಸಿದ್ದು ಸಾಮಾನ್ಯವೇ? ಎಂಟು ವರ್ಷದ ಬಾಲಕನಲ್ಲಿ ಇಂಥಹ ಅದ್ಭುತ ಶಕ್ತಿಯು ಬರಬೇ

ಕಾದರೆ ಬಸವೇಶ್ವರನು ಅವತಾರ ಪುರುಷನಾಗದೆ ಇದ್ದರೆ ಬರುತ್ತಿತ್ತೇ? ಇದೊಂದೇ ಉದಾಹರಣ ಬಸವೇಶ್ವರನ ವ್ಯಕ್ತಿತ್ವವನ್ನು ಘನತೆಯನ್ನು ತೋರಿಸುತ್ತದಲ್ಲದೆ, ವೀರಶೈವ ಮತದ ಮೇಲ್ಮೆಯನ್ನು ಘನತೆಯನ್ನು ವ್ಯಕ್ತಗೊಳಿಸುತ್ತದೆ. ಬಸವೇಶ್ವರರು ತವುಗೆ ತೋರಿದ ಸತ್ಯಕ್ಕಾಗಿ ಸಮಾಜದ ಸಂಕೊಲೆಗಳನ್ನು ಕತ್ತರಿಸಿದರು. ಜಗತ್ತಿನ ಉದ್ಧಾರಕ್ಕಾಗಿ ಅನೇಕ ಸಂಕಟಗಳನ್ನು ಅನುಭವಿಸಿದರು. ಅಲ್ಪಾವಧಿಯಲ್ಲಿ ಇದ್ದ ಸೃಷ್ಟಿಯನ್ನು ಸಂಹಾರ ಮಾಡಿ ಹೊಸ ಸೃಷ್ಟಿಯನ್ನು ನಿರ್ಮಿಸಿದರು. ಅಂದರೆ ಇದ್ದ ಸಮಾಜದ ಸ್ಥಿತಿಯನ್ನು ಬೇರು ಸಹಿತ ಅಲ್ಲಾಡಿಸಿ ಬೇರೊಂದು ಹೊಸ ಸಮಾಜ ಪದ್ಧತಿಯನ್ನು ಸೃಷ್ಟಿಸಿದರು. ಇಂಥವರು ಸಾಮಾನ್ಯ ಪುರುಷರೇ?

ಬಸವಣ್ಣನವರು ಭಾಷಾ ಪಂಡಿತರಲ್ಲ. ಭಾಷಾ ಜನಕರು. ಅವರ ವಚನಗಳು ಕನ್ನಡ ನುಡಿಯು ಎಷ್ಟು ವೀರ್ಯವತ್ತಾಗಬಹುದೆಂಬುದನ್ನು ತೋರಿಸುತ್ತದೆ. ಅವರ ಹೃದಯ ಕರಗಿ ನೀರಾಗಿ ಅದು ವಚನರೂಪ ದಲ್ಲಿ ಹರಿದಿದೆ. ಆ ಪ್ರವಾಹದಲ್ಲಿ ಅವರ ವಿಚಾರಗಳು ಭೋರ್ಗರೆ ಯುತ್ತಿವೆ. ಅಲ್ಲಿ ಅವರ ಅಂತರಂಗದ ಅಲೆಗಳು ನಲಿಯುತ್ತಿವೆ. ತತ್ವ ಗಳು ಥಳಥಳಿಸುತ್ತಿವೆ. ಅವು ಅವರ ಮಿದುವಾದ ಮೃದು ನುಡಿಗಳ. ಬಿರಕು ಬಿರು ನುಡಿಗಳಲ್ಲಿ ವಚನಗಳಲ್ಲಿ ಅಂತಃಕರಣ ತುಂಬಿ ತುಳು ಕಾಡುತ್ತಿದೆ. ಸಾಧು ವೃತ್ತಿಯು ಸೋನೆ ಸುರಿಯುತ್ತಿದೆ. ಅನುಭವದ ಕಾಠಿಣ್ಯವು ಕಂಗೊಳಿಸುತ್ತಿದೆ. ವಿಚಾರದಲ್ಲಿ ಅಚ್ಚುಅಚಲವಾಗಿದೆ. ಬಸವೇಶ್ವರನು ವೀರಶೈವ ಸಮಾಜ ಹಿತವನ್ನೇ ಬಯಸಿದನಂತಲ್ಲ. ಕರ್ನಾಟಕದ ಏಳಿಗೆಯೇ ಅವನ ಮುಖ್ಯಧ್ಯೇಯವಾಗಿತ್ತು. ಆತನು ತನ್ನ ಜೀವಿತ ಕಾಲವನ್ನೆಲ್ಲ ದೇಶೋದ್ಧಾರಕ್ಕಾಗಿಯೇ ವಿನಿಯೋಗಿಸಿ ದನು. ಅವನ ವಿಚಾರದಿಂದ ಹೊರಟ ತತ್ವಗಳು ಅವನುಸುಡಿದ ನೀತಿಯ ನುಡಿಗಳು ಮತ್ತು ಅವನು ಮಾಡಿದ ಕಾರ್ಯಗಳು ಇತಿಹಾಸದ ಪುಟ ಗಳಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡತಕ್ಕದ್ದಾಗಿವೆ.

ಬಸವೇಶ್ವರನು ನಿಜವಾದ ಸತ್ಯಾಗ್ರಹಿಯಾಗಿದ್ದನು. ಸತ್ಯವನ್ನು ಎತ್ತಿಹಿಡಿಯುವದರಲ್ಲಿ ಪ್ರಾಣ ಹೋಗುವ ಪ್ರಸಂಗ ಬಂದರೂ ಬಿಡು ವವನಲ್ಲ ಬಸವೇಶ್ವರನು ಬಿಜ್ಜಳನ ಮಂತ್ರಿಯಾಗಿರಲು ಚಾಡಿಕಾರರು

"ಬಸವನು ಬೊಕ್ಕಸವನ್ನೆಲ್ಲ ಬರಿದು ಮಾಡಿದನು. ಯಾವತ್ತೂ ಜಂಗಮ ರನ್ನು ಕೂಡಿ ಅವರ ಮನೋ ಇಷ್ಟಾರ್ಥವನ್ನು ನೆರವೇರಿಸುತ್ತ ಲೀಲಾ ವಿನೋದದಲ್ಲಿ ಇರುವನು, ಎಂದು ಅನೇಕ ತರದಲ್ಲಿ ರಾಜನಿಗೆ ಚಾಡಿ ಹೇಳಿದರು. ಆದರೆ ಬಸವನು ಪ್ರತಿಒಂದು ಪ್ರಸಂಗದಲ್ಲಿ ಯಾರ್ರೋ ತಗೊಂಡು ಸತ್ಯಸಂಗತಿಯನ್ನು ಮನಗಾಣಿಸಿಕೊಡುತ್ತಿದ್ದನು ಬಸವೇಶ್ವ ರರು ಶಾಂತಚಿತ್ತರೂ ದೃಢ ಮನಸ್ಸಿನವರೂ ಆದುದರಿಂದ ರಾಜನೊ ಡನೆ ವಿರೋಧ ಕಟ್ಟಿಕೊಳ್ಳಲಿಲ್ಲ. ಬಸವನ ಮಹಿಮೆಯನ್ನು ನೋಡಿ ರಾಜನಲ್ಲಿ ಪೂಜ್ಯತೆಯು ಅಂಕುರಿಸಿತು. ಇದಲ್ಲವೇ ಸತ್ಯಾಗ್ರಹದ ಬಲವು.

ಬಸವೇಶ್ವರನ ಸಮಾಜ ಸುಧಾರಣೆಯನ್ನು ಸ್ವಲ್ಪ ನಿವೇದಿಸುವ. ಬಸ ವೇಶ್ವರನ ಕಾಲದಲ್ಲಿ ವೀರಶೈವ ಸಮಾಜದಲ್ಲಿ ಅನೇಕ ಒಳಭೇದಗಳು ಇದ್ದವು. ವೀರಶೈವರಲ್ಲೇ ನಾನು ಹೆಚ್ಚು ತಾನು ಹೆಚ್ಚು ಎಂಬ ವೈಷಮ್ಯದಿಂದ ಐಕ್ಯಮತ್ಯವೂ ಸಹನಶೀಲತೆಯೂ ತಪ್ಪಿಹೋಗಿದ್ದವು ಬಸವೇಶ್ವರನು ಈ ಒಳಭೇದಗಳನ್ನೆಲ್ಲ ಬುಡಸಹಿತ ಕಿತ್ತೊಗೆದು ಶಿವಭಕ್ತ ರೆಲ್ಲರೂ ಒಂದೇ ಎಂದು ಸಾರಿದನು. ಆತನು ತನ್ನ ಒಂದು ವಚನ ದಲ್ಲಿ "ಆವಕುಲವಾದರೇನು? ಶಿವಲಿಂಗವಿದ್ದವನೆ ಕುಲಜ. ಕುಲವನರಸು ವರೆ ಶರಣರಲ್ಲಿ" ಎಂದು ಹಾಡಿ ಮದೋನ್ಮತ್ತ ಮಾನವನನ್ನು ಬಡಿದೆಬ್ಬಿಸಿದನು.

ಬಸವೇಶ್ವರನು ಅನೇಕ ಜಾತಿಯವರನ್ನು ಲಿಂಗಾಯತರನ್ನಾಗಿ ಮಾಡಿರುವನು. ಆದರೆ ಅವರು ಎಂಥವರು ಎಂದರೆ! ಮಹಾಮೌನಿ ಗಳೂ, ಜ್ಞಾನಿಗಳೂ, ಆಚಾರನಿರತರೂ ಕೇವಲ ಸಾತ್ವಿಕ ಆಹಾರಿ ಗಳೂ ಆಗಿದ್ದರು. ಚನ್ನಯ್ಯ ಕಕ್ಕಯ್ಯ ಇನ್ನೂ ಮುಂತಾದವರು ಅಂತ್ಯಜರಿದ್ದರು. ಇನ್ನೂ ಅನೇಕರನ್ನು ಬಸವೇಶ್ವರರು ತಮ್ಮ ಅಮೃತ ಹಸ್ತದಿಂದ ಆಶೀರ್ವದಿಸಿರುವ ಶರಣರನ್ನಾಗಿ ಮಾಡಿದರು. ಬಸವೇಶ್ವರು ಗುಣಕ್ಕೆ ಹೆಚ್ಚು ಪ್ರಾಧಾನ್ಯತೆ ಕೊಟ್ಟರು. ಸಮಾಜದಲ್ಲಿ ಬಲವಾದ ಐಕ್ಯವನ್ನುಂಟು ಮಾಡುವ ದೃಷ್ಟಿಯಿಂದಲೇ ಒಳಭೇದಗಳನ್ನು ಕಿತ್ತೊ ಗೆದರು. ಯಾವ ಜಾತಿಯವರೇ ಆಗಲಿ ಲಿಂಗಾಯತ ಧರ್ಮವನ್ನು ಸ್ವೀಕರಿಸಲು ಧರ್ಮದ ಬಾಗಿಲನ್ನು ತೆರೆದರು. ಅವರೇ ತಮ್ಮ ಒಂದು ವಚನದಲ್ಲಿ ಶಿವಶರಣರಿಗೆ ಎಂಥ ಪ್ರಾಧಾನ್ಯತೆ ಕೊಟ್ಟಿದ್ದರು ಎಂಬು ದನ್ನು ಈ ವಚನದಲ್ಲಿ ನಾವು ತಿಳಿಯಬಹುದು.

ಸೆಟ್ಟಿಯೆಂಬೆನೆ ಸಿರಿಯಾಳನ
ಮಡಿವಾಳನೆಂಬೆನೆ ಮಾಚಯ್ಯನ
ಡೋಹರನೆಂಬೆನೇ ಕಕ್ಕಯ್ಯನ

ಆನುಹಾರುವನೆಂದಡೆ ಕೂಡಲ ಸಂಗಯ್ಯನಗುವನಯ್ಯ

ಎಂದು ಹಾಡಿ ಮಾಚಯ್ಯ, ಚನ್ನಯ್ಯ, ಕಕ್ಕಯ್ಯ ಇವರುಗಳನ್ನು ಹೊಗಳಿದ್ದಾರೆ. ನಾನು ಶ್ರೇಷ್ಠನೆಂಬ ಭಾವನೆ ಹಿತದೃಷ್ಟಿಯಿಂದ ಘಾತುಕವಾದುದು. ಜನ ಸಂಗದಲ್ಲಿ ಅಪರಿಶುದ್ಧತ್ವವನ್ನು ಕಲ್ಪಿಸಿ, ಶ್ವಪಚರು, ಕುಲಹೀನರು, ಸುರಾಪಾನಿಗಳು ಎಂದು ಹೀಯಾಳಿಸುವುದಕ್ಕಿಂತ ಅವರಿಗೆ ಆಯಾ ಮಾರ್ಗವನ್ನು ತಪ್ಪಿಸಿ ಸನ್ಮಾರ್ಗಿಗಳನ್ನಾಗಿ ಮಾಡುವುದು ಉದ್ಧಾರಕರ ಕರ್ತವ್ಯವಲ್ಲವೆ?

ಬಸವಣ್ಣನವರ ಉಜ್ವಲ ಭಾವನೆ, ಉತ್ಕಟವಾದ ಶಿವಭಕ್ತಿ, ವಿಶ್ವ ಕುಟುಂಬದಲ್ಲಿ ಪ್ರೇಮ, ಅವರ ವಿಶಾಲ ಹೃದಯ, ಜನತಾ ಸೇವೆಯಲ್ಲಿದ್ದ ಆಸಕ್ತಿ, ಹೀನ ಕುಲಜರನ್ನು ಉತ್ತಮ ಕುಲಜರನ್ನಾಗಿ ಮಾಡುವ ಆಚರಣೆ, ಅತುಲ ಸ್ವಾರ್ಥತ್ಯಾಗ ಇದ್ದುದರಿಂದಲೇ ಇಂದಿನ ಸಮಾಜದ ವ್ಯಕ್ತಿಗಳು ಹಿರಿಹಿಗ್ಗುತ್ತಿರುವುದು.

ಬಸವೇಶ್ವರರು ಸ್ತ್ರೀಯರಿಗೆ ಪುರುಷರಂತೆಯೇ ಸಮಾನ ಗೌರವ ಕಲ್ಪಿಸಿಕೊಟ್ಟಿದ್ದಾರೆ. ಸ್ತ್ರೀ ಜಗನ್ಮಾತೆ ಎಂದಿದ್ದಾರೆ. ಅನುಭವ ಮಂಟಪದಲ್ಲಿ ಅವರಿಗೆ ಸರಿ ಸಮಾನವಾದ ಸ್ಥಳವನ್ನು ಕೊಟ್ಟಿದ್ದರು. ಈ ಸೌಲಭ್ಯ ದೊರೆದಿದ್ದರಿಂದಲೇ ಅನೇಕ ಮಂದಿ ಸ್ತ್ರೀಯರು ಮುಂದುವರಿದರು. ಸ್ತ್ರೀ ವಿಧ್ಯಾಭ್ಯಾಸಕ್ಕೂ, ಸ್ವತಂತ್ರತೆಗೂ ಹೆಚ್ಚಿನ ಸ್ವಾತಂತ್ರ್ಯವನ್ನು ಸ್ತ್ರೀಯರು ಪಡೆದದ್ದು ಎಂದರೆ ಬಸವೇಶ್ವರರ ಕಾಲದಲ್ಲಿ. ಸ್ತ್ರೀಯರಿಗೆ ಪುರುಷರಂತೆ ಎಲ್ಲಾ ಸಂಸ್ಕಾರಗಳುಂಟು. ಧರ್ಮವಿಧಿಗಳಲ್ಲಿಯೂ ಪುರುಷರಿಗಿರುವಂತೆಯೇ ಅವರಿಗೂ ಸಮನಾದ ಅಂಗವುಂಟು. ಸ್ತ್ರೀಯರ ವಿಷಯದಲ್ಲಿದ್ದ ಅನಾದರಣೆಯನ್ನು ಕಳೆದು ಬಸವೇಶ್ವರರು ಸ್ತ್ರೀ ಸಮಾಜದ ಘನತೆಯನ್ನು ಬೆಳೆಸಿದರು. ಶರಣರಿಂದ ಉಪದಿಷ್ಟವಾದ ಶರಣ ಸತಿ ಲಿಂಗ ಪತಿ ಎಂಬ ವೀರಶೈವ ಸಿದ್ಧಾಂತಾನುಸಾರವಾಗಿ ಲಿಂಗವನ್ನೇ ಪತಿಯನ್ನಾಗಿ ಭಾವಿಸಿ ತಾವೇ ಸತಿಯಾಗಿ ಗಾಢವಾದ ದೃಢ ಭಕ್ತಿಯಿಂದ ಲಿಂಗದೇವನ್ನು ಮಹದೇವಿ ಅಕ್ಕನವರು

ಪೂಜಿಸಿ ಸ್ತ್ರೀ ಸಮಾಜಕ್ಕೆ ಆದರ್ಶ ವ್ಯಕ್ತಿನಿಯಾಗಿ ರಾಜಿಸುತ್ತಿರುವರು.

ಕಾಯಕವೇ ಕೈಲಾಸವೆಂದು ಬಸವೇಶ್ವರರು ಹಾಡಿ ಕಾಯಕದ ಹಿರಿಮೆಯನ್ನು ಜನರಿಗೆ ತೋರಿಸಿ ಕೊಟ್ಟರು. ಅನೇಕ ಶರಣರು ಸಣ್ಣ ಸಣ್ಣ ಕಾಯಕ ಮಾಡುತ್ತಿದ್ದರು. ಅವರು ಅದನ್ನು ಪವಿತ್ರ ಕರ್ತವ್ಯವೆಂದು ತಿಳಿದು ಆಚರಿಸುತ್ತಿದ್ದರು. ಮಡಿವಾಳ ಮಾಚಯ್ಯನವರು ಬಟ್ಟೆಗಳನ್ನು ತೊಳೆದು, ಮೋಳಿಗೆ ಮಾರಯ್ಯನವರು ಕಟ್ಟಿಗೆಯನ್ನು ತಂದು ಜೀವಿಸಿ, ಈ ಅಲ್ಪದರಲ್ಲಿಯೇ ತಮ್ಮ ಕುಟುಂಬವನ್ನೂ ಜಂಗಮರನ್ನೂ ತೃಪ್ತಿ ಪಡಿಸುತ್ತಿದ್ದರು. ಇನ್ನೂ ಮುಂತಾದ ಅನೇಕ ಶಿವಶರಣರು ತಮ್ಮ ತಮ್ಮ ಕಾಯಕದಲ್ಲಿ ನಿರತರಾಗಿ ಸತ್ಯ ಮುಕ್ತಿಯನ್ನೈದಿರುತ್ತಾರೆ. ಲಿಂಗಾಯತರಲ್ಲಿ ಈಗಲೂ ಎಲ್ಲಾ ಉದ್ಯೋಗಗಳನ್ನು ಮಾಡುವರು ಸಿಗುತ್ತಾರೆ. ಬಸವೇಶ್ವರರು ಎಲ್ಲಾ ಕೈಕಸಬುಗಳೂ ಉತ್ತಮವಾದವುಗಳೆಂದೇ ತಿಳಿದು ಅವುಗಳಿಗೆ ಸಮಾನ ಯೋಗ್ಯತೆ ಕೊಟ್ಟರು. ಯಾವ ಕಾಯಕವನ್ನು ಮಾಡುತ್ತಿದ್ದರೂ ಅವರು ಶಿವಭಕ್ತಿ ಸದಾಚಾರಸಂಪನ್ನರಾಗಿದ್ದರೆ ಪೂಜ್ಯರೆಂದೇ ಭಾವಿಸುತ್ತಿದ್ದರು. ಬಸವೇಶ್ವರರು ತಮ್ಮ ಒಂದು ವಚನದಲ್ಲಿ

ದೇವ ಸಹಿತ ಭಕ್ತರು ಮನೆಗೆ ಬಂದರೆ
ಕಾಯಕವಾವುದೆಂದು ಬೆಸಗೊಂಡೆನಾದರೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ ತಲೆದಂಡ
ಕೂಡಲ ಸಂಗಮದೇವಾ ಭಕ್ತರಲ್ಲಿ ಕುಲವನರಸಿದರೆ
ನಿಮ್ಮರಾಣೆವಾಸದಾಣೆ

ಎಂದು ಹಾಡಿ ಮಹತ್ತಿನ ಪದವಿಯನ್ನು ಕಾಯಕ ಶಬ್ದಕ್ಕೆ ಕಲ್ಪಿಸಿ ಕೊಟ್ಟರು. ಸಕಲರೂ ಏನಾದರೊಂದು ಉದ್ಯೋಗದಿಂದ ಗುರು, ಲಿಂಗ, ಜಂಗಮ ಸೇವಾತತ್ಪರರಾಗಿ ಜೀವಿಸುವ ಸ್ವಾವಲಂಬನೆಯ ತತ್ವವನ್ನು ತಂದವರು ಬಸವೇಶ್ವರರು

ಈ ಮಹಾತ್ಮರ ಮಹತ್ಕಾರ್ಯದಿಂದ ದೇಶದ ಸಾಮಾಜಿಕ ಮತ್ತು ಸಾಂಪತ್ತಿಕ ಉನ್ನತಿಗಳಾದಂತೆಯೇ ಬೌದ್ಧಿಕ ಅಭಿವೃದ್ಧಿಯೂ ಉಂಟಾ

ಯಿತು. ಮಾತೃಭಾಷೆಯಾದ ಕನ್ನಡದಲ್ಲಿಯೇ ಧಾರ್ಮಿಕ ಸಾಮಾಜಿಕ ನೈತಿಕ ವಿಷಯಗಳನ್ನು ಬೋಧಿಸಲು ಉಪಕ್ರಮಿಸಿದರು. ಆದ್ದರಿಂದ ಜನಸಾಮಾನ್ಯರಲ್ಲಿಯೂ ಕೂಡ ಮಹತ್ತರವಾದ ವಿಚಾರ ಕ್ರಾಂತಿಯಾಗಿ ಲೋಕ ಶಿಕ್ಷಣಕ್ಕೆ ಬಹು ಸಹಾಯವಾಯಿತು.

ಈ ಪ್ರಕಾರ ಯಾವ ಮಹಾತ್ಮರ ಅವತಾರ ಕೃತ್ಯವು ಕರ್ನಾಟಕದ ಧಾರ್ಮಿಕ, ಸಾಮಾಜಿಕ, ಸಾಂಪತ್ತಿಕ, ಬೌದ್ಧಿಕ ಮತ್ತು ಸಾಹಿತ್ಯಗಳ ಅಭಿವೃದ್ಧಿಯಾಯಿತೋ ಆ ಮಹಾನುಭಾವರಾದ ಬಸವಣ್ಣನವರು ಜಗತ್ತಿನ ಮಹಾಪುರುಷರೆಂದು ಸಿದ್ಧವಾಗುವುದಿಲ್ಲವೆ? ಜಗತ್ತಿನ ಉನ್ನತಿಗೆ ಯಾವ ಯಾವ ರೀತಿಯಲ್ಲಿ ಪ್ರಯತ್ನಿಸಬೇಕೆಂದು ಆಧುನಿಕ ರಾಷ್ಟ್ರಭಕ್ತರು ಈಗ ಹೇಳುತ್ತಿದ್ದಾರೆಯೋ ಅಂತಹ ಮಹತ್ ಕಾರ್ಯಗಳನ್ನು ೭೦೦ ವರ್ಷಗಳ ಹಿಂದೆಯೇ ಜನಾಂಗದಲ್ಲಿ ನೆಲೆಗೊಳಿಸಿದ ಈ ಜಗತ್ತಿನ ಉದ್ಧಾರಕರ್ತರು ನಮಗೆ ಮಾರ್ಗದರ್ಶಿಗಳಲ್ಲವೇ? ಇಂಥ ಮಹಾವಿಭೂತಿಯನ್ನು ನಮ್ಮ ಕರ್ನಾಟಕ ಮಾತೆಯು ಹೆತ್ತುದಕ್ಕೋಸ್ಕರ ನಾವು ಈ ಭೂಮಾತೆಗೆ ಅತ್ಯಂತ ಋಣಿಗಳಾಗಿಲ್ಲವೆ? ಈಗ ನಮ್ಮ ಕನ್ನಡ ಮಾತೆಗೆ ಉಂಟಾಗಿರುವ ನಾನಾ ವಿಪತ್ತುಗಳನ್ನು ಸ್ವಲ್ಪ ಮಟ್ಟಿಗಾದರೂ ದೂರ ಮಾಡುವದರ ಮೂಲಕ ಆ ಮಾತೃ ಋಣವನ್ನು ಕಳೆದುಕೊಳ್ಳುವುದು ಆಧುನಿಕ ಜನತೆಯ ಕರ್ತವ್ಯವಲ್ಲವೆ?

# ಬೌದ್ಧ ಮತ್ತು ವೀರಶೈವ ಧರ್ಮಗಳು.

( ಲೇಖಕ :— ರಾ|| ಬ|| ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ )

(ಹಿಂದಿನಿಂದ ಮುಂದೆಸಾಗಿದ್ದು)

ಹಿಂದಿನ ಸಂಚಿಕೆಯಲ್ಲಿ ನಾವು ಡಾ|| ಅಂಬೇಡಕರರು ಹಿಂದೂ ಧರ್ಮದ ಮೇಲಿನ ತಮ್ಮ ಆಕ್ಷೇಪಗಳನ್ನು "ಮಹಾಬೋಧಿನಿ" ಎಂಬ ಪತ್ರಿಕೆಯಲ್ಲಿ ವಿವರಿಸಿದ್ದನ್ನು ನಾವು ಉಲ್ಲೇಖಿಸಿದ್ದೇವೆ. ಅವುಗಳಲ್ಲಿ ಧರ್ಮಸ್ಥಾಪಕರು ತಾವು ದೇವರಿಂದ ಪ್ರೇರಿತರಾದವರೆಂದು ಹೇಳುತ್ತಿರುವದು ಒಂದು ಇರುತ್ತದೆ. ಇದು ಸರಿಯಾದುದಲ್ಲವೆಂದು ಡಾ|| ಅಂಬೇಡಕರರ ಅಭಿಪ್ರಾಯವು. ಇದು ಏನೇ ಇರಲಿ ಬಸವೇಶ್ವರನು ಮಾತ್ರ ತನ್ನನ್ನು ಕುರಿತು ಹೀಗೆ ಹೇಳಿಕೊಂಡಿಲ್ಲೆಂಬುದನ್ನು ಅದೇ ಸಂಚಿಕೆಯಲ್ಲಿ ನಾವು ವಿವರಿಸಿದ್ದೇವೆ. ಹಿಂದೂಧರ್ಮಕ್ಕೆ ನೀತಿಯು ತಳಹದಿಯಾಗಿಲ್ಲೆಂಬುದು ಡಾ|| ಅಂಬೇಡಕರರು ಮಾಡುವ ೨ ನೇ ಆಕ್ಷೇಪಣೆ ಇದೆ. ಆದರೆ ವೀರಶೈವ ಧರ್ಮಕ್ಕೆ ನೀತಿಯೇ ತಳಹದಿಯಾಗಿದೆಂದು ಅವರ ಅಸಂಖ್ಯ ವಚನಗಳಿಂದ ಸಿದ್ಧವಾಗುತ್ತದೆಂಬುವನ್ನು ನಾವು ಹಿಂದೆ ಸ್ಪಷ್ಟಪಡಿಸಿದ್ದೇವೆ. ಇವಲ್ಲದೆ ಅವರು ಹಿಂದೂಧರ್ಮದ ವಿಷಯವಾಗಿ ಇನ್ನೂ ಕೆಲವು ಆಕ್ಷೇಪಣೆಗಳನ್ನು ಮಾಡಿದ್ದು ಅವುಗಳನ್ನು ನಾವು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತ ಇವುಗಳು ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲವೆಂಬುದನ್ನು ಈ ಲೇಖದಲ್ಲಿ ವಿವೇಚಿಸಿದ್ದೇವೆ.

## ೩ ನೇ ಆಕ್ಷೇಪಣೆ.

ಹಿಂದೂ ಧರ್ಮದಲ್ಲಿ ಪೊವಾಡಗಳ ವಿವರಣೆಗಳು ಮಿತಿ ಮೀರಿ ಇದ್ದು ಇವು ಸಮಾಜದಲ್ಲಿ ಅಂಧಶ್ರದ್ಧೆಯನ್ನು ಹೆಚ್ಚಿಸುತ್ತವೆಂಬುದು ಡಾ|| ಅಂಬೇಡಕರರು ಮಾಡುವ ೩ ನೇ ಆಕ್ಷೇಪಣೆ ಇದೆ. ಆದರೆ ಶಿವಶರಣರ ಧರ್ಮದಲ್ಲಿ ಪೊವಾಡಗಳಿಗೆ ಇಂಬಿಲ್ಲ. ಅವರು ಪೊವಾಡಗಳನ್ನು ಮಾಡ

ಕೂಡದೆಂದು ಅವರ ಅಸಂಖ್ಯವಚನಗಳಿವೆ. ಅವರು ಆಕಾಶಗಮನ ಜಲಸ್ತಂಭ ಅಗ್ನಿಸ್ತಂಭ ಇಂಥ ಕೃತಿಗಳನ್ನು ನಿರಾಕರಣೆಮಾಡಿದ್ದಾರೆ. ಯೋಗಾಭ್ಯಾಸದ ಮೂಲಕ ಮನುಷ್ಯನು ತನ್ನ ಇಂದ್ರಿಯಗಳ ಸಾಮರ್ಥ್ಯವನ್ನು ಬೆಳಿಸಲು ಶಕ್ಯವಿದ್ದರೂ ಅವನು ಈ ರೀತಿಯ ಸಾಧನೆಗಳನ್ನು ಮಾಡಕೂಡದೆಂದು ಅವರು ಬಹು ಸ್ಪಷ್ಟವಾಗಿ ತಮ್ಮ ವಚನಗಳಲ್ಲಿ ನಿವೇದಿಸಿದ್ದಾರೆ. ಆದರೆ ಇವುಗಳ ಬದಲು ಮನುಷ್ಯನು ತನ್ನ ನಡೆ, ಸದ್ಗುಣಗಳು, ಧರ್ಮವೃತ್ತಿ, ಸದಾಚಾರ ಇವುಗಳನ್ನು ಹೆಚ್ಚಿಸಲು ಪದೇ ಪದೇ ಬೋಧಿಸುತ್ತಾರೆ ವೀರಶೈವ ಪುರಾಣಗಳಲ್ಲಿ ಶಿವಶರಣರ ಅಸಂಖ್ಯ ಚರಿತ್ರೆಗಳು ಇರುತ್ತವೆ ಅವುಗಳಲ್ಲಿ ಪವಾಡಗಳ ವರ್ಣನೆಗಳಿವೆ. ಆದರೆ ಅವೆಲ್ಲವು ಶಿವಶರಣರು ಗತಿಸಿಹೋದ ಬಳಿಕ ಅವರ ವಿಷಯವಾಗಿ ಭಕ್ತಿಭಾವವುಳ್ಳವರು ಅವರ ಮಹತ್ವವನ್ನು ಜನತೆಯಲ್ಲಿ ಹೆಚ್ಚಿಸುವದರ ಸಲುವಾಗಿ ಕಲ್ಪಿಸಿದವುಗಳಿರುತ್ತವೇ ಹೊರತು ಅವು ನಿಜವಾದ ಸಂಗತಿಗಳಲ್ಲ. ಯಾಕಂದರೆ ಪವಾಡಗಳನ್ನು ಮಾಡಕೂಡದೆಂದು ಶಿವಶರಣರ ಸ್ಪಷ್ಟಉಕ್ತಿಗಳಿರುತ್ತವೆ. ಆದ್ದರಿಂದ ಈ ಆಕ್ಷೇಪಣೆಯು ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲ.

## ೪ನೇ ಆಕ್ಷೇಪಣೆಯು.

ಹಿಂದೂ ಧರ್ಮದಲ್ಲಿ ವಿಧಿ ವಿಧಾನಗಳ ಆಚರಣೆಗಳೂ ಅನೇಕ ತರದ ಕರ್ಮಗಳೂ ತುಂಬಿಹೋಗಿದ್ದು ಇವು ಮನುಷ್ಯನ ವಿಕಾಸಕ್ಕೆ ಕಾರಣವಲ್ಲ, ಇಂಥವುಗಳು ಬುದ್ಧನ ಧರ್ಮದಲ್ಲಿ ಇರುವದಿಲ್ಲ, ಆದುದರಿಂದ ಹಿಂದೂ ಧರ್ಮವನ್ನು ಅನುಸರಿಸುವದರಿಂದ ಆವ ಪ್ರಯೋಜನವಿಲ್ಲವೆಂದು ಡಾ || ಅಂಬೇಡಕರರ ೪ನೇ ಆಕ್ಷೇಪಣೆ ಇದೆ ಇದು ಕೆಲವುಟ್ಟಿಗೆ ಬ್ರಾಹ್ಮಣ ಧರ್ಮಕ್ಕೆ ಅನ್ವಯಿಸಬಹುದು. ಯಾಕಂದರೆ ಅದರಲ್ಲಿ ಅಸಂಖ್ಯ ಕರ್ಮಗಳ ವಿವರಣೆಯು ಇದೆ. ಆದರೆ ಇದು ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲ. ವೀರಶೈವರು ಕರ್ಮಮಾರ್ಗವನ್ನು ತ್ಯಜಿಸಿದ್ದಾರೆ. ಬ್ರಾಹ್ಮಣರು ಆಚರಿಸುವ ಕರ್ಮಗಳನ್ನು ಅವರು ಬಹುಬಗೆಯಾಗಿ ಖಂಡಿಸಿದ್ದಾರೆ. ಆದರೆ ಈ ಕರ್ಮಗಳನ್ನು ಶಿವಶರಣರು ಹೊಡೆದು ಹಾಕಿ ಪರಿಶುದ್ಧವಾದ ತಮ್ಮ ಷಟ್‌ಸ್ಥಲ ಮಾರ್ಗವನ್ನು ಕಂಡುಹಿಡಿದು ಅದ

ರಂತೆ ಆಚರಿಸುತ್ತ ಬಂದಿದ್ದಾರೆ. ಈ ಮಾರ್ಗದಲ್ಲಿ ಭಕ್ತಿ, ಜ್ಞಾನ, ಯೋಗ ಇವುಗಳ ಸುಂದರವಾದ ಸಮ್ಮೇಲನವಿದೆ. ಇವುಗಳ ತಿಳವಳಿಕೆಯನ್ನು ಮಾಡಿಕೊಂಡು ಮನುಷ್ಯನು ಆಚರಿಸತಕ್ಕದ್ದು. ಇದರಲ್ಲಿ ಅಂಧ ಶ್ರದ್ಧೆ ಎಂಬುದಿಲ್ಲ. ಈ ಕ್ರಿಯೆಗಳ ಮೂಲಕ ಮನುಷ್ಯನು ತನ್ನ ಬಹಿರಂಗದ ಮತ್ತು ಅಂತರಂಗದ ಆಚರಣೆಗಳನ್ನು ಹೇಗೆ ಶುದ್ಧಗೊಳಿಸಬೇಕೆಂಬುದನ್ನು ಶಿವಶರಣರು ತಮ್ಮ ಉಕ್ತಿಗಳಲ್ಲಿ ಬಹು ಸ್ಪಷ್ಟವಾಗಿ ಹೇಳಿದ್ದಾರೆ. ಇವು ಗಳಲ್ಲಿ ಮುಚ್ಚು ಮರೆಗಳೆಂಬುವು ಇಲ್ಲ. ಈ ವಿಷಯದಲ್ಲಿ ಶಿವಶರಣರ ಧರ್ಮವನ್ನು ಸರಿಗಟ್ಟುವಂಥ ಧರ್ಮವು ಹಿಂದುಸ್ಥಾನ ದೇಶದಲ್ಲಿ ಕೆಲವು ಮಾತ್ರ ಇವೆ. ಆದುದರಿಂದ ಡಾ॥ ಅಂಬೇಡಕರ ಇವರ ಈ ಆಕ್ಷೇಪಣೆಯು ಈ ವಿಷಯದಲ್ಲಿ ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲ.

## ೫ ನೆಯ ಆಕ್ಷೇಪಣೆಯು.

ಹಿಂದೂಧರ್ಮವು ಚಾತುರ್ವರ್ಣಗಳನ್ನು ಕಲ್ಪಿಸಿ ಸಮಾಜದಲ್ಲಿ ಉಚ್ಚನೀಚವೆಂಬ ಸಂಕುಚಿತ ಪ್ರವೃತ್ತಿಯನ್ನು ಉಂಟುಮಾಡಿದೆ ಇದ ರಿಂದ ಸಮಾಜಕ್ಕೆ ಅದು ಅತ್ಯಂತ ಹಾನಿಯನ್ನು ಮಾಡಿದೆ. ಈ ಕಾರ ಣಕ್ಕೋಸ್ಕರ ಕೆಳಗಿನ ವರ್ಗದವರು ಉನ್ನತ ಸ್ಥಿತಿಗೆ ಬರದಂತೆ ಆಗಿದೆ. ಅಸ್ಪೃಶ್ಯರೆನಿಸಿಕೊಳ್ಳುವವರ ಸುಧಾರಣೆಗೆ ಈ ವಿಚಾರಗಳು ತಡೆಯ ನ್ನುಂಟುಮಾಡಿರುತ್ತವೆ. ಹಿಂದೂಧರ್ಮದ ಮೇಲೆ ದೊಡ್ಡ ಮತ್ತು ಮಹತ್ವದ ಆಕ್ಷೇಪಣೆಯು ಇದಾಗಿರುತ್ತದೆಂದು ಡಾ॥ ಅಂಬೇಡಕರರವರು ತಮ್ಮ ಲೇಖದಲ್ಲಿ ಬಹು ವಿಸ್ತಾರವಾಗಿ ಹೇಳಿದ್ದಾರೆ.

ಈ ಆರೋಪವು ನಿಜವಾಗಿರುತ್ತದೆಂದು ಎಲ್ಲ ಹಿಂದುಗಳು ಒಪ್ಪ ತಕ್ಕ ಸಂಗತಿಯಾಗಿದೆ. ಇದರಿಂದ ಹಿಂದೂ ಸಮಾಜವಲ್ಲಿ ಭಿನ್ನತೆಗಳುಂ ಟಾಗಿ, ಅದರ ಪ್ರಗತಿಗೆ ಹಾನಿಯಾಗಿರುತ್ತದೆಂಬುದು ನಿರ್ವಿವಾದವು. ಇದು ಹಿಂದೂ ಸಮಾಜಕ್ಕೆ ಸಾಮಾನ್ಯವಾಗಿ ಅನ್ವಯಿಸಿದರೂ ಇದು ವೀರಶೈವ ಸಮಾಜಕ್ಕೆ ಮಾತ್ರ ಅನ್ವಯಿಸುವದಿಲ್ಲ. ವೀರಶೈವ ಧರ್ಮವು ಚಾತುರ್ವರ್ಣಗಳನ್ನು ಒಪ್ಪಿಕೊಳ್ಳುವದಿಲ್ಲ. ಸ್ತ್ರೀಪುರುಷರೆಲ್ಲ ಸಮಾನ ರೆಂಬ ವಿಚಾರಗಳನ್ನು ಅದು ಯಾವಾಗಲೂ ಪ್ರಸ್ಥಾಪಿಸುತ್ತ ಬಂದಿದೆ. ಈ ವಿಷಯವಾಗಿ ನಾವು ಅಸಂಖ್ಯ ಉಕ್ತಿಗಳನ್ನು ಉದಹರಿಸಬಹುದು.

ಈ ಪ್ರಕಾರ ಶಿವಶರಣರು ಅಸ್ಪೃಶ್ಯರು ಸಹ ಉಚ್ಚವರ್ಣದವರಿಗೆ ಸರಿ ಸಮಾನರೆಂದು ಪ್ರತಿಪಾದಿಸುತ್ತ ಬಂದಿದ್ದಾರೆ. ಇಷ್ಟೇ ಅಲ್ಲ, ಅವರು ಈ ತತ್ವವನ್ನು ಪ್ರಚಾರದಲ್ಲಿ ಸಹ ತಂದಿರುತ್ತಾರೆ. ಅಸ್ಪೃಶ್ಯರ ಕೂಡ ಇತರೇ ಸಮಾಜದವರು ಊಟಉಪಚಾರ ಲಗ್ನಾದಿ ವ್ಯವಹಾರಗಳನ್ನು ಸಹ ಮಾಡಿದ್ದರ ಉದಾಹರಣೆಗಳು ವೀರಶೈವ ಸಮಾಜದಲ್ಲಿ ಅನೇಕ ಇರುತ್ತವೆ. ವೀರಶೈವ ಸಮಾಜದವರು ಈ ವಿಷಯದಲ್ಲಿ ಹೇಗೆ ವ್ಯವಹರಿಸಿದರೋ ಹಾಗೆ ಬೇರೆ ಸಮಾಜಗಳಲ್ಲಿಯುವರು ವ್ಯವಹರಿಸಿಗಲಿಕ್ಕಿಲ್ಲ ಆದರೆ ಹಿಂದೂ ಧರ್ಮದಲ್ಲಿ ಜಾತಿಭೇದವನ್ನು ನಿರಾಕರಿಸಿ ವರ್ತಿಸಿದ ಸಮಾಜಗಳು ಕೆಲವಾದರೂ ಇವೆ, ಎಂಬಸಂಗತಿಯು ಮಹತ್ವದ್ದದೆ. ಸಮಾಜದಲ್ಲಿ ಅನೇಕ ಕಾರಣಗಳಮೂಲಕ ದೋಷಗಳು ಉಂಟಾಗಿರಬಹುದು. ಆದರೆ ಅವುಗಳನ್ನು ನಿವಾರಣೆ ಮಾಡುವದಕ್ಕೆ ನಾವು ಪ್ರಯತ್ನಿಸತಕ್ಕದ್ದೇ ಹೊರ್ತು ಸಮಾಜವನ್ನೇ ಬಿಟ್ಟುಕೊಡುವದು ಯೋಗ್ಯವಾಗಲಾರದು. ಈ ರೀತಿಯಾಗಿ ಡಾ॥ ಅಂಬೇಡಕರರು ವರ್ತಿಸಿದ್ದು ಶೋಚನೀಯವಾಗಿರುತ್ತದೆ.

## ೬ನೇ ಆಕ್ಷೇಪಣೆಯು.

ಡಾ॥ ಅಂಬೇಡಕರರವರು ಹಿಂದೂ ಜನರಲ್ಲಿರುವ ಸನ್ಯಾಸಿಗಳು ಮತ್ತು ಬೌದ್ಧ ಸಮಾಜದಲ್ಲಿರುವ ಭಿಕ್ಕು (ಭಿಕ್ಷು) ಗಳು ಇವರಲ್ಲಿ ತುಲನೆ, ಮಾಡಿ ಬೌದ್ಧ ಸನ್ಯಾಸಿಗಳಿಗಿರುವ ನಿಯಮಗಳು ಸರಿಯಾದವುಗಳು ಆದರೆ ಹಿಂದೂ ಸಮಾಜದಲ್ಲಿರುವ ಸನ್ಯಾಸಿಗಳು ಪಾಲಿಸಬೇಕಾದ ನಿರ್ಬಂಧಗಳು ಅಯೋಗ್ಯವಾದವುಗಳು, ಇವು ಪ್ರತಿಗಾಮಿ ಸ್ವರೂಪದವೆಂದು ಪ್ರತಿಪಾದಿಸಿದ್ದಾರೆ. ಬೌದ್ಧ ಸನ್ಯಾಸಿಗಳು ಸನ್ಯಾಸವ್ರತವನ್ನು ಸ್ವೀಕರಿಸಿದ ಬಳಿಕ ಅವರು ಇಚ್ಛಿಸಿದಲ್ಲಿ ಈ ವ್ರತವನ್ನು ಹಿಂದುಗಡೆ ಬಿಟ್ಟುಕೊಟ್ಟು ವ್ಯವಹಾರವನ್ನು ಸೇರಬಹುದೆಂದು. ನಿಯಮವಿದೆ. ಈ ನಿಯಮವನ್ನು ಡಾ॥ ಅಂಬೇಡಕರು ಶ್ಲಾಘಿಸುತ್ತಾರೆ. ಇದರಿಂದ ಧಾರ್ಮಿಕ ವರ್ಗದವರು ಸುಶೀಲರಾಗಿ ಉಳಿಯುವರೆಂದು ಅವರ ಅಭಿಪ್ರಾಯವಿರುತ್ತದೆ. ಅವರು ಪ್ರತಿಪಾದಿಸುವ ಈ ವಿಚಾರಗಳಲ್ಲಿ ಸತ್ಯಾಂಶವು ಇದೆ ಎಂಬುದನ್ನು ನಾವು ಒಪ್ಪತಕ್ಕ ಸಂಗತಿಯಾಗಿದೆ. ಇಂಥ ಪದ್ಧತಿಯು ಅನುಸರಿಸಲು ಯೋಗ್ಯವೆಂದು ಬಹು ಜನರ ಅಭಿಪ್ರಾಯವೂ ಇದೆ.

ವೀರಶೈವರಲ್ಲಿ ಪೂರ್ವಕಾಲದಲ್ಲಿ ಆಗಿಹೋದ ಆಚಾರ್ಯರು ಲಗ್ನವಾದವರಿದ್ದುದು ತಿಳಿದು ಬರುತ್ತದೆ. ರೇವಣಸಿದ್ಧ, ಪಂಡಿತಾರಾಧ್ಯ ಇವರು ಲಗ್ನವಾದವರಿದ್ದರು. ಆದರೂ ಅವರ ಉಚ್ಚಸ್ಥಿತಿಗೆ ಅವರು ಲಗ್ನವಾದುದು ಬಾಧೆಯನ್ನು ಉಂಟು ಮಾಡಲಿಲ್ಲ, ಅಷ್ಟೇ ಅಲ್ಲ, ಅವರ ಮಕ್ಕಳಿಗೂ ಉಚ್ಚ ಧಾರ್ಮಿಕಸ್ಥಾನವು ಉಂಟಾಯಿತು. ಆದರೂ ಸಮಾಜವು ಅವರ ಅವಹೇಲನೆ ಮಾಡಿದ್ದು ಕಂಡು ಬರುವದಿಲ್ಲ. ರೇವಣಸಿದ್ಧೇಶ್ವರನ ಮಗನಾದ ರುದ್ರಮುನಿಯು ವೀರಶೈವ ಶಿವಶರಣರಲ್ಲಿ ಉಚ್ಚಸ್ಥಾನವನ್ನು ಹೊಂದಿದ್ದಾನೆ. ಹಾಗೆಯೇ ಪಂಡಿತಾರಾಧ್ಯನ ಮಕ್ಕಳೂ ಅವನ ಸ್ಥಾನವನ್ನು ಹೊಂದಿ ಪೂಜ್ಯರೆನಿಸಿಕೊಂಡರು. ದೇವರ ದಾಸಿಮಯ್ಯ ಬಸವೇಶ್ವರ ಮೊದಲಾದ ಮಹಾನುಭಾವರು ಲಗ್ನವಾದವರಾಗಿದ್ದರು. ಆದರೂ ಅವರ ಧಾರ್ಮಿಕ ಸ್ಥಾನಕ್ಕೆ ಸಮಾಜದಲ್ಲಿ ಯಾವ ಚ್ಯುತಿಯೂ ಉಂಟಾಗಿರುವದಿಲ್ಲ. ಆದರೆ ಈಚೀಚೆಗೆ ವೀರಶೈವ ಸಮಾಜದಲ್ಲಿ ಬ್ರಾಹ್ಮಣ ಸಮಾಜದ ಅನುಕರಣವು ಉಂಟಾಗಹತ್ತಲು ಬ್ರಾಹ್ಮಣರಲ್ಲಿರುವ ಮಠಗಳ ವಿಷಯವಾಗಿ ಇರುವ ಪದ್ಧತಿಗಳು ವೀರಶೈವ ಸಮಾಜದಲ್ಲಿಯೂ ರೂಢವಾಗಹತ್ತಿದವು. ಈಚೀಚೆಗೆ ವಿರಕ್ತಾಶ್ರಮಿಗಳು ಬಾಲಬ್ರಹ್ಮಚಾರಿಗಳಾಗಿರಬೇಕೆಂಬ ತತ್ವವು ಸಮಾಜದಲ್ಲಿ ಎಲ್ಲರಿಗೆ ಗ್ರಾಹ್ಯವಾಗಿ ಅದು ಪಾಲಿಸಲ್ಪಡಹತ್ತಿತು. ಆದರೆ ಇದರಿಂದ ಅನೇಕ ಸ್ವೈರ ವೃತ್ತಿಗಳು ಮಠಾಧಿಕಾರಿಗಳಲ್ಲಿ ಉಂಟಾಗಿರುವದು ಕಂಡು ಬರುತ್ತದೆ. ಡಾ|| ಅಂಬೇಡಕರ ಇವರು ಪ್ರತಿಪಾದಿಸಿದಂತೆ ಈಚೆಗೆ ಬಂದ ಇಂಥ ರೂಢಿಯನ್ನು ತೆಗೆದು ಹಾಕಿ ಆರಂಭ ಕಾಲದಲ್ಲಿದ್ದ ರೂಢಿಯನ್ನು ವ್ಯವಹಾರದಲ್ಲಿ ತಂದರೆ ಸಮಾಜದಲ್ಲಿ ಶುದ್ಧತೆಯು ಉಳಿಯುವವರಲ್ಲಿ ಸಂದೇಹವಿರಲಾರದು.

## ೭ನೇ ಆಕ್ಷೇಪಣೆಯು.

ಹಿಂದೂ ಧರ್ಮದಲ್ಲಿ ಒಬ್ಬ ಮನುಷ್ಯನು ಪರಬ್ರಹ್ಮತ್ವವನ್ನು ಹೊಂದಬಹುದೆಂಬ ತತ್ವವಿದ್ದು ಇದನ್ನು ಡಾ|| ಅಂಬೇಡಕರವರು ಬಹಳ ಆಕ್ಷೇಪಿಸಿರುವರು. ಇದರಿಂದ ಧರ್ಮವು ಉಳಿಯಲಾರದೆಂದು ಅವರ ತಿಳಿವಳಿಕೆಯಾಗಿದೆ. ಆದರೆ ಈ ತತ್ವದ ವಿಷಯವಾಗಿ ಹಿಂದೂ ಧರ್ಮ ಮತ್ತು ಬೌದ್ಧ ಧರ್ಮ ಇವುಗಳಲ್ಲಿ ಸಂಪೂರ್ಣ ವ್ಯತ್ಯಾಸವಿದೆ. ಪರಮಾತ್ಮನಲ್ಲಿ ಬೆರೆಯುವದೇ ಅಥವಾ ಅವನ ಸಾನ್ನಿಧ್ಯವನ್ನು ಹೊಂದುವದೇ ಎಲ್ಲ

ಹಿಂದುಗಳ ಅಂತಿಮಧ್ಯೇಯವಾಗಿದೆ. ಈ ತತ್ವದ ವಿಷಯವಾಗಿ ಅಸಂಖ್ಯ ಗ್ರಂಥಗಳು ಹಿಂದೂ ತತ್ವಜ್ಞಾನಿಗಳಿಂದ ಬರೆಯಲ್ಪಟ್ಟಿರುತ್ತವೆ. ಅವರು ಅದ್ವೈತ ಅಥವಾ ವಿಶಿಷ್ಟಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತ ಹೀಗೆ ಕೆಲವೊಂದು ಬಗೆಯ ಅದ್ವೈತವನ್ನು ಸ್ವೀಕರಿಸಿರುತ್ತಾರೆ. ಅದ್ವೈತವಿರ ದಿದ್ದರೂ ಮಾಧ್ವಮತದಂತೆ ಸಾಮೀಪ್ಯವನ್ನಾದರೂ ಮನುಷ್ಯನು ಹೊಂದು ವನೆಂದು ಹಿಂದೂ ಶಾಸ್ತ್ರಕಾರರು ನಿರ್ಧರಿಸಿರುತ್ತಾರೆ. ಇದರಿಂದ ಹಿಂದೂ ಸಮಾಜದಮೇಲೆ ಮಹತ್ವದ ಪರಿಣಾಮಗಳಾಗಿರುತ್ತವೆ. ಅವು ಗಳಲ್ಲಿ ಮುಖ್ಯವಾದುದು ಎಲ್ಲ ಹಿಂದುಗಳು ಪ್ರಗತಿಯ ಕಡೆಗೆ ಅರ್ಥಾತ್ ಪರಮಾತ್ಮನ ಕಡೆಗೆ ಧಾವಿಸ ಹತ್ತಿದ್ದಾರೆ. ವೀರಶೈವರಾದರೂ ಇದೇ ಮಾರ್ಗವನ್ನು ಅನುಸರಿಸಿದ್ದಾರೆ. ಲಿಂಗದಲ್ಲಿ ಬೆರೆಯಬೇಕೆಂತಲೇ ಅವರ ಮುಖ್ಯಧ್ಯೇಯವಾಗಿದೆ. ಈ ಧ್ಯೇಯದ ಮೂಲಕ ಅವರು ಸದಾಚಾರಿ ಗಳಾಗಿ ವರ್ತಿಸಲು ಮನಗೊಳ್ಳುತ್ತಾರೆ. ಸದಾಚಾರಿಗಳಾಗದಿದ್ದರೆ ಪರ ಮಾತ್ಮನಿಗೆ ಸಲ್ಲರೆಂದು ಅವರು ತಿಳಿದಿದ್ದಾರೆ. ಇದರಲ್ಲಿ ಡಾ॥ ಅಂಬೇ ಡಕರರವರು ತಪ್ಪುದಾರಿಯನ್ನು ಹಿಡಿದಿದ್ದಾರೆಂದು ನಮಗೆ ತೋರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಅವರು ಆಚರಿಸಿದಲ್ಲಿ ಅವರು ಹಿಂದೂ ಸಂಸ್ಕೃ ತಿಯನ್ನು ಪೂರ್ಣವಾಗಿ ಬಿಟ್ಟಂತೆಯೇ ಆಗುತ್ತದೆ. ಆದರೆ ಈ ತೆರದ ಒಲವು ಹಿಂದುಸ್ತಾನದಲ್ಲಿ ಈಗ ಉಂಟಾಗಿರುವ ಧಾರ್ಮಿಕವಾತಾವರಣ ದಲ್ಲಿ ಎಂದಿಗೂ ಫಲಿಸಲಾರದು. ಇವನ್ನು ಡಾ॥ ಅಂಬೇಡಕರರೂ ಅವರ ಅನುಯಾಯಿಗಳೂ ವಿಚಾರಮಾಡಿ ತಮ್ಮ ಹೆಜ್ಜೆಯನ್ನಿಡುವದು ಬಹು ಆವಶ್ಯಕವಾಗಿರುತ್ತದೆ.

ಈ ಪ್ರಕಾರ ಡಾ॥ ಅಂಬೇಡಕರರವರ ಆಕ್ಷೇಪಣೆಗಳು ಹಿಂದೂ ಸಮಾಜದ ಮೇಲೆ ಇದ್ದು ಇವುಗಳಲ್ಲಿ ಬಹುತರ ಯಾವವೂ ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲ. ವೀರಶೈವರು ಬೌದ್ಧರಂತೆ ಉದಾರ ಮತ ವುಳ್ಳವರಾಗಿ ವರ್ತಿಸಿರುತ್ತಾರೆ ಆದರೆ ಅವರ ಪ್ರಾಪಂಚಿಕ ವಿಚಾರ ಗಳು ಮಾತ್ರ ಬೌದ್ಧರ ಸಿದ್ಧಾಂತವನ್ನು ಹೋಲುತ್ತವೆ. ಆದರೆ ದೇವರ ವಿಷಯವಾಗಿ ಉಭಯ ಧರ್ಮಗಳಲ್ಲಿ ಮತಭೇದವಿರುವದರಿಂದ ಅವು ಗಳಲ್ಲಿ ಏಕ ವಾಕ್ಯತೆಯುಂಟಾಗಿರುವದಿಲ್ಲ.

# ಶಿವಾನುಭವ ಪತ್ರಿಕೆಯ ಕಾರ್ಯಗಳು.

**ಸಟೀಕ ಬಸವೇಶ್ವರನ ವಚನಗಳು :–** ಬಸವೇಶ್ವರನ ವಚನಗಳಿಗೆ ಆಧುನಿಕ ಭಾಷೆಯಲ್ಲಿ ಟೀಕೆಯನ್ನು ಬರೆಯುವ ಕಾರ್ಯವನ್ನು ನಾವು ಮುಂದವರಿಸುತ್ತ ಇದ್ದೇವೆ. ಅದರ ೧ ನೇಯ ಭಾಗವನ್ನು ತೀವ್ರವಾಗಿ ಮುಗಿಸಬೇಕೆಂದು ಇಚ್ಛಿಸಿದ್ದೇವೆ. ನಾವು ಹಿಂದಿನ ಸಂಚಿಕೆಯಲ್ಲಿ ಇದಕ್ಕೋಸ್ಕರ ಸಹಾಯಧನವನ್ನು ಕೋರಿದ್ದೆವು. ಅದಕ್ಕನುಸರಿಸಿ ಶ್ರೀಮತಿ ಭಾಗೀರಥಿದೇವಿ ಸಿದ್ದಬಸಪ್ಪ ಗಿಡ್ನವರ ಇವರು ೧೧ ರೂಪಾಯಿ ಶ್ರೀಯುತ ಸಿದ್ಧಬಸಪ್ಪ ಗಿಡ್ನವರ ಬಿ. ಏ. ಮಾಮಲೇದಾರರು ವಿಜಾಪೂರ ಇವರು ೧೧ ರೂ॥ ಮತ್ತು ವೀರಶೈವ ತರುಣ ಸಂಘ ಜೋಳಚಗುಡ್ಡ ಇವರ ಪತಿಯಿಂದ ವೇ. ಮೂ ಚಂದ್ರಶೇಖರಯ್ಯ ಮಠ ಇವರು ೨೫ ರೂಪಾಯಿಗಳನ್ನು ನಮ್ಮ ಕಡೆಗೆ ಕಳಿಸಿದ್ದಾರೆ. ಇದಕ್ಕೋಸ್ಕರ ನಾವು ಈ ಎಲ್ಲ ಮಹನೀಯರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಇದರಲ್ಲಿ ವೇ ಮೂ ಚಂದ್ರಶೇಖರಯ್ಯನವರು ಕೆಳಗೆ ಕಾಣಿಸಿದಂತೆ ನಮಗೆ ಉತ್ತರವನ್ನು ಬರೆದಿದ್ದ ಅದರಲ್ಲಿ ಅವರು ಕೆಲವು ಉಪಯುಕ್ತ ಸೂಚನೆಗಳನ್ನು ಮಾಡಿದ್ದಾರೆ ವೀರಶೈವ ಮಹಾಜನರು ಅವುಗಳನ್ನು ಲಕ್ಷಿಸುವರೆಂದು ಹಾರೈಸಿದ್ದೇವೆ.

## ಸಟೀಕ ಶ್ರೀ. ಬಸವಣ್ಣನವರ ವಚನಗಳು.

ರಾ॥ ಬ॥ ಫ. ಗು. ಹಳಕಟ್ಟಿ ವಕೀಲರು ತಮ್ಮ ಶಿವಾನುಭವದ ೧೯೫೦ನೇ ಆಗಸ್ಟ ಸಂಚಿಕೆಯ "ಟೀಕೆ ಟಿಪ್ಪಣಿ" ಯಲ್ಲಿ ಸಟೀಕ ಬಸವೇಶ್ವರ ವಚನ ಗ್ರಂಥವನ್ನು ಅಚ್ಚುಹಾಕುವ ಸ್ತುತ್ಯ ಕಾರ್ಯವನ್ನು ಕೈಕೊಳ್ಳುವ ಬಗ್ಗೆ ಪ್ರಸಿದ್ಧಿಸಿದ್ದು ನೋಡಿ ಯಾರಿಗೆ ಸಂತೋಷವಾಗಲಿಕ್ಕಿಲ್ಲ ? ವೀರಶೈವ ಧರ್ಮಜ್ಯೋತಿ ಸ್ವರೂಪದಂತಿರುವ ಬಸವಣ್ಣನವರ ಹೃದಯವನ್ನು ಅರಿತು ಅನುಭವಿಸಿ ಆನಂದವನ್ನು ಹೊಂದಲು ಅವರ ವಚನಗಳೇ ನಮಗೆ ಸಾಧನ ಸಂಪತ್ತಲ್ಲದೆ ಬೇರೊಂದಿಲ್ಲ. ಇವರ ವಚನಗಳನ್ನು ಅಭ್ಯಸಿಸಿ ಅರಿತು ಆಚರಿಸುವದಕ್ಕೆ ಸಟೀಕ ವಚನಗಳು ಬಹು

ಉಪಯುಕ್ತವಾಗದೆ ಇರದು. ಅದ್ದರಿಂದ ಇಂಥ ದೊಡ್ಡ ಗ್ರಂಥವನ್ನು ಅಚ್ಚು ಹಾಕಿಸಿ ಪಂಡಿತ ಪಾಮರರ ಕೈಗೆ ಬರುವಂತೆ ಸುಗಮ ಮಾಡುವ ಕಾರ್ಯವು ಸಮಾಜ ಹಿತೈಷಿಗಳ ಮತ್ತು ಆಧ್ಯಾತ್ಮ ಜೀವಿಗಳ ಮೇಲೆ ಹೆಚ್ಚಾದ ಹೊಣೆಯದೆ ಎಂಬದನ್ನು ಮರಿಯತಕ್ಕದ್ದಲ್ಲ.

ನಮ್ಮ ಸಮಾಜದಲ್ಲಿ ಶಿವಾನುಭವ ಸಂಘ, ಅಕ್ಕನ ಬಳಗ, ವೀರ ಶೈವ ತರುಣಸಂಘ, ಮೊದಲಾದ ಸಂಘಗಳಿದ್ದು ಅವು ತಮ್ಮ ಕಾರ್ಯವನ್ನು ನಿರ್ವಹಿಸುತ್ತಲಿವೆ. ಆಯಾ ಸಂಘಗಳು ತಮ್ಮ ಸಂಘಗಳಿಂದ ದೇಣಿಗೆ ಗಳನ್ನು ಕಳಿಸುವದಲ್ಲದೆ, ತಮ್ಮ ಗ್ರಾಮದಲ್ಲಿ ಮತ್ತು ತಮ್ಮ ಪರಿಚಿತರಲ್ಲಿ ಪ್ರಚಾರ ಮಾಡಿ ದೇಣಿಗೆಗಳನ್ನು ಕೂಡಿಸಿ ಕಳಿಸುವ ಕಾರ್ಯವನ್ನು ಬಹು ಆಸ್ಥೆಯಿಂದ ಮಾಡತಕ್ಕದ್ದು. ಈಗ ಅನಾಯಾಸವಾಗಿ ಶ್ರಾವಣ ಮಾಸ ಇರುವದರಿಂದ ಪುರಾಣ ಪ್ರವಚನ ಪ್ರಸ್ತಗಳಿಗೆ ಸಹಜವಾಗಿ ಪಟ್ಟೀ ಮಾಡುವರು. ತಮ್ಮಲ್ಲಿಯ ಪುರಾಣ ಪಟ್ಟಿಯ ಪ್ರಮಾಣಕ್ಕನು ಸರಿಸಿ ವಸೂಲಾದ ಹೆಣದಲ್ಲಿ ೧೦೦ ರೂಪಾಯಿ, ೫೦ ರೂಪಾಯಿ ಕನಿಷ್ಟ ಪಕ್ಷಕ್ಕೆ ೨೫ ರೂಪಾಯಿಗಳನ್ನಾದರೂ ದೇಣಿಗೆ ಕಳಿಸಬೇಕು. ಅಂದರೆ ಈ ವರ್ಷದ ಶ್ರಾವಣಮಾಸದ ಆಚರಣೆಯು ಯಥಾಯೋಗ್ಯವಾಗುವದ ಲ್ಲದೆ ಶಿವಶರಣರ ಕೃಪೆಗೂ ಪಾತ್ರರಾಗುವರು. ಅದ್ದರಿಂದ ಈ ಗ್ರಂಥವು ತೀವ್ರ ಅಚ್ಚು ಆಗುವ ಸುಸಂಧಿಯನ್ನು ಕಳೆದುಕೊಳ್ಳದೆ, ಸಮಾಜ ಬಂಧುಗಳು ಉದಾರ ಹೃದಯ ವುಳ್ಳವರಾಗಿ ದೇಣಿಗೆಗಳನ್ನು ನಾ ಮುಂಚೆ ನೀ ಮುಂದೆ ಎಂದು ತಮ್ಮ ಶಕ್ತ್ಯಾನುಸಾರ ಸಲ್ಲಿಸಿ ಈ ಪವಿತ್ರ ಕಾರ್ಯವು ತೀವ್ರವಾಗಿ ಕೈಗೂಡುವಂತೆ ಶ್ರೀಮಾನ್ ಹಳಕಟ್ಟಿಯವರನ್ನು ಪ್ರೋತ್ಸಾ ಹಿಸುವರೆಂದು ವೀರಶೈವರಲ್ಲಿ ವಿಜ್ಞಾಪಣೆಗಳು.

ನಮ್ಮ ವೀರಶೈವ ತರುಣಸಂಘದಿಂದ ಶಿವಾನುಭವ ಸಂಪಾದಕರಿಗೆ ೨೫ ರೂಪಾಯಿ ದೇಣಿಗೆ ಕಳಿಸಿದ್ದು ಸ್ವೀಕರಿಸಬೇಕಾಗಿ ವಿನಂತಿ.

ಚಂದ್ರಶೇಖರಯ್ಯ. ಶಿವರುದ್ರಯ್ಯ ಮಠ.

ಗೌ. ಕಾರ್ಯದರ್ಶಿ

ಚೊಳಚಗುಡ್ಡ ವೀರಶೈವ ತರುಣಸಂಘ.

ತಾ. ಬದಾಮಿ.

**ಸಿದ್ಧರಾಮೇಶ್ವರನ ವಚನಗಳು:—** ಬಸವೇಶ್ವರನ ವಚನಗಳಂತೆಯೇ ಶ್ರೀ ಸಿದ್ಧರಾಮೇಶ್ವರನ ವಚನಗಳು ಬಹು ಮಹತ್ವದವಾಗಿವೆ. ಇವುಗಳನ್ನು ಸಹ ಪ್ರಸಿದ್ಧಿಸುವ ಕಾರ್ಯವನ್ನು ನಾವು ಕೈಕೊಂಡಿದ್ದೇವೆ. ಈ ವಚನಗಳನ್ನು ಅಚ್ಚುಹಾಕುವ ಕಾರ್ಯವನ್ನು ಸೊಲ್ಲಾಪುರದ ಶ್ರೀ. ಸಿದ್ಧರಾಮೇಶ್ವರ ದೇವಾಲಯದ ಟ್ರಸ್ಟ ಮಂಡಳಿಯವರು ಕೈಕೊಳ್ಳಬೇಕೆಂದು ಅಲ್ಲಿ ಕೂಡಿದ್ದ ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ನಿರ್ಣಯವಾಗಿರುತ್ತದೆ. ಇಂಥ ಮಹತ್ವದ ಸಂಸ್ಥೆಯವರು ಈ ಕಾರ್ಯಕ್ಕೆ ಬೆಂಬಲವನ್ನು ಇತ್ತರೆ ಈ ಕೆಲಸವಾದರೂ ತೀವ್ರವಾಗಿ ಜರಗುವವರಲ್ಲಿ ಸಂದೇಹವಿರಲಾರದು.

**ಶಿವಶರಣರ ಚರಿತ್ರೆಗಳು ಭಾಗ ೩:—** ಈ ಗ್ರಂಥವಾದರೂ ಮುಗಿಯಲಿಕ್ಕೆ ಬಂದಿದ್ದು ಅದರ ಅಂತ್ಯ ಭಾಗವಲ್ಲಿ 'ಜಂಗಮರು' ಪುರಾತನ ಕಾಲದಲ್ಲಿ ಹೇಗೆ ಧರ್ಮಾಭಿವೃದ್ಧಿಯ ಕಾರ್ಯವಲ್ಲಿ ಸಮಾಜದವರಿಗೆ ಸಹಾಯ ಮಾಡುತ್ತಿದ್ದರೆಂಬುದನ್ನು ಸುವಿಸ್ತಾರವಾಗಿ ಬರೆಯುವವರಿದ್ದೇವೆ. ಇದು ಪೂರ್ಣವಾಗದ್ದರಿಂದ ಈ ಗ್ರಂಥವನ್ನು ನಾವು ಈ ಸಂಚಿಕೆಯಲ್ಲಿ ಮುಂದುವರಿಸಿಲ್ಲ. ಆದರೆ ಅದನ್ನು ನಾವು ಮುಂದಿನ ಸಂಚಿಕೆಯಲ್ಲಿ ಪೂರ್ಣ ಮಾಡಿ ಈ ಭಾಗವನ್ನು ಮುಗಿಸುವೆವು. ಆಮೇಲೆ ನಾವು ೪ನೇ ಭಾಗವನ್ನು ಪ್ರಾರಂಭಿಸುವೆವು ಅದರಲ್ಲಿ ಬಸವೇಶ್ವರನ ಸಮಕಾಲೀನರಾದ ಮತ್ತು ಅವನಿಗೆ ಮಹತ್ವದ ಸಹಾಯವನ್ನು ಮಾಡಿದವರಾದ ಶಿವಶರಣರ ಚರಿತ್ರೆಗಳನ್ನು ಕೊಡುವೆವು. ಅವರು ಅಲ್ಲಮಪ್ರಭು, ಮಹಾದೇವಿಯಕ್ಕ, ಚನ್ನಬಸವ, ಕಿನ್ನರೀ ಬೊಮ್ಮಯ್ಯ ಇವರೇ ಮೊದಲಾದವರು ಇದ್ದಾರೆ. ಈ ಚರಿತ್ರೆಗಳ ತರುವಾಯ ಬಸವೇಶ್ವರನ ಚರಿತ್ರೆಯನ್ನು ಬರೆಯುವೆವು.

**ಶೂನ್ಯ ಸಂಪಾದನೆ:—** ಇದರಲ್ಲಿ ಷಟ್‌ಸ್ಥಲ ತತ್ವಗಳ ವಿವೇಚನೆಗಳು ಪೂರ್ಣವಾಗಿ ಬಂದಿರುತ್ತವೆ. ಅವುಗಳನ್ನು ನಾವು ಆಧುನಿಕ ಭಾಷೆಯಲ್ಲಿ ಬರೆಯುವ ಕಾರ್ಯವನ್ನು ಕೈಕೊಂಡಿದ್ದೇವೆ. ಹೇಗೆ ವಚನಶಾಸ್ತ್ರಸಾರ ಭಾಗ ೨ ಮತ್ತು ೩ ಇವುಗಳನ್ನು ಆಧಾರವಾಗಿಟ್ಟುಕೊಂಡು

ಶಿವಾನುಭವ ಶಬ್ದಕೋಶ' ವನ್ನು ರಚಿಸಿದೆವೋ ಹಾಗೆಯೇ ಈ ಗ್ರಂಥ ವನ್ನು ರಚಿಸಬೇಕೆಂದು ಮಾಡಿದ್ದೇವೆ. ಇದಾದರೂ ಶಬ್ದಕೋಶದಂತೆಯೇ ಮಹತ್ವದ ಗ್ರಂಥವಾಗುವದೆಂದು ಭಾವಿಸಿದ್ದೇವೆ.

**ಮುಗಿದುಹೋದ ಗ್ರಂಥಗಳ ಪುನರ್ಮುದ್ರಣಃ—**

ಈಚೆಗೆ ಬಹುವ ಜನರು ವಚನ ಗ್ರಂಥಗಳನ್ನು ಅಭ್ಯಾಸಮಾಡ ಬೇಕೆಂದು ಅವುಗಳನ್ನು ಕಳಿಸಲು ನಮಗೆ ಪತ್ರ ಬರೆಯುತ್ತಿದ್ದಾರೆ. ಆದರೆ ಅವು ಈಗ ದೊರೆಯುವದಿಲ್ಲೆಂದು ನಾವು ಅವರಿಗೆ ವಿಷಾದ ಪೂರ್ವಕ ವಾಗಿ ಬರೆಯಬೇಕಾಗಿದೆ. ಈಗಿನ ಕಾಲದಲ್ಲಿ ಪುನರ್ಮುದ್ರಣವು ಬಹು ಖರ್ಚಿನದಾಗಿದೆ. ಈಗ ನಾವು ಬಸವೇಶ್ವರನ ವಚನಗಳು ಮತ್ತು ಮಹಾದೇವಿಯಕ್ಕನ ವಚನಗಳು ಇವುಗಳ ಮುದ್ರಣವನ್ನು ಮುಗಿಸಿದೆವು. ಉಳಿದ ವಚನ ಗ್ರಂಥಗಳು ಅಂದರೆ ಪ್ರಭುದೇವರ ವಚನಗಳು, ಸಿದ್ಧರಾ ಮೇಶ್ವರನ ವಚನಗಳು, ಶೂನ್ಯ ಸಂಪಾದನೆ, ಚನ್ನಬಸವೇಶ್ವರನ ವಚನ ಗಳು, ಅಂಬಿಗರ ಚೌಡಯ್ಯನ ವಚನಗಳು ದೊಡ್ಡ ಗ್ರಂಥಗಳಾಗಿವೆ. ಸಮಾಜದಲ್ಲಿರುವ ಉದಾರ ಹೃದಯಗಳ ಸಹಾಯವಿಲ್ಲದೆ ನಾವು ಇವು ಗಳನ್ನು ಮುದ್ರಣಗೊಳಿಸುವದು ಈಗಿನ ಕಠಿಣ ಕಾಲದಲ್ಲಿ ಶಕ್ಯವಾಗಲಾ ರದು. ಸಮಾಜದಲ್ಲಿಯ ಮಹನೀಯರು ಈ ಕಾರ್ಯದಲ್ಲಿ ನಮಗೆ ಸಹಾ ಯಮಾಡಲು ಉದ್ದೇಶ ಪಟ್ಟು ತಮ್ಮ ಕರ್ತವ್ಯವನ್ನು ಲಕ್ಷಿಸಿದಲ್ಲಿ ಅವರು ಸಮಾಜದ ಸಂಸ್ಕೃತಿಯ ರಕ್ಷಣೆಗೋಸ್ಕರ ಬಹಳ ಸಹಾಯ ಮಾಡಿ ದಂತೆ ಆಗುವದು.

**ಶಿವಾನುಭವದಲ್ಲಿಯ ಲೇಖಗಳುಃ—** ಈ ಸಂಚಿಕೆಯಲ್ಲಿ ಅನೇಕ ಮಹನೀಯರು ಷಟ್‌ಸ್ಥಲ ಶಾಸ್ತ್ರದ ವಿಷಯವಾಗಿ ಮಹತ್ವದ ಲೇಖಗಳನ್ನು ಬರೆದಿದ್ದಾರೆ. ಅವು ಕಠಿಣವಾಗಿ ತೋರಿದರೂ ಅವುಗ ಳನ್ನು ವಾಚಕರು ಅವಶ್ಯವಾಗಿ ಲಕ್ಷಿಸಬೇಕೆಂದು ನಾವು ಸೂಚಿಸುತ್ತೇವೆ

---

# ವೈರಾಗ್ಯ ದೇವಿ.

( ಲೇ:— ಶ್ರೀ ಸುರೇಶ. ಎಸ್. ಹೊಸಟ್ಟಿ. ನಾಗಠಾಣ. )

ಅನಿಮಿಷ ನೇತ್ರದಿಂ ಮನಾಕುಳಳಾಗಿ
ಏಂ ನಿರೀಕ್ಷಿಸುವೆ ಅನುರಾಗದಿಂದಲಿ

ಬಸವಾದಿ ಪ್ರಮಥರ ಶೂನ್ಯಪೀಠದಲಿ
ವಿರಕ್ತಿಯ ವೈರಾಗ್ಯದಧಿದೇವಿಯಾಗಿ
ವಿಮುಕ್ತತೆಯ ವಿಭಾತ ವಚನಾಂಗಣದಲಿ
ಬೆಳಗಿದೆ ತಾಯಿ ನೀಂ ಧ್ರುವತಾರೆಯಾಗಿ

ಓ ಗಿರಿಜೆ ಓ ಗೌರಿ ಓ ಗಂಗೆ ನೀನು
ಮಾಯೆಯ ತಾಯಾಗಿ ಮಾಯೆಯ ಸತಿಯಾಗಿ
ವೀರಶೈವರುದ್ಧರಿಸಿದ ಮಾತೆ ನೀನು
ಆತ್ಮಶ್ರೀಯ ಧೀಶಕ್ತಿಯನು ನೀ ಬೆಳಗಿ

ವನವನವ ಅಲೆದಿಯಾ ಶಕ್ತಿಪತಿಗಾಗಿ?
ವನವನವ ತುಳಿದೆಯಾ ಶಶಿಧರನಿಗಾಗಿ?
ವನವನವ ನಡೆದಿಯಾ ಶಂಕರನಿಗಾಗಿ?
ವನವನವ ಹೊರಟಿಯಾ ಶ್ರೀ ಶೈಲಕಾಗಿ?

ನಶನವಂ ನೀಗಿ ನಳನಳಿಪ ನಳಿವಂತೆ
ನಂಜುಂಡನನಂಟಿತಿಯಾಗಿ ನಾಕನದವ ಕಂಡೆ.

ಲೋಭಿಯುನ್ನು ಕೊಲ್ಲಲೀ ಜಗದೊಳ್ ಬೇರೆ ।
ಮುದ್ದದೇತಕಿನ್ನು ಮಾತವದಿಹುದು ॥
ಧನವು ಕೇಳಿದೊಡನೆ ತಕ್ಷಣ ಸಾಯುವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೧ ॥

ಕೃಪಣ ನರನ ಮನೆಯೊಳ್ ಕುಣಪವು ಹೊರಟರುಂ ।
ಬೆರಣಿ ಕಾಷ್ಟಗಳಿಗೆ ಕಾಸು ಕೊಟ್ಟು ।
ವೆಚ್ಚವಾಯಿತೆಂದು ಬಿಕ್ಕಿ ಬಿಕ್ಕಿಯಳುವನ್ನೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೨ ॥

ನೊಣವು ಜೇನು ರುಚಿಗೆ ಹರುಷದಿ ಸಾಯ್ವುದು ।
ವಿಟನು ಕಾಮರುಚಿಗೆ ಬಿದ್ದು ಸಾಯ್ವ ॥
ಲೋಭಿಯಾದ ನರನು ಧರ್ಮವೆಂದೊಡೆ ಸಾಯ್ವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೩ ॥

ಗೊಡ್ಡು ಹಸುವ ಕರೆವುದಕೆ ಪಾತ್ರೆ ಕೊಂಡೊಯ್ಯೆ ।
ಹಾಲು ಕೊಡದೆ ಹಲ್ಲು ಮುರಿಯುವೊದೆಗಂ ॥
ಲೋಭಿ ನರನ ಕೇಳೆ ಲಾಭವೇನಿಲ್ಲವೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೪ ॥

ಮೇಕೆ ಕತ್ತಲಿರುವ ಮೊಲೆಗಳ ಕುಡಿಯಲು ।
ಹಸಿವದೇಕೆ ಮಾಣ್ಗು ಮಾಸೆ ಹೊರತು ॥
ಲೋಭಿಯುನ್ನು ಕೇಳೆ ಲಾಭವಿಲ್ಲವು ಜಗದಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೫ ॥

ಧಾತ್ರಿವಿನೆಡೆಯೊಳು ಲುಬ್ಧ ತಾನಿರುತಿರೆ ।
ಸಾಯ್ವನಲ್ಲದವನು ಸಾಗಗೊಡನು ॥
ಕಲ್ಪವೃಕ್ಷದಡಿಯೊಳ್ ಬೊಬ್ಬುಳಿಗಿಡದಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೬ ॥

## ದುರಾಶೆಯನ್ನು ಬಿಡು

ನೀರೊಳಿರ್ಪ ಮೀನು ಮಾಂಸದ ಆಸೆಯಿಂ ।
ಗಾಲದಲ್ಲಿ ಸಿಗುವ ತೆರದಿ ಭುವಿಯೊಳ್ ॥
ಆಸೆಯಿಂದ ನರರು ನಾಶವಾಗುವರಯ್ಯ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೭ ॥

ಈಷಣತ್ರಯಂಗಳನು ಗೆಲಲಾರದೆ ।
ಮೋಹರಾಸಿಯಲ್ಲಿ ಮುಳುಗುತಿರ್ಪ ॥
ನರರಿಗೆಂತು ಮೋಕ್ಷ ಸೌಖ್ಯವು ಲಭಿಸುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೮ ॥

ಆಸೆಯಿಂದ ನರನು ಜೀವಿತ ಪರಿಯಂತ ।
ತಿರುಗುತಿಹನಾ ಭ್ರಮೆಯು ತಿರುಗಿಸದಲೆ ॥
ಕೊಳಕು ಪಾತ್ರೆಯಲ್ಲಿ ಮುತ್ತುವ ನೊಣದಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೯ ॥

ಕನಕ ಪರ್ವತದೊಳು ವಾಸಿಸುತಿರ್ದೊಡಂ ।
ಅನಿಮಿಷೇಶ್ವರನಿಗೆ ಆಶೆ ಬಿಡದು ॥
ಕನಕ ಕುಂಡಲಗಳ ಕರ್ಣನ ಕೇಳನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೬೦ ॥

ನಾರಿಯರನುಂ ಭೂರಿ ದ್ರವ್ಯವನು ನೋಡಿದರೆ ।
ಸಾರತರ ರುಚಿಗಳನು ಕೇಳಿದೊಡನೆ ॥
ಯಾರಿಗಾದರು ಆಶೆಗಳು ಪುಟ್ಟದಿರ್ಪವೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೬೧ ॥

ಕಳ್ಳ ಗುಡಿಗೆ ಹೋಗಿ ಮುಡುಪನ್ನು ಬಿಚ್ಚುವ ।
ನಲ್ಲಿ ದೇವರನ್ನು ನೋಡನವನು ॥
ನಾಯಿ ಮನೆಯ ಹೊಕ್ಕು ಸೋರೆಗಳ್ ಬೆದಕದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೬೨ ॥

ತಂದೆತಾಯಿ ಸಾಯೆ ತನಯನು ದುಃಖಿಪ ।
ಪತಿಯು ಸಾಯೆ ಸತಿಯು ಮರುಗುತಿಹಳು ॥
ಕಾರ್ಯವಶದಿ ಹೊರತು ಮೋಹವುಂಟಾಗದೈ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೬೩ ॥

---

**ಅಹಂಕಾರಿಯಾಗಬೇಡ.**

ಅತ್ತಿ ಹಣ್ಣು ಮೇಲೆ ರಮ್ಯ ವಾಗಿರುವುದು ।
ಹೊಟ್ಟೆ ಬೆಚ್ಚಿ ನೋಡೆ ಹುಳುಗಳಿಹವು ॥
ಹುಚ್ಚ ನರನ ಮನದ ಬಿಂಕನೀ ರೀತಿಯೊಳ್ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೬೪ ॥

ಕಣ್ಣಿನಲ್ಲಿ ಮದವು ವ್ಯಾಪಿಸಿ ಕಾಣರು ।
ಹೋದ ಆಚೆ ವರುಷ ನಿನ್ನೆ ಮೊನ್ನೆ ॥
ದಗ್ಧರಾದ ನರರು ತಮಗಿಂತ ಕಡಮೆಯೋ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೬೫ ॥

ಕತ್ತಿ ಕೈಲಿ ಪಿಡಿದು ಘನ ಸಾಧನೆಯ ಮಾಡಿ।
ಮತ್ತನಾಗಿ ಮೆರೆದ ವೀರ ವರನು ॥
ಕಾಲವಾದ ಬಳಿಕ ಕಾಲನ ಕೈಯ್ಯಿಂದ ।
ಕಷ್ಟಬಿದ್ದು ಕೊನೆಗೆ ಜನಿಪ ವೇಮಾ ॥ ೬೬ ॥

ಮೊಂಡ ಮಾತುಗಳಿಂದ ಕೂಡಿಹುದು ವಿರಕ್ತಿ ।
ಯಮನ ಗೆಲ್ವುದಕ್ಕೆ ಸಾಧ್ಯವಲ್ಲ ॥
ಕಲಿಯುಗದ ವಿರಕ್ತಿ ಹೆಂಡ ಕುಡಿಯುವುದೊಂದೆ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೬೭ ॥

ರಂಡೆಮುಂಡೆಗೇಕೆ ಮುತ್ತಿನ ಬೈತಲೆ ।
ಬಣ್ಣವೆಲ್ಲ ಭಾಗ್ಯವತಿಗೆ ಹೊರತು ॥
ಕುಂಟ ಕುದುರೆಗೇಕೆ ಕುಚ್ಚುಗಳ್ ಮಣಿಗಳು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೬೮ ॥

---

## ಕಾಪಟ್ಯವನ್ನು ಬಿಡು.

ತನ್ನೊಳ್ಕಪಟಗಳಿರ್ದೊಡೆ ।
ತನ್ನಂದದೆ ಕಪಟ ಗುಣಗಳೆಣಿಪರು ಪರರೊಳ್ ॥
ತನ್ನೊಳ್ ಕಪಟಗಳಡಗಲ್ ।
ತನಗಾರುಂ ಕಪಟಿಯಿಲ್ಲ ಧರೆಯೊಳ್ ವೇಮಾ ॥ ೧೯ ॥

ಜಪವು ಬಾಹ್ಯ ಪೂಜೆ ಮಿಗಿಲು ಮಾಡಿದ ಮೇಲೆ ।
ಕಪಟವನ್ನು ಬಿಡದೆ ಕಷ್ಟ ನರರು ॥
ಮುಕ್ತಿ ಸೂರೆಗೊಳದೆ ಮುಳುಗಿದರ್ತಮದೊಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೦ ॥

ವೇಷಧಾರಿಗೆಂದು ವಿಶ್ವಾಸ ಕೂಡದು ।
ವೇಷವೆಷ್ಟೋ ದೋಷಕಾರಿಯಲ್ತು ॥
ರಟ್ಟು ಮಾಡಲಿಲ್ಲೆ ರಾವಣವೇಷವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೧ ॥

ಪಾಗು ಹಚ್ಚಡಗಳು ಧನ ಧಾನ್ಯಸಂಪದ ।
ಬೀಗ ಉಂಗುರಗಳು ದೊಡ್ಡ ಹೊಟ್ಟೆ ॥
ನೋಡಿ ಗೌರವಿಪರು ಒಳಗುಟ್ಟು ನೋಡರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೨ ॥

---

## ಪರಹಿತವಮಾಡು.

ಸಾಧು ಜನರ ಮೇಲೆ ಸಂತೋಷಪಡುವಾತ ।
ಪರರ ಮೇಲು ನೋಡಿ ಸೈರಿಪಾತ ॥
ಮನೆಯೊಳಿರ್ದೊಡೇನು ಅಡವಿಯೊಳಿರಲೇನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೩ ॥

ಅಕ್ಷರವರಿಯದ ಆಚಾರವದು ಯೇಕೆ ।
ತಾನು ತಿನ್ನದಿರುವ ಧನವದೇಕೆ ।

ಪರರ ಮೇಲು ನೋಡಿ ಸಹಿಸದ ತನುವೇಕೆ ।
ವಿಶ್ವತೋಭಿರಾಮ ಕೇಳೊ ವೇಮಾ || ೭೪ ||

## ಸಜ್ಜನರ ಸಂಗದಲ್ಲಿರು.

ಹಾಲು ಕಲೆತು ನೀರು ಹಾಲಾಗಿ ಶೋಭಿಸಿ ।
ಪಾನಯೋಗ್ಯವಾದ ತೆರದೊಳದುವೆ ।
ಸಾಧು ಜನರ ಕೂಡಿಯಾಡುವ ಮನುಜರು ।
ಮುಕ್ತರಹರು ಮಾನನೀಯ ವೇಮಾ || ೭೫ ||

ಈಡಿಗನ ಮನೆಯಲ್ಲಿ ಹಾಲನ್ನು ಕುಡಿದೊಡೆ ॥
ನೋಡಿ ಜನರು ಮದ್ಯವೆಂದು ನುಡಿವರ್ ॥
ಜೋಡಿಲ್ಲದಿಹ ಸ್ಥಳದಿ ನಿಲೆ ನಿಂದೆ ತಪ್ಪದೈ !
ವಿಶ್ವತೋಭಿರಾಮ ಕೇಳೊ ವೇಮಾ || ೭೬ ||

ಬೇರುಹುಳುವು ಸೇರಿ ವೃಕ್ಷವು ಕೆಡಿಸುದು ।
ಜೇಡ ಹುಳವು ಸೇರಿ ಗಿಡವು ಕೆಡಗುಂ ||
ಕುಚ್ಚಿತ ಸೇರಲು ಗುಣವಂತ ಕೆಡುವನು ।
ವಿಶ್ವತೋಭಿರಾಮ ಕೇಳೊ ವೇಮಾ || ೭೭ ||

ಹಂದಿಮರಿಗಳೇನುವುದು ಹತ್ತನ್ನೈದನು ॥
ಆನೆಯೂನುತಿರ್ಪುದೊಂದು ಮರಿಯು ।
ಉತ್ತಮ ಪುರುಷನು ಓರ್ವನೇ ಸಾಲದೇ ।
ವಿಶ್ವತೋಭಿರಾಮ ಕೇಳೊ ವೇಮಾ || ೭೮ ||

## ಸಮಾಧಾನಿಯಾಗಿರು.

ಹೊಟ್ಟೆಗಾಗಿ ಮನವೆ ಕಳವಳವೇತಕೆ ।
ಹೊಟ್ಟೆಗಾಗಿ ತೃಪ್ತಿ ಹೊಂದು ಬೇಗ ॥
ಹೊಟ್ಟೆಕಲ್ಲಿನಲ್ಲಿ ಕಪ್ಪೆಗೆ ಯಿಲ್ಲವೇ ।
ವಿಶ್ವತೋಭಿರಾಮ ಕೇಳೊ ವೇಮಾ || ೭೯ ||

## ಮೃದುವಚನವನ್ನಾಡು.

ಅಲ್ಪನಾಡುತಿರ್ಪ ನಾಡಂಬರದೊಳ್ಳಿದೆ ।
ಸುಜನನಾಡುತಿರ್ಪ ಸೌಮ್ಯವಾಗಿ ॥
ಕಂಚಿನಂತೆ ಕನಕವೇಂ ಶಬ್ದ ಗುಡುವುದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೦ ॥

## ತಂದೆತಾಯಿಗಳನ್ನು ಮನ್ನಿಸು

ತಂದೆತಾಯಿಗಳೊಳು ದಯೆಯಿಲ್ಲದಿಹ ಸುತ ।
ಹುಟ್ಟಲೇನು ತಾನು ಸಾಯಲೇನು ॥
ಹುತ್ತದಲ್ಲಿ ಗೆದ್ದಲುದಿಸಿ ಲಯ ವೈದದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೧ ॥

ತಾಯಿ ಗೌರಿ ತನಗೆ ತಂದೆಯು ಶಂಭುವು ।
ಪ್ರಮಥಗಣಗಳಖಿಳ ಬಂಧುಜನರು ॥
ತನ್ನ ತವರುಮನೆಯು ನಿರುತ ಕೈಲಾಸವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೨ ॥

ಧರಣಿಯಲ್ಲಿ ನರರು ಮಕ್ಕಳ ಬಯಸುತೆ ।
ಮರುಗುತಿಹರು ಬಹಳ ಆಶೆಯಿಂದೆ ।
ಮಗನು ಜನಿಸಲವನು ಕುಲವನುದ್ಧರಿಪನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೩ ॥

## ಮತ್ಸರಭಾವವನ್ನು ಬಿಡು

ಸಚ್ಚರಿತೆ ಲೋಕವಶ್ಯವು ।
ಕುಚ್ಛಿತವೇ ಲೋಕನಿಂದೆ ಕೋವಿದನಿಂಗುಂ ॥
ತುಚ್ಛದೊಳು ಹಾನಿ ಬರ್ಪುದು ।
ಮತ್ಸರವೇ ತನ್ನ ಕೆಡಿಸುವುದು ವರ ವೇಮಾ ॥ ೮೪ ॥

## ಜನರ ಮೆಚ್ಚಿಗೆಯನ್ನು ಪಡೆ

ಹಲವರಾಡ್ವ ಮಾತು ಫಲವೀವುದದು ಶ್ಲಾಘ್ಯ ।
ಒಬ್ಬನಾಡುವ ಮಾತು ನಡೆಯದೆಂದುಂ ॥
ಸುಮ್ಮನಿರುವ ನರನಿಗೂರೆಲ್ಲ ಸಮನಲ್ಲ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೫ ॥

ಶ್ವಾಸವಿಲ್ಲದಿರ್ಪ ತಿದಿಯನೂದಿದೊಡೈದೆ ।
ಪಂಚ ಲೋಹವೆಲ್ಲ ಭಸ್ಮವಹವು ॥
ಹಿರಿಯರು ಸೂರೆನ್ನಲುರಿ ಯೇಳದಿರ್ಪುದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೬ ॥

ಡೊಂಕು ಗುಳವನು ಕಾಸಿ ಡೊಂಕು ತಿದ್ದಲು ಬಹುದು ।
ಬೆಟ್ಟವೆಲ್ಲವ ಹಿಟ್ಟು ಮಾಡಬಹುದು ॥
ಕಠಿಣ ಚಿತ್ತನ ಮನವ ತಿರಗಿಸಲಾಗದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೭ ॥

ಲೋಹ ಮುರಿಯಲದನು ಕಾಸಿ ಬೆಸೆಯಲುಬಹುದು ।
ಮನಸು ಮುರಿದ ಮೇಲೆ ಬೆಸೆಯಲರಿದು ॥
ಜನಗಳಿದನರಿಯುತ್ತೆ ಜಾಣರಾಗಿರ್ಪುದೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೮ ॥

---

## ಉತ್ತಮರ ನಡೆಯಂತೆ ನಡೆ

ದೊಡ್ಡವರುಕ್ತಿಯ ಪ್ರೇಮದಿ ಕೇಳಿ ತಾ ।
ನವರ ತೆರದಿ ನಡೆಯಲನುಕರಿಪನು ॥
ಹುಲಿಬಣ್ಣ ನೋಡಿ ನರಿ ಬರೆಯೆಳಸಿಕೊಂಡಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೮೯ ॥

---

## ಸತ್ಯವನ್ನು ನುಡಿ

ನಿಜವ ನುಡಿಯುವವನು ನಿರ್ಮಲನಾಗಿರ್ಪ ।
ನಿಜವ ನುಡಿಯುವವನೆ ನೀತಿಪರನು ।
ನಿಜವ ನುಡಿಯದವನೇ ನೀಚ ಚಂಡಾಲನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೯೦ ॥

ನಿರುತ ಸಟೆಯನಾಡುವವರ ನಿವಾಸದಿಂ ।
ಭರದಿ ಲಕ್ಷ್ಮಿ ಹೊರಡದೇತಕಿಹಳು ॥
ಪಿರಿದು ರಂಧ್ರವಿರ್ಪ ಕುಂಭದ ನೀರಿನೋಲ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೯೧ ॥

ಎಷ್ಟು ತೊಳೆಯೆ ಬಾಯಿಯೆಂಜಲು ಪೋಪುದೆ ।
ಸರ್ವ ಕಾಲದಲ್ಲಿ ಯೆಂಜಲಹುದು ॥
ಅನುದಿನದೊಳು ನೋಡಲನೃತವಾಡುವ ಬಾಯಿ ।
ಬಾಯಿಯಲ್ಲ ತಳದ ಬಾಯಿ ವೇಮಾ ॥ ೯೨ ॥

ಸುಳ್ಳು ನಿಜವೆರಡನ್ನು ಕರಕಂಠನರಿವನು ।
ನೀರು ಹಳ್ಳವರಿಗುಂ ನಿಜದಿ ನೋಡೆ ॥
ತನಯನ ಜನನವ ತಾಯಿ ತಾನರಿವಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೯೩ ॥

---

## ರಾಜನೀತಿ.

ಚತುರೋಪಾಯ ಸಮರ್ಥತೆ ।
ವಿತರಣೆ ಗಾಂಭೀರ್ಯ ಧೈರ್ಯವಿಭವಸ್ಫುರಣಾ ।
ದಿತರ ಗುಣಂಗಳು ಮೂಡಿ ।
ರ್ದ ತುಲಿತನಾದವನೆ ರಾಜನೆನಿಪನು ವೇಮಾ ॥ ೯೪ ॥

ಅರಿಯೆ ಸತ್ಯದಲ್ಲಿ ವರ ಹರಿಶ್ಚಂದ್ರ ತಾಂ ।
ನಿತ್ಯವಾದ ಕೀರ್ತಿ ನಿಲಿಸಿಕೊಂಡ ॥
ಸತ್ಯವೆ ರಾಜರ್ಗೆ ಸರ್ವದಾ ಯೋಗ್ಯವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೯೫ ॥

# ಶಿವಾನುಭವ.

ಸಂಪುಟ ೨೪ ] ( ಮಾಸಪತ್ರಿಕೆ ) [ ಸಂಚಿಕೆ ೯



ಸಪ್ಟೆಂಬರ ೧೯೩೦] ವಿಜಾಪೂರ [ ಭಾದ್ರಪದ ೧೮೫೨

ವಾ. ಚಂ. ೫-೧೨-೦

# ವಿಷಯಗಳು.

ಪುಟಗಳು



ಶಿವಾನುಭವ ಪತ್ರಿಕೆ, ವಿಜಾಪುರ.

ಮಾಸಿಕ ೬೪ ಪುಟಗಳು.

ವಾರ್ಷಿಕ ಚಂದಾ ೫-೧೨-೦

# ಶಿವಾನುಭವ

| ವರ್ಷ ೨೪ | ಸಪ್ಟಂಬರ ೧೯೫೦ | ಸಂಚಿಕೆ ೮-೯ |
|---|---|---|


## ಷಟ್ ಸ್ಥಲಗಳೂ ಏಕೋತ್ತರ ಶತಸ್ಥಲಗಳೂ.


( ಲೇಖಕರು:- ಶ್ರೀಯುತ ಬಸವಪ್ಪ ಚನ್ನಪ್ಪ ಪಟ್ಟೇದ-ಬಂಟನೂರ )


### ಲೇಖಾಂಕ ೨

### ಭಕ್ತನೂ ಆತನ ಆಚಾರಲಿಂಗವೂ

ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಇವರು ಷಟ್‌ಸ್ಥಲಗಳಲ್ಲಿ ಅಂಗರೆನಿಸುವರು. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಇವು ಕ್ರಮವಾಗಿ ಅವರು ಪೂಜಿಸತಕ್ಕ ಲಿಂಗಗಳಾಗಿವೆ ಅಂಗರಲ್ಲಿ ಭಕ್ತನೇ ಮೊದಲಿನವನಾಗಿದ್ದು, ಅವನ ಲಿಂಗವು ಆಚಾರಲಿಂಗವೆಂಬುದು ಇದರಿಂದ ಕಂಡು ಬರುವದು. ಈ ಷಟ್‌ಸ್ಥಲಗಳಾದರೂ ಆರು ಪಾವಟಿಗೆಗಳಂತೆ ಏರುತ್ತ ಹೋಗುತ್ತವೆಂಬ ಕಲ್ಪನೆಯಾದರೂ ರೂಢವಾಗಿದೆ. ಅದುದರಿಂದ 'ಭಕ್ತನೂ ಅವನ ಆಚಾರಲಿಂಗವೂ, ತೀರ ಕೆಳಗಿನ ತರಗತಿಯವು' ಎಂಬ ಭಾವನೆಯು ಬಹುತರ ಎಲ್ಲರಲ್ಲಿ ಮನೆ ಮಾಡಿಕೊಂಡಿರುವದು. ಇದರಿಂದ ಬಲ್ಲವರು ಸಹ ಅನೇಕರು ದಿಗ್ಭ್ರಮೆ ಹೊಂದಿರುವದು ಕಂಡುಬರುತ್ತದೆ. ಆದುದರಿಂದ ಈಗ ಭಕ್ತ ಹಾಗೂ ಅವನ ಆಚಾರಲಿಂಗಗಳನ್ನು ಕುರಿತು ಹೆಚ್ಚಿಗೆ ವಿವೇಚಿಸಬೇಕಾಗಿದೆ.

ಸಿದ್ಧಾಂತ ಶಿಖಾಮಣಿಯಲ್ಲಿ, ಷಟ್ ಸ್ಥಲಗಳಲ್ಲಿ ಪ್ರಗತಿ ಹೊಂದುತ್ತಾ ನಡೆದಂತೆ ಭಕ್ತನೇ ಮಾಹೇಶ್ವರನೂ, ಮಾಹೇಶ್ವರನೇ ಪ್ರಸಾದಿಯೂ, ಪ್ರಸಾದಿಯೇ ಪ್ರಾಣಲಿಂಗಿಯೂ, ಪ್ರಾಣಲಿಂಗಿಯೇ ಶರಣನೂ, ಶರಣನೇ ಐಕ್ಯನೂ, ಆಗುವನೆಂದು ಉಲ್ಲೇಖವಿದೆ. ಇದರಿಂದ ಷಡಂಗರಲ್ಲಿ ಭಕ್ತನೇ ತೀರ ಕಡಿಮೆ ಯೋಗ್ಯತೆಯುವನು ಎಂಬುದು ಸುಸ್ಪಷ್ಟವಾಗುವದು.

ಅದೇ ಗ್ರಂಥದಲ್ಲಿ ಮಾಹೇಶ್ವರ ಸ್ಥಲದೊಳಗೆ "ಭಕ್ತದೇಹಿಕ ಲಿಂಗ ಸ್ಥಳ" (ಭಕ್ತನ ದೇಹವೇ ಲಿಂಗವಿರುವ ಸ್ಥಳವು.) ಎಂದು ಹೇಳಿದೆಯೇ ಹೊರತು "ಮಾಹೇಶ್ವರ ದೇಹಿಕ ಲಿಂಗಸ್ಥಳ" ಎಂದು ಬರೆಯಲಿಲ್ಲ. ಭಕ್ತನಿಗಿಂತ ಮಾಹೇಶ್ವರನು ಮೇಲ್ತರಗತಿಯುವನಾಗಿದ್ದರೆ ಹಾಗೆ ಬರೆಯಲು ಏನು ಅಡ್ಡಿ ಇದ್ದಿತು.? ಅಡ್ಡಿಯಿಲ್ಲವಷ್ಟೇ ಅಲ್ಲದೆ ಮೇಲಾಗಿ ಹೆಚ್ಚು ಶೋಭಿಸುತ್ತಿದ್ದಿತು.

ಪ್ರಸಾದಿ ಸ್ಥಳದಲ್ಲಿ ಗುರು ಮಹಾತ್ಮ್ಯ, ಲಿಂಗಮಹಾತ್ಮ್ಯ ಜಂಗಮ ಮಹಾತ್ಮ್ಯ ಎಂಬವುಗಳ ತರುವಾಯ ಭಕ್ತ ಮಹಾತ್ಮ್ಯ ಎಂದು ಕ್ರಮಗೊಳಿಸಿದ್ದಾರೆ. ಇದನ್ನು ನೋಡಿದರೆ ಭಕ್ತನು ತಾತ್ವಿಕ ದೃಷ್ಟಿಯಿಂದ ಗುರು-ಲಿಂಗ-ಜಂಗಮರಿಗಿಂತ ಮೇಲಿನವನೆಂಬುದು ಸುಸ್ಪಷ್ಟವಾಗುತ್ತದೆ. "ಮಮ ಭಕ್ತೋ ಮಮಾಧಿಕಃ" ಎಂದು ಶಿವನು ಹೇಳಿದುದು ಆಗಮಗಳಲ್ಲಿಯೂ ಕಂಡುಬರುತ್ತದೆ. ಭಕ್ತನೇ ಇಲ್ಲದಿದ್ದರೆ ಗುರು ಲಿಂಗ ಜಂಗಮಗಳ ಅಸ್ತಿತ್ವವೇ ಇರುತ್ತಿದ್ದಿಲ್ಲ. ಇವಕ್ಕೆಲ್ಲ ಭಕ್ತನ ಹೊರ ದೇಹ, ಲಿಂಗಶರೀರ, ಜ್ಞಾನಗಳೇ ಆಧಾರವಾಗಿವೆ. ಇವರಿಗೂ ಭಕ್ತನಿಗೂ ಇರುವ ಸಂಬಂಧವು ತಂದೆ ಮಕ್ಕಳಂತೆ ಇರುವದಾದರೂ ಮಗನು ತಂದೆಗೆ ಹೆಚ್ಚು ಪ್ರಿಯನೂ, ಅವನ ಆಸ್ತಿಗೆಲ್ಲ ತರುವಾಯದ ಒಡೆಯನೂ ಇರುವದರಿಂದ ತಂದೆಯು ಆ ಮಗುವನ್ನು ಕಿಲಮಾತ್ರವೂ ಅಲಕ್ಷಿಸನು. ಮತ್ತು ತಿರಸ್ಕರಿಸನು. ಆದುದರಿಂದ ಮೇಲಿನ ವಿವೇಚನೆಯಿಂದ ಭಕ್ತಾಧಿಕ್ಯವು ವಿಶದವಾಗಿ ಪ್ರಸ್ಥಾಪಿತವಾಗುವದು.

ಪ್ರಾಣಲಿಂಗಿಯ ಸ್ಥಳದಲ್ಲಿ "ಅಂಗ ಲಿಂಗಿಸ್ಥಳ" ಅಂದರೆ ಅಂಗವೇ ಲಿಂಗವಿರುವ ಸ್ಥಳವೆಂದು ಪುನಃ ಬರೆಯಲ್ಪಟ್ಟದೆ. ಒಂದು ರೀತಿ

ಯಿಂದ ಭಕ್ತ ದೇಹಿಕ ಲಿಂಗ ಸ್ಥಳದ ಪುನರಾವೃತ್ತಿಯೇ ಇದೆನ್ನ ಬಹುದು. ಇಲ್ಲಿ 'ಲಿಂಗ' ಈ ಶಬ್ದವು ಹೆಚ್ಚು ವ್ಯಾಪಕವಾಗಿದ್ದರೂ ಸಹ ಅದರ ಉದಯವು ಭಕ್ತದೇಹಿಕ ಲಿಂಗ ಸ್ಥಳದಿಂದಲೇ ಆದು ದೆಂಬುದು ನಿಜವಿದೆ.

ಶರಣ ಸ್ಥಳದಲ್ಲಿ 'ಶೀಲ ಸಂಪಾದನ ಸ್ಥಳ' ಎಂದು ಬಂದಿದೆ. ಇಲ್ಲಿ ಶೀಲ ಎಂದರೆ ಲಿಂಗವಲ್ಲಿ ಬೆರೆಯುವ ಆಚಾರವೇ ಹೊರತು ಬೇರೊಂದಿಲ್ಲ.

ಐಕ್ಯಸ್ಥಳದಲ್ಲಿ 'ಸರ್ವಾಚಾರ ಸಂಪತ್ತಿ ಸ್ಥಳ' ಎಂಬುದುಂಟು. ಇಲ್ಲಿಯೂ ಆಚಾರವೇ ಅಂಟಿಕೊಂಡಿದೆ. ಇದೆಲ್ಲವನ್ನು ಗಮನಿಸಿದರೆ ಭಕ್ತಾಧಿಕ್ಯವೂ ಆಚಾರ ಲಿಂಗಾಧಿಕ್ಯವೂ ಕಂಡುಬರುವಂತಿದೆ. ಇದ ಲ್ಲದೆ ಅಂಗಸ್ಥಲಗಳೂ ಅರಿತುಕೊಳ್ಳುವಂಥವುಗಳೂ, ಆಚರಿಸತಕ್ಕಂಥವು ಗಳೂ ಇರುವದರಿಂದ ಆಚಾರಲಿಂಗಕ್ಕೇನೇ ಹೆಚ್ಚು ಪ್ರಾಶಸ್ತ್ಯವುಂಟೆಂಬುದು ಒಡೆದು ಕಾಣುವಂತಿರುವದು. ಆಚಾರಲಿಂಗಕ್ಕೆ ವೇಲ್ಮೈ ಬಂದೊಡ ನೆಯೇ ಭಕ್ತನಿಗಾದರೂ ವರಿಷ್ಠತ್ವ ಬರದೇ ಇರಲಾರದು. ಇನ್ನು ಸಿದ್ಧಾಂತ ಶಿಖಾಮಣಿಯನ್ನು ಬಿಟ್ಟು ವಚನ ಗ್ರಂಥಗಳತ್ತ ತಿರುಗುವಾ.

ಶ್ರೀ ಬಸವೇಶ್ವರ ವಚನಃ- ( ೧ ) "ವಿಪ್ರನೊದಲ್ಗೊಂಡು ಅಂತ್ಯಜ ಕಡೆಯಾಗಿ ಲಿಂಗವುಳ್ಳವರನ್ನು ಒಂದೇ ಎಂಬೆ; ಬ್ರಾಹ್ಮಣ ಮೊದಲ್ಗೊಂಡು ಶ್ವಪಚ ಕಡೆಯಾಗಿ ಲಿಂಗವಿಲ್ಲದವರನ್ನು ಒಂದೇ ಎಂಬೆ ಕೂಡಲ ಸಂಗಮ ದೇವಾ." ಇಲ್ಲಿ ಲಿಂಗವೆಂದರೆ ಸ್ಥೂಲ ಮೇಲೆ ಧರಿಸಿದ ಇಷ್ಟಲಿಂಗವೆಂದೇ ಕಂಡುಬರಬಹುದು. ಆದರೆ ನಮ್ಮ ಮತದಲ್ಲಿ ಆ ಹೊರಗೆ ಧರಿಸಿದಲಿಂಗವು "ಒಳಗಿನದೇ ಹೊರಗೆ ಬಂದಿದೆ" ಎಂದು ಸಿದ್ಧಾಂತ ಮಾಡಿರುವ ರೆಂಬುದನ್ನು ಮರೆಯಲಾಗದು. ಬಸವಣ್ಣನವರು ಹೀಗೆ ಹೇಳುವಾಗ ಈ ತಾತ್ವಿಕ ದೃಷ್ಟಿಯನ್ನೇ ಮುಂದಿಟ್ಟುಕೊಂಡಿರುವರೆಂಬುದು ಸ್ಪಷ್ಟವದೆ.

( ೨ ) "ಲಿಂಗ ವಿಭೂತಿಯುಳ್ಳವನ ಕಂಡರೆ ಸಂಗಾ ನೀನೆಂದು ನಂಬುವುದೆನ್ನ ಮನವು"

( ೩ ) " ಲಿಂಗಸಹಿತ ಭಕ್ತನು ಮನೆಗೆ ಬಂದಡೆ ನಿನ್ನ ಕುಲ ವಾವುದೆಂದು ಕೇಳಿದೆನಾದೊಡೆ ತಲೆದಂಡ ತಲೆದಂಡ ಕೂಡಲ ಸಂಗಮದೇವಾ "

ಈ ವಚನಗಳಿಂದಲೂ " ಭಕ್ತ ದೇಹಿಕ ಲಿಂಗಸ್ಥಳ " ವೆಂಬುದೇ ನಿಷ್ಪನ್ನವಾಗುವದು. " ಭಕ್ತ ಕಾಯೋ ಮಮ ಕಾಯಃ " ಎಂಬ ಆಗಮ ವಚನವಾದರೂ ಶಿವನಿರುವ ಸ್ಥಳವು ಭಕ್ತನ ದೇಹವೆಂಬು ದನ್ನೇ ಹೇಳುವದು.

ಸ್ವತಂತ್ರ ಸಿದ್ಧ ಲಿಂಗೇಶ್ವರ ವಚನಃ— ಆಧಾರದಲ್ಲಿ ಆಚಾರ ಲಿಂಗವ ಪೂಜಿಸಿ ಆಚಾರಲಿಂಗದ ಭಕ್ತನಾದನಯ್ಯಾ ನಿಮ್ಮ ಶರಣ. ಸ್ವಾಧಿಷ್ಠಾನದಲ್ಲಿ ಗುರುಲಿಂಗವ ಪೂಜಿಸಿ ಗುರುಲಿಂಗ ದೇವರ ಭಕ್ತ ನಾದನಯ್ಯಾ ನಿಮ್ಮ ಶರಣ. ಮಣಿಪೂರಕದಲ್ಲಿ ಶಿವಲಿಂಗವ ಪೂಜಿಸಿ ಶಿವಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಅನಾಹತದಲ್ಲಿ ಜಂಗಮ ಲಿಂಗವ ಪೂಜಿಸಿ ಜಂಗಮ ಲಿಂಗದೇವರ ಭಕ್ತನಾದನಯ್ಯಾ ನಿಮ್ಮ ಶರಣ. ವಿಶುದ್ಧಿಯಲ್ಲಿ ಪ್ರಸಾದ ಲಿಂಗವ ಪೂಜಿಸಿ ಪ್ರಸಾದ ಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಆಜ್ಞಾ ಚಕ್ರದಲ್ಲಿ ಮಹಾಲಿಂಗವ ಪೂಜಿಸಿ ಮಹಾಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ. ಇಂತು ಷಟ್ ಚಕ್ರಗಳಲ್ಲಿ ಷಡ್ಲಿಂಗವ ಪೂಜಿಸಿ, ಷಟ್ ಸ್ಥಲ ಭಕ್ತನಾದನಯ್ಯಾ ನಿಮ್ಮ ಶರಣ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರಾ. " ಎಂದು ಹೇಳಿದ್ದಾರೆ.

ಇದನ್ನು ಆರೂ ಅಂಗರಿಗೆ ಭಕ್ತರೆಂದು ನಿಃಸಂದೇಹವಾಗಿ ನಂಬು ವಂತೆ ವರ್ಣಿಸಿದ್ದಾರೆ. ಇದರಿಂದ ಷಡಂಗರಲ್ಲಿ ' ಭಕ್ತನು ' ಕಿರಿಯು ನೆಂಬುದನ್ನು ತಿಳಿಯದೆ ಷಡಂಗರೆಲ್ಲರನ್ನೂ ಒಳಗೊಂಡಿರುವನೆಂಬುದು ಯಾರಿಗಾದರೂ ತೋರದೆ ಇರದು.

ಬಸವೇಶ್ವರ ವಚನಃ— " ಮೆಲ್ಲ ಮೆಲ್ಲನೆ ಷಟ್‌ಸ್ಥಳಗಳನ್ನು ಹೊಂದುವೆನೆಂದಡೆ, ನಾನೇನು ಚಿರಜೀವಿಯೇ! ಅಮೃತವ ಸೇವಿಸಿದ

ವನೇ! ಮರುಜೀವಣಿಯ ಕೊಂಡೆನೇ! ಇಲ್ಲ ಇಲ್ಲ ............... ನಾನು ನಿಂತ ಸ್ಥಳದಲ್ಲಿಯೇ ಷಟ್‌ಸ್ಥಳಗಳು ಬಂದು ಇಂಬುಗೊಳದಿದ್ದರೆ ಸುಡುವೆನೀ ತನುವನು " ಕೂಡಲಸಂಗಮದೇವಾ.

ಇಲ್ಲಿ ಪ್ರತಿಯೊಬ್ಬ ಅಂಗನಿಗೆ, ಅವನಾವ ಸ್ಥಳದವನಿದ್ದರೂ, ಅಲ್ಲಿಯೇ ಷಟ್‌ಸ್ಥಳಗಳನ್ನು ಪಡೆಯುವಂತೆ, ಮುಂದೃಷ್ಟಿಯನ್ನಿಟ್ಟು ನಡೆಯಬೇಕೆಂದು ಸೂಚಿಸಿದ್ದಾರೆ. ಇದನ್ನು ಲಕ್ಷಿಸಿದರೆ, ಪ್ರತಿಯೊಬ್ಬ ಲಿಂಗಾಂಗಿಯು ಷಡಂಗನಾಗಲು ಅರ್ಹನೆಂಬುದು ವಿಶದವಾಗುವದು. ಇದೆಲ್ಲವನ್ನು ನೋಡಿದರೆ, ಭಕ್ತನು ಕೆಳಗಿನ ಪ್ರತಿಯುವನೂ ಅಲ್ಲ ತಿರಸ್ಕೃತನೂ ಅಲ್ಲ. ಮೇಲಾಗಿ ಎಲ್ಲ ಅಂಗರು ಅವನಲ್ಲಿಯೇ ಸಮಾವೇಶವಾಗುವರೆಂಬುದು ಕಂಡುಬರುವದು.

**ಉಭಯ ಸ್ಥಲ**:— ಉಭಯ ಅಂದರೆ ಎರಡು. ಭಕ್ತಜಂಗಮಗಳು ಉಭಯಸ್ಥಳವೆಂದು ವಚನಗ್ರಂಥಗಳಲ್ಲುಂಟು ಆದರೆ ಸಿ. ಶಿ. ಮಣಿಯು ಗುರುಲಿಂಗಗಳು ಉಭಯಸ್ಥಳಗಳೆಂದು ಹೇಳಿದೆ. ಎರಡೂ ಒಂದೇ. ಭಕ್ತನ ಸ್ಥೂಲದೇಹವೇ ಗುರು. ಜಂಗಮವೇ ಲಿಂಗ. ಷಟ್‌ಸ್ಥಲ ಪಟವನ್ನು ನೋಡಿದರೆ, ಅಂಗಲಿಂಗಗಳು ಉಭಯಸ್ಥಲಗಳೆಂದು ಕಂಡು ಬರುವದು. ಹೇಗೆಂದರೂ ಸರಿಯೇ! ದೀಕ್ಷೆ ಮಾಡಿದ ಗುರು. ಇಷ್ಟಲಿಂಗಳನ್ನು ಕುರಿತು ಸಿ. ಶಿ ಮಣಿಯು ಪ್ರಸ್ತಾಪಿಸಿದೆ. ಅದನ್ನು ಬಿಟ್ಟು ಈಗ ಭಕ್ತ ಜಂಗಮಗಳ ವಿಷಯ ವಿಚಾರಿಸುವಾ.

ಭಜ್ ( ಭಜಿಸು ) + ತ = ಭಕ್ತ ಅಂದರೆ ಭಜಿಸುವವ. ಇಲ್ಲಿ ಭಕ್ತನು ಭಜಿಸತಕ್ಕ ವಸ್ತುವಾವುದೆಂಬುದನ್ನು ವಿವರಿಸದಿದ್ದರೆ, ತೊಂದರೆಯುಂಟಾಗುವದು.

" ಶ್ರವಣಂ ಕೀರ್ತನಂಚೈವ ಸ್ಮರಣಂ ಪಾದಸೇವನಂ।
ಅರ್ಚನಂ ವಂದನಂ ದಾಸ್ಯ ಸಖ್ಯ ಮಾತ್ಮ ನಿವೇದನಂ"॥

ಎಂದು ನವವಿಧ ಭಕ್ತಿಯನ್ನು ಎಲ್ಲರೂ ಹೇಳಿದ್ದರೆ, ಅಲಿಂಗಿಗಳು ಇಂತಹ ತರತರದ ಭಕ್ತಿಯನ್ನು ಅನುಸರಿಸಿ, ತಮ್ಮ ಇಷ್ಟ

ಮೂರ್ತಿಯನ್ನು ಭಜಿಸಿ, ಅವನಿಂದ ತನಗೆ ಬೇಕಾದ ಇಷ್ಟ ವಿಷಯ ಗಳನ್ನು ( ಹೊನ್ನು, ಹೆಣ್ಣು, ಮಣ್ಣು, ಹೆಂಡಿರು ಮಕ್ಕಳು, ಮೊದ ಲಾದವನ್ನು ) ಪಡೆಯಬಹುದು. ಆದರೆ ಲಿಂಗಾಂಗಿಯು ಅಂತಹ ನಲ್ಲ. ಸಂಸಾರವು ಹೇಯವೆನಿಸಿ ಅದರಿಂದ ವಿಮುಖನಾಗಿ ಅವನು ಲಿಂಗವಿಡಿದಿರುವನು. ಇವನು ಅದಾವ ವಿಷಯ ವಸ್ತುವನ್ನು ಬಯ ಸದೆ ಕೇವಲ ನಿತ್ಯಾನಂದವನ್ನು ಮಾತ್ರ ಕೋರುವನು. ತಾನೇ ತನ್ನ ಲ್ಲಿದ್ದುದನ್ನು ಪರರು ಬೇಡಿದರೆ ಹಿಂದೆ ಮುಂದೆ ನೋಡದೆ ಕೊಟ್ಟು ಬಿಡುವವನು. ಗುರುಲಿಂಗ ಜಂಗಮಕ್ಕೆ ತನುಮನಧನವನ್ನರ್ಪಿಸು ವದೇ ಈತನ ಪರಮ ಭಕ್ತಿಯು. ಹೀಗೆ ಒಳಹೊರಗಿನದೆಲ್ಲವನ್ನೂ ತ್ರಿಪುಟಿ ಸಾಧಿಸಿ, ಅರ್ಪಿತಮಾಡಿ, ತಾನು ಲಿಂಗೈಕ್ಯನಾಗಿ ನಿತ್ಯ ತೃಪ್ತ ನಾಗುವದೇ ಆತನ ಭಕ್ತಿಯ ಗುರಿಯು. ಇಂತಹ ಪರಮೋತ್ಕೃಷ್ಟ ಭಕ್ತಿಯೇ ಭಕ್ತನದು. ಕೆಳಗಿನ ವಚನವನ್ನು ನೋಡಿರಿ.

> " ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನ ವಾಗಿರ್ದೆ. ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿರ್ದೆ. ನೀನು ಆಕಾರವಿಡಿದರೆ ನಾನು ವೃಷಭ ನೆಂಬ ವಾಹನವಾಗಿರ್ದೆ. ನೀನು ನನ್ನ ಭವವ ಕೊಲ್ಲುವೆ ನೆಂದು ಜಂಗಮ ಲಾಂಛನವ ಹಿಡಿದು ಬಂದರೆ, ನಾನು ಭಕ್ತನೆಂಬ ವಾಹನವಾಗಿರ್ದೆ ಕೂಡಲಸಂಗಮದೇವಾ! "

ಈ ವಚನದಿಂದ ಭಕ್ತಜಂಗಮರ ಸಂಬಂಧವು ಸುಸ್ಪಷ್ಟವಾ ಗುವದು. ಭಕ್ತನ ಭವವನ್ನು ನಾಶಗೊಳಿಸುವದೇ ಜಂಗಮನ ಕರ್ತ ವ್ಯವು ( ಕಿಂಕಲನವು )- ಅದರಂತೆ ಆ ಜಂಗಮನನ್ನು ಸರ್ವವಿಧ ದಿಂದಲೂ ಸೇವಿಸಿ, ಕಿಂಕುರ್ವಾಣತೆಯಿಂದ ನಡೆಯುವದೇ ಭಕ್ತನ ಕರ್ತವ್ಯವು. ಇಂತು ನಡೆದುದಾದರೆ `ಭಕ್ತನು ಆ ಜಂಗಮ ಸ್ವರೂಪ ನಾಗಿ ಅವರಿಬ್ಬರೂ ಒಂದೇ ಆಗುವರು. ಭಕ್ತನನ್ನು ತನ್ನಂತೆಯೇ ಮಾಡಿ, ಅವನನ್ನು ತನ್ನಲ್ಲಿ ಐಕ್ಯಗೊಳಿಸಿಕೊಂಬುವವನೇ ಜಂಗಮ ನೆಂಬುದು ಇದರಿಂದ ತಾನೇ ತೋರಿಬರುವದು ಭಕ್ತನಲ್ಲಿ ಜಂಗ ಮನೂ, ಜಂಗಮನಲ್ಲಿ ಭಕ್ತನೂ, ಯಾವಾಗಲೂ ಇದ್ದೇ ಇರುವರು. ಇದೇ ಉಭಯ ಸ್ಥಲವು.

ಇನ್ನು ಅಂಗಲಿಂಗದ ಕಡೆಗೆ ಹೊರಳುವಾ:— ಅಂಗವೆಂದರೆ ಭಕ್ತನ ದೇಹ. ಲಿಂಗವೆಂದರೆ ಅವನಲ್ಲಿರುವ ಪರಮಾತ್ಮನ ಅಂಶ. ಈ ಪರಮಾತ್ಮನ ಅಂಶವನ್ನು 'ಅಂತರಾತ್ಮ' ನೆನ್ನುವರು. ಇದು ದೇಹದಲ್ಲಿ ಸೇರಿದೊಡನೆಯೇ ದೇಹದ ಸಂಗದಿಂದ ಜೀವವಾಗುವದು. ದೇಹ ಹಾಗೂ ಅದರೊಳಗಿರುವ ಅಂತರಾತ್ಮ ಇವೆರಡೂ ಒಂದೇ ವಸ್ತುವು. ಒಳಗಿನ ಪರಮಾತ್ಮರೂಪಿ ಚೈತನ್ಯವೇ ಬೆಳೆದು, ನೀರು ಬರ್ಫವಾದಂತೆ ದೇಹಾಕಾರ ಪಡೆದಿದೆ. ಬರ್ಫದಲ್ಲಿ ನೀರೂ ನೀರಿನಲ್ಲಿ ಬರ್ಫವೂ ಇದ್ದದ್ದನ್ನು ನಾವುಪ್ರತ್ಯಕ್ಷವಾಗಿ ನೋಡುವೆವು ಇದೇ ಅಂಗಲಿಂಗಗಳ ಉಭಯಸ್ಥಳವು.

ತ್ರಿವಿಧ ಸಂಪತ್ತು ಸ್ಥಳ:— ಹೊರಗಿನ ದೇಹ, ಅದರೊಳಗೆ ಜೀವ, ಅದರೊಳಗೆ ಜ್ಞಾನ, ಇವನ್ನೇ ಗುರುಲಿಂಗಜಂಗಮವೆಂದು ಹೇಳುವರು. ತನುವೇ ಗುರು ಪ್ರಾಣವೇ ಲಿಂಗ ಜ್ಞಾನವೇ ಜಂಗಮ ಎಂದು ವಚನಶಾಸ್ತ್ರವು ಬಿತ್ತರಿಸಿದೆ. ಈ ಮೂರನ್ನು ಒಂದುಗೊಳಿಸುವದೇ ತ್ರಿವಿಧ ಸಂಪತ್ತಿಯು. ಉಭಯಸ್ಥಳದಲ್ಲಿ ಜೀವವು ಪರಮಾತ್ಮನ ಅಂಶದಿಂದಲೇ ಆಗಿದೆ ಎಂಬುದು ಬಂದಿದೆ. ಆ ಜೀವದಿಂದಲೇ ದೇಹವಾಗಿದೆ ಎಂಬುದು ಸಹ ಬಂದಿದೆ. ಪರಮಾತ್ಮನ ಅಂಶವೇ ಜೀವ ಜೀವವೇ ಬಲಿದು ಹೊರಗೆ ಕಾಣಿಸಿಕೊಂಬುದೇ ದೇಹ. ಅಂದಮೇಲೆ ಈ ಮೂರೂ ಒಂದಾದವು. ಬೀಜದಿಂದ ಅಂಕುರ, ಅಂಕುರದಿಂದಲೇ ವೃಕ್ಷವಾದಂತೆಯೇ ಇವು ಇರುವವು. ಇದೇ ತ್ರಿವಿಧ ಸಂಪತ್ತು.

ಚತುರ್ವಿಧ ಸಾರಾಯ:— ಗುರು, ಲಿಂಗ, ಜಂಗಮ ಹಾಗು ಪ್ರಸಾದ ಈ ನಾಲ್ಕಕ್ಕೆ ಕೂಡಿಯೇ ಈ ಹೆಸರು ಬಂದಿದೆ. ತನು, ಜೀವ, ಅಂತರಾತ್ಮ, ಪರಮಾತ್ಮಗಳೇ ಮೇಲಿನ ಚತುರ್ವಿಧ ಹೆಸರನ್ನು ಪಡೆದಿವೆ. ಅಂತರಾತ್ಮನೆಂಬ ಪರಮಾತ್ಮನ ಅಂಶವು. ಪರಮಾತ್ಮನಿಂದ ಹೊರಟು ಚರಿಸಿ, ದೇಹದಲ್ಲಿ ಸೇರಿದುದರಿಂದ, ಅದು

ಜಂಗಮವೆಂಬುದು ನಿರ್ವಿವಾದವು. ಇನ್ನು ಪರಮಾತ್ಮನೆಂದರೆ ಪ್ರಸಾದವೆಂತು ? ಎಂಬುದು ಉಳಿಯಿತು. ಅದರ ವಿವರಣೆಯು ಈ ಪ್ರಕಾರವದೆ:— ಸ್ಥಲದಿಂದ ಮೂಲಪ್ರಣವ ಓಂಕಾರವು ಉದ್ಭವಿಸಿತು. ಆ ಓಂಕಾರದಲ್ಲಿ ಅ. ಉ ಮ್ ಎಂಬ ಚಿನ್ನಾದ, ಚಿದ್ಬಿಂದು, ಚಿತ್ಕಳೆಗಳು ಕೂಡಿವೆ. ಈ ಮೂರು ಹಾಗೂ ಮೂಲಪ್ರಣವ ಈ ನಾಲ್ಕು ಗಟ್ಟಿಗೊಂಡು ಮಹಾಲಿಂಗವಾಗಿದೆ. ಅದೇ ವಿಶ್ವದ ಒಳಹೊರಗೆಲ್ಲ ಬೆಳಗುತ್ತದೆ ಈ ಸೃಷ್ಟಿಯು ಮಾನವನಿಗೆ ಬಹು ಉಪಕಾರವಾಗಿದೆ. ಅದೇ ಅವನ ಜೀವಿತ ಸಾಧನವು. ಆದುದರಿಂದ ಅದೇ ಅವನ ಮಹಾಪ್ರಸಾದವು. ಮಹಾಲಿಂಗಕ್ಕೆ ಮಹಾದೇವ, ಪರಮಾತ್ಮ ಎಂತಲೂ ಹೆಸರುಗಳಿರುವವು. ಇದರಿಂದ ಪರಮಾತ್ಮನೇ ಪ್ರಸಾದವೆಂಬ ಅರಿಕೆಯಾಗುವಂತಿದೆ. ಪರಮಾತ್ಮನಿಂದ ಅಂತರಾತ್ಮ, ಅದರಿಂದ ಜೀವ, ಅದರಿಂದ ದೇಹ, ಹೀಗೆ ಕ್ರಮವಾಗಿ ಅವು ಇರುವದರಿಂದ, ಅವೆಲ್ಲ ಒಂದೇ ಅಂದರೆ ಪರಮಾತ್ಮ ಅಥವಾ ಶಿವಸ್ವರೂಪವು ಹೀಗೆ ಅರಿತುಕೊಳ್ಳುವದೇ ಚತುರ್ವಿಧ ಸಾರಾಯವು.

( ಇವುಗಳ ವಿವರಣೆಯ ಪಟವನ್ನು ಈ ಲೇಖದ ಕೊನೆಯಲ್ಲಿ ನೋಡಿರಿ)

**ಉಪಾಧಿ ಮಾಟ:—** ನಿರುಪಾಧಿ ಮಾಟ ಸಹಜ ಮಾಟ ಗಳು ಭಕ್ತನ ಅಂಗಸ್ಥಳಗಳಲ್ಲಿ ಕೊನೆಯವಾಗಿ ಹೇಳಲ್ಪಟ್ಟಿವೆ. ಇವನ್ನಷ್ಟು ಪರಿಶೀಲಿಸುವಾ.

ಮಾಡು + ಅ = ಮಾಟ ಎಂಬುದು ಭಾವನಾಮ. ಇದರ ಅರ್ಥ—ಕ್ರಿಯೆ ಇಲ್ಲವೆ ಆಚಾರ ಇದರಲ್ಲಿ ದಾನವೆಂಬುದೊಂದೇ ಅಲ್ಲ. ಆದರೆ ಎಲ್ಲತರದ ಕಾರ್ಯಗಳೂ ಬರುವವು. ಉಪಾಧಿ ಎಂದರೆ ದೇಹ ಆಕಾರಣ ಉಪಾಧಿ ಮಾಟವೆಂದರೆ ದೇಹ ಮೂಲಕವಾಗಿ ಮಾಡುವ ಆಚಾರಗಳು. ಇಷ್ಟಲಿಂಗ ಪೂಜಿಸುವ ತ್ಯಾಗಾಂಗನಲ್ಲಿ ಬರುವ ಈಶ್ವರ ಮಹೇಶ್ವರರಿಬ್ಬರಿಗೂ ಇದು ಸಂಬಂಧಿಸಿದೆ. ಹೀನಕಾರ್ಯಗಳನ್ನು ದೂರೀಕರಿಸಿ ಒಳ್ಳೆಯವುಗಳೆನಿಸಿದವುಗಳನ್ನಷ್ಟೇ ಇವರು ದೇಹ ಮುಖಾಂತರ ಮಾಡತಕ್ಕವರು

**ನಿರುಪಾಧಿ ಮಾಟ :** ಉಪಾಧಿಯಿಲ್ಲದುದೇ ನಿರುಪಾಧಿಯು ದೇಹವನ್ನು ಬಿಟ್ಟರೆ ಅದರೊಳಗಿರುವ ಲಿಂಗವೆಂಬುದೇ ನಿರುಪಾಧಿಯು. ನಿರುಪಾಧಿ ಮಾಟವೆಂದರೆ ದೇಹದೊಳಗಿರುವ ಶಿವನೇ ಎಲ್ಲ ಕಾರ್ಯಗಳನ್ನು ನಡೆಸುವನು. ನಾನು ಮಾತ್ರ ಯಾವವನ್ನೂ ಮಾಡುವದಿಲ್ಲ ಎಂಬ ಭಾವನೆಯಿಂದ ಆಚರಿಸುವದೇ ನಿರುಪಾಧಿ ಮಾಟವು. ಇದು ಅಂತರ್ಲಿಂಗದ ಪೂಜೆಮಾಡುವ ಭೋಗಾಂಗನಲ್ಲಿ ಸಮಾವಿಷ್ಟವಾಗಿರುವ ಪ್ರಸಾದಿ ಪ್ರಾಣಲಿಂಗಿಗಳಿಗೆ ಸಂಬಂಧಿಸಿದುದು.

**ಸಹಜ ಮಾಟ:—** ಸಹಜವೆಂದರೆ ನಾನು ಇಲ್ಲವೆ ಶಿವನೆಂದರಿಯುವೆ ಅವೆರಡನ್ನೂ ದಾಟಿ ನೈಸರ್ಗಿಕತೆವಿಡಿವುದು. ಈ ರೀತಿ ಮಾಡುವ ಕ್ರಿಯೆಗಳು ಸಹಜ ಮಾಟವೆನಿಸುವವು. ಭಾವಲಿಂಗ ಪೂಜಿಸುವ ಯೋಗಾಂಗನೊಳಗೆ ಸೇರುವ ಶರಣ ಐಕ್ಯರು ಅನುಸರಿಸುವ ಮಾಟವಿದು.

ಈ ಆರು ಸ್ಥಳಗಳು ದುರ್ಲಭವಾದವುಗಳು. ಇವು ಎಂತೆಂತಹರನ್ನೇ ದಂಗು ಬಡಿಸಿ ಉರುಳಾಡಿಸುವಾಗ ಪಾಪ! ಹೊಸದಾಗಿ ದೀಕ್ಷೆ ಹೊಂದಿದ ಮಹೇಶ್ವರನ ಪೂರ್ವದ ಸ್ಥಳದಲ್ಲಿರುವ ಲಿಂಗಾಯತ ತತ್ವಗಳಲ್ಲಿ ಅದೇ ಕಾಲಿಟ್ಟ ಈಶ್ವರನಿಗೆ ಇವು ಸಾಧ್ಯವಾಗುವ ಸ್ಥಳಗಳೇ ಅಲ್ಲ! ಎಂದೂ ಅಲ್ಲ! ಹಾಗಾದರೆ ಅವನ್ನು ಪೂರ್ವಜರು ಭಕ್ತ ಸ್ಥಳದಲ್ಲಿಯೇ ಹೇಗೆ ಸೇರಿಸಿರುವರು ? ಇದಕ್ಕೆ ಉತ್ತರವಿಷ್ಟೇ. ಅವರು ನಮ್ಮಂತೆ ಭಕ್ತನೆಂದರೆ ಹೊಸದಾಗಿ ಲಿಂಗವಿಡಿದವನಷ್ಟೇ ಮಾತ್ರ ಎಂದು ತಿಳಿಯದೆ ಷಡಂಗರೆಲ್ಲರೂ ಭಕ್ತರು ಎಂದು ತಿಳಿದೇ ಇವನ್ನೆಲ್ಲ ಹೇಳಿದ್ದಾರೆ. ಭಕ್ತ ಸ್ಥಳವೆಂದರೆ ಸರ್ವಲಿಂಗಾಂಗಿಗಳನ್ನು ಒಳಗೊಂಡ ಸ್ಥಳವೆಂಬುದೇ ಅವರ ಗ್ರಹಿಕೆ. ಲಿಂಗಧಾರಿಗಳೆಲ್ಲರೂ ಹೊಂದಬೇಕಾದ ಧ್ಯೇಯವನ್ನೇ ಅವರ ಮುಂದಿಡುವ ಉದ್ದೇಶದಿಂದಲೇ ಈ ಆರೂ ಸ್ಥಳಗಳನ್ನು ಇಲ್ಲಿ ವಿಶದೀಕರಿಸುವರು. ಹಾಗಾದರೆ ಆ ಪ್ರಥಮ ಮೆಟ್ಟಲಿನಲ್ಲಿರುವ ಮಹೇಶ್ವರನ ಪೂರ್ವದವನಿಗೆ ಏನೆಂದು ಕರೆಯಬೇಕೆಂಬುದು ಇಲ್ಲಿ ಮುಂದೆ ಬಂದು ನಿಲ್ಲುತ್ತದೆ. ಅವನು ಮಹೇಶ್ವರನ ಪೂರ್ವದವನಾದುದರಿಂದ, ಅವನನ್ನು ಈಶ್ವರ ಸ್ಥಳದವನೆಂದು ಅರಿಯುವದು ಸಯು

ಕ್ತವೆನ್ನಿಸುತ್ತದೆ. ತಾವೆಲ್ಲರೂ ಸಮಾಲೋಚಿಸಿ ಹೆಚ್ಚು ಯೋಗ್ಯವಾದ ಶಬ್ದ ದೊರೆತರೆ ಹಾಗೆ ಕರೆಯಲಡ್ಡಿ ಇಲ್ಲ.

## ಆಚಾರ ಲಿಂಗ.

ವೀರಶೈವರಲ್ಲಿ ಬರಿಯ ಮಾತಿಗೆ ಮಹತ್ವವಿಲ್ಲ. ಅದರಂತೆ ಆಚರಣೆಯು ಅವಶ್ಯವಾಗಿ ಆಗಲೇಬೇಕು. ಈ ಆಚಾರವು ದೇಹ, ಮನ, ಸದ್ಭಾವಗಳ ಮುಖಾಂತರವಾಗಿ ಮೂರು ವಿಧವಾಗಿ ಪ್ರಕಟವಾಗುವದು. ಇಂತಹ ಆಚಾರವೇ ಆಚಾರಲಿಂಗವೆಂದು ಹೇಳಲ್ಪಡುವದು. ದೇಹ ದ್ವಾರವಾಗಿ ತ್ಯಾಗಾಂಗನೂ, ಮನೋ ಮೂಲಕವಾಗಿ ಭೋಗಾಂಗನೂ, ಸದ್ಭಾವನೆಯ ಮುಖದಿಂದ ಯೋಗಾಂಗನೂ ತಮತಮಗೆ ತಕ್ಕುದಾದ ಆಚಾರವನ್ನು ಅನುಸರಿಸುತ್ತಿರುವರು. ಇವರೇ ಷಟ್‌ಸ್ಥಳದಲ್ಲಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯರೆಂದೂ ಅವರ ಪೂಜಿಸುವ ಲಿಂಗಗಳು ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳೆಂದೂ ಹೆಸರು ತಳೆದಿರುವವು. ಷಡಂಗರು ತಮ್ಮ ತಮ್ಮ ಲಿಂಗದಲ್ಲಿ ಬೆರೆಯಬೇಕಾದರೆ ಆಯಾ ಲಿಂಗಗಳಿಗೆ ಹೇಳಿದ ಲಿಂಗಸ್ಥಳಗಳಂತೆ ಆಚರಿಸದಿದ್ದರೆ ಗತಿಯೇ ಇಲ್ಲ. ಇದರ ಮೇಲಿಂದ ಅವರೆಲ್ಲರೂ ಆಚಾರಲಿಂಗವನ್ನೇ ಆಚರಿಸುತ್ತಿರುವರೆಂಬುದು ನಿರ್ವಿವಾದವಾಗಿ ಸಿದ್ಧವಾಗುವದು. ಅಂತೇ ಷಟ್‌ಸ್ಥಲದಲ್ಲಿ ಭಕ್ತನಲಿಂಗವು ಆಚಾರಲಿಂಗವೆಂದು ಹೇಳಲ್ಪಡುವದು. ಯಾರೇ ಇರಲಿ ಅವರು ಆಚಾರಲಿಂಗವನ್ನು ಪೂಜಿಸುವದನ್ನು ಬಿಟ್ಟರೆ ಅವರ ಆಟವೇ ನಿಂತುಹೋಗುವದು. ಆ ಕಾರಣ ಉಳಿದ ಗುರುಲಿಂಗಾದಿ ಲಿಂಗಗಳು ಬೇರೆ ಹೆಸರುಳ್ಳವಾಗಿದ್ದರೂ, ಅವೆಲ್ಲ ಆಚಾರಲಿಂಗದ ಅಂತರ್ಗತಗಳೇ ಹೊರತು ಅದನ್ನು ಬಿಟ್ಟಿರಲಾರವು. ಅದೇ ಮೇರೆಗೆ ಮಹೇಶ್ವರಾದಿ ಅಂಗರೆಲ್ಲರೂ ಭಕ್ತನ ಒಡಲಲ್ಲಿ ಬರುವರೇ ವಿನ ಹೊರಗಿರುವವರಲ್ಲ. ಭಕ್ತತ್ವದ ಪರಮೋಚ್ಚ ಧ್ಯೇಯದ ಪೂರ್ತತೆಗಾಗಿಯೇ ಅವೆಲ್ಲ ಇರುವವಲ್ಲದೆ ಭಕ್ತತ್ವಕ್ಕಿಂತ ಮೇಲ್ಮೆಯನ್ನು ಪಡೆಯುವದಕ್ಕಲ್ಲ. ಎಂಬುದನ್ನು ಸಮಾಜವು ಗಮನಿಸುವದೆಂದು ಕೋರುವೆನು.

ಭಕ್ತನು ಜ್ಞಾನಪರವಾದ ಒಣಮಾತುಗಳನ್ನು ಆಡಿಬಿಡುವವನಲ್ಲ. ಪ್ರತ್ಯಕ್ಷ ತದನುಸಾರ ಆಚರಿಸಿಯೇ ತೃಪ್ತನಾಗುವನು. ಆದುದರಿಂದಲೇ ನಮ್ಮ ಪ್ರಮಥ ಪುಂಗವರು ಆಚಾರ ಸೌಗಂಧಿಕ ಮೂಲದಿಂದ ರಸಾಸ್ವಾದನೆ ಮಾಡಿ ಪರಿಪುಷ್ಟವಾದ ಗಗನ ಭೇದೀ ಮಹಾಲಿಂಗ ಮಲಯ ವೃಕ್ಷವನ್ನು ನಿಯೋಜಿಸಿರುವದು ನಮ್ಮ ಅತ್ಯಂತ ಸುದೈವವೇ ಸರಿ.

ಜಂಗಮಕ್ಕೆ ಚರವೆಂತಲೂ ಜಂಗಮ ಲಿಂಗಕ್ಕೆ ಚರಲಿಂಗವೆಂತಲೂ ಹೆಸರುಗಳುಂಟು. ಇಲ್ಲಿ ಗಮ್. ಹಾಗು ಚರ್ ಎಂಬ ಧಾತುಗಳು ಬಂದಿವೆ. ಗಮನಾರ್ಥಕ ಧಾತುಗಳೆಲ್ಲ ಉಭಯಾರ್ಥಗಳಲ್ಲಿ ಅಂದರೆ ಜ್ಞಾನಾರ್ಥಕವಾಗಿಯೂ ಚಲನಾರ್ಥಕವಾಗಿಯೂ ಇರುತ್ತವೆಂದು ಸಾಧಾರಣವಾಗಿ ಹೇಳಿದುದುಂಟು. ಆ ಕಾರಣ ಗಮ್ ಹಾಗೂ ಚರ್ ಧಾತುಗಳೆರಡೂ ಒಂದೇ ಎಂದು ಹೇಳಬಹುದು. ಅಂತೆಯೇ ಜಂಗಮ ಲಿಂಗಕ್ಕೂ ಆಚಾರ ಲಿಂಗಕ್ಕೂ ಅಂತರವಿಲ್ಲೆಂಬುದು ಇದರಿಂದ ತಿಳಿಯುತ್ತದೆ.

ವೀರಶೈವರಲ್ಲಿ ಲಿಂಗಾಚಾರ, ಶಿವಾಚಾರ, ಸದಾಚಾರ, ಗಣಾಚಾರ, ಹಾಗೂ ಭೃತ್ಯಾಚಾರ ಎಂದು ಆಚಾರವು ಐದು ತೆರನಾಗಿರುವದು. ಆಚಾರ ಲಿಂಗದಲ್ಲಿಯೇ ಇವು ಸಮಾವಿಷ್ಟ ವಾಗುವವು. ಇಂತು ಆಚಾರಲಿಂಗವು ಬಹು ಮುಖವಾಗಿದ್ದು ಅದೇ ಪ್ರಮುಖ ಸ್ಥಾನವನ್ನು ಹೊಂದಿರುವದನ್ನು ಸಮಾಜವು ಗಮನಿಸಬೇಕು.

ಈ ವಿವರಣೆಯಿಂದ ಷಟ್‌ಸ್ಥಲದಲ್ಲಿ 'ಭಕ್ತನೂ ಅವನ ಆಚಾರ ಲಿಂಗವೂ, ಇವೇ ಮುಖ್ಯವಾಗಿ ವಿವರಿಸಲ್ಪಟ್ಟಿವೆಂಬುದನ್ನು ನಿರಾತಂಕವಾಗಿ ಹೇಳಬಹುದು.

ಇದೇ ಪ್ರಕಾರ ಭಕ್ತನ ಆಚಾರಲಿಂಗ ಸ್ಥಳದಲ್ಲಿ ಅವನು ಬೆರೆಯುವ ಬಗೆಗೆ ಕೊಟ್ಟಿರುವ ಲಿಂಗಸ್ಥಳಗಳು. "ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು, ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ, ಸ್ವಯಜಂಗಮ, ಚರಜಂಗಮ, ಪರಜಂಗಮ" ಎಂದು ಇರುತ್ತವೆ. ಹೀಗೆ ಅವು ಒಂದಕ್ಕೊಂದು ಸಂಬಂಧವಿಲ್ಲದೆ ಹೇಳಲ್ಪಟ್ಟಿರುವದರಿಂದ ಅವುಗಳ ಅರ್ಥವನ್ನು ಗ್ರಹಿಸ

ವದು ಮೊದಲು ದುಸ್ತರವೆನ್ನಿಸುತ್ತದೆ. ಹಾಗೆಂದರೇ— ಭಕ್ತನು ಆ ಮೂವರೂ ಗುರುಗಳಿಂದ ಕೃಪೆಯಾಗಿ ಆ ಮೂರೂ ಲಿಂಗಗಳನ್ನು ಪಡೆದು ಪೂಜಿಸಿ, ತಾನು ಸ್ವತಃ ( ಸ್ವಯ ) ಜಂಗಮನಾಗುವವಲ್ಲದೆ ತನ್ನಂತೆ ಜೀವಿಗಳಾಗಿರುವ ಚರಸೃಷ್ಟಿಯನ್ನೆಲ್ಲ ಜಂಗಮವಾಗಿ ಅರಿದು, ಚರಜಂಗಮ ನಾಗಬೇಕು. ಮತ್ತೆ ಆ ಚರ ಸೃಷ್ಟಿಯನ್ನು ಸಹ, ಅದೂ ಸಹ ಚೈತನ್ಯ ಮಯವೆಂದರಿದು, ಜಂಗಮವೆಂದೇ ತಿಳಿದುಕೊಂಡು, ಪರಜಂಗಮನಾಗ ಬೇಕು ಎಂದು ತಿಳಿಯುವದು.

ಚರಜಂಗಮಃ — ಚರವಸ್ತುವನ್ನೆಲ್ಲ ಜಂಗಮವೆಂದರಿತವ.

ಪರಜಂಗಮಃ— ಆ ಚರಸೃಷ್ಟಿಯನ್ನು ಸಹ ಜಂಗಮವೆಂದು ಭಾವಿಸಿದವ. ಹೀಗೆ ತನ್ನ ಜ್ಞಾನದಿಂದ, ಮಹೇಶ್ವರನಿಗಿಂತ ಪೂರ್ವದವ ನಾದ ಲಿಂಗಾಂಗಿಯು ಅರಿಯುವದು ಶಕ್ಯವಿದೆಯೋ ? ಎಂದೂ ಆಗದ ಮಾತು. ಪ್ರಾಣಲಿಂಗಿಯು ತನ್ನ ಜಂಗಮಲಿಂಗದಲ್ಲಿ ಬೆರೆದಾಗ ಮಾತ್ರ ಅವನು ಸ್ವಯಜಂಗಮತ್ವ ಪಡೆಯುವನು. ಬಳಿಕ ತನ್ನಲ್ಲಿದ್ದಂತೆಯೇ ಪ್ರಾಣವುಳ್ಳ ಇತರ ಅಸಂಖ್ಯ ವಸ್ತುಗಳೇ ಜಗತ್ತಿನಲ್ಲಿ ಇರುವವು. ತಾನು ಜಂಗಮನೆನ್ನಿಸಿದರೆ ಅವು ಸಹ ಏಕೆ ಜಂಗಮವಲ್ಲ ? ಎಂಬ ವಿಚಾರವು ತಲೆದೋರಿ ಅವನ್ನು ಸಹ ಜಂಗಮವೆಂದು ನಂಬುವನು. ಆ ತರುವಾಯ ಆ ಚರಪದಾರ್ಥಗಳಾದ ಕಲ್ಲು ಮಣ್ಣು ಮೊದಲಾದವುಗಳಲ್ಲಿ ಜೀವ ವಿದ್ದದ್ದು ಕಂಡುಬಾರದಿದ್ದರೂ ಜೀವದುತ್ಪತ್ತಿಗೆ ಹಾಗೂ ಜೀವದ ರಕ್ಷಣೆಗೆ ಬೇಕಾಗುವ ಚೈತನ್ಯವು ಗೂಢ ರೀತಿಯಿಂದ ವಾಸಿಸುತ್ತದೆ. ಕಲ್ಲು ಪುಡಿ ಯಾಗಿಯೇ ಮಣ್ಣಾಗುವದು. ಆ ಮಣ್ಣಿನಲ್ಲಿಯೇ ವನಸ್ಪತಿಯುದ್ಭವಿಸಿ ಅವುಗಳಿಂದ ಕಾಳು, ಕಂದಮೂಲ, ಹಣ್ಣು ಹಂಪಲಗಳಾಗುತ್ತವೆ. ಇವೇ ಮನುಷ್ಯನ ಆಹಾರ. ಇವನ್ನು ಭೋಗಿಸಿಯೇ ಅವನು ಜೀವಿಸುವನು. ಆದುದರಿಂದ ಆ ಚರ ಪದಾರ್ಥಗಳು ಸಹ ಜಂಗಮಗಳೇ ಇರುತ್ತವೆಂದು ತಿಳಿದುಕೊಳ್ಳುವನು. ಹೀಗೆ ಗುಪ್ತ ರೀತಿಯಿಂದ ಚೈತನ್ಯವಿರುವದನ್ನು ಕಂಡುಹಿಡಿದುದರಿಂದಲೇ ಅವನ ಜಂಗಮತ್ವವು ಪರಜಂಗಮವೆಂದು ಅನ್ನಿಸಿಕೊಳ್ಳಲು ತಕ್ಕುದಾಯಿತು. ಈ ಚರ ಹಾಗೂ ಅಚರಗಳು ಜಂಗಮ ವೆಂಬುದನ್ನು ಪ್ರಸಾದ ಲಿಂಗದ ಅರ್ಚಕನಾದ ಶರಣನು ಅರಿದು ಮುಂದೆ ಐಕ್ಯತ್ವ ಪಡೆಯುವನು.

ಈ ಮೇರೆಗೆ ಭಕ್ತನಿಗೆ ಹೇಳಿದ ಅಂಗಸ್ಥಳಗಳನ್ನಾಗಲೀ ಆತನ ಆಚಾರಲಿಂಗವನ್ನಾಗಲೀ, ಆ ಆಚಾರಲಿಂಗದಲ್ಲಿ ಬೆರೆಯಲು ಕೊಟ್ಟಿರುವ ಲಿಂಗಸ್ಥಳಗಳನ್ನಾಗಲೀ ವಿಚಾರಿಸಿ ನೋಡಿದ್ದಾದರೆ ಅವೆಲ್ಲ ಷಡಂಗರನ್ನು ದ್ದೇಶಿಸಿ ಹೇಳಿದ್ದು ಸ್ಪಷ್ಟವಾಗಿ ಕಂಡು ಬರುವದು. ಹೀಗಿದ್ದು ಸಿ. ಶಿ. ಕಾರರು ಭಕ್ತನೆಂದರೆ ಮಹೇಶ್ವರನಿಗಿಂತ ಕೆಳಗಿನ ಮೆಟ್ಟಲದವನೆಂದು ಬಗೆದು ತಾವೂ ಗೋಳಿಗೆ ಬಿದ್ದಿರುವರು. ಮತ್ತು ಎಲ್ಲ ಲಿಂಗಾಯತ ರನ್ನು ದಿಙ್ಮೂಢರನ್ನಾಗಿ ಮಾಡಿರುವರು.

ಭಕ್ತನ ಧ್ಯೆಯುವೇ ಜಂಗಮತ್ವವನ್ನು ಪಡೆಯುತಕ್ಕದ್ದಿದ್ದು ಅದನ್ನು ಪಡೆದಮೇಲೆ ಆತನು ಪುನಃ ಮಹೇಶ್ವರತ್ವದ ಗುರುಲಿಂಗದಲ್ಲಿ ಬೆರೆಯುಲ ಮುಂದುವರಿಯುವದೆಂತು ? ಇದೆಲ್ಲವೂ ವಿಚಿತ್ರವೇ ಆಗಿರುವದು. ಏಕೋತ್ತರ ಶತಸ್ಥಲದ ಬಗೆಗೆ ಬರೆದವರೆಲ್ಲರೂ ಈ ಶಿದ್ಧಾಂತ ಸಿಖಾಮಣಿಯನ್ನೇ ಮುಂದಿಟ್ಟುಕೊಂಡು ಬರೆದವರಿರುವದರಿಂದ ಅವರೂ ಸಹ ಹಾಗೇ ಹೇಳಿರುವರು. ಈ ವಿಷಯುವನ್ನು ಶಿವಾನುಭವದ ನಮ್ಮ ವಾಚಕರು ಮನ ಮುಟ್ಟಿ ಪರೀಕ್ಷಿಸುವರೆಂದು ನಂಬಿರುವೆನು.

# ಚತುಃಸ್ಥಲ.

ಸ್ಥಳ ...... .... (ಏಕಮೇವ ಸ್ಥಳ) ೧.

| | | |
|---|---|---|
| ಅಂಗ | ಲಿಂಗ | ಉಭಯ ಸ್ಥಲ ೨ |
| ಶಕ್ತಿ | ಶಿವ | |
| ದೇಹ | ಪ್ರಾಣ | |
| ಹೊರಗೆ | ಒಳಗೆ | |
| ಆಕಾರ | ನಿರಾಕಾರ | |
| ಸತಿ | ಪತಿ | |
| ಭಕ್ತ | ಜಂಗಮ | |

— ಮುಂತಾದವು. —

| | | | |
|---|---|---|---|
| ಸ್ಥೂಲಾಂಗ | ಸೂಕ್ಷ್ಮಾಂಗ | ಕಾರಣಾಂಗ | ತ್ರಿವಿಧ ಸ್ಥಲ ೩ |
| ತ್ಯಾಗಾಂಗ | ಭೋಗಾಂಗ | ಯೋಗಾಂಗ | |
| ತನು | ಪ್ರಾಣ | ಜ್ಞಾನ (ಭಾವ) | |
| ಹೊರಗೆ | ಒಳಗೆ | ಒಳಒಳಗೆ | |
| ಆಚಾರ | ವಿಚಾರ | ಸಂಚಾರ | |
| ಅರುಹು | ಸುಜ್ಞಾನ | ಅನುಭವಜ್ಞಾನ | |
| ಗುರು | ಲಿಂಗ | ಜಂಗಮ | |

— ಮುಂತಾದವು. —

| | | | | |
|---|---|---|---|---|
| ಸ್ಥೂಲದೇಹ | ಸೂಕ್ಷ್ಮದೇಹ | ಕಾರಣದೇಹ | ಮಹಾಕಾರಣವಸ್ತು | ಚತುರ್ವಿಧ ಸ್ಥಲ ೪ |
| ತ್ಯಾಂಗಾಂಗ | ಭೋಗಾಂಗ | ಯೋಗಾಂಗ | ಸಹಜಾಂಗ | |
| ಶರೀರ | ಲಿಂಗಶರೀರ | ಪ್ರಾಣ, ಮನ | ಜ್ಞಾನ, ಭಾವ | |
| ಹೊರಗೆ | ಒಳಗೆ. | ಒಳಒಳಗೆ | ತೀರಒಳಗೆ | |
| ಆಚಾರ | ವಿಚಾರ | ಸಂಚಾರ | ಪ್ರಚಾರ | |
| ಅರುಹು | ಸುಜ್ಞಾನ | ಅನುಭವಜ್ಞಾನ | ಮಹಾಜ್ಞಾನ | |
| ಗುರು | ಲಿಂಗ | ಜಂಗಮ | ಪ್ರಸಾದ | |

# ಏಕೀಕರಣ.




ಸೂಚನೆಃ— (೧) ಉಭಯ ಸ್ಥಳದಲ್ಲಿ ಅಂಗನು ಲಿಂಗದಲ್ಲಿ ಬೆರೆದು ಒಂದಾಗುವದು.

(೨) ತ್ರಿವಿಧ ಸಂಪತ್ತಿಯಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗ ರೂಪ ಗುರು ಲಿಂಗ ಜಂಗಮುಗಳುಂಟು, ಅವರು ತಮ್ಮ ತಮ್ಮ ಲಿಂಗಗಳಲ್ಲಿ ಬೆರೆದು ಒಂದಾಗುವದು.

(೩) ಚತುರ್ವಿಧ ಸಾರಾಯದಲ್ಲಿ ತ್ರ್ಯಂಗದ ಉಪಾಂಗರೆನಿಸುವ ಷಡಂಗರು ತಮ್ಮ ತಮ್ಮ ಷಡ್ಲಿಂಗಗಳಲ್ಲಿ ಬೆರೆಯು ವದು. ಹೀಗೆ ಬೆರೆದು ಒಂದಾಗುವದೇ ಪ್ರಸಾದವು.

# ಸಾಮಾಜಿಕ ವಿಷಮತೆಗೆ ಮಾನಸ ಶಾಸ್ತ್ರದ ಮದ್ದು.

( ಬರೆದವರು:— ಶ್ರೀ. ಅನ್ನದಾನೀಶ್ವರ ವಿರಕ್ತಮಠ.
ಶ್ರೀ ಬಸವೇಶ್ವರ ಕನ್ನಡ ಟ್ರೇನಿಂಗ ಕಾಲೇಜ, ಬಾಗಲಕೋಟೆ.)

---

ಭಾರತೀಯ ಸಮಾಜ ರಚನೆಯಲ್ಲಿ ವಿಷಮತೆ ತುಂಬಿದೆ. ಪ್ರತಿಯೊಂದು ಹಳ್ಳಿಯಲ್ಲಿ ಊರಹೊರಗೆ ಹೊಲಗೇರಿಗಳಿವೆ. ಅಲ್ಲಿ ವಾಸಿಸುವವರು ನಮ್ಮಂತೆಯೇ ಆತ್ಮ ಜೀವ ಸಮಾಯುಕ್ತರಾದ ಮಾನವರೇ ಆಗಿರುವರು. ಅವರ ಹೀನ, ದೀನ, ಶೋಚನೀಯ, ಪರಿಸ್ಥಿತಿಯನ್ನು ನೋಡಿದರೆ, ಅವರ ಶಾರೀರಿಕ ಬೌದ್ಧಿಕ, ಆರ್ಥಿಕ, ರಾಜಕೀಯ ತೀರ ಕೆಳಗಿನ ಮಟ್ಟವನ್ನು ನೋಡಿದರೆ, ಅವರಿಗೆ ಸಮಾಜದಲ್ಲಿರುವ ಕೀಳ, ಹೀನ, ನೀಚ ಸ್ಥಾನವನ್ನು ನೋಡಿದರೆ, ಅವರಿಗೆ ಮನಸ್ಸಿಗೆ ಬಹಳೇ ನೋವಾಗುವದು. ವಿಷಮತೆಯು ಸಮಾಜರಚನೆಮಾಡಿದ ವರ್ಣವಾದಿಗಳ ಬಗೆಗೆ ಅನಾದರ ಉತ್ಪನ್ನವಾಗುವದು. ಚತುರ್ವರ್ಣಗಳ ಸ್ಥಾಪನೆಯು ಅಸ್ಪೃಶ್ಯತೆಯನ್ನು ಶೂದ್ರರ ಒಂದು ಗುಲಾಮಗಿರಿ ವರ್ಗವನ್ನು ಶಾಶ್ವತಗೊಳಿಸಿಬಿಟ್ಟಿರುವದು. ಅಯ್ಯೋ ! ನಾವೆಂಥ ನಿರ್ದಯರು! ನಾವೆಂಥ ಸ್ವಾರ್ಥದಿಂದ ಕುರುಡರು! ನಾವೆಂಥ ವಿಚಾರ ಶೂನ್ಯರು ! ನಾವೆಂಥ ಅಮಾನುಷರು! ಎಂಬ ಭಾವನೆ ಬಂದು, ನವ ಸಮಾಜ ರಚನೆಯನ್ನು - ವರ್ಣಗಳಿಲ್ಲದ, ವರ್ಗಗಳಿಲ್ಲದ, ಜಾತಿಗಳಿಲ್ಲದ, ಸಮಾಜ ರಚನೆಯನ್ನು ಮಾಡಬೇಕೆಂಬ ಬಲವತ್ತರವಾದ ಭಾವನೆಗೆ ಪುಷ್ಟಿದೊರೆಯುವದು. ಕೀಳು-ಮೇಲು, ಉಚ್ಚ-ನೀಚ ಎಂಬ ಸ್ವಾರ್ಥಯುಕ್ತ ಕೊಳಕು ಕಲ್ಪನೆಗಳಿಗೆ ಚತುರ್ವರ್ಣಗಳೇ ಮೂಲ ಕಾರಣಗಳು. ಮಾನಸ ಶಾಸ್ತ್ರದೃಷ್ಟ್ಯಾ ಈ ಕೀಳು ಮೇಲು ಭಾವನೆಯನ್ನು ಹೇಗೆ ಕಳೆಯಬೇಕೆಂಬುದನ್ನೂ ಅದೆಲ್ಲಕ್ಕೆ ಕಾರಣವಾದ ವರ್ಣವ್ಯವಸ್ಥೆಯನ್ನು ನಾಶಮಾಡಬೇಕೆಂಬುದನ್ನೂ ಕುರಿತು ಈಗ ವಿಚಾರಿಸೋಣ.

ಮನುಷ್ಯನಲ್ಲಿ ಆತ್ಮಗೌರವದ ಸಹಜ ಪ್ರವೃತ್ತಿ ಇದೆ. ಈ ಪ್ರವೃತ್ತಿಯ ಉದಾತ್ತೀಕರಣವನ್ನು ಹೇಗೆ ಮಾಡಬೇಕು ? ಒಳಗಿನ ಶಕ್ತಿಗಳ

ವಿಕಾಸಕ್ಕೆ ಅನುವು ಮಾಡಿ ಕೊಡಬೇಕು. ಆತ್ಮಾಭಿವ್ಯಕ್ತಿ, ಆತ್ಮಪ್ರಸರಣಕ್ಕೆ ಸ್ವಾತಂತ್ರ್ಯವಿರಬೇಕು. ವಿಚಾರ ಸ್ವಾತಂತ್ರ್ಯ, ಉಚ್ಚಾರ ಸ್ವಾತಂತ್ರ್ಯ, ಕೃತಿ ಸ್ವಾತಂತ್ರ್ಯ, ಉದ್ಯೋಗ ಸ್ವಾತಂತ್ರ್ಯಗಳಿಗೆ ಪೂರ್ಣಾವಕಾಶವಿರಬೇಕು ಅಂದರೆ ಆತ್ಮಗೌರವದ ಪ್ರವೃತ್ತಿಯು ಉದಾತ್ತವಾಗುವದು. ಈ ತರದ ಸ್ವಾತಂತ್ರ್ಯಗಳಿಲ್ಲದಿದ್ದರೆ, ಮಾನವನಲ್ಲಿ ತಾನು ಕೀಳೆಂಬ ವಿನಾಶಕಾರಕ ಬೀಜಗಳು ಬಿತ್ತಲ್ಪಡುತ್ತವೆ. ಮಾನಸಿಕ ಗುಲಾಮಗಿರಿಯು ದೃಢಪಡುತ್ತಾ ಬರುತ್ತದೆ. ಮೊದಲು ಈ ಸ್ವಾತಂತ್ರ್ಯಗಳಿಗೆ ಪ್ರತಿಬಂಧಕವಾಗಿರುವ ವರ್ಣಗಳನ್ನು ರದ್ದುಗೊಳಿಸಬೇಕು. ಆಮೇಲೆ ಪೋಷಕ ವಾತಾವರಣವನ್ನುಂಟುಮಾಡಿಕೊಡಬೇಕು. ಈ ದೃಷ್ಟಿಯಿಂದ ಹರಿಜನರ ಮಾನಸಿಕ ಗುಲಾಮಗಿರಿಯನ್ನು ದೂರ ಮಾಡಬೇಕು.

**ಆತ್ಮವಿಶ್ವಾಸದ ಬೆಳವಣಿಗೆಃ—** ಮನುಷ್ಯನಲ್ಲಿ ಆತ್ಮಾಭಿವ್ಯಕ್ತಿಯ ಸ್ವಾತಂತ್ರ್ಯ, ಅದಕ್ಕೆ ಪೋಷಕ ವಾತಾವರಣ ಹುಟ್ಟಿಸಿದ ಮೇಲೆ ಅವನಲ್ಲಿ ಆತ್ಮವಿಶ್ವಾಸವನ್ನು ಬೆಳೆಸಬೇಕು ಅವನನ್ನು ಎಷ್ಟೂ ಹೆದರಿಸಬಾರದು. ಧಿಕ್ಕರಿಸಬಾರದು. ಹಾಗೆ ಮಾಡಿದರೆ ಗಾಳಿ ಬೆಳಕುಗಳಿಂದ ಬೆಳೆಯುವ ಸಸಿಗೆ ವಿನಾಶ ಕೀಟಕಗಳು ಹತ್ತಿದಂತಾಗುತ್ತದೆ. ಸಮಾಜದಲ್ಲಿ ನಾಗರಿಕ ಕರ್ತವ್ಯಗಳನ್ನು ಆತ್ಮಸಂತೋಷದಿಂದ ಮಾಡುವಂತೆ ಮಾಡಲು ಮುಂದೆಬರುವಂತೆ, ತನ್ನ ಶಕ್ತಿಗಳ ಪ್ರದರ್ಶನಕ್ಕೆ ಹಾತೊರೆಯುವಂತೆ, ಆತ್ಮವಿಶ್ವಾಸವನ್ನು ಬಲಪಡಿಸಲಿಕ್ಕೆ ಬೇಕು. ಹರಿಜನರಲ್ಲಿ ಆತ್ಮವಿಶ್ವಾಸ ಬೆಳಿಸಿದರೆ ಅವರು ಮಹಾತ್ಮರಾಗುವರು.

**ಉತ್ಪಾದಕ ಶಕ್ತಿಯ ವಿಕಾಸಃ —** ಅನುಕರಣಕ್ಕಿಂತಲೂ ಉತ್ಪಾದಕ ಶಕ್ತಿ ದೊಡ್ಡದು. ಈ ಮಾತನ್ನು ಚನ್ನಾಗಿ ಲಕ್ಷಿಸತಕ್ಕದ್ದು. ಹರಿಜನರ ವೈಯಕ್ತಿಕ ಅಭಿರುಚಿ, ಅವಧಾನಗಳಿಗೆ ತಕ್ಕಂತೆ ಅವರು ವಸ್ತುಗಳನ್ನು ಉತ್ಪಾದಿಸಬಹುದು. ಅವರು ಇಂಥ ಉದ್ಯೋಗವನ್ನೇ ಮಾಡಬೇಕೆಂಬ ಬಂಧನವಿರಬಾರದು- ಅನುಕರಣ ಮಾಡಿದರೆ ಉತ್ತಮವಾದ ಮಹಾನುಭಾವರ ತತ್ವಗಳ ಅನುಕರಣ ಮಾಡಿಸಬೇಕು. ಅಪೂರ್ಣರಾದ, ಡಾಂಭಿಕರಾದ, ನಮ್ಮ ಅನುಕರಣಮಾಡಲಿಕ್ಕೆ ಹಚ್ಚಬಾರದು.

**ಶಿಕ್ಷಣದ ಮಹತ್ವಃ –** ಪ್ರೇಮದಿಂದ ಹರಿಜನರಿಗೆ ಶಿಕ್ಷಣಕೊಡಲಿಕ್ಕೆ ಬೇಕು. ಅಸಹಿಷ್ಣುತೆಯಿಂದ, ಸಿಡುಕಿನಿಂದ, ಸಿಟ್ಟಿನಿಂದ ಅವರ ತಪ್ಪುಗಳನ್ನು ತಿದ್ದಬಾರದು. ಅವರಲ್ಲಿ ದ್ವೇಷಭಾವನೆ ಬರದಂತೆ ಆದರ್ಶ ಪ್ರೇಮದಿಂದ ಸ್ವಭಾವ ತಿದ್ದಬೇಕು. ಈ ಕಾರ್ಯಕ್ಕೆ ಆದರ್ಶ ಶಿಕ್ಷಕರು ಬೇಕು.

**ಜಾತೀಯತಾ ನಿರ್ಮೂಲನಃ—** ಗುಣಕರ್ಮ ವಿಶಿಷ್ಟವಾಗಲೀ, ಜನ್ಮವಿಶಿಷ್ಟವಾಗಲೀ, ಯಾವದೇ ರೀತಿಯಿಂದ ಜಾತಿಗಳು ಇರಬಾರದು. ಜಾತೀಯತೆಯು ತಾನು ಕೀಳೆಂಬ ಮಾನಸಿಕ ಗುಲಾಮಗಿರಿಯನ್ನು ಹರಿಜನರಲ್ಲಿ ಹುಟ್ಟಿಸುತ್ತದೆ. ಕಾರಣ ' ನಾನು ಅಲ್ಪ ನನ್ನಿಂದೇನಾಗಬೇಕು ? ' ಎಂಬ ಘಾತುಕ ಕಲ್ಪನೆ ಕನಸಿನಲ್ಲಿ ಸಹ ಮೂಡದಂತೆ ನಾವು ಅವರೊಡನೆ ವರ್ತಿಸಬೇಕು. ಅವರಿಗೆ ಸಾಮಾಜಿಕ ಸೌಕರ್ಯಗಳೆಲ್ಲವನ್ನು ಒದಗಿಸಬೇಕು. ಅವರು ಊರೊಳಗೆ ಸಮಾನ ರೀತಿಯಿಂದ ಇರುವಂತೆ ಅವರ ಹೊಲಗೇರಿಗಳು ಹೋಗುವಂತೆ ಮಾಡಬೇಕು. ಮನುಷ್ಯನು ಒಬ್ಬನೇ ಇದ್ದರೆ ಅಸಾಮಾಜಿಕನೂ,ಅಸಭ್ಯನೂ,ಗುಲಾಮನೂ ಆಗಿ ಬೆಳೆಯುತ್ತಾನೆ. ಹರಿಜನರೊಡನೆ ಊಟ ಉಪಚಾರ, ಶರೀರಸಂಬಂಧ ಮಾಡಲಿಕ್ಕೆ ಬೇಕು. ಅವರನ್ನು ಸಮರಸ ಜೀವನಕ್ಕೆ ತಯಾರ ಮಾಡಲಿಕ್ಕೆ ಬೇಕು. ಶಿಕ್ಷಣದ, ಆಧ್ಯಾತ್ಮಿಕ ಚಳವಳಿಯ, ಸಂಕಾರದ, ಸಹಾಯಗಳಿಂದ ಸಾಮಾಜಿಕ ಕ್ರಾಂತಿಯನ್ನು ಮಾಡದಿದ್ದರೆ ಅಸ್ಪೃಶ್ಯತೆ ಎಂದೂ ಹೋಗಲಾರದು.

ಆಧ್ಯಾತ್ಮಿಕ ಕ್ರಾಂತಿಯು ಸಾಮಾಜಿಕ ಕ್ರಾಂತಿಯ ತಳಹದಿಯಾಗಿದ್ದರೆ ಭಾರತದಲ್ಲಿ ಸಾಮಾಜಿಕ ವಿಷಮತೆ ಬಲುಬೇಗ ನಾಶವಾಗಬಹುದು. ಸಾಮಾಜಿಕ ವಿಷಮತೆಗೆ ಮಾನಸಶಾಸ್ತ್ರವು ದಿವ್ಯವಾದ ಔಷಧವಾಗಿದೆ. ಈ ಮಾನಸ ಶಾಸ್ತ್ರದ ತತ್ವಗಳನ್ನು ವ್ಯವಹಾರದಲ್ಲಿ ಬೆಳಸಬೇಕಾದರೆ ಆಧ್ಯಾತ್ಮಿಕ ನೈತಿಕ ಶಕ್ತಿ ಬೇಕು.

---

# ವಿಶ್ವಧರ್ಮ.

## ಲೇಖಾಂಕ ೩.

( ಲೇ:- ಶ್ರೀಯುತ ಸಿ. ನಾ. ಮಹಾಂತಣ್ಣವರ ಮು.-ಧಾರವಾಡ. )

ವಿಶಾಲ ಹೃದಯರು ವಿಶ್ವವನ್ನು ವಿಸ್ತೃತ ದೃಷ್ಟಿಯಿಂದ ನಿರೀಕ್ಷಿಸಿ, ಸೂರ್ಯ ಚಂದ್ರ ನಕ್ಷತ್ರಗಳೂ, ಗ್ರಹಗಳೂ, ತೋರಿಕೆಯ ಆಕಾಶವೂ, ಗಿಡಮರಗಳ ಆಕಾರವೂ, ಪ್ರಾಣಿಗಳ ತಲೆಯೂ, ನೀರಿನ ಹನಿಯೂ, ಸಸಿಗಳ ಮುಗುಳೂ, ವೃಕ್ಷಗಳ ಹೀಚುಗಳೂ, ರಕ್ತದ ಕಣಗಳೂ, ಎಲ್ಲ ಸೃಷ್ಟ ಪದಾರ್ಥಗಳ ಅಣುವೂ ಗೋಲಾಕಾರವಾಗಿರುತ್ತವೆಂಬದನ್ನು ಕಂಡು ಹಿಡಿದಿದ್ದಾರೆ. ಇಷ್ಟೇ ಅಲ್ಲ, ಅಂಕಡೊಂಕಾದ ಕಲ್ಲುಗಳು ಸಹ ಪ್ರವಾಹದ ಹೊಡತದಿಂದ ಬೆನಕಗಳಾಗುವದನ್ನೂ ಗೋಲಾಕಾರವಾಗುವದನ್ನೂ ನೋಡಬಹುದು. ಶ್ರೀಶೈಲದ ಹತ್ತರ ಲಿಂಗದ ಹೊಳೆಯೆಂದು ಹೆಸರುಗೊಂಡ ನದಿಯ ಒಡಲಲ್ಲಿ ಕಲ್ಲುಗಳು ಬರೇ ಗೋಳಕಾಕಾರವಾದ ಲಿಂಗವೆಂಬ ಅಭಿಧಾನದಿಂದ ಸೃಷ್ಟಿಯ ಸ್ವಾಭಾವಿಕ ಆಕಾರವನ್ನು ವ್ಯಕ್ತಪಡಿಸುತ್ತವೆ. ಇದನ್ನರಿತು ವಿಶ್ವದ ತತ್ವಜ್ಞಾನಿಗಳು ವಿಶ್ವವನ್ನು ವ್ಯಾಪಿಸಿದ ವಿಶ್ವಾಂತರ್ಯಾಮಿಯು ವಿಶ್ವಾಕಾರವಾಗಿ ಅರ್ಥಾತ್ ಗೋಲರೂಪಾಗಿ ಅಂದರೆ ಲಿಂಗರೂಪಾಗಿ ಕಂಗೊಳಿಸುವನೆಂದು ಕಂಡುಹಿಡಿದಿದ್ದಾರೆ. ಅಂತೆಯೇ ಪುರಾತನ ಕಾಲದ ದೇವಾಲಯಗಳಲ್ಲಿಯೂ ಆಧುನಿಕ ಕಾಲದ ಗುಡಿಗಳಲ್ಲಿಯೂ ಭಾರತದ ಪ್ರತಿಯೊಂದು ಗ್ರಾಮದಲ್ಲಿಯೂ ಸಹ ಲಿಂಗಾಕಾರವನ್ನು ಅಂದರೆ ವಿಶ್ವಾಕಾರವನ್ನು ವ್ಯಕ್ತಗೊಳಿಸುವ ಶಿವಲಿಂಗಗಳು ಶೋಭಿಸುನವು. ಭರತಖಂಡದಲ್ಲಿ ದ್ವಾದಶ ಜ್ಯೋತಿರ್ಲಿಂಗಗಳು ಪ್ರಕಾಶಿಸುವದನ್ನೂ ಆ ಲಿಂಗಗಳ ಸ್ಮರಣೆಯು ಪ್ರತಿಯೊಬ್ಬ ಭಾರತೀಯನ ಹೃದಯ ಪಟದಲ್ಲಿ ನಿದ್ರೆಯಿಂದೆದ್ದ ಶಾಂತಕಾಲದಲ್ಲಿ ಪಠನವಾಗುವದೆಂಬದನ್ನೂ ಎಲ್ಲರೂ ಅರಿತ ಸಂಗತಿಯು.

ವಿಶ್ವದ ಸಮಷ್ಟಿ ರೂಪಾದ ಶಿವಲಿಂಗದ ಕಳೆಯು ಸಮಾಜದ ಎಲ್ಲ ಜನರಿಗೆ ಸಾಮಾನ್ಯವಾಗಿ ಗ್ರಾಮದ ಶಿವಾಲಯಗಳಿಂದ ಹೊಳೆದು,

ಸಮಾಜದ ಘಟಕಗಳಾದ ಪ್ರತಿಯೊಂದು ವ್ಯಕ್ತಿಯಲ್ಲಿ ಆ ಲಿಂಗವು ವ್ಯಷ್ಟಿ ರೂಪದಿಂದ ಇಷ್ಟಲಿಂಗವೆಂದೆನಿಸಿ ತನುವಿನಲ್ಲಿ ವ್ಯಾಪಕವಾಗಿದ್ದು ಅದರ ಕುರುಹು ಕರದಲ್ಲಿ, ಅರಹು ಪ್ರಾಣದಲ್ಲಿ, ಜ್ಞಾನವು ಭಾವದಲ್ಲಿ ಬಲಗೊಂಡು ಕುರುಹು ಅರಹು ಜ್ಞಾನಗಳು ಏಕರೂಪಾಗಿ ಇಷ್ಟಲಿಂಗ ( ಫಲಪದಗಳನ್ನೀಯುವ ಲಿಂಗ ) ವಾಗಿ ಮಾನವ ಜಾತಿಯ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಅವ್ಯಕ್ತವಾಗಿ ಇರುತ್ತವೆ. ಇಂಥ ಮಾನವ ಕುಲದ ಸುಖ ಸೌಭಾಗ್ಯವನ್ನು ನೀಡುವ ಇಷ್ಟಲಿಂಗವನ್ನು ಮಾನವನ ಹೃದಯದೊಳಗಿಂದ ಭಾವಕ್ಕೂ, ಭಾವದಿಂದ ಮನಕ್ಕೂ ಮನದಿಂದ ದೃಷ್ಟಿಗೂ ದೃಷ್ಟಿಯಿಂದ ಕರಸ್ಥಲಕ್ಕೂ ತಂದುಕೊಡುವ ಕಲೆಯನ್ನರಿತವರೇ ಕ್ರಿಯಾಮೂರ್ತಿಗಳು, ಅಥವಾ ಮಂತ್ರಮೂರ್ತಿಗಳು, ಅರ್ಥಾತ್ ದೀಕ್ಷಾಗುರುಗಳು. ಅಂದರೆ ಮಹೇಶ್ವರರು ಕೇವಲ ಭಕ್ತದೇಹಿಕದೇಹಿಗಳು. ಇವರು ವಿಶ್ವವ್ಯಾಪಿಯಾದ ನಿರಾಕಾರವಾದ ನಿರಂಜನ ಮೂರ್ತಿಯನ್ನು ಸಾಕಾರಗೊಳಿಸಿ, ವ್ಯಕ್ತಿಯ ಕರಕಮಲದಲ್ಲಿ ಕೊಡುವ ಬಗೆಯು ಹೇಗಿರಬಹುದು ? ಇದು ಅಶಕ್ಯವೆಂದು ಆಧುನಿಕ ವಿದ್ಯಾಧರರು ಊಹಿಸಬಹುದು. ಆದರೂ ಈ ವಿಷಯವಾಗಿ ಸ್ವಲ್ಪ ಮಟ್ಟಿಗೆ ವಿಚಾರಿಸುವಾ.

ಒಬ್ಬ ಹುಡುಗನಿಗೆ ಪಾದದಿಂದ ಮೊಳಕಾಲ ಪರಡೆಯ ವರೆಗೆ ಹುಣ್ಣು ಆಗಿದ್ದವು. ಆ ಹುಣ್ಣು ಹೋಗುವದಕ್ಕಾಗಿ ಆ ಹುಡುಗನ ತಂದೆಯು ಅನೇಕ ಡಾಕ್ಟರರಿಂದ ಔಷಧ ಇಂಜಕ್ಶನ್ ಕೊಡಿಸುತ್ತ ಮೂರು ನಾಲ್ಕು ವರ್ಷ ಒಂದೇ ಸವನೆ ರೋಗಿಯ ಉಪಚಾರ ಮಾಡಿದರೂ ಆ ಹುಣ್ಣು ರೋಗವು ವಾಸಿಯಾಗಲಿಲ್ಲ ಕಡೆಗೆ ಒಬ್ಬ ಹುಣ್ಣು ಕಳೆಯುವ ಒಬ್ಬ ಪ್ರಸಿದ್ಧ ಡಾಕ್ಟರರನ್ನು ಹುಡುಕಿ ಆತನ ಕಡೆಯಿಂದ ಹುಡುಗನ ಹುಣ್ಣಿನ ಚಿಕಿತ್ಸೆಯನ್ನು ಮಾಡಿಸಲು ಆ ಡಾಕ್ಟರನು ತನ್ನಲ್ಲಿರುವ ಪ್ರಕಾಶಕೊಡುವ ಗೋಲಿನಿಂದ ಆ ಹುಡುಗನ ಕಾಲಿನ ಮೇಲಿನ ಹುಣ್ಣಿಗೆ ಸಹಿಸುವಷ್ಟು ಪ್ರಕಾಶೋಷ್ಣತೆಯನ್ನು ಮೊದಲು ಕೊಟ್ಟನು. ಬಳಿಕ ಬರಿದಾದ ಇಂಜಕ್ಶನ ನಳಿಯಿಂದ ಹುಡುಗನಿಗೆ ನೋವಾಗದಂತೆ ಆತನ ರಟ್ಟೆಯೊಳಗೆ ಚುಚ್ಚಿ, ಮೈಯೊಳಗಿನ ರಕ್ತವನ್ನು ಹೀರಿ ಹೊರಗೆ ತೆಗೆದುಕೊಂಡು ಆ ರಕ್ತದಲ್ಲಿ ತನ್ನಲ್ಲಿರುವ ಔಷಧವನ್ನು ಬೆರೆಸಿ ಪುನಃ ಅದರಿಂದ ಹುಡುಗನಿಗೆ ಇಂಜಕ್ಶನ್ ಕೊಟ್ಟನು. ಹೀಗೆ ಪ್ರತಿದಿನಕ್ಕೊಮ್ಮೆ ಮೂರುವಾರ

ಮಾಡುವಷ್ಟರಲ್ಲಿ ಆ ಹುಡುಗನಲ್ಲಿ ನೆಲೆಗೊಂಡ ಹುಣ್ಣುರೋಗವು ವಾಸಿಯಾಯಿತು.

ಪಾರಮಾರ್ಥಿಕ ವಿಷಯದಲ್ಲಿ ಶಿಷ್ಯನ ಪರಿಪಕ್ವ ಕಾಲವರಿತು ಸದ್ಗುರುವು ಈ ಸತ್ಕ್ರಿಯೆಯ ಕಲೆಯನ್ನು ಕರತಳಾಮಳಕ ಮಾಡುವದು ಜಾಣತನವು. ಅಂತೆಯೇ ಶ್ರೀ ದೇವರದಾಸಿಮಾರ್ಯರು "ಸಣ್ಣನನೆಯೊಳಗಣ ಪರಿಮಳವ ಹೊರಸೂಸಿ ಇದಿರಿಂಗರುಹಿಸಬಲ್ಲುದೆ ವಾಯು ? ಕೊಡಗೂಸಿನೊಳಗಣ ಮೊಲೆಮುಡಿಯ ಹಡೆದ ತಾಯಿತಂದೆಗಳೆಂದರೆ ಕಾಣಿಸಿ ಕೊಡಬಲ್ಲರೆ ಕಾಂಬವರ ಕಣ್ಣಿಗೆ ? ಪಕ್ವಕ್ಕಲ್ಲದೆ ಪರಿಣಾಮ ದೋರದು ರಾಮನಾಥಾ" ಎಂದು ಅರುಹಿದ್ದಾರೆ. ಇದನ್ನರಿತು ದೀಕ್ಷಾಗುರುವು ಪ್ರಫುಲ್ಲಿತವಾದ ಪುಷ್ಪದೊಳಗಿನ ಮಕರಂದ ರಸವನ್ನು ಜೇನ್ನೊಣವು ದೇವರು ಪಾಲಿಸಿದ ತನ್ನ ಸೂಕ್ಷ್ಮ ನಾಲಿಗೆಯ ಸಹಾಯದಿಂದ ಪುಷ್ಪಕ್ಕೆ ಧಕ್ಕೆಯಾಗದಂತೆ ಹೀರಿ ಹೊರಸೂಸುವಂತೆ, ಆಕಳದ ಕೆಚ್ಚಲೊಳಗಿನ ಹಾಲನ್ನು ತನ್ನ ಕರುಣಾರಸದ ಮೂರ್ತಿಯಾದ ಕರುವು ಹೀರುವಂತೆ, ಶಿಷ್ಯನ ದೃಷ್ಟಿಯೂ ಗುರು ದೃಷ್ಟಿಯೂ ಏಕಾಕಾರವಾಗಿ, ನೋಟವೇ ಕೂಟವಾಗಿ ಕೂಟವೇ ಪ್ರಾಣವಾಗಿ ಪ್ರಾಣವೇ ಏಕಾಗಿ ಏಕವೇ ಸಮರಸವಾಗಿ ಸಮರಸವೇ ಲಿಂಗವಾಗಿ ಹಸ್ತಮಸ್ತಕ ಸಂಯೋಗದಿಂದ ಭಾವ ಮನ ದೃಷ್ಟಿ ಮಾರ್ಗವಾಗಿ ಕರಸ್ಥಲಕ್ಕೆ ಏಕೆ ಬರಬಾರದು? ಇದು ಸೃಷ್ಟಿಯ ಕಾರ್ಯಕ್ಕೆ ವಿರುದ್ಧವಾದ ಆಚರಣೆಯಾಗದೆ ಶಿವಾಚಾರದ ಸತ್ಕ್ರಿಯೆಯ ಸಮ್ಯಜ್ಞಾನದ ಅಸಾಧ್ಯ ಸಾಧ್ಯದ ಅಭೇದ್ಯ ಭೇದಕದ ವಿಶ್ವಧರ್ಮದ ವಿಶ್ವನಾಥನ ವಿಶ್ವಶಕ್ತಿಯ ಗೋಪ್ಯವಾದ ಗೂಢವಾದ ಅಗಮ್ಯವಾದ ನಿರಾಕಾರ ಪರತತ್ವವನ್ನು ಕರಸ್ಥಲದಲ್ಲಿ ತಂದುಕೊಡುವ ಅರ್ಥಾತ್ ಶಿವತತ್ವವನ್ನು ಭೂಮಿಯೊಳು ಬಿತ್ತುವ ವಿಶ್ವಾರಾಧ್ಯರ ವಿಶ್ವ ಕುಟುಂಬಿಗಳ ಶಿವಶರಣರ ಕರುಣಾ ರಸದ ಮಹಿಮಾಚಾರವು. ಇದನ್ನರಿತ ದೇವರ ದಾಸಿಮಾರ್ಯರು "ಹೂವಿನೊಳಗಣ ಕಂಪ ಹೊರಸೂಸಿ ಸುಳಿವ ಅನಿಲನಂತೆ ಅಮೃತದೊಳಗಣ ರುಚಿಯ ನಾಲಿಗೆಯ ತುದಿಯಲ್ಲಿ ಅರಿವನ ಚೇತನದಂತೆ, ನಿಲವಿಲ್ಲದ ರೂಪ ಕಳೆಯಲ್ಲಿ ವೇಧಿಸುವವನ ಪರ ರಾಮನಾಥಾ" ಎಂದು ತಮ್ಮ ಸ್ವಾನುಭಾವವನ್ನು ಸ್ಪಷ್ಟಗೊಳಿಸಿದ್ದಾರೆ.

ಈ ಇಷ್ಟಲಿಂಗ ಸಂಬಂಧವು ತಾಯಿಯ ಗರ್ಭದಲ್ಲಿರುವ ಶಿಶುವಿಗೆ ವೇಧಿಸುವಂತೆ, ತಾಯಿಯ ಗರ್ಭಕ್ಕೂ, ತೊಟ್ಟಿಲಲ್ಲಿರುವ ಶಿಶುವಿಗೆ

ಪಸರಿಸುವಂತೆ ತೊಟ್ಟಿಲಕ್ಕೂ ಅಂಬೆಗಾಲಿಕ್ಕಿ ಹರಿದಾಡುವ ಶಿಶುವಿಗೆ ಕೊರಳಿಗೂ ಕದಲದಂತೆ ಕಟ್ಟುವದರಿಂದ ಪರುಷ ಮುಟ್ಟಲು ಲೋಹ ಹೊನ್ನಾಗುವಂತೆ, ಸೂಜಿಗಲ್ಲಿನ ಸನ್ನಿಧಾನದಿಂದ ಕಬ್ಬಿಣವು ಸೂಜಿಗಲ್ಲಾಗುವಂತೆ, ಆ ಶಿಶುವು ಲಿಂಗಾಯತನಾಗಿ ಲಿಂಗಸಂಗಿಯಾಗಿ ಲಿಂಗಕುಟುಂಬಿಯಾಗಿ ಬಾಳುವದು. ಈ ಕೂಸು ಹುದುಗಿನೊಳಗಿಂದ ಹೊರಬೀಳುವಂತೆ, ಎಂಟು ವರ್ಷದ ಹುಡುಗರಾದ ಬಳಿಕ ಲಿಂಗವನ್ನು ಸಜ್ಜಯದಿಂದ ಹೊರಹೊಮ್ಮಿಸಿ ಲಿಂಗಪೂಜಾ ವಿಧಾನ ಕ್ರಮವು ಕಲಿಸಲಾರಂಭಿಸಲ್ಪಡುತ್ತದೆ. ವೀರಶೈವರು ಮಗುವಿಗೆ ೮ ನೇ ವರ್ಷಕ್ಕೆ ಮಾಡುವ ದೀಕ್ಷೆಯೇ ಅಯ್ಯಾಚಾರವು. ಅಯ್ಯ ಈ ಶಬ್ದವು ವಿಶ್ವವ್ಯಾಪಕವಾದದ್ದು. ಮಗನಿಗೆ ತಂದೆಯಂತೆ, ವಿಶ್ವಕ್ಕೆ ಅಪ್ಪನಾಗಿ ಜೀವಿಸುವ(ಆಚರಿಸುವ) ಲಿಂಗಸೂತ್ರವಿದು.

ಎಂಟು ವರ್ಷದ ವಿದ್ಯಾರ್ಥಿಯು ತಾಯಿ ತಂದೆಗಳೆಂಬ ಶಿಕ್ಷಕ ಗುರುಗಳಿಂದಲೂ ವಿರಶೈವೋಪದೇಶ ಮಾಡಿದ ದೀಕ್ಷಾಗುರುಗಳಿಂದಲೂ ಲೌಕಿಕ ಧಾರ್ಮಿಕ ಶಿಕ್ಷಣಪಡೆಯುತ್ತ ಪ್ರೌಢನಾಗಿ ಕಾಯಕವ ಕೈಕೊಂಡು ಭಕ್ತಿಶಕ್ತಿಯ ಕೈವಿಡಿದು, ಲೌಕಿಕ ಪಾರಮಾರ್ಥಿಕ ಪ್ರಪಂಚವನೆಸಗುತ್ತಿರಲು ಗುರುವಿನ ಗುರುವಾದ ಮೋಕ್ಷಾಗುರುವು ದಂಪತಿಗಳ ಆಚಾರಕ್ಕೂ ಭಕ್ತಿಗೂ ಒಲಿದು ಪ್ರಾಣಲಿಂಗಾನುಸಂಧಾನವ ಮಾಡುವ ಅನುವನ್ನು ಅನುಗ್ರಹಿಸುವನು. ಮೇಲೆ ವಿವರಿಸಿದ ಇಷ್ಟಲಿಂಗವನೊಳಕೊಂಡ ಪ್ರಾಣಲಿಂಗಾನು ಸಂಧಾನವು ಹೆಚ್ಚು ಸೂಕ್ಷ್ಮವಾದದ್ದು. ತನುವಿನೊಳಗಾದ ಇಷ್ಟಲಿಂಗ, ಮನದೊಳಗಾದ ಪ್ರಾಣಲಿಂಗ, ಧನದೋಪಾದಿಯಾದ ಭಾವದೊಳು ಬೆರೆಸಿರ್ದ ಭಾವಲಿಂಗದ ಪರಿಯನ್ನು ಅರುಹಲು ಜಡದೇಹಿಗಳಿಗಸಾಧ್ಯ. ಅಂತೆಯೇ ಪ್ರಾಣಲಿಂಗವನ್ನು ಕುರಿತು ದಾಸಿಮಾರ್ಯರು "ಎಣ್ಣೆ ಇದ್ದು ಎಳ್ಳು ನೆನೆಯದ ಭೇದವ, ಕಾಮವಿರ್ದು ಕನ್ನೆಯನನುಭವಿಸದ ಭೇದವ, ಪರವಿದ್ದು ಪ್ರಾಣನ ಪ್ರಕೃತಿಯು ಹರಿಯದ ಭೇದವ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ" ಎಂದು ಹಾಡಿಕೊಂಡಿದ್ದಾರೆ. ಮತ್ತು ಕರಸ್ಥಲದ ಲಿಂಗವನ್ನು ಕುರಿತು ತಮ್ಮ ಸ್ವಾನುಭಾವದಿಂದ ಶಿಷ್ಯನಲ್ಲಿ ಅಡಗಿರ್ದ ಪರವಸ್ತುವನು ಹುದುಗಿಸಿ ಹೊರಪಡಿಸುವ ಕ್ರಮದಲ್ಲಿ "ಹಸ್ತಾಬ್ಜಮಥನದಿಂದೊತ್ತಿಭಸ್ಮವನೆ ಮಾಡಿ ಚಿತ್ತ

ಶ್ರೋತ್ರದೊಳು ಪಂಚಾಕ್ಷರಿಯ ಮರುಜೀವಣಿಯ ಧಾರೆಯನೆರೆಯಲು ಆತ ನಿನ್ನಂತೆ ಕಾಣಾ ರಾಮನಾಥಾ" ಎಂಬ ವಚನಾಮೃತವ ಸುರಿಸು ವಲ್ಲಿ ಇಷ್ಟಲಿಂಗದೊಳಗಡಕವಾದ ಪ್ರಾಣಲಿಂಗದ ಕಳೆಯೂ ಪ್ರಭಾವಿಸುವದು. ಹಾಗು ಪರಮ ಗುರುಗಳಾದ ಪರಮಾರಾಧ್ಯರಾದ ಜಂಗಮ ಲಿಂಗಾನುಭಾವಿಗಳಾದ ಶ್ರೀ ಸ್ವಾಮಿಗಳು ಪ್ರಸನ್ನರಾಗಿ ಶಿಷ್ಯನ ಯೋಗ್ಯತೆಯನ್ನೂ ಆತನ ಆಚರಣೆಯಲ್ಲಿ ಭಕ್ತ ಮಾಹೇಶ್ವರ ಸ್ಥಲಗಳು ಅಳವಟ್ಟಿದ್ದನ್ನೂ ತಿಳಗೊಂಡು ಪ್ರಸಾದವೇ ಪ್ರಾಣ, ಪ್ರಸಾದವೇ ಜ್ಞಾನ, ಪ್ರಸಾದವೇ ಧ್ಯಾನ, ಪ್ರಸಾದವೇ ಗುರು, ಪ್ರಸಾದವೇ ಲಿಂಗ, ಪ್ರಸಾದವೇ ಜಂಗಮ, ಪ್ರಸಾದವೇ ಪರಾತ್ಪರ, ಪ್ರಸಾದವೇ ಪರಿಪೂರ್ಣವೆಂಬದನ್ನು ಅಳವಡಿಸುವ ಪ್ರಸಾದಿಸ್ಥಳದ ಮಹಾತ್ಮೆಯನ್ನು ವಿವರಿಸಿ ಪ್ರಸನ್ನ ಪ್ರಸಾದವ ಕರುಣಿಸುವರು.

ಪ್ರಸಾದದ ವಿಷಯವಾಗಿ ದಾಸಿಮಾರ್ಯರು "ಮಹಾಘನವಪ್ಪ ಬೋನವನು ಒಂದನುವಿನ ಪರಿಯಾಣದಲ್ಲಿ ಹಿಡಿದು, ಗುರುಲಿಂಗಕ್ಕೊಳಗಾದ ಲಿಂಗವ ಆರೋಗಿಸಿದಲ್ಲದೆ ಮಿಕ್ಕುದು ಪ್ರಸಾದವೇ? ಅಲ್ಲಲ್ಲ! ಮಹಾಘನವಪ್ಪ ಲಿಂಗವನೊಂದನುವಿನಲ್ಲಿ ತಂದಿರಿಸಿದಾತನ ಮನವೇ ಪ್ರಸಾದ ಕಾಣಾ ರಾಮನಾಥಾ" ಎಂದು ಪ್ರಸಾದದ ಅಂತರ್ಜ್ಞಾನವನ್ನು ಬಹಿಃಕ್ರಿಯೆಗಳೊಂದಿಗೆ ಪ್ರಸಾದಿಗಳಿಗೆ ತಿಳಿಯುವಂತೆ ಹೊಳೆಯುವಂತೆ ಉಳಿಯುವಂತೆ ಉಗ್ಗಡಿಸಿದ್ದಾರೆ. ಇದರಂತೆ ಪ್ರಾಣ ಲಿಂಗಿಸ್ಥಳದಲ್ಲಿ "ಪ್ರಾಣನ ಕಳೆ ಪ್ರಕೃತಿಯಲ್ಲಡಗಿ, ಪ್ರಕೃತಿಯ ಕಳೆ ಪ್ರಾಣದಲ್ಲಿ ಅಡಗಿ ಪ್ರಾಣನ ಕಳೆಯು ಪ್ರಕೃತಿಯ ಕಳೆಯು ಲಿಂಗವೆಂದರಿದು ಲಿಂಗೈಸಿ ಅನುಭವಿಸಬಲ್ಲವರ ಲೆಂಕ ನಾನಾಗಿಪ್ಪೆನಯ್ಯಾ ರಾಮನಾಥಾ" ಎಂದು ಪ್ರಾಣಲಿಂಗಾನುಭವವನ್ನು ಪ್ರಸಿದ್ಧಿಸಿದ್ದಾರೆ. ಮತ್ತು ಶರಣ ಸ್ಥಲದಲ್ಲಿ "ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು, ಹೊಂದಿಯೂ ಹೊಂದಿರ್ದ ಭೇದವನು, ಲೋಕದ ಸಂದೇಹಿಗ ಳೆತ್ತಬಲ್ಲರೈ ರಾಮನಾಥಾ" ಎಂದು ಲಿಂಗಾಂಗ ಸಾಮರಸ್ಯಜ್ಞಾನವನ್ನು ಉಸುರಿದ್ದಾರೆ. ಹಾಗು ಐಕ್ಯಸ್ಥಳದಲ್ಲಿ "ಆದಿ ಅರರ ಭೇದ ತನುಗುಣವ ಮೂವತ್ತಾರುವ ಮೀರಿ, ತೋರದುದ ತೋರಿ, ಮತ್ತೆ ಆರೂಢನೆಂದರೆ ಮೇಲೆ ನಿಸ್ಸಿಚ್ಚೆ ಕಾಣಾ ರಾಮನಾಥಾ" ಎಂಬದಾಗಿ ಅಂಗ

ಲಿಂಗ ಸ್ಥಳಕುಳನ್ನರುಹುತ್ತ ಕಡೆಯದಾದ ಜ್ಞಾನಶೂನ್ಯ ಸ್ಥಳವನ್ನು ವ್ಯಕ್ತ ಪಡಿಸಿದ್ದಾರೆ. ಈ ಅಂಗಲಿಂಗ ಜ್ಞಾನವು ಅಥವಾ ಸ್ಥಳಕುಳಜ್ಞಾನವು ಪ್ರತಿಯೊಬ್ಬ ವಿಶ್ವಧರ್ಮಿಯಾದ ವೀರಶೈವನ ಅವಗಾಹನೆಯೊಳು ಅನು ಗಾಲ ಉಳಿದು ಆಚರಣೆಯೊಳು ಆಗಮಿಸಲೆಂದು ಒಬ್ಬ ಶಿವಶರಣರು ವಿವರಿಸಿದ್ದೇನಂದರೆ :—

ಪ್ರರಬ್ರಹ್ಮ ಅನಾದಿವಸ್ತುವೇ ಅನಿರ್ವಾಚ್ಯಮಪ್ಪ ಮಹಾಶೂನ್ಯವ ಸ್ಥೈದಿ ಅನಂದದಿಂ ಸಹಜವಸ್ತುವಾಗಿರ್ದ ನಿಷ್ಕ್ರಿ ಮಹಾತ್ಮೆಯು ಅನಿ ರ್ವಾಚ್ಯದಿಂ ಸ್ವಯಂಭು ಮೂರ್ತಿಯಾಗಿ ನಿಂದುದು. ಇಂತೀ ಸ್ವಯಂ ಭೂಮೂರ್ತಿಯು ಪಂಚಮುಖಗಳಿಂ ಪಂಚಭೂತಂಗಳಾಗಿರ್ದುದು. ಆ ಪಂಚಭೂತಂಗಳಿಂದವೇ ಪಂಚಭೌತಿಕ ತತ್ವವಾಗಿ ಮಾಯಾಂಶ ಲೀಲಾ ವಿಲಾಸ ಶರೀರವಾಗಲು ಈ ಲೀಲಾವತಾರವೆಂತಾಯಿತ್ತೆಂದರೆ —

ಆ ಲೀಲಾವಿಲಾಸದ ನಾದಶಕ್ತಿಯೇ ಅಂಗವಾಗಿ, ಆ ಅಂಗದಲ್ಲಿ ಮೋಹನ ವಿಲಾಸ ಬಿಂದುವೇ ಜೀವವಾಗಿ, ಆನಂದ ಪ್ರಕಾಶ ಮರವೆಯೇ ಆತ್ಮಹೇತುವಾಗಿ, ನಿಂದ ಮಾಯೆ ಮತ್ತು ಚಿತ್‌ಶಕ್ತಿಕೂಡಿದಲ್ಲಿ ಆತ್ಮನಾಗಿ ಭೌತಿಕತತ್ವದಲ್ಲಿ ಬೆರೆದು ಮರಹು ತಲೆದೋರಿ, ಪಾಶಬಂಧತ್ವದಿಂ ಜೀವನೆ ನಿಸಿ ಅಜ್ಞಾನ ಸಂಬಂಧವಾಗಿ ಮಾಯಾಶರೀರವಾದಲ್ಲಿ ಉತ್ಪತ್ತಿ, ಸ್ಥಿತಿ, ಲಯ, ವ್ಯಾಪ್ಯ ಉಂಟಾದ ಆತ್ಮಂಗೆ ಆ ಪರಬ್ರಹ್ಮವು ತಾನೇ ಶ್ರೀಗುರು ವಾಗಿ ಬಂದು ತನ್ನಂಶವಾದ ಆತ್ಮಂಗೆ ನಿಜಾವಯವ ಸೃಜಿಸಲಾಗಿ ಆತ್ಮನು ತನ್ನ ಮರೆದು ನಿಜಾನಂದ ಸುಖದಲ್ಲಿ ತನ್ನ ಸಂಬಂಧವಪ್ಪ ಕಾಯ ಜೀವ ಆತ್ಮಪ್ರಾಣ ಮನಂಗಳಿಗೆ ಆಶ್ರಯವಾದ ಪಂಚತತ್ವಾಂಗಮಂ ಸಹ ಜದಲ್ಲಿ ಸಂಬಂಧ ಮಾಡಿದ ಪರಿ ಎಂತೆಂದೊಡೆ;

ಪ್ರಥ್ವಿ, ಅಪ್, ತೇಜ, ವಾಯು, ಆಕಾಶ, ಆತ್ಮನೆಂಬೀ ಷಡ್ಭೂ ತಂಗಳ ಸಂಬಂಧದಿಂದ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ವಿಷಯೇಂ ದ್ರಿಯ, ಪವನೇಂದ್ರಿಯ, ಕರಣೇಂದ್ರಿಯಂಗಳೇ ಸ್ಥಳಕುಳಂಗಳಾಗಿ, ಸ್ಥಳವಾರು, ಅಂಗವಾರು, ಲಿಂಗವಾರು, ಅಂಗಲಿಂಗದ್ವಯೋರೈಕ್ಯತ್ವದಿಂ, ಮಂತ್ರವಾಗಿ, ಆ ಮಂತ್ರವೇ ಷಟ್‌ಸ್ಥಲ ಬ್ರಹ್ಮಮೂರ್ತಿಯು ಸಹಜಾ ನಂದ ವಸ್ತುವೇ ತಾನಾದ ಲೀಲೆ ಎಂತೆಂದೊಡೆ.

ಪೃಥ್ವಿಯಲ್ಲಿ ಕಠಿಣಗುಣ, ಅಪ್ಪುವಿನಲ್ಲಿ ಮೃದುಗುಣ, ಅಗ್ನಿಯಲ್ಲಿ ಉಷ್ಣಗುಣ, ವಾಯುವಿನಲ್ಲಿ ಸ್ಪರ್ಶಗುಣ, ಆಕಾಶದಲ್ಲಿ ಸಂಚಲಗುಣ, ಆತ್ಮನಲ್ಲಿ ಮರಹುಗುಣ, ಇಂತೀ ಷಡ್ಭೂತಂಗಳು ಅಂಗದಲ್ಲಿ ಸಂಬಂಧವೆಂತೆಂದೊಡೆ, ಪೃಥ್ವಿಯಲ್ಲಿ ಕಠಿಣಗುಣ ಸ್ಥೂಲಕಾಯದ ಕರ್ಮೇಂದ್ರಿಯಂಗಳಲ್ಲಿ ತಿಳಿದು, ಅಪ್ಪುವಿನಲ್ಲಿ ಮೃದುಗುಣ ಸೂಕ್ಷ್ಮಜೀವದ ಜ್ಞಾನೇಂದ್ರಿಯಂಗಳಲ್ಲಿ ತಿಳಿದು, ಅಗ್ನಿಯಲ್ಲಿ ಉಷ್ಣಗುಣ ಕಾರಣಾತ್ಮನ ವಿಷಯೇಂದ್ರಿಯಂಗಳಲ್ಲಿ ತಿಳಿದು, ವಾಯುವಿನಲ್ಲಿ ಸ್ಪರ್ಶಗುಣ ಜಾಗ್ರತ್‌ಪ್ರಾಣ ಪವನೇಂದ್ರಿಯಂಗಳಲ್ಲಿ ತಿಳಿದು, ಆಕಾಶದಲ್ಲಿ ಸಂಚಲಗುಣ ಸ್ವಪ್ನದ ಮನ ಕರಣೇಂದ್ರಿಯಂಗಳಲ್ಲಿ ತಿಳಿದು, ಆತ್ಮನಲ್ಲಿ ಮರಹುಗುಣ ಸುಷುಪ್ತಿಯ ಜ್ಞಾನದ ವಿವೇಕದಲ್ಲಿ ತಿಳಿದು, ವಾಕ್, ಪಾಣಿ, ಪಾದ, ಗುದ, ಗುಹ್ಯವೆಂದು ಸ್ಥೂಲಕಾಯಾವಸ್ಥೆಯ ಕರ್ಮೇಂದ್ರಿಯಗಳ ಕಠಿಣಗುಣ ತಿಳಿದು ಕಾಮ ಕರ್ಮನಾಸ್ತಿಯಾಗಿ ಭೃತ್ಯಭಕ್ತಿಯೆಂಬ ಧರ್ಮವ ನೆಲೆಗೊಳಿಸಿದಲ್ಲಿ ಭಕ್ತಸ್ಥಲ. ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣವೆಂಬ ಸೂಕ್ಷ್ಮಜೀವಾವಸ್ಥೆಯ ಜ್ಞಾನೇಂದ್ರಿಯಂಗಳ ಮೃದುಗುಣವಳಿದು ಕ್ರೋಧ ಕರ್ಮನಾಸ್ತಿಯಾಗಿ, ನಿಷ್ಠಾಭಕ್ತಿಯೆಂಬ ಧರ್ಮವ ನೆಲೆಗೊಳಿಸಿದಲ್ಲಿ ಮಾಹೇಶ್ವರಸ್ಥಲ. ಶಬ್ದ, ಸ್ಪರ್ಶ, ರೂಪ, ರುಚಿ, ಗಂಧಗಳೆಂಬ ಕಾರಣಾತ್ಮಾವಸ್ಥೆಯ ವಿಷಯೇಂದ್ರಿಯಂಗಳ ದಹನಗುಣವಳಿದು, ಲೋಭಕರ್ಮನಾಸ್ತಿಯಾಗಿ. ವಿಶ್ವಾಸ ಭಕ್ತಿಯೆಂಬ ಧರ್ಮವ ನೆಲೆಗೊಳಿಸಿದಲ್ಲಿ ಪ್ರಸಾದಿಸ್ಥಲ. ಪ್ರಾಣ, ಅಪಾನ, ಸಮಾನ ವ್ಯಾನ ಉದಾನಗಳೆಂಬ ಜಾಗ್ರಾವಸ್ಥೆಯ ಪವನೇಂದ್ರಿಯಂಗಳ ಸ್ಪರ್ಶನ ಗುಣವಳಿದು ಮೋಹಕರ್ಮನಾಸ್ತಿಯಾಗಿ ನಿರ್ಮಲ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಪ್ರಾಣಲಿಂಗಿ ಸ್ಥಲ. ಜ್ಞಾನ, ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಮನಾವಸ್ಥೆಯ ಕರಣೇಂದ್ರಿಯಂಗಳ ಸಂಚಲಗುಣವಳಿದು ಮದಕರ್ಮ ನಾಸ್ತಿಯಾಗಿ ಆನಂದ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಶರಣಸ್ಥಲ. ಅಷ್ಟಾತ್ಮಂಗಳ ಮರಹುಗುಣವೆಂಬ ಸುಷುಪ್ತಾವಸ್ಥೆಯ ಅಜ್ಞಾನದ ಅಂಧಕಾರದ ಪ್ರಪಂಚುಗುಣವಳಿದು ಮತ್ಸರ ಕರ್ಮ ನಾಸ್ತಿಯಾಗಿ ಸಮರಸ ಭಕ್ತಿ ಎಂಬ ಧರ್ಮವ ನೆಲೆಗೊಳಿಸಿದಲ್ಲಿ ಐಕ್ಯಸ್ಥಲ. ಇಂತೀ ಷಡ್ಭೂತಂಗಳ ಗುಣ ಕರ್ಮಧರ್ಮಂಗಳೇ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ವಿಷಯೇಂದ್ರಿಯ ಪವನೇಂದ್ರಿಯ, ಕರಣೇಂದ್ರಿಯಂಗಳಲ್ಲಿ ತಿಳಿದು, ಅರುಹು ತಲೆದೋರಿದವುಗಳಾದ ಆರು ಸ್ಥಲವೇ ಅಂಗವಾಗಿ.

ಮತ್ತು ಅಮಂಗಲ, ಪರದಾರ, ದುರ್ಮಾರ್ಗ, ಸ್ತ್ರೀಯಾಲಿಂಗನ, ನಿಂದೆ ಇಂತೀ ದುಷ್ಕ್ರಿಯೆಯ ಕುಚಿತ್ತವಳಿದು, ಶೌಚಶುದ್ಧಿ, ಸ್ವಸ್ತ್ರೀಗಮನ, ಗುರುಮಾರ್ಗ, ಲಿಂಗಧಾರಣ, ಪಂಚಾಕ್ಷರೀಪಠಣ, ಇಂತೀ ಸತ್ಕ್ರಿಯೆಯಲ್ಲಿ ಚಿತ್ತವ ನೆಲೆಗೊಳಿಸಿ ನಿಂದುದೇ ಆಚಾರಲಿಂಗ. ದುರ್ವಾಸನಾಪೇಕ್ಷೆ, ಪರಪಾಕ ಭಕ್ಷಣ, ಭವಿನಿರೀಕ್ಷಣ, ಸ್ಥಾವರ ಮೂರ್ತಿಪೂಜಾ ಸ್ಪರ್ಶನ, ಅನ್ಯ ದೈವಮತ ಪುರಾಣ ಶ್ರವಣ, ಇಂತೀ ಅಜ್ಞಾನದ ಕುಬುದ್ಧಿಯಳಿದು, ಇಷ್ಟಲಿಂಗ ನಿರ್ಮಾಲ್ಯಗಂಧ ಸುವಾಸನೆ, ಚರಪ್ರಸಾದಭಕ್ಷಣ ಸಜ್ಜನ ಭಕ್ತಿನಿರೀಕ್ಷಣ, ಗುರುಪಾದ ಪೂಜಾಸ್ಪರ್ಶನ, ಶಿವಾಗಮ ಶ್ರವಣ, ಇಂತೀ ಸುಜ್ಞಾನದಲ್ಲಿ ಸುಬುದ್ಧಿಯ ನೆಲೆಗೊಳಿಸಿ ನಿಂದುದೇ ಗುರುಲಿಂಗ. ಚಂದ್ರನಾಗರ, ಕರ್ಪುರ, ಮೃಗನಾಭಿಪತ್ರ ಪುಷ್ಪಾದಿ ಫಲಂಗಳ ನಾನಾ ದಿವ್ಯ ಗಂಧ ಪರಿಮಳಗಳಿಂದ ನಾಸಿಕ ಲಂಪಟ, ಭಕ್ಷ್ಯ-ಭಕ್ಷ್ಯಾದಿ ಷಡ್ರುಚಿಗಳು ಹಾಗು ಅದರ ಪಾನಾದಿ ರುಚಿಗಳ ಜಿಹ್ವಾಲಂಪಟ; ನಾಟ್ಯ, ಚಿತ್ರಾಭರಣ, ವರ್ಣಾದಿ ರೂಪುಗಳ ನೇತ್ರಲಂಪಟ; ವೀಣಾ ಮೃದಂಗದೇಹ ಸ್ಪರ್ಶನಾದಿ ಸ್ಪರ್ಶನತ್ವ, ಗೀತ ಹಾಸ್ಯರಸ ಪ್ರಸಂಗರಾಗಾದಿ ವಚನಶ್ರೋತ್ರ ಲಂಪಟ, ಇಂತೀ ಅಹಂಕಾರದಿಚ್ಛೆಯಂ ಬಿಟ್ಟು, ಗುರುನಿರ್ಮಾಲ್ಯಗಂಧ ಸುವಾಸನಾವಿಷಯ, ತೀರ್ಥಪ್ರಸಾದವೇ ರುಚಿವಿಷಯ, ಪಂಚಪ್ರಣಮಪಂಚ ಬೀಜ ರೂಪುವಿಷಯ, ತ್ರಿವಿಧಪ್ರಸಾದವೇ ಸ್ಪರ್ಶನವಿಷಯ, ಪ್ರಣವನಾದವೇ ಶಬ್ದವಿಷಯ, ಇಂತೀ ನಿರಹಂಕಾರದ ಶಿವೇಚ್ಛೆಯಿಂ ನೆಲೆಗೊಳಿಸಿ ನಿಂದುದೇ ಶಿವಲಿಂಗ. ಸ್ವಗೃಹ ಸ್ವದೇಶ ಸ್ವಕ್ಷೇತ್ರಂಗಳಿಂದವೇ ಪ್ರಾಣವಾಯುವಾಗಿ, ಸಂಚಿತವ ಮಾಳ್ಪ ಸಾಧನಾಭಿಮಾನಮಂ ದಾರೇಷಣ ಪುತ್ರೇಷಣ ಮಿತ್ರೇಷಣ ತ್ರಯಂಗಳೇ ಅಪಾನವಾಯುವಾಗಿ, ಸಂಚಿತವ ಮಾಳ್ಪ ಸಾಧನಾಭಿಮಾನಮಂ ಧನಕನಕ ವಸ್ತ್ರಾಭರಣಂಗಳ ವ್ಯಾನವಾಯುವಾಗಿ, ಸಂಚಿತವ ಮಾಳ್ಪ ಸಾಧನಾಭಿಮಾನಮಂ ಜಾಗ್ರತ್‌ಸ್ವಪ್ನ ಸುಷುಪ್ತಿ ತುರೀಯಂಗಳ ಸಮಾನವಾಯುವಾಗಿ, ಇಂತೀ ವಾಯು ವ್ಯಾಕುಲ ಮನೋವ್ಯಾಧಿಗಳ ಬಿಟ್ಟು ಶ್ರೀಗುರುವಿನಲ್ಲಿ ಪ್ರಾಣಾಭಿಮಾನಮಂ ನಿಲ್ಲಿಸಿ, ಷಡುಲಿಂಗಂಗಳಲ್ಲಿ ಅಪಾನ ವಾಯುವಭಿಮಾನಮಂ ನಿಲ್ಲಿಸಿ ಭಕ್ತಜಂಗಮದಲ್ಲಿ ವಾಯುವಭಿಮಾನಮಂ ನಿಲ್ಲಿಸಿ ಇಷ್ಟ ಪ್ರಾಣಭಾವಂಗಳಲ್ಲಿ ಉದಾನ ವಾಯುವಾಭಿಮಾನಮಂ ನಿಲ್ಲಿಸಿ, ಮಂತ್ರ ಧ್ಯಾನತೂರ್ಯಂಗಳಲ್ಲಿ ಸಮಾನವಾಯುವಭಿಮಾನಮಂ ನಿಲ್ಲಿಸಿ ಇಂತೀ ಆದಿಮೂಲಸ್ಥಾನದಿಂ ಸುಮನವ ನೆಲೆಗೊಳಿಸಿ ನಿಂದುದೇ ಜಂಗಮಲಿಂಗ.

ಯಮನಿಯಮ ಅಷ್ಟಾಂಗ ಯೋಗಂಗಳ ಅಂಗ ಸಾಧನ ತನುಸಂಚಲವಹ ಹಮ್ಮಿನ ಮತ್ತತ್ವಮಂ ಬಿಟ್ಟು, ಚತುರ್ಮುದ್ರಾಂಗ ಲಕ್ಷಣ ಜೀವ ಮನ ಸಂಚಲ ಹಮ್ಮಿನ ಮತ್ತತ್ವಮಂ ಬಿಟ್ಟು, ಅಣಿಮಾದ್ಯಷ್ಟ ಸಿದ್ಧಿಗಳಿಂದಾತ್ಮ ಬುದ್ಧಿ ಹೀನತ್ವದ ಸಂಚಲವ ಹಮ್ಮಿನ ಮತ್ತತ್ವಮಂ ಬಿಟ್ಟು, ವಾಯು ಯೋಗ, ಮನಯೋಗ, ಲಯಯೋಗಂಗಳ ತಸ್ಕರ ಭ್ರಾಂತಿ ಸಂಚಲ ಹಮ್ಮಿನ ಮತ್ತತ್ವಮಂ ಬಿಟ್ಟು, ಪಿಂಡ ಬ್ರಹ್ಮಾಂಡಯೋರೈಕ್ಯಂ ಬ್ರಹ್ಮೋಹಂ ಎಂಬ ಅವಧೂತ ಸಂಚಲ ಹಮ್ಮಿನ ಮತ್ತತ್ವಮಂ ಬಿಟ್ಟು, ಮತಿ ಯೋಗ ಸಿದ್ಧತ್ವ, ಮುದ್ರಾಲಕ್ಷಣ, ಭ್ರಾಂತ ವೇದಾಂತವೆಂಬ ಅಂಗ ಯೋಗ ಮಾರ್ಗಂಗಳ ಹಮ್ಮಿನ ಮತ್ತತ್ವಮಂ ಬಿಟ್ಟು, ಭೃತ್ಯಾಚಾರ, ಲಿಂಗಾಚಾರ, ಶಿವಾಚಾರ, ಗಣಾಚಾರ, ಸದಾಚಾರಗಳೆಂಬ ಪಂಚ ಆಚಾರಂಗಳ ಪರಾಶಕ್ತಿ ತಂತ್ರದ ಸುಜ್ಞಾನವ ನೆಲೆಗೊಳಿಸಿ ನಿಂದುದು ಪ್ರಸಾದ ಲಿಂಗ. ಪ್ರಪಂಚ, ಸಂಕಲ್ಪ, ಆಶೆ, ಅಜ್ಞಾನ, ಮರಹು, ಇಂತಿವು ಮಾಯಾ ಮಿಥ್ಯವಂ ಬಿಟ್ಟು, ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಇಂತಿವರಲ್ಲಿ, ಅರುಹು ಎಂಬ ಪರಂಜ್ಯೋತಿ ಚಿತ್ ಶಕ್ತಿ ಸಾವಧಾನವ ನೆಲೆಗೊಳಿಸಿ ನಿಂದುದೇ ಮಹಾಲಿಂಗ. ಇಂತೀ ಭಾವ, ಜ್ಞಾನ, ಮನ, ಬುದ್ಧಿ, ಚಿತ್ತ, ಅಹಂಕಾರಗಳಡಗಿ, ಅರುಹು ತಲೆದೋರಿದ ಕುಳಂಗಳೇ ಲಿಂಗವಾಗಿ, ಇಂತೀ ಸ್ಥಳ ಕುಳಂಗಳೇ ಅಂಗ ಲಿಂಗವಾಗಿ, ಆ ಅಂಗ ದಲ್ಲಿ ಆರು ಸ್ಥಳ ಸಂಬಂಧವಾದ ಪರಿಯೆಂತೆಂದೊಡೆ,

ಪಾದಾದಿ ಗುದಪರಿಯಂತರ ಪೃಥ್ವಿತತ್ವ, ಆ ತತ್ವದ ಕಠಿಣ ಗುಣ ವಳಿದು ಕರ್ಮಸಾದಾಖ್ಯದಿಂ ಭೃತ್ಯತ್ವವೇ ಭಕ್ತಸ್ಥಲ. ಗುದಾದಿ ಗುಹ್ಯ ಪರಿಯಂತರ ಅಪ್ಪು ತತ್ವ, ಆ ತತ್ವದ ಮೃದುಗುಣವಳಿದು, ಕರ್ತೃ ಸಾದಾಖ್ಯದಿಂ ನಿಷ್ಠತ್ವವೇ ಮಹೇಶ್ವರ ಸ್ಥಲ. ಗುಹ್ಯಾದಿ ನಾಭಿಪರ್ಯಂತರ ಅಗ್ನಿತತ್ವ, ಆ ತತ್ವದ ದಹನಗುಣವಳಿದು ಮೂರ್ತಿಸಾದಾಖ್ಯದಿಂ ವಿಶ್ವಾಸವೇ ಪ್ರಸಾದಿಸ್ಥಲ. ನಾಭ್ಯಾದಿ ಹೃದಯ ಪರ್ಯಂತರ ವಾಯುತತ್ವ ಆ ತತ್ವದ ಸ್ಪರ್ಶನಗುಣವಳಿದು ಅಮೂರ್ತಿ ಸಾದಾಖ್ಯದಿಂ ನಿರ್ಮಲವೇ ಪ್ರಾಣಲಿಂಗಿ ಸ್ಥಲ. ಹೃದಯಾದಿ ಕಂಠ ಪರ್ಯಂತರ ಆಕಾಶತತ್ವ. ಆ ತತ್ವದ ಸಂಚಲಗುಣವಳಿದು ಶಿವಸಾದಾಖ್ಯದಿಂ ಆನಂದವೇ ಶರಣಸ್ಥಲ. ಕಂಠಾದಿ ಭ್ರೂಮಧ್ಯ ಪರ್ಯಂತರ ಆತ್ಮತತ್ವ, ಆ ತತ್ವದ ಮರಹು ಗುಣವಳಿದು ಮಹಾ ಸಾದಾಖ್ಯದಿಂ ಸಮರಸತ್ವವೇ ಐಕ್ಯಸ್ಥಲ.

ಇಂತೀ ಪಾದಾದಿ ನಾಲ್ವತ್ತೆಂಟು ಅಂಗುಲ ಪ್ರಮಾಣದಿಂದೂರ್ಧ್ವ ಭಕ್ತಸ್ಥಲ. ಆ ಭಕ್ತಸ್ಥಲದಿಂದ ನಾಲ್ಕಂಗುಲ ಊರ್ಧ್ವ ಮಹೇಶ್ವರ ಸ್ಥಲ. ಆ ಮಹೇಶ್ವರ ಸ್ಥಲದಿಂದ ಆರಂಗುಲ ಊರ್ಧ್ವ ಪ್ರಸ ದಿಸ್ಥಲ. ಆ ಪ್ರಸಾದಿ ಸ್ಥಲದಿಂದ ಎಂಟಂಗುಲ ಊರ್ಧ್ವ ಪ್ರಾಣಲಿಂಗಿಸ್ಥಲ. ಆ ಪ್ರಾಣ ಲಿಂಗಿ ಸ್ಥಲದಿಂದ ದ್ವಾದಶಾಂಗುಲ ಊರ್ಧ್ವ ಶರಣಸ್ಥಲ. ಆ ಶರಣಸ್ಥಲ ದಿಂದ ಷೋಡಶಾಂಗುಲ ಊರ್ಧ್ವ ಐಕ್ಯಸ್ಥಲ. ಆ ಐಕ್ಯಸ್ಥಲದಲ್ಲಿ ದ್ವಿ ಅಂಗುಲ ಪ್ರಮಾಣದಲ್ಲಿ ಪ್ರಣವ. ಇಂತೀ ತೊಂಭತ್ತಾರು ಅಂಗುಲವೇ ಅಂಗವಾಗಿ ಆ ಅಂಗಮುಖದಲ್ಲಿ ಲಿಂಗಕುಳವಾರು ಅಡಗಿದ ಪರಿ ಎಂತೆಂದೊಡೆ.

ಸುಚಿತ್ತದಿಂ ಘ್ರಾಣದಿಂದ ಗಂಧವನಂಗೀಕರಿಸುವದು ಆಚಾರಲಿಂಗ. ಸುಬುದ್ಧಿಯಿಂ ಜಿಹ್ವೆಯಿಂದ ರುಚಿಯನಂಗೀಕರಿಸುವದು ಗುರುಲಿಂಗ, ನಿರಹಂಕಾರದಿಂ ನೇತ್ರದಿಂದ ರೂಪನಂಗೀಕರಿಸುವದು ಶಿವಲಿಂಗ, ಸುಮ ನದಿಂ ಹಸ್ತದಿಂದ ಸ್ಪರ್ಶನ ಅಂಗೀಕರಿಸುವದು ಜಂಗಮಲಿಂಗ, ಸುಜ್ಞಾ ನದಿಂ ಶ್ರೋತ್ರದಿಂದ ಶಬ್ದವನಂಗೀಕರಿಸುವದು ಪ್ರಸಾದಲಿಂಗ, ಸಾವ ಧಾನದಿಂ ಹೃದಯದಿಂದ ತೃಪ್ತಿಯನಂಗೀಕರಿಸುವದು ಮಹಾಲಿಂಗ.

ಇಂತೀ ಹದಿನಾರು ಅಂಗುಲ ಪ್ರಮಾಣದಿಂದ ನಾಸಿಕದಿಂ ಇಷ್ಟ ಲಿಂಗದ ಪೀಠದಲ್ಲಿ ಆಚಾರ ಲಿಂಗವಡಗಿ, ದ್ವಾದಶಾಂಗುಲ ಪ್ರಮಾಣದಿಂ ಜಿಹ್ವೆಯಿಂದ ಇಷ್ಟಲಿಂಗದ ಕಲೆಯಲ್ಲಿ ಗುರುಲಿಂಗವಡಗಿ, ಅಷ್ಟಾಂಗುಲ ಪ್ರಮಾಣದಿಂ ನೇತ್ರದಿಂದ ಇಷ್ಟಲಿಂಗದ ಉದರದಲ್ಲಿ ಶಿವಲಿಂಗವಡಗಿ, ಷಡಂಗುಲ ಪ್ರಮಾಣದಿಂ ತ್ವಕ್ಕಿನಿಂದ ಇಷ್ಟಲಿಂಗದ ಗೋಮುಖದಲ್ಲಿ ಜಂಗಮಲಿಂಗವಡಗಿ, ಚತುರಂಗುಲ ಪ್ರಮಾಣದಿಂ ಶ್ರೋತ್ರದಿಂದ ಇಷ್ಟ ಲಿಂಗದ ನಾಳದಲ್ಲಿ ಪ್ರಸಾದಲಿಂಗವಡಗಿ, ದ್ವಿಯಂಗುಲ ಪ್ರಮಾಣದಿಂದ ಇಷ್ಟಲಿಂಗದ ಮಸ್ತಕದಲ್ಲಿ ಮಹಾಲಿಂಗವಡಗಿ, ಇಂತೀ ನಾಲ್ವತ್ತೆಂಟು ಅಂಗುಲ ಪ್ರಮಾಣದಲ್ಲಿ ಆ ಇಷ್ಟಲಿಂಗದಲ್ಲಿ ಆರು ಕುಳವಡಗಿ, ಇಂತೀ ಸ್ಥಳಕುಳಂಗಳ ಗರ್ಭೀಕರಿಸಿಕೊಂಡಿಪ್ಪ ಅಂಗಲಿಂಗವೆರಡು, ಈ ಅಂಗ ಲಿಂಗವೆರಡು ಮಂತ್ರವಾದ ಪರಿಯೆಂತೆಂದೊಡೆ

ಇಂತೀ ಅಂಗ ತೊಂಭತ್ತಾರಂಗುಲ ಪ್ರಮಾಣವನಂಗೀಕರಿಸಿ ಕೊಂಡಿಪ್ಪುದೇ ಓಂಕಾರ ಪ್ರಣವ. ಆ ಪ್ರಣವವೇನಾದ, ಆ ನಾದದಲ್ಲಿ

ಬಿಂದು ನಿಂದು ಷಟ್ಕೃತಿಗಳೇ ಪ್ರಾಣವಾಗಿ ಗರ್ಭೀಕರಿಸಿಕೊಂಡಿಪ್ಪ ಪಂಚಾಕ್ಷರಂಗಳು; ಇಂತೀ ಪಂಚಾಕ್ಷರಂಗಳಿಗೆ ಅಂಗವಾಗಿ ಗರ್ಭೀಕರಿಸಿಕೊಂಡಿಪ್ಪ ಷಟ್ಕೃತಿಗಳೇ ಷಡುಲಿಂಗವಾಗಿ, ಆ ಷಡು ಲಿಂಗಂಗಳಿಗೆ ಷಡಕ್ಷರಂಗಳೇ ಪ್ರಾಣವಾಗಿ, ಓಂಕಾರವೇ ನಾದಮಯಾಂಗವಾಗಿ ಪಂಚಾಕ್ಷರಂಗಳೇ ಪಂಚಾಕೃತಿ ಬಿಂದುಮಯ ಪ್ರಾಣವಾಗಿ, ಮಂತ್ರಾಂಗವಾಗಿ ನಾದ ಬಿಂದು ಕಳಾಕ್ಷರದಲ್ಲಿ ಪ್ರಣವ ಮಂತ್ರವಡಗಲು, ಆ ಕಳೆಯೇ ಬಿಂದುವಾಗಿ, ಆ ಬಿಂದುವೇ ನಾದವಾಗಿ, ನಾದವೇ ನಿಶ್ಶಬ್ದವಾಗಿ ನಿಶ್ಶಬ್ದವೇ ಪರಬ್ರಹ್ಮವಾಗಿ ಆ ಪರಬ್ರಹ್ಮವೇ ನಿಜವಾಗಿ, ಆ ನಿಜವೇ ಸಹಜಾನಂದ ವಸ್ತುವಾದ ಘನವೇದ್ಯ ಶರಣನ ಚರಣಕ್ಕೆ ನಮೋ ನಮೋಎಂಬೆ ಕ. ಣಾ ಮದ್ಗುರು ಬಸವಲಿಂಗಪ್ರಭುವೇ.

ವಿಶ್ವದೊಳು ವಿರಮಿಸುವ ಜೀವಕೋಟಿಗಳಲ್ಲಿ ಮಾನವಕೋಟಿಯು ಮಿಗಿಲಾದುದು. ಆ ಮಾನವರೊಳು ಮತಿಯುತರಾಗಿ ಸಕಲ ನಿಷ್ಕಲಗಳನ್ನು ಅರಿತು ಆಶ್ರಯಿಸಿದ ವಿಶ್ವಧರ್ಮದ ವೀರಶೈವ ಜನಾಂಗವು ಸ್ವಾಭಾವಿಕವಾದ ಜೀವನದ ದುಷ್ಟ ಗುಣಧರ್ಮಗಳನ್ನು ನಷ್ಟಗೊಳಿಸಿ ಶಿಷ್ಟವಾದವುಗಳನ್ನು ಸ್ವೀಕರಿಸಿ ಸದಿಷ್ಟದ ಸಾಧನವಾದ ಇಷ್ಟಲಿಂಗವನ್ನು ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂದ ಪೂಜಿಸಿ ಇಹಪರಗಳಲ್ಲಿ ಸವೆಯದ ಸುಖವನ್ನುಹೊಂದುವ ಸತ್ಯವಾದ ಸನ್ಮಾರ್ಗವಿದು.

ಇಷ್ಟಲಿಂಗದ ನೆಲೆಕಲೆಯರಿತು ಭಕ್ತಿಬೆಳೆದು ಮನದೊಳಗಾದ ಪ್ರಾಣಲಿಂಗಪೂಜೆಯ ಅನುವರಿತು ಇಹವು ಕೆಡುತ, ಪರವು ನಿಲ್ಲುತ ಮನವು ಸಂತಸಂಗೊಳುತ, ತನುವನು ಮರೆಯುತ ಪ್ರಾಣಲಿಂಗಾನುಸಂಧಾನವನು ಸಾಧಿಸುವ ಸುಲಭವಾದ ಸಜ್ಜೀವನದ ಶಿವಯೋಗವಿದು.

ಸತ್ಕ್ರಿಯಾಜ್ಞಾನದಿಂದ ತನುತ್ರಯದೊಳು ಗುರುತ್ರಯಂಗಳ ಸಂಬಂಧಿಸಿಕೊಂಡು ಮಹಾಜ್ಞಾನದಿಂದ ಮನತ್ರಯಂಗಳೊಳು ಲಿಂಗತ್ರಯಂಗಳ ಸಂಬಂಧಿಸಿಕೊಂಡು, ಮಹಾಜ್ಞಾನದಿಂದ ಭಾವತ್ರಯಂಗಳಲ್ಲಿ ಜಂಗಮತ್ರಯಂಗಳ ಸಂಬಂಧಿಸಿಕೊಂಡು , ಪ್ರಸಾದತ್ರಯಂಗಳಂ ಪಡೆಯುತ ಪರಿಪೂರ್ಣವೊಳು ಪರಿಣಮಿಸುವ ಲಿಂಗಾಂಗ ಸಾಮ್ಯರಸ್ಯವಿದು.

# ಸಾವಧಾನದ ಸ್ಪಷ್ಟವಾದಿಗೆ ಕೆಲವು ಪ್ರಶ್ನೆಗಳು

( ಬರೆದವರು :— ಶ್ರೀ ಅನ್ನದಾನೀಶ್ವರ ವಿರಕ್ತ ಮಠ
( ಶಿಕ್ಷಕರು:— ಶ್ರೀ. ಬಸವೇಶ್ವರ ಟ್ರೇನಿಂಗ ಕಾಲೇಜ ಬಾಗಲಕೋಟೆ )

ಗದಗ ಹಡಗಲಿ ಮಠದಲ್ಲಿ ಶ್ರೀನಾಗ ಭೂಷಣ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಹೊರಡುವ "ಸಾವಧಾನ" ಎಂಬ ಪಾಕ್ಷಿಕ ಪತ್ರಿಕೆಯಲ್ಲಿ ದಿನಾಂಕ ೨೯-೬-೫೦ನೇ ದಿನ ಲಿಂಗಾಗಿಯ ನಡುವಳಿಕೆ" ಎಂಬ ವಿಷಯದ ಮೇಲೆ ಸ್ಪಷ್ಟವಾದಿ ಎಂದು ಕರೆದುಕೊಳ್ಳುವ ಒಬ್ಬಲೇಖಕರು ಒಂದು ಸಂಕುಚಿತ ಮತ್ತು ದ್ವೇಷಪೂರಿತ ಲೇಖನವನ್ನು ಬರೆದಿರುವರು. ಅದು ಸನಾತನೀ ದೃಷ್ಟಿಕೋನದ, ಜಾತ್ಯಾಭಿಮಾನದ ಲೇಖನವು. ಅದರಲ್ಲಿ ಲೇಖಕರು ಹೇಯ ಶಬ್ದಗಳನ್ನು ಉಪಯೋಗಿಸಿರುವರು. ಕೆಲವು ಶಬ್ದಗಳು ಹೀಗಿರುತ್ತವೆ:— "ಅಸೂಯಾಂಧರಾದ ಪರಮತ ಪಂಡಿತರು ಜಾತ್ಯಾದಿವಾಂಧರು ಭ್ರಷ್ಟಗುಣದ ನಡತೆ" ಇತ್ಯಾದಿ ಇತ್ಯಾದಿ ಇಂಥ ಹೀನ ಶಬ್ದಗಳನ್ನು ದ್ವೇಷದಿಂದ ಪೂರ್ಣ ವಿಚಾರಮಾಡದೆ ಉಪಯೋಗಿಸುವದು ಲೇಖನ ವ್ಯವಸಾಯಕ್ಕೆ ಭೂಷಣವೇ? ಅನ್ಯರ ಮನ ನೋಯಿಸುವಂಥ, ಅವರ ಗೌರವಕ್ಕೆ ಧಕ್ಕತಗಲುವಂಥ, ಜಾತಿ-ದ್ವೇಷವನ್ನು ಹಬ್ಬಿಸುವಂಥ, ಶಬ್ದಗಳನ್ನು ಉಪಯೋಗಿಸುವದರಿಂದಲೇ ತಮ್ಮ ಉದ್ದೇಶವು ಸಾರ್ಥಕವಾಗುವದೆಂದು ಲೇಖಕರು ತಿಳಿದಿದ್ದರೆ ಅದು ಶುದ್ಧ ಭ್ರಮೆಯೇ ಸರಿ.

ಇನ್ನು ಲೇಖಕರ ಪ್ರತಿ-ಗಾಮಿ, ಜಾತ್ಯಾಭಿಮಾನದ, ಸಂಕುಚಿತ ವಿಚಾರಗಳ ಕಡೆಗೆ ತಿರುಗೋಣ

ಲೇಖಕರ ಶಬ್ದಗಳಲ್ಲಿ ಹೇಳಬೇಕೆಂದರೆ ಶಿವಲಿಂಗ ಧಾರಕರು ಶಿವಲಿಂಗ ಹೀನ ಭವಿಗಳಿಗೆ ನಮಸ್ಕರಿಸುವದು ಮಹಾ ಪ್ರಮಾದವಂತೆ, ಮಹಾ ದ್ರೋಹವಂತೆ- ಹಾಗಾದರೆ ಲೇಖಕರೇ ಕಲ್ಯಾಣದ ಬಸವಣ್ಣನು ಬಿಜ್ಜಳರಾಜನಿಗೆ ಏಕೆ ನಮಸ್ಕರಿಸುತ್ತಿದ್ದನು?

ಓ ನಿವ್ಕೃ ಉತ್ತರ ಇಲ್ಲಿದೆ! "ರಾಜಸಭೆಯಲ್ಲಿ ತನ್ನ ನಂದಿಮುದ್ರೆಯ ಉಂಗುರಕ್ಕೆ ಬಸವಣ್ಣನು, ನಮಸ್ಕರಿಸುತ್ತಿದ್ದನಲ್ಲದೆ, ಭವಿ ಬಿಜ್ಜಳನಿಗಲ್ಲ." ನಂದಿಮುದ್ರೆಯ ಉಂಗುರಕ್ಕೇನೇ ನಮಸ್ಕರಿಸುತ್ತಿದ್ದರೆ, ಬಿಜ್ಜಳನ ಎದುರಿಗೆ ನಿಂತು ಏಕೆ ನಮಸ್ಕರಿಸಬೇಕು? ವ್ಯವಹಾರದಲ್ಲಿ ಬಿಜ್ಜಳರಾಜನಿಗೆ ನಮಸ್ಕರಿಸಿದಂತೆ ತೋರುತ್ತಿದ್ದರೂ, ಬಸವಣ್ಣನು ಭಾವದಲ್ಲಿ ನಂದಿಗೆ ನಮಸ್ಕಾರ ಸಲ್ಲಲಿ ಎಂದು ಭಾವಿಸುತ್ತಿದ್ದನು. ಹೀಗೆ ಅನ್ನುವದು ಸಮಂಜಸವಲ್ಲವೇ? ಹಾಗಾದರೆ ಬಸವಣ್ಣನು ಹೀನ ಜಾತಿಯ ಜನರಿಗೆ ನಮಸ್ಕರಿಸಿದರೂ ನಂದೀ ಭಾವನೆಯಿಂದಲೇ ನಮಸ್ಕರಿಸುತ್ತಿದ್ದನೆಂದು ನಾವು ಹೇಳಿದರೆ ದೋಷವೇನು? ಬಾಹ್ಯದಲ್ಲಿ ಬಸವಣ್ಣನ ನಂದೀಭಾವವು ಎಲ್ಲರಿಗೂ ಕಾಣದಿದ್ದರೂ ಅವನು ನಮ್ರತೆಯಿಂದ ನಮಸ್ಕರಿಸುವದನ್ನು ಎಲ್ಲರೂ ನೋಡುತ್ತಿದ್ದರು.

ಬಸವಣ್ಣನಂಥ ಮುಖ್ಯ ಮಂತ್ರಿಯು ಅಸ್ಥಾನದಿಂದ ತನ್ನ ಮಂದಿರಕ್ಕೆ ಹೋಗುವಾಗ, ಬರುವಾಗ, ಕೇವಲ ಲಿಂಗಭಕ್ತರೇ ಅವನಿಗೆ ಭೆಟ್ಟಿಯಾಗುತ್ತಿದ್ದರೋ? ಅನ್ಯ ಜಾತಿಯುವರು ಭೆಟ್ಟಿಯಾದರೆ, ಆಗ ಅವರು ಬಸವಣ್ಣನವರಿಗೆ ನಮಸ್ಕರಿಸಿದರೆ, ಅವರು ಬಸವಣ್ಣನವರು ಶರಣರಿಗೆ ಶರಣು ಅನ್ನುತ್ತಿದ್ದಿಲ್ಲವೆ? ಭವಿಗಳಿಗೆ ನಮಸ್ಕರಿಸಿದರೆ ಲಿಂಗಾಂಗಿಯ ನಡವಳಿಕೆಗೆ ಚ್ಯುತಿ ಬಂದರೆ ಅಂಥ ಲಿಂಗಾಂಗಿಯ ನಡವಳಿಕೆಯು ದುರ್ಬಲವಿರಲಿಕ್ಕೇಬೇಕು ಶರಣು ಅಂದವರಿಗೆ ಶರಣು ಅನ್ನಬಾರದೆಂದು ಲಿಂಗಾಂಗಿ ನಡುವಳಿಕೆಯು ಹೇಳುವದೇ?ಛೇ ಎಂದಿಗೂ ಹೇಳಲಾರದು "**ಸರ್ವಂ ಶಿವಮಯಂ ಜಗತ್**" ಎಲ್ಲ ಜಗತ್ತು ಶಿವಮಯವಾಗಿದೆ. ಎಲ್ಲವನ್ನು ಶಿವಸ್ವರೂಪವೆಂದು ಭಾವಿಸಿರಿ. ಎಂದೇಲಿಂಗಾಂಗೀ ಧರ್ಮವು ಹೇಳುತ್ತದೆ. ವಿಶ್ವಸಮಾನತೆಯ ರಹಸ್ಯವೇ ಇಲ್ಲಿದೆ "ಆಕಳು ಕಳ್ಳರು ಕೊಂಡೊಯ್ದರೆಂದು ಅನಬೇಡಲವೋ ಅಲ್ಲಿಯುಂಬನು ಸಂಗ ಇಲ್ಲಿಯುಂಬವನು ಸಂಗ-"ಎಂದು ಬಸವಣ್ಣನವರು ನುಡಿದಿರುವರು. ಕಳ್ಳನು ಸಹ ಸಂಗಮನಾಥನ ಸ್ವರೂಪವೆಂದು ಭಾವಿಸಿದ್ದರು. ತನ್ನಹೆಂಡತಿಯ ಆಭರಣಗಳನ್ನು ಕಳವು ಮಾಡಲಿಕ್ಕೆಬಂದಾಗ ಕಳ್ಳನ ಮನೆಗೊಬ್ಬಕಳ್ಳ ಬಂದರೆ ಕೂಡಲಸಂಗಮದೇವನಲ್ಲದೆ ಯಾರೂ ಅಲ್ಲಾಎಂವೇ ಬಸವಣ್ಣನವರು ವಚನಿಸಿರುವರು. ಇದರಿಂದ ಬಸವಣ್ಣನವರ ಸರ್ವಾತ್ಮಭಾವನೆಯು ವ್ಯಕ್ತವಾಗುವದಿಲ್ಲವೆ? ಈ ಕಳ್ಳರು ಲಿಂಗಧಾರಿಗಳಾಗಿದ್ದ ಕಳ್ಳ

ರೆಂದು ಸ್ಪಷ್ಟವಾದಿಯು ಸಿದ್ಧ ಮಾಡಬಲ್ಲನೋ? ಭವಿಗಳನ್ನು ಅವರ ಸ್ಥಿತಿಯಲ್ಲಿರಿಸಿ ಬಸವಣ್ಣನು ನಮುಸ್ಕರಿಸುತ್ತಿದ್ದಿಲ್ಲವೆಂದು ಸ್ಪಷ್ಟವಾದಿಯು ಅನ್ನುತ್ತಾನಲ್ಲವೆ? ಹಾಗಾದರೆ ಬಿಜ್ಜಳರಾಜನಿಗೆ ಲಿಂಗಕಟ್ಟಿ ಅವನಿಗೆ ನಮುಸ್ಕರಿಸುತ್ತಿದ್ದನೇ?

ಶಿವಲಿಂಗ ಹೀನರೇ ಭವಿಗಳು ಎಂದು ಸ್ಪಷ್ಟವಾದಿಯು ಅನ್ನುತ್ತಾರೆ. ಹಾಗಾದರೆ ಲಿಂಗವಿದ್ದ ಭವಿಗಳು ಇರುವರೆಂದು ವಚನಕಾರರು ಶರಣ ಶರಣೆಯರು ಅನೇಕ ವಚನಗಳಲ್ಲಿ ನುಡಿದಿರುವರಲ್ಲ! ಆದ್ದರಿಂದಲೇ ಸ್ಪಷ್ಟವಾದಿಯು ಹೇಳಿದ್ದೇ ಲಿಂಗವಂತರ ನಡವಳಿಕೆಯಲ್ಲ ಎಂದು ನಾನು ಹೇಳುತ್ತೇನೆ. ಬಸವಣ್ಣನನ್ನೂ ಲಿಂಗಾಗೀ ಧರ್ಮವನ್ನೂ ಸಂಕುಚಿತ ಜಾತಿಯ ಕಟ್ಟಿನಲ್ಲಿ ಕೂಡ್ರಿಸಲಿಕ್ಕೆ ಯತ್ನಿಸುವ ಸನಾತನೀ ಜಾತ್ಯಾಭಿಮಾನಿಗಳನ್ನು ಕಂಡು ಅತ್ಯಂತ ಕನಿಕರವಾಗುತ್ತದೆ.

"ರಾಜನಿಗೇ ನಮುಸ್ಕರಿಸದ ಬಸವೇಶ್ವರನು ಸಮಗಾರ, ಡೋಹರನಿಗೆ ನಮುಸ್ಕರಿಸುತ್ತಿದ್ದನೆಂದು ಬರೆಯುವದು ಮಹಾಪ್ರಮಾದ" ಎಂದು ಸ್ಪಷ್ಟವಾದಿಯು ಬರೆದಿದ್ದಾನೆ. ಅಯ್ಯೋ ಸ್ಪಷ್ಟವಾದಿಯ ದೃಷ್ಟಿಯಲ್ಲಿ ರಾಜನು ಶ್ರೇಷ್ಠನಾಗಿರಬಹುದು. ಆದರೆ ಬಸವೇಶ್ವರನ ದೃಷ್ಟಿಯಲ್ಲಿ ಹಾಗಿದ್ದಿಲ್ಲ. ಬಿಜ್ಜಳ ರಾಜನಿಗೆ ನಮುಸ್ಕರಿಸದೇ ಮುಖ್ಯಮಂತ್ರಿಯ ಕೆಲಸ ಮಾಡುವದು ಬಸವಣ್ಣನಿಗೆ ಸಾಧ್ಯವಿತ್ತೆಂದೂ ಅವನಲ್ಲಿ ಅಂಥ ಪವಾಡಗಳಿದ್ದವೆಂದೂ ಇತಿಹಾಸವು ಹೇಳುತ್ತಿದೆಯೇ?

ಬಸವಣ್ಣನು ಠಕ್ಕರ ಬದನೇಕಾಯಿಗಳನ್ನು ಲಿಂಗಗಳನ್ನಾಗಿಮಾಡಿ ಬಿಜ್ಜಳನ ಸಿಂಹಾಸನಕ್ಕೆ ಬೆಂಕಿಹತ್ತಿದ ಪವಾಡಗಳನ್ನು ಸ್ಪಷ್ಟವಾದಿಯು ಉದಾಹರಿಸಿದ್ದಾನೆ. ಈ ಮೇಲಿನ ಪೌರಾಣಿಕ ಪವಾಡಗಳಲ್ಲಿ ಸ್ಪಷ್ಟವಾದಿಯ ಪ್ರಾಮಾಣಿಕ ನಂಬಿಗೆ ಇದ್ದರೆ ಇರಲಿ! ನಾನು ಮಾತ್ರ ನಂಬುವದಿಲ್ಲೆಂದು ಹೇಳಿದರೆ ಸಾಕು! ಜಗತ್ತಿನ ಪ್ರಗತಿಯು ಗೊಡ್ಡಪುರಾಣ ಹೇಳುವ ಶಾಸ್ತ್ರಿಗಳನ್ನು ಲೆಕ್ಕಿಸದೇ ಮುಂದೆ ಮುಂದೆ ನುಗ್ಗುತ್ತದೆ.

ಮಾದರ ಚನ್ನಯ್ಯ ಡೋಹರ ಕಕ್ಕಯ್ಯ ಇವರಿಗೆ ನಾನು ಹೀನ ಜಾತಿಯ ಜನರೆಂದು ತತ್ವದೃಷ್ಟ್ಯಾ ಅನ್ನದಿದ್ದರೂ ಇತಿಹಾಸ ದೃಷ್ಟಿ

ಯಿಂದ ಅನ್ನಬೇಕಾಗುತ್ತದೆ. ಮುಖ್ಯ ಮಂತ್ರಿಯು ಹೀನ ಜಾತಿಯು ಜನರಿಗೆ ನಮಸ್ಕಾರ ಮಾಡಬಾರದೆಂದು ಬಿಜ್ಜಳರಾಜನ ಆಗಿನಜನರ ತಿಳಿವಳಿಕೆಯಾಗಿದ್ದಿಲ್ಲವೆ? ಈ ಐತಿಹಾಸಿಕ ಸತ್ಯವನ್ನು ಸ್ಪಷ್ಟವಾದಿಯು ಸುಳ್ಳೆಂದು ಸಿದ್ಧಮಾಡಲಿಕ್ಕೆ ಸಿದ್ಧನಿರುವನೋ? ನಾಲ್ಕು ಪವಾಡಗಳನ್ನು ದಾಹರಿಸಿದ ಮಾತ್ರಕ್ಕೆ ಸಿದ್ಧ ಮಾಡಿದಂತಾಯಿತೆ? ಕಲ್ಯಾಣದ ಎಂಟುಲಕ್ಷ ಜನರು ಮಾದರ ಚನ್ನಯ್ಯ ಡೋಹರ ಕಕ್ಕಯ್ಯ ಇವರಿಗೆ ಹೀನ ಜಾತಿಯು ಜನರೆಂದು ಅನ್ನುತ್ತಿದ್ದಿಲ್ಲವೆ? ನನ್ನ ವೈಯಕ್ತಿಕ ಅಭಿಪ್ರಾಯ ಕೇಳಿದರೆ ಮಾದರ ಚನ್ನಯ್ಯ ಡೋಹರ ಕಕ್ಕಯ್ಯ ಇವರಿಗೇ ಏಕೆ? ಯಾರಿಗೂ ಹೀನ ಜಾತಿಯುವರೆಂದು ಕರೆಯಲಿಕ್ಕೆ ನಾನು ಸಿದ್ಧನಿಲ್ಲ. ಭಕ್ತ ಎಂಬ ಶಬ್ದವು ಆಧ್ಯಾತ್ಮಿಕ ಉನ್ನತಿಯನ್ನೂ ಸೂಚಿಸುತ್ತಿದ್ದರೆ, ಭವಿ ಎಂಬ ಶಬ್ದವು ಆಧ್ಯಾತ್ಮಿಕ ಪತನವನ್ನು ಸೂಚಿಸುತ್ತದೆ. ಈ ವಿಶಾಲವಾದ ಅರ್ಥದಲ್ಲಿ ಭಕ್ತ, ಭವಿ, ಶಬ್ದಗಳನ್ನು ವಿಚಾರಿಸಬೇಕು, ಮತ್ತು ಶರಣರು ಮುಖ್ಯವಾಗಿ ಹಾಗೆ ಭಾವಿಸಿದ್ದರು ಎಂದು ನನ್ನ ಅಭಿಪ್ರಾಯ. ಸ್ಪಷ್ಟವಾದಿಯು ಹೇಳುವ ಸಂಕುಚಿತ ರೀತಿಯಲ್ಲಿ ಭಕ್ತ, ಭವಿ, ತಿಳಿದುಕೊಳ್ಳಲಿಕ್ಕೆ ನನ್ನ ಒಪ್ಪಿಗೆಯಿಲ್ಲ. ತಜ್ಞರನ್ನು ವಿಚಾರಿಸಿ ಲೇಖ ಬರೆಯಬೇಕೆಂದೂ ಅಪ್ರತ್ಯಕ್ಷವಾಗಿ ಸ್ಪಷ್ಟವಾದಿಯು ನನಗೆ ಸೂಚಿಸಿದ್ದಾನೆ. ನನ್ನ ಸ್ವತಂತ್ರ, ನ್ಯಾಯಶೀಲ, ಸಮತಾಭಾವದ, ವಿಚಾರಗಳಿಗನುಸರಿಸಿ ಬುದ್ಧಿ ಹೇಳುವ ತಜ್ಞರಲ್ಲಿ ಸದಾ ನನ್ನನ್ನು ಶರಣಾರ್ಥಿಗಳಿರುತ್ತವೆಂಬುದನ್ನು ಸ್ಪಷ್ಟವಾದಿಯು ಮರೆಯದಿರಲಿ.

---

# ಭಕ್ತಿ ಭಾಂಡಾರಿ ಬಸವಣ್ಣನವರು.

(ಲೇ :— ಶ್ರೀಯುತ, ಎಸ್. ಸಿ. ಹಿರೇಮಠ, ಬಾಗಲಕೋಟೆ.)

ವೀರಶೈವ ಸಾಹಿತ್ಯವು ಸರ್ವತೋಮುಖವಾಗಿ ಮುಂದುವರಿಯು ಹತ್ತಿದಂತೆ ಪಂಡಿತರಲ್ಲಿ, ಪಾಮರರಲ್ಲಿ, ವಿಮರ್ಶಕರಲ್ಲಿ ವಿವಿಧ ಸಮಸ್ಯೆಗಳು ಮುಂದೆ ಬಂದು ನಿಲ್ಲಹತ್ತಿವೆ. ಅದರಲ್ಲಿ ಭಕ್ತಿ-ಭಾಂಡಾರಿ ಬಸವಣ್ಣನವರ ಬಗೆಗೆ ಅನೇಕ ತರ್ಕವಿತರ್ಕಗಳು ನಡೆಯು ಹತ್ತಿವೆ. ಸುಮಾರು ೯೬೦ ವಚನಗಳನ್ನೂ 'ಮಂತ್ರಗೋಪ್ಯ' ವೆಂಬ ಶೈವ ಸಿದ್ಧಾಂತವನ್ನೂ ಬರೆದು 'ಅನುಭವ' ಮಂಟಪದಲ್ಲಿ ಅಗ್ರಸ್ಥಾನ ಪಡೆದು, ಮುಕುಟ ಮಣಿಯಂತೆ ಶೋಭಿಸುತ್ತಿದ್ದ ಅಣ್ಣ ಬಸವಣ್ಣನಿಗೆ ಸಂಸ್ಕೃತವು ಬರುತ್ತಿರಲಿಲ್ಲವಾದ್ದರಿಂದ ಕನ್ನಡದಲ್ಲಿ ಬೋಧ ಮಾಡಿದರು ಎಂದು ಶ್ರೀ ಎಮ್. ಆರ್. ಶ್ರೀನಿವಾಸ ಮೂರ್ತಿಯವರು ತಮ್ಮ 'ಭಕ್ತಿ-ಭಾಂಡಾರಿ ಬಸವಣ್ಣನವರು' ಎಂಬ ಶಿರೋನಾಮದ ಸತ್ಯಶೋಧನ ಪ್ರಕಟನ ಮಂದಿರ ಬೆಂಗಳೂರ, ಅವರ ಪ್ರಕಟನೆಯ ಪುಸ್ತಕದಲ್ಲಿ ಪುಟ ೧೬೦ ನೇಯ ೧೧ - ೧೨ ಓಳಿಯಲ್ಲಿ ಮುದ್ರಿತವಾಗಿದೆ ಈ ಮಾತಿನ ಸತ್ಯತೆ ಎಷ್ಟಿದೆಂಬುದನ್ನು ಅವರ ವಚನಗಳ ಆಧಾರದಿಂದಲೇ ವಿಚಾರಿಸೋಣ.

ಹನ್ನೆರಡನೆಯ ಶತಮಾನದ ಆದಿಯಲ್ಲಿ ಕರ್ನಾಟಕದಲ್ಲಿ ಜಾತಿಯ ಒಂದು ಗಲಭೆ ನಡೆದಿತ್ತೆಂದು ಇತಿಹಾಸದಿಂದ ಕಂಡುಬರುತ್ತದೆ. ವರ್ಣಾಶ್ರಮ ಧರ್ಮ ಒಂದೆಡೆ, ವೀರಶೈವ ಧರ್ಮ ಇನ್ನೊಂದೆಡೆ, ಅಳ್ವರಸರ ಧರ್ಮ ಮತ್ತೊಂದೆಡೆ ಹೀಗೆ ಅನೇಕ ಧರ್ಮ ಸಂಕಟಗಳ ಮಧ್ಯದಲ್ಲಿ ಜನಿಸಿದ ಬಸವಣ್ಣನವರು ವೀರಶೈವ ಧರ್ಮದ ಪುನರುದ್ಧಾರ ಮಾಡುವುದು ಸುಲಭ ಸಾಧ್ಯವಾಗಿರಲಿಲ್ಲ. ಅವರು ಬೋಧಿಸ[illegible]ಕಾಗಿದ್ದುದು ಜನಸಾಮಾನ್ಯರಲ್ಲಿ, ಪಂಡಿತರಲ್ಲಿಯಲ್ಲ. ಪಂಡಿತರಿಗಾಗಿ ಅನೇಕ ಉದ್ ಗ್ರಂಥಗಳು ಆಗಲೇ ಪ್ರಸಿದ್ಧಿಸಲ್ಪಟ್ಟದ್ದವು.

ಶ್ರೀ ಬಸವಣ್ಣನವರು ಅನೇಕ ಗ್ರಂಥಗಳನ್ನು ಓದಿ ತಿಳಿದು ಕೊಂಡಿದ್ದರೆಂಬುದೂ, ಅವರಿಗೆ ಸಂಸ್ಕೃತವು ಬರುತ್ತಿತ್ತೆಂಬುದೂ ಅವರ ವಚನಗಳಿಂದಲೇ ಕಂಡು ಬರುತ್ತದೆ. ಸಮಯಕ್ಕೆ ಅನುಗುಣವಾಗಿ ಅವರು ವೇದ, ಆಗಮ, ಶ್ರುತಿಗಳಲ್ಲಿಯ ಶ್ಲೋಕಗಳನ್ನು ಕೊಡುತ್ತಾರೆ. ವೇದದ ಮಾರ್ಗವನ್ನು ಅವರು ಜರಿಯುತ್ತಾರೆ. ಶ್ರುತಿಯನ್ನು ಖಂಡಿಸುತ್ತಾರೆ. ಓದಿದಲ್ಲದೆ, ತಿಳಿದೊಡಲ್ಲದೆ ಅಂಥ ಗ್ರಂಥಗಳನ್ನು ಆ ಮಹಾನುಭಾವರು ಜರಿಯುವರೆ? ಇನ್ನು ವಚನಗಳಲ್ಲಿ ಬರುವ ಅವರ ಸಂಸ್ಕೃತ ಶ್ಲೋಕ, ಅದರ ಸಂದರ್ಭ ಇದರ ವಿಷಯವಾಗಿ ಸ್ವಲ್ಪ ವಿಚಾರಿಸೋಣ.

ಭಕ್ತಸ್ಥಲದಲ್ಲಿದ್ದ ಬಸವಣ್ಣನವರು ದೇವ ಸಂಗಮನಾಥನ ಇರವನ್ನು ಅರಿಯದೆ, ‘ ಎಂತಕ್ಕೆ ನಾ ನಿಮ್ಮ ದೇವನೆಂದರಿದೆನು ? …… ….

ಯಥಾ ಭಾವ ಸ್ತಥಾ ಲಿಂಗಂ । ಸತ್ಯಂ ಸತ್ಯಂ । ನ ಸಂಶಯಃ ।
ಯಥಾ ಭಕ್ತಿ ಸ್ತಥಾ ಸಿದ್ಧಿಃ । ಸತ್ಯಂ ಸತ್ಯಂ । ನ ಸಂಶಯಃ ॥

ಲಿಂಗ ದೇವನನ್ನು ಪೂಜಿಸುವದನ್ನು ಕುರಿತು —

ವರಂ ಪ್ರಾಣ ಪರಿತ್ಯಾಗ । ಛೇದನಂ ಶಿರಸೋಪಿವಾ ।
ನತ್ವನಭ್ಯರ್ಚ್ಯ ಭುಂಜೀಥ । ಭಗವಂತಂ ತ್ರಿಲೋಚನಂ ॥

ಎಂಬುದಾಗಿ ದೇಹಧರ್ಮ ‘ ತನ್ನ ಆದಂತೆ ಆಗಲಿ. ಕೂಡಲ ಸಂಗನ ಪೂಜಿಸಿದಲ್ಲದೆ ಇರಲಾರೆ’ ಎಂದು ಹೇಳುತ್ತಾರೆ.

ಇನ್ನು ಮಾನವನಿಗೆ ಸದಸದ್ವಿವೇಕ ಬುದ್ಧಿ ಹಾಗು ಸದ್ವರ್ತನಗಳು ಅವಶ್ಯವಾಗಿ ಬೇಕೆಂದರಿತ ಬಸವಂಣನವರು ‘*Fame is the food that dead men eat*’ ಎಂದು ಚನ್ನಾಗಿ ತಿಳಿದಿದ್ದರು. ಅಂತೆಯೇ “ ಲೇಸೆನಿಸಿಕೊಂಡು ಐದು ದಿನ ಬದುಕಿದರೇನು ? ಎರಡು ದಿನ ಬದುಕಿದರೇನು ? ” ಎಂದು ಹೇಳುವಾಗ — ಜೀವಿತಂ ಶಿವ ಭಕ್ತಾನಾಂ । ವರಂ ಪಂಚ ದಿನಾನಿಚ । ಅಜಕಲ್ಪ ಸಹಸ್ರೇಭ್ಯೋ । ಭಕ್ತಿ ಹೀನಂತುಶಾಂಕರಿ ॥ ಎಂದು ಹೇಳಿದರು.

'ಸಜ್ಜನರ ಸಂಗವದು ಹೆಜ್ಜೇನು ಸವೆದಂತೆ' ಎಂಬ ನುಡಿಯನ್ನು ಮಾರ್ಮಿಕವಾಗಿ ಹೇಳುವಾಗ ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯಕಟ್ಟಿ ಆಕಳ ಹಾಲನೆರೆದು, ಜೇನತುಪ್ಪ ಹೊಯ್ದಡೆ ಸಿಹಿಯಾಗಬಲ್ಲುದೆ? ಎಂದು

ದಂಡಕ್ಷೀರದ್ವಯಂ ಹಸ್ತೆ । ಜಂಗಮೋ ಭಕ್ತಿಮಂದಿರಂ । ಅತಿ
ಭಕ್ತ್ಯಾಲಿಂಗ ಸಂತುಷ್ಟಿಃ । ಅಪಹಾಸ್ಯಂ ಯಮದಂಡನಂ ॥

ಎಂದು ಹೇಳುತ್ತಾರೆ.

ಇನ್ನು ಬಸವಣ್ಣನವರು ಪಾರಮಾರ್ಥವನ್ನು ಪ್ರಪಂಚದಲ್ಲಿದ್ದು ಸಾಗಿಸುವವರಾಗಿದ್ದರು. ಯಾಕಂದರೆ, ಸಂಸಾರದಿಂದ ಸದ್ಗತಿಯುಂಟೆಂದೂ ದೇವಲೋಕವೆಂಬುದು ಕರ್ತಾರನ ಕಮ್ಮಟವೆಂದೂ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರೆಂದೂ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರೆಂದೂ ಅವರು ಸಾರಿದ್ದರು.

ಅವರು ಮನಕಂಜಿ ನಡೆಯುತ್ತಿದ್ದರು. ಅಂತೆಯೇ ಒಳಗೆ ಕುಟಿಲ ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯ ನಮ್ಮ ಕೂಡಲಸಂಗಮದೇವ ಎಂದು ಹೇಳಿದ ವಿಚಾರವು ಬಾಯ್‌ಬಲ್ಲಿನಲ್ಲಿ *Be true to thyself internally and externally* ಮತ್ತು '*Be pious*' ಎಂಬ ನುಡಿಗೆ ಸಂಹೋಗವವು ಅದಕ್ಕೆ ಅವರ ವಚನದಲ್ಲಿ 'ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯ...... .......... ಅಭ್ಯಾಸಾಚ್ಚ ವಿಹೀನಸ್ಯ ತಸ್ಯ ಜನ್ಮನಿರರ್ಥಕಂ, ಗುರೋರಪಿ ಸಮಂ ಹಾಸ್ಯಂ, ಕರ್ತವ್ಯಂ ಕುಟಿಲಂ ವಿನಾ

ಮಾನವನಿಗೆ ಸಹಜವಾದ ಗರ್ವವನ್ನು ಹೊಡೆದು ಹಾಕಲು ಅವರು ಪ್ರಯತ್ನಿಸಿದ್ದಾರೆ. ಹಾವತಿಂದವರ ನುಡಿಸಬಹುದು ಗರ ಹೊಡೆದವರ ನುಡಿಸಬಹುದು ಆದರೆ ಸಿರಿಯುಹೊತ್ತವರ ನುಡಿಸಬಾರದೆಂದು "ವೇದಾದೀನಾಂತು ನಿರ್ಮಾನ ಮಹತ್ವಂ" ಮಹದೈಶ್ವರಂ ಗುರೂಕ್ತ ಮಂತ್ರಮಾರ್ಗೇಣ ಇಷ್ಟಲಿಂಗಂತು ಶಾಂಕರೀಎಂದೂ ಸ್ಪಷ್ಟಪಡಿಸಿರುವರು.

ಇನ್ನು ಗರ್ವಬಿಟ್ಟು ವಿನಯ ಮುಳ್ಳವನಾಗೆನ್ನುವದಕ್ಕೆ ಕರ್ಮಾವಲಂಬನಾಃ ಕೇಚಿತ್ ಜ್ಞಾನಾವಲಂಬನಾಃ ವಯಂತು ಶಿವಭಕ್ತಾನಾಂ ಪಾದುಕಸ್ಯಾವಲಂಬನಾಃ.

ಜಗತ್ತಿನಲ್ಲಿ ಪ್ರಾಣಿಗಳೆಲ್ಲರಿಗೂ ಅವಶ್ಯವಾಗಿರುವ ದಯೆಯನ್ನು ಕುರಿತು ಬಸವಣ್ಣನವರು ದಯವೇ ಧರ್ಮದ ಮೂಲವೆಂದರು. ದಯವಿರಬೇಕು ಸಕಲಪ್ರಾಣಿಗಳಲ್ಲಿ ಸಾಕಾರದೊಳು ನಿಷ್ಠೆ ಭೂತಂಗಳೊಳು ದಯೆ ಇರಬೇಕು ಎಂದು ಸಾರಿದರು. ಅದನ್ನೆ ಒಂದು ವಚನದಲ್ಲಿ—ಯತ್ರ ಜೀವಸ್ತತ್ರಶಿವ ಎಂದು ನುಡಿದರು.

"ಆಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾರಿಪುಃ" ಎಂದು ಬಸವಣ್ಣನವರು 'ಸದಾ ಕಾಯಕ ನಡೆಯುತ್ತಿರಬೇಕು. ಆವಕಾಯಕವಾದಡೇನು?ಎಂದು ಸಾರಿದರು. ಇಪ್ಪತ್ತನೆಯ ಶತಮಾನದಲ್ಲಿ 'work is worship ಎಂಬುದನ್ನು ೧೨ನೆಯ ಶತಮಾನದಲ್ಲಿ ಆ ಮಹಾನುಭಾವರು ಸಾರಿದರು ಇಂತು 'ಕಾಯಕವೇ ಕೈಲಾಸ 'ಯದ್ಯಪಿಸ್ಯಾತ್‌ತ್ರಿಕಾಲಜ್ಞಃ। ತ್ರೈಲೋಕ್ಯಾಕರ್ಷಣಕ್ಷಮಃ। ತಥಾಪಿ ಲೌಕಿಕಾಚಾರಂ। ಮನಸಾಪಿ ನ ಲಂಘಯೇತ್॥೩೯೬॥ 'ಬರುವ ಸುಖ ದುಃಖಗಳಿಗೆ ಅಂಜಬಾರದೆಂದೂ, ಮರಣವು ಎಲ್ಲರಿಗೂ ಕಟ್ಟಿಟ್ಟದ್ದೆಂದೂ ಹೇಳುವಾಗ 'ನಾಳೆ ಬಪ್ಪುದು ನಮಗೆ ಇಂದೇಬರಲಿ .... ...'ಜಾತಸ್ಯ ಮರಣಂ ಧ್ರುವಂ ಎಂಬ ನುಡಿಯನ್ನು ಸಾರಿರುವರು.

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ? ಎಂದು ಜಗತ್ತಿಗೆಲ್ಲ ಒಬ್ಬನೇ ದೇವರು ಇರುವನೆಂದೂ ಶ್ರುತಿಯ ವಾಕ್ಯವನ್ನು ಇಲ್ಲಿ ಉದಾಹರಿಸಿದ್ದಾರೆ. ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತನಾಡಬೇಡ ಜಗಕೆಲ್ಲ ಒಬ್ಬನೇ ದೇವ, ಅನ್ಯದೈವಕ್ಕೆರಗಿದರೆ ಕಿವಿ ಮೂಗನೇ ಕೊಯ್ಯುವ ನಮ್ಮ ಕೂಡಲ ಸಂಗಮದೇವ. 'ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನಃ ಇಂತೆಂದುದಾಗಿ ಹೇಳಿದ್ದಾರೆ.

ಇನ್ನು ಶ್ರುತಿಯ ವಿಚಾರ ವಿಷ್ಣುಕರ್ಮ ... ...ಓಂ ವಿಷ್ಣೋ ಕರ್ಮಾಣಿ ಪಶ್ಯತೆ ಯತೋ ವ್ರತಾನಿ ಪಶ್ಯತೆ ಇಂದ್ರಸಾಯುಜ್ಯಃ ಸಂಖ್ಯಾಪ್ತ್ರೀಣಿ ಪದ ವಿಚಕ್ರಮೇ। ವಿಷ್ಣೋರ್ಗೋಪಾಲತಾಭ್ಯಃ ಅತೋ ಕರ್ಮಾಣಿ ಧಾರಯೇತ್ ತದ್ವಿಪ್ರಾಸೋ ವಿಪನ್ಯಾವೋಜಾಂ ಗೃಹವಾಸಃ ಸಮಂಧತೆ ವಿಷ್ಣೋರ್ಯತ್ಪರಮಂ ಪದಂ॥ ಎಂಬ ನುಡಿಯನ್ನು ಸಾರಿದರು.

ಹೀಗೆ ಪ್ರತಿನಿತ್ಯದ ಆಗು ಹೋಗುಗಳನ್ನು, ಪಾರಮಾರ್ಥಿಕ ವಿಷಯಗಳನ್ನು ಹೇಳುವಾಗ ಅವರು ಕೊಡುವ, ವೇದ, ಆಗಮ ಶ್ರುತಿಯ ಉದಾಹರಣೆಗಳು ಅವರ ಪಾಂಡಿತ್ಯವನ್ನು ಸೂಚಿಸುತ್ತವಲ್ಲದೆ ಅವರಿಗೆ ಸಂಸ್ಕೃತದಲ್ಲಿ ಆಳವಾದ ಜ್ಞಾನವಿತ್ತೆಂಬುದನ್ನು ವ್ಯಕ್ತಪಡಿಸುತ್ತವೆ. ವೇದವಾಕ್ಯಗಳು, ಶ್ರುತಿಯ ಶ್ಲೋಕಗಳು ಅವರ ಜಿಹ್ವೆಯ ಮೇಲೆ ಕುಣಿದಾಡುತ್ತವೆ. ಅವುಗಳನ್ನು ಮನನ ಮಾಡಿ ಅದರಲ್ಲಿಯ ತತ್ವಗಳು ಮನಕ್ಕೆ ಬಾರದ್ದರಿಂದಲೇ 'ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನಬಾರನೆತ್ತುವೆ. ಆಗಮದ ಮೂಗ ಕೊಯ್ವೆ, ಎಂದು ಧೈರ್ಯವಾಗಿ ಸಾರಿದರು. ಹಾಗಿಲ್ಲದಿದ್ದರೆ ಆಗಿನ ಸಂಸ್ಕೃತ ಪಂಡಿತರು ಬಸವಣ್ಣನವರನ್ನು ಸುಮ್ಮನೆ ಬಿಡುತ್ತಿದ್ದರೆ? ಬಸವಣ್ಣನವರು ಉಪಯೋಗಿಸಿದ ಕನ್ನಡ ಭಾಷೆ ಜನಸಾಮಾನ್ಯರಿಗಾಗಿ ಮಾತ್ರ. ತಮ್ಮ ವಿದ್ವತ್ತ್ವವನ್ನು ಪ್ರದರ್ಶಿಸಲಿಕ್ಕಲ್ಲ!

ಇವೆಲ್ಲ ಕಾರಣಗಳಿಂದ ಅವರ ವಿಷಯಕ್ಕೆ ಇದ್ದ ತಪ್ಪು ಕಲ್ಪನೆಗಳು ದೂರವಾಗಬಹುದೆಂದು ನಮ್ಮ ಕೋರಿಕೆ.

# ಬಸವನಘನತೆ

( ಲೇ: – ವೇ. ಮೂ ಗುರುಸಿದ್ಧಶಿವಾಚಾರ್ಯರು–ಗುರುವಿನಪುರಮಠ. )

---

ಸತ್ಪುರುಷರು ಸತ್ಯಸಂಕಲ್ಪದಿಂದ ಜಗತ್ತಿನ ಮೋಕ್ಷಕ್ಕಾಗಿ ಅವತರಿಸಿ ಪರಮ ಉಪಕಾರಿಗಳಾಗಿ ಜೀವನದ ಅಂಧಕಾರದಲ್ಲಿ ಅಂವುದಪ್ಪಿ ಕಣ್ಣುಕಾಣದವರೋಪಾದಿಯಲ್ಲಿ ಚಡಪಡಿಸುತ್ತಿರುವ ಮಾನವರ ಉದ್ಧಾರಕ್ಕಾಗಿ ಅವತಾರ ಮಾಡುತ್ತಾರೆ. ಭರತ ಭೂಮಿಯಲ್ಲಿ ಅನೇಕ ವಿಭೂತಿಪುರುಷರು ಅವತಾರಮಾಡಿ ಇಂದಿಗೂ ಯಶಕಾಯರಾಗಿ ಕಂಗೊಳಿಸುತ್ತಲಿರುವುದು ವಿದಿತವಷ್ಟೇ?

ಬುದ್ಧ, ರಾಮಾನುಜಾಚಾರ್ಯ ಶಂಕರಾಚಾರ್ಯ ಮೊದಲಾದ ವಿಭೂತಿಪುರುಷರೂ ಬಸವೇಶ್ವರ, ಚನ್ನಬಸವೇಶ್ವರ, ಪ್ರಭುದೇವರು, ಇನ್ನೂ ಮುಂತಾದ ಅನೇಕ ಮಹನೀಯರ ಯಶಸ್ಸು ದಿಗಂತ ವ್ಯಾಪಿಸಿದೆ. ಇವರಲ್ಲಿ ಪ್ರತಿಯೊಬ್ಬರೂ ತಮಗೆ ಯುಕ್ತ ತೋರಿದಂತೆ ಜನರಿಗೆ ಸನ್ಮಾರ್ಗವನ್ನು ಸೂಚಿಸಿ ಮಹೋಪಕಾರ ಮಾಡಿದ್ದಾರೆ. ಪೂಜ್ಯರಾದ ಆ ಸತ್ಪುರುಷರೇ ಜಗತ್ತಿನಲ್ಲಿ ದೇದೀಪ್ಯಮಾನವಾಗಿ ಬೆಳಗುವ ದಿವ್ಯಜ್ಯೋತಿಗಳು. ಅವರ ಅಮೃತ ವಾಣಿಗಳೇ ಸಂಸಾರ ಸಮುದ್ರ ಮಧ್ಯದಲ್ಲಿ ಯಾರೊಬ್ಬರೂ ದಿಕ್ಕುಗೆಡದಂತೆ ಬೆಳಕನ್ನು ಬೀರುತ್ತಿರುವ ಶುಭ ತಾರೆಗಳು. ಮಹಾನುಭಾವರಾದ ಆ ಪುಣ್ಯ ಪುರುಷರೇ ಶಾಶ್ವತ ಯಶಕಾಯದಿಂದ ರಾರಾಜಿಸುತ್ತಿರುವ ಲೋಕೋದ್ಧಾರಕರು

ಮಹಾನುಭಾವರೆಲ್ಲ ಬಸವೇಶ್ವರನ ನೆನವು ಅತಿ ಮಹತ್ವವಾದುದು, ವೀರಶೈವ ಧರ್ಮದ ಇತಿಹಾಸದಲ್ಲಿ ಆತನು ಅದ್ವಿತೀಯ ಪುರುಷನಾಗಿದ್ದಾನೆ. ಆತನ ಜ್ಞಾನ, ದೃಷ್ಟಿ, ತತ್ವಗಳು ನಮ್ಮ ಹೃದಯಗಳನ್ನು ಭೇದಿಸಿ ಗುಪ್ತವಾದ ಆಲೋಚನೆಗಳನ್ನು ಲೋಪದೋಷಗಳನ್ನು ಹಿಡಿದೆಳೆಯುತ್ತವೆ. ಆತನ ಶಕ್ತಿ ನಮ್ಮ ಮನೋಭಿತ್ತಿಯ ಮೇಲೆ

ಮೂರ್ತಿಗೊಂಡು ನಮ್ಮ ಆತ್ಮವನ್ನು ಜಾಗ್ರತಗೊಳಿಸುತ್ತವೆ. ಆತನ ವಚನಗಳ ಬೋಧೆಯನ್ನು ಪಠಿಸಿದವರು ಆ ಮಹಾತ್ಮನ ಸ್ವರೂಪವನ್ನು ಆ ಮೂರ್ತಿಯ ವ್ಯಕ್ತಿತ್ವವನ್ನು ಎಂದಿಗೂ ಮರೆಯರು. ಆತನನ್ನು ಶಿವಶರಣರು ಜೀವಿತ ಕಾಲದಲ್ಲಿಯೇ ಸಾಕ್ಷಾತ್ ಪರಶಿವನ ಅವತಾರವೆಂದು ತಿಳಿದಿದ್ದರು. ಅವನು ಶಿವಶರಣರಲ್ಲೆಲ್ಲ ಅತ್ಯಂತ ಮೇಧಾವಿಯೂ ಜ್ಞಾನಸಂಪನ್ನನೂ ವೈರಾಗ್ಯಪರನೂ ಆದಮಹಾತ್ಮನು. ಆತನು ವೀರಶೈವ ಮಾರ್ಗೋಪದೇಶ ಮಾಡಿದನಾದರೂ ತತ್ವದಲ್ಲಿ ಮತಾಭಿಮಾನದ ಸಂಕುಚಿತ ಹೃದಯವಿರಲಿಲ್ಲ. ಸತ್ಯದ ಬೆಳಕನ್ನು ಕಂಡ, ನಿರ್ವಿಕಲ್ಪ ಸಮಾಧಿ ಸ್ಥಿತಿಯನ್ನೈದಿದ ಆ ಮಹಾತ್ಮನ ಹೃದಯವು ವಿಶ್ವವಿಶಾಲವಾದುದು, ಅಖಂಡವಾದುದು. ಆತನ ಭವ್ಯ ಮೂರ್ತಿಯು ಎಲ್ಲರ ಹೃದಯದಲ್ಲೂ ಇರುವುದಾದ್ದರಿಂದ ಪ್ರತಿವರ್ಷ ಆ ಮಹಾತ್ಮನ ದಿನಾಚರಣೆಯನ್ನು ಆಚರಿಸುವುದು.

ಇಂತಹ ಪುಣ್ಯ ಪುರುಷನ ಶ್ರೇಷ್ಠ ಗುಣಗಳನ್ನು ಕೊಂಡಾಡುವುದು ಅತ್ಯಂತ ಅವಶ್ಯಕ ಇರುತ್ತದೆ. ಬಸವೇಶ್ವರನು ತಾನು ನುಡಿದಂತೆ ನಡೆದು ಇತರರಿಗೆ ಮಾರ್ಗದರ್ಶಕನಾಗಿದ್ದಾನೆ. ಅನೇಕ ಪವಾಡಗಳನ್ನು ಮಾಡಿ ಇತರರಿಗೆ ಮೇಲ್ಪಂಕ್ತಿಯಾಗಿದ್ದಾನೆ,

ಬಸವೇಶ್ವರನು ಅವತಾರ ಮಾಡುವ ಕಾಲಕ್ಕೆ ವೀರಶೈವ ಮತದ ಸ್ಥಿತಿ ತುಂಬಾ ಚಿಂತಾಜನಕವಾಗಿತ್ತು. ಇಂಥಾ ಬಿಕ್ಕಟ್ಟಿನ ಸಮಯದಲ್ಲಿ ದ್ವಿತೀಯ ಶಂಭುವಾದ ಬಸವೇಶ್ವರನು ಅವತರಿಸಿ ಚಿಂತಾಜನಕವಾಗಿದ್ದ ವೀರಶೈವ ಮತದಲ್ಲಿ ನವ ಚೈತನ್ಯವನ್ನುಂಟು ಮಾಡಿದನು. ಕೇವಲ ಧಾರ್ಮಿಕದಲ್ಲಿಯೇ ಈತನು ಕಾಲ ಕಳೆಯಲಿಲ್ಲ ರಾಜಕೀಯದಲ್ಲೂ ಅದ್ವಿತೀಯನಾಗಿ ಬಿಜ್ಜಳನ ಪ್ರಧಾನ ಮಂತ್ರಿಯಾಗಿ ತನ್ನ ಬುದ್ಧಿ ಸಾಮರ್ಥ್ಯದಿಂದ ಎಲ್ಲರಿಗೂ ಶ್ರೇಷ್ಠನಾದನು.

ತಂದೆ ತಾಯಿಗಳು ಬಸವೇಶ್ವರನಿಗೆ ತಮ್ಮ ಧರ್ಮಕ್ಕನುಸಾರವಾಗಿ ಉಪನಯನವನ್ನು ಮಾಡಬೇಕೆಂದು ಪ್ರಯತ್ನ ಪಟ್ಟಾಗ ತಂದೆ ತಾಯಿಗಳನ್ನು ತನ್ನ ವಾಕ್‌ಸಾಮರ್ಥ್ಯದಿಂದ ದಂಗುಬಡಿಸಿದ್ದು ಸಾಮಾನ್ಯವೇ? ಎಂಟು ವರ್ಷದ ಬಾಲಕನಲ್ಲಿ ಇಂಥಹ ಅದ್ಭುತ ಶಕ್ತಿಯು ಬರಬೇ

ಕಾದರೆ ಬಸವೇಶ್ವರನು ಅವತಾರ ಪುರುಷನಾಗದೆ ಇದ್ದರೆ ಬರುತ್ತಿತ್ತೇ? ಇದೊಂದೇ ಉದಾಹರಣ ಬಸವೇಶ್ವರನ ವ್ಯಕ್ತಿತ್ವವನ್ನು ಘನತೆಯನ್ನು ತೋರಿಸುತ್ತದಲ್ಲದೆ, ವೀರಶೈವ ಮತದ ಮೇಲ್ಮೆಯನ್ನು ಘನತೆಯನ್ನು ವ್ಯಕ್ತಗೊಳಿಸುತ್ತದೆ. ಬಸವೇಶ್ವರರು ತಮಗೆ ತೋರಿದ ಸತ್ಯಕ್ಕಾಗಿ ಸಮಾಜದ ಸಂಕೋಲೆಗಳನ್ನು ಕತ್ತರಿಸಿದರು. ಜಗತ್ತಿನ ಉದ್ಧಾರಕ್ಕಾಗಿ ಅನೇಕ ಸಂಕಟಗಳನ್ನು ಅನುಭವಿಸಿದರು. ಅಲ್ಪಾವಧಿಯಲ್ಲಿ ಇದ್ದ ಸೃಷ್ಟಿಯನ್ನು ಸಂಹಾರ ಮಾಡಿ ಹೊಸ ಸೃಷ್ಟಿಯನ್ನು ನಿರ್ಮಿಸಿದರು. ಅಂದರೆ ಇದ್ದ ಸಮಾಜದ ಸ್ಥಿತಿಯನ್ನು ಬೇರು ಸಹಿತ ಅಲ್ಲಾಡಿಸಿ ಬೇರೊಂದು ಹೊಸ ಸಮಾಜ ಪದ್ಧತಿಯನ್ನು ಸೃಷ್ಟಿಸಿದರು. ಇಂಥವರು ಸಾಮಾನ್ಯ ಪುರುಷರೇ ?

ಬಸವಣ್ಣನವರು ಭಾಷಾ ಪಂಡಿತರಲ್ಲ. ಭಾಷಾ ಜನಕರು. ಅವರ ವಚನಗಳು ಕನ್ನಡ ನುಡಿಯು ಎಷ್ಟು ವೀರ್ಯವತ್ತಾಗಬಹುದೆಂಬುದನ್ನು ತೋರಿಸುತ್ತದೆ. ಅವರ ಹೃದಯು ಕರಗಿ ನೀರಾಗಿ ಅದು ವಚನರೂಪ ದಲ್ಲಿ ಹರಿದಿದೆ. ಆ ಪ್ರವಾಹದಲ್ಲಿ ಅವರ ವಿಚಾರಗಳು ಭೋರ್ಗರೆ ಯುತ್ತಿವೆ. ಅಲ್ಲಿ ಅವರ ಅಂತರಂಗದ ಅಲೆಗಳು ನಲಿಯುತ್ತಿವೆ. ತತ್ವ ಗಳು ಥಳಥಳಿಸುತ್ತಿವೆ. ಅವು ಅವರ ಮಿದುವಾದ ಮೃದು ನುಡಿಗಳ. ಬಿರಿಕು ಬಿರು ನುಡಿಗಳಲ್ಲಿ ವಚನಗಳಲ್ಲಿ ಅಂತಃಕರಣ ತುಂಬಿ ತುಳು ಕಾಡುತ್ತಿದೆ. ಸಾಧು ವೃತ್ತಿಯು ಸೋನೆ ಸುರಿಯುತ್ತಿದೆ. ಅನುಭವದ ಕಾಠಿಣ್ಯವು ಕಂಗೊಳಿಸುತ್ತಿದೆ. ವಿಚಾರದಲ್ಲಿ ಅಚ್ಚುಅಚಲವಾಗಿದೆ. ಬಸವೇಶ್ವರನು ವೀರಶೈವ ಸಮಾಜ ಹಿತವನ್ನೇ ಬಯಸಿದನಂತಲ್ಲ. ಕರ್ನಾಟಕದ ಏಳಿಗೆಯೇ ಅವನ ಮುಖ್ಯಧ್ಯೇಯವಾಗಿತ್ತು. ಆತನು ತನ್ನ ಜೀವಿತ ಕಾಲವನ್ನೆಲ್ಲ ದೇಶೋದ್ಧಾರಕ್ಕಾಗಿಯೇ ವಿನಯೋಗಿಸಿ ದನು. ಅವನ ವಿಚಾರದಿಂದ ಹೊರಟ ತತ್ವಗಳು ಅವನುನುಡಿದ ನೀತಿಯ ನುಡಿಗಳು ಮತ್ತು ಅವನು ಮಾಡಿದ ಕಾರ್ಯಗಳು ಇತಿಹಾಸದ ಪುಟ ಗಳಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡತಕ್ಕದ್ದಾಗಿವೆ.

ಬಸವೇಶ್ವರನು ನಿಜವಾದ ಸತ್ಯಾಗ್ರಹಿಯಾಗಿದ್ದನು. ಸತ್ಯವನ್ನು ಎತ್ತಿಹಿಡಿಯುವದರಲ್ಲಿ ಪ್ರಾಣ ಹೋಗುವ ಪ್ರಸಂಗ ಬಂದರೂ ಬಿಡು ವವನಲ್ಲ. ಬಸವೇಶ್ವರನು ಬಿಜ್ಜಳನ ಮಂತ್ರಿಯಾಗಿರಲು ಚಾಡಿಕಾರರು

" ಬಸವನು ಬೊಕ್ಕಸವನ್ನೆಲ್ಲ ಬರಿದು ಮಾಡಿದನು. ಯಾವತ್ತೂ ಜಂಗಮ ರನ್ನು ಕೂಡಿ ಅವರ ಮನೋಽ ಇಷ್ಟಾರ್ಥವನ್ನು ನೆರವೇರಿಸುತ್ತ ಲೀಲಾ ವಿನೋದದಲ್ಲಿ ಇರುವನು, ಎಂದು ಅನೇಕ ತರದಲ್ಲಿ ರಾಜನಿಗೆ ಚಾಡಿ ಹೇಳಿದರು. ಆದರೆ ಬಸವನು ಪ್ರತಿಒಂದು ಪ್ರಸಂಗದಲ್ಲಿ ಯಾರ್ರೋ ತಗೊಂಡು ಸತ್ಯಸಂಗತಿಯನ್ನು ಮನಗಾಣಿಸಿಕೊಡುತ್ತಿದ್ದನು ಬಸವೇಶ್ವ ರರು ಶಾಂತಚಿತ್ತರೂ ದೃಢ ಮನಸ್ಸಿನವರೂ ಆದುದರಿಂದ ರಾಜನೊ ಡನೆ ವಿರೋಧ ಕಟ್ಟಿಕೊಳ್ಳಲಿಲ್ಲ. ಬಸವನ ಮಹಿಮೆಯನ್ನು ನೋಡಿ ರಾಜನಲ್ಲಿ ಪೂಜ್ಯತೆಯು ಅಂಕುರಿಸಿತು. ಇದೆಲ್ಲನೇ ಸತ್ಯಾಗ್ರಹದ ಬಲವು.

ಬಸವೇಶ್ವರನ ಸಮಾಜ ಸುಧಾರಣೆಯನ್ನು ಸ್ವಲ್ಪ ನಿವೇದಿಸುವ. ಬಸ ವೇಶ್ವರನಕಾಲದಲ್ಲಿ ವೀರಶೈವ ಸಮಾಜದಲ್ಲಿ ಅನೇಕ ಒಳಭೇದಗಳು ಇದ್ದವು. ವೀರಶೈವರಲ್ಲೇ ನಾನು ಹೆಚ್ಚು ತಾನು ಹೆಚ್ಚು ಎಂಬ ವೈಷಮ್ಯದಿಂದ ಐಕ್ಯಮತ್ಯವೂ ಸಹನಶೀಲತೆಯೂ ತಪ್ಪಿಹೋಗಿದ್ದವು ಬಸವೇಶ್ವರನು ಈ ಒಳಭೇದಗಳನ್ನೆಲ್ಲ ಬುಡಸಹಿತ ಕಿತ್ತೊಗೆದು ಶಿವಭಕ್ತ ರೆಲ್ಲರೂ ಒಂದೇ ಎಂದು ಸಾರಿದನು. ಆತನು ತನ್ನ ಒಂದು ವಚನ ದಲ್ಲಿ" ಆವಕುಲವಾದರೇನು? ಶಿವಲಿಂಗವಿದ್ದವನೆ ಕುಲಜ. ಕುಲವನರಸು ವರೆ ಶರಣರಲ್ಲಿ " ಎಂದು ಹಾಡಿ ಮದೋನ್ಮತ್ತ ಮಾನವನನ್ನು ಬಡಿದೆಬ್ಬಿಸಿದನು.

ಬಸವೇಶ್ವರನು ಅನೇಕ ಜಾತಿಯವರನ್ನು ಲಿಂಗಾಯತರನ್ನಾಗಿ ಮಾಡಿರುವನು. ಆದರೆ ಅವರು ಎಂಥವರು ಎಂದರೆ! ಮಹಾಮಾನಿ ಗಳೂ, ಜ್ಞಾನಿಗಳೂ, ಆಚಾರನಿರತರೂ ಕೇವಲ ಸಾತ್ವಿಕ ಆಹಾರಿ ಗಳೂ ಆಗಿದ್ದರು. ಚನ್ನಯ್ಯ ಕಕ್ಕಯ್ಯ ಇನ್ನೂ ಮುಂತಾದವರು ಅಂತ್ಯಜರಿದ್ದರು. ಇನ್ನೂ ಅನೇಕರನ್ನು ಬಸವೇಶ್ವರರು ತಮ್ಮ ಅಮೃತ ಹಸ್ತದಿಂದ ಆಶೀರ್ವದಿಸಿರುವ ಶರಣರನ್ನಾಗಿ ಮಾಡಿದರು. ಬಸವೇಶ್ವರು ಗುಣಕ್ಕೆ ಹೆಚ್ಚು ಪ್ರಾಧಾನ್ಯತೆ ಕೊಟ್ಟರು. ಸಮಾಜದಲ್ಲಿ ಬಲವಾದ ಐಕ್ಯವನ್ನುಂಟು ಮಾಡುವ ದೃಷ್ಟಿಯಿಂದಲೇ ಒಳಭೇದಗಳನ್ನು ಕಿತ್ತೊ ಗೆದರು. ಯಾವ ಜಾತಿಯವರೇ ಆಗಲಿ ಲಿಂಗಾಯತ ಧರ್ಮವನ್ನು ಸ್ವೀಕರಿಸಲು ಧರ್ಮದ ಬಾಗಿಲನ್ನು ತೆರೆದರು. ಅವರೇ ತಮ್ಮ ಒಂದು ವಚನದಲ್ಲಿ ಶಿವಶರಣರಿಗೆ ಎಂಥ ಪ್ರಾಧಾನ್ಯತೆ ಕೊಟ್ಟಿದ್ದರು ಎಂಬು ದನ್ನು ಈ ವಚನದಲ್ಲಿ ನಾವು ತಿಳಿಯಬಹುದು.

ಸೆಟ್ಟಿಯೆಂಬೆನೆ ಸಿರಿಯಾಳನ
ಮಡಿವಾಳನೆಂಬೆನೆ ಮಾಚಯ್ಯನ
ಡೋಹರನೆಂಬೆನೇ ಕಕ್ಕಯ್ಯನ

ಆನು ಹಾರುವನೆಂದಡೆ ಕೂಡಲ ಸಂಗಯ್ಯನಗುವನಯ್ಯ

ಎಂದು ಹಾಡಿ ಮಾಚಯ್ಯ, ಚನ್ನಯ್ಯ, ಕಕ್ಕಯ್ಯ ಇವರುಗಳನ್ನು ಹೊಗಳಿದ್ದಾರೆ. ನಾನು ಶ್ರೇಷ್ಠನೆಂಬ ಭಾವನೆ ಹಿತದೃಷ್ಟಿಯಿಂದ ಘಾತುಕವಾದುದು. ಜನ ಸಂಗದಲ್ಲಿ ಅಪರಿಶುದ್ಧತ್ವವನ್ನು ಕಲ್ಪಿಸಿ, ಶ್ವಪಚರು, ಕುಲಹೀನರು, ಸುರಾಪಾನಿಗಳು ಎಂದು ಹೀಯಾಳಿಸುವುದಕ್ಕಿಂತ ಅವರಿಗೆ ಆಯಾ ಮಾರ್ಗವನ್ನು ತಪ್ಪಿಸಿ ಸನ್ಮಾರ್ಗಿಗಳನ್ನಾಗಿ ಮಾಡುವುದು ಉದ್ಧಾರಕರ ಕರ್ತವ್ಯವಲ್ಲವೆ ?

ಬಸವಣ್ಣನವರ ಉಜ್ವಲ ಭಾವನೆ, ಉತ್ಕಟವಾದ ಶಿವಭಕ್ತಿ, ವಿಶ್ವಕುಟುಂಬದಲ್ಲಿ ಪ್ರೇಮ, ಅವರ ವಿಶಾಲ ಹೃದಯ, ಜನತಾ ಸೇವೆಯುಲ್ಲಿದ್ದ ಆಸಕ್ತಿ,ಹೀನ ಕುಲಜರನ್ನು ಉತ್ತಮ ಕುಲಜರನ್ನಾಗಿ ಮಾಡುವ ಆಚರಣೆ, ಅಕಲ ಸ್ವಾರ್ಥತ್ಯಾಗ ಇದ್ದುದರಿಂದಲೇ ಇಂದಿನ ಸಮಾಜದ ವ್ಯಕ್ತಿಗಳು ಹಿರಿಹಿಗ್ಗುತ್ತಿರುವುದು.

ಬಸವೇಶ್ವರರು ಸ್ತ್ರೀಯರಿಗೆ ಪುರುಷರಂತೆಯೇ ಸಮಾನ ಗೌರವ ಕಲ್ಪಿಸಿಕೊಟ್ಟಿದ್ದಾರೆ. ಸ್ತ್ರೀ ಜಗನ್ಮಾತೆ ಎಂದಿದ್ದಾರೆ. ಅನುಭವ ಮಂಟಪದಲ್ಲಿ ಅವರಿಗೆ ಸರಿ ಸಮಾನವಾದ ಸ್ಥಳವನ್ನು ಕೊಟ್ಟಿದ್ದರು. ಈ ಸೌಲಭ್ಯ ದೊರೆತಿದ್ದರಿಂದಲೇ ಅನೇಕ ಮಂದಿ ಸ್ತ್ರೀಯರು ಮುಂದು ವರಿದರು. ಸ್ತ್ರೀ ವಿಧ್ಯಾಭ್ಯಾಸಕ್ಕೂ, ಸ್ವತಂತ್ರತೆಗೂ ಹೆಚ್ಚಿನ ಸ್ವಾತಂತ್ರ್ಯವನ್ನು ಸ್ತ್ರೀಯರು ಪಡೆದದ್ದು ಎಂದರೆ ಬಸವೇಶ್ವರರ ಕಾಲದಲ್ಲಿ. ಸ್ತ್ರೀಯರಿಗೆ ಪುರುಷರಂತೆ ಎಲ್ಲಾ ಸಂಸ್ಕಾರಗಳುಂಟು. ಧರ್ಮವಿಧಿಗಳಲ್ಲಿಯೂ ಪುರುಷರಿಗಿರುವಂತೆಯೇ ಅವರಿಗೂ ಸಮನಾದ ಅಂಗವುಂಟು. ಸ್ತ್ರೀಯರ ವಿಷಯದಲ್ಲಿದ್ದ ಅನಾದರಣೆಯನ್ನು ಕಳೆದು ಬಸವೇಶ್ವರರು ಸ್ತ್ರೀ ಸಮಾಜದ ಘನತೆಯನ್ನು ಬೆಳೆಸಿದರು. ಶರಣರಿಂದ ಉಪದಿಷ್ಟವಾದ ಶರಣ ಸತಿ ಲಿಂಗ ಪತಿ ಎಂಬ ವೀರಶೈವ ಸಿದ್ಧಾಂತಾನುಸಾರವಾಗಿ ಲಿಂಗವನ್ನೇ ಪತಿಯನ್ನಾಗಿ ಭಾವಿಸಿ ತಾವೇ ಸತಿಯಾಗಿ ಗಾಢವಾದ ದೃಢ ಭಕ್ತಿಯಿಂದ ಲಿಂಗದೇವನ್ನು ಮಹದೇವಿ ಅಕ್ಕನವರು

ಪೂಜಿಸಿ ಸ್ತ್ರೀ ಸಮಾಜಕ್ಕೆ ಆದರ್ಶ ವ್ಯಕ್ತಿನಿಯಾಗಿ ರಾಜಿಸುತ್ತಿರುವರು.

ಕಾಯಕವೇ ಕೈಲಾಸವೆಂದು ಬಸವೇಶ್ವರರು ಹಾಡಿ ಕಾಯಕದ ಹಿರಿಮೆಯನ್ನು ಜನರಿಗೆ ತೋರಿಸಿ ಕೊಟ್ಟರು. ಅನೇಕ ಶರಣರು ಸಣ್ಣ ಸಣ್ಣ ಕಾಯಕ ಮಾಡುತ್ತಿದ್ದರು. ಅವರು ಅದನ್ನ ಪವಿತ್ರ ಕರ್ತವ್ಯವೆಂದು ತಿಳಿದು ಆಚರಿಸುತ್ತಿದ್ದರು. ಮಡಿವಾಳ ಮಾಚಯ್ಯನವರು ಬಟ್ಟೆಗಳನ್ನು ತೊಳೆದು, ಮೋಳಿಗೆ ಮಾರಯ್ಯನವರು ಕಟ್ಟಿಗೆಯನ್ನು ತಂದು ಜೀವಿಸಿ, ಈ ಅಲ್ಪದರಲ್ಲಿಯೇ ತಮ್ಮ ಕುಟುಂಬವನ್ನೂ ಜಂಗಮರನ್ನೂ ತೃಪ್ತಿ ಪಡಿಸುತ್ತಿದ್ದರು. ಇನ್ನೂ ಮುಂತಾದ ಅನೇಕ ಶಿವ ಶರಣರು ತಮ್ಮ ತಮ್ಮ ಕಾಯಕದಲ್ಲಿ ನಿರತರಾಗಿ ಸತ್ಯ ಮುಕ್ತಿಯನ್ನೈದಿರುತ್ತಾರೆ. ಲಿಂಗಾಯತರಲ್ಲಿ ಈಗಲೂ ಎಲ್ಲಾ ಉದ್ಯೋಗಗಳನ್ನು ಮಾಡುವರು ಸಿಗುತ್ತಾರೆ. ಬಸವೇಶ್ವರರು ಎಲ್ಲಾ ಕೈಕಸಬುಗಳೂ ಉತ್ತಮವಾದವುಗಳೆಂದೇ ತಿಳಿದು ಅವುಗಳಿಗೆ ಸಮಾನ ಯೋಗ್ಯತೆ ಕೊಟ್ಟರು. ಯಾವ ಕಾಯಕವನ್ನು ಮಾಡುತ್ತಿದ್ದರೂ ಅವರು ಶಿವಭಕ್ತಿ ಸದಾಚಾರಸಂಪನ್ನರಾಗಿದ್ದರೆ ಪೂಜ್ಯರೆಂದೇ ಭಾವಿಸುತ್ತಿದ್ದರು. ಬಸವೇಶ್ವರರು ತಮ್ಮ ಒಂದು ವಚನದಲ್ಲಿ

ದೇವ ಸಹಿತ ಭಕ್ತರು ಮನೆಗೆ ಬಂದರೆ
ಕಾಯಕವಾವುದೆಂದು ಬೆಸಗೊಂಡೆನಾದರೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ ತಲೆದಂಡ
ಕೂಡಲ ಸಂಗಮದೇವಾ ಭಕ್ತರಲ್ಲಿ ಕುಲವನರಸಿದರೆ
ನಿಮ್ಮರಾಣಿವಾಸದಾಣೆ

ಎಂದು ಹಾಡಿ ಮಹತ್ತಿನ ಪದವಿಯನ್ನು ಕಾಯಕ ಶಬ್ದಕ್ಕೆ ಕಲ್ಪಿಸಿ ಕೊಟ್ಟರು. ಸಕಲರೂ ಏನಾದರೊಂದು ಉದ್ಯೋಗದಿಂದ ಗುರು, ಲಿಂಗ, ಜಂಗಮ ಸೇವಾತತ್ಪರರಾಗಿ ಜೀವಿಸುವ ಸ್ವಾವಲಂಬನೆಯ ತತ್ವವನ್ನು ತಂದವರು ಬಸವೇಶ್ವರರು

ಈ ಮಹಾತ್ಮರ ಮಹತ್ಕಾರ್ಯದಿಂದ ದೇಶದ ಸಾಮಾಜಿಕ ಮತ್ತು ಸಾಂಪತ್ತಿಕ ಉನ್ನತಿಗಳಾದಂತೆಯೇ ಬೌದ್ಧಿಕ ಅಭಿವೃದ್ಧಿಯೂ ಉಂಟಾ

ಯಿತು. ಮಾತೃಭಾಷೆಯಾದ ಕನ್ನಡದಲ್ಲಿಯೇ ಧಾರ್ಮಿಕ ಸಾಮಾಜಿಕ ನೈತಿಕ ವಿಷಯಗಳನ್ನು ಬೋಧಿಸಲು ಉಪಕ್ರಮಿಸಿದರು. ಆದ ರಿಂದ ಜನಸಾಮಾನ್ಯರಲ್ಲಿಯೂ ಕೂಡ ಮಹತ್ತರವಾದ ವಿಚಾರ ಕ್ರಾಂತಿಯಾಗಿ ಲೋಕ ಶಿಕ್ಷಣಕ್ಕೆ ಬಹು ಸಹಾಯುವಾಯಿತು.

ಈ ಪ್ರಕಾರ ಯಾವ ಮಹಾತ್ಮರ ಅವತಾರ ಕೃತ್ಯವು ಕರ್ನಾಟಕದ ಧಾರ್ಮಿಕ, ಸಾಮಾಜಿಕ, ಸಾಂಪತ್ತಿಕ, ಬೌದ್ಧಿಕ ಮತ್ತು ಸಾಹಿತ್ಯಗಳ ಅಭಿವೃದ್ಧಿಯಾಯಿತೋ ಆ ಮಹಾನು ಭಾವರಾದ ಬಸವಣ್ಣನವರು ಜಗತ್ತಿನ ಮಹಾಪುರುಷರೆಂದು ಸಿದ್ಧವಾಗುವುದಿಲ್ಲವೆ? ಜಗತ್ತಿನ ಉನ್ನತೆಗೆ ಯಾವ ಯಾವ ರೀತಿಯಲ್ಲಿ ಪ್ರಯತ್ನಿಸಬೇಕೆಂದು ಆಧುನಿಕ ರಾಷ್ಟ್ರಭಕ್ತರು ಈಗ ಹೇಳುತ್ತಿದ್ದಾರೆಯೋ ಅಂತಹ ಮಹತ್ ಕಾರ್ಯಗಳನ್ನು ೭೦೦ ವರ್ಷಗಳ ಹಿಂದೆಯೇ ಜನಾಂಗದಲ್ಲಿ ನೆಲೆಗೊಳಿಸಿದ ಈ ಜಗತ್ತಿನ ಉದ್ಧಾರಕರ್ತರು ನಮಗೆ ಮಾರ್ಗದರ್ಶಿಗಳಲ್ಲವೇ? ಇಂಥ ಮಹಾ ವಿಭೂತಿಯನ್ನು ನಮ್ಮ ಕರ್ನಾಟಕ ಮಾತೆಯು ಹೆತ್ತುದಕ್ಕೋಸ್ಕರ ನಾವು ಈ ಭೂಮಾತೆಗೆ ಅತ್ಯಂತ ಋಣಿಗಳಾಗಿಲ್ಲವೆ? ಈಗ ನಮ್ಮ ಕನ್ನಡ ಮಾತೆಗೆ ಉಂಟಾಗಿರುವ ನಾನಾ ವಿಪತ್ತುಗಳನ್ನು ಸ್ವಲ್ಪ ಮಟ್ಟಿಗಾದರೂ ದೂರ ಮಾಡುವದರ ಮೂಲಕ ಆ ಮಾತೃ ಋಣವನ್ನು ಕಳೆದುಕೊಳ್ಳುವುದು ಆಧುನಿಕ ಜನತೆಯ ಕರ್ತವ್ಯವಲ್ಲವೆ?

# ಬೌದ್ಧ ಮತ್ತು ವೀರಶೈವ ಧರ್ಮಗಳು.

( ಲೇಖಕ :— ರಾ|| ಬ|| ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ )

(ಹಿಂದಿನಿಂದ ಮುಂದೆಸಾಗಿದ್ದು)

ಹಿಂದಿನ ಸಂಚಿಕೆಯಲ್ಲಿ ನಾವು ಡಾ|| ಅಂಬೇಡಕರರು ಹಿಂದೂ ಧರ್ಮದ ಮೇಲಿನ ತಪ್ಪು ಆಕ್ಷೇಪಗಳನ್ನು “ ಮಹಾಬೋಧಿನಿ ” ಎಂಬ ಪತ್ರಿಕೆಯಲ್ಲಿ ವಿವರಿಸಿದ್ದನ್ನು ನಾವು ಉಲ್ಲೇಖಿಸಿದ್ದೇವೆ. ಅವುಗಳಲ್ಲಿ ಧರ್ಮಸ್ಥಾಪಕರು ತಾವು ದೇವರಿಂದ ಪ್ರೇರಿತರಾದವರೆಂದು ಹೇಳುತ್ತಿರುವದು ಒಂದು ಇರುತ್ತದೆ. ಇದು ಸರಿಯಾದುದಲ್ಲವೆಂದು ಡಾ|| ಅಂಬೇಡಕರರ ಅಭಿಪ್ರಾಯವು. ಇದು ಏನೇ ಇರಲಿ ಬಸವೇಶ್ವರನು ಮಾತ್ರ ತನ್ನನ್ನು ಕುರಿತು ಹೀಗೆ ಹೇಳಿಕೊಂಡಿಲ್ಲೆಂಬುದನ್ನು ಅದೇ ಸಂಚಿಕೆಯಲ್ಲಿ ನಾವು ವಿವರಿಸಿದ್ದೇವೆ. ಹಿಂದೂಧರ್ಮಕ್ಕೆ ನೀತಿಯು ತಳಹದಿಯಾಗಿಲ್ಲೆಂಬುದು ಡಾ|| ಅಂಬೇಡಕರರು ಮಾಡುವ ೨ ನೇ ಆಕ್ಷೇಪಣೆ ಇದೆ. ಆದರೆ ವೀರಶೈವ ಧರ್ಮಕ್ಕೆ ನೀತಿಯೇ ತಳಹದಿಯಾಗಿದೆಂದು ಅವರ ಅಸಂಖ್ಯ ವಚನಗಳಿಂದ ಸಿದ್ಧವಾಗುತ್ತದೆಂಬುದನ್ನು ನಾವು ಹಿಂದೆ ಸ್ಪಷ್ಟಪಡಿಸಿದ್ದೇವೆ. ಇವಲ್ಲದೆ ಅವರು ಹಿಂದೂಧರ್ಮದ ವಿಷಯವಾಗಿ ಇನ್ನೂ ಕೆಲವು ಆಕ್ಷೇಪಣೆಗಳನ್ನು ಮಾಡಿದ್ದು ಅವುಗಳನ್ನು ನಾವು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತ ಇವುಗಳು ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲವೆಂಬುವನ್ನು ಈ ಲೇಖದಲ್ಲಿ ವಿವೇಚಿಸಿದ್ದೇವೆ.

## ೩ ನೇ ಆಕ್ಷೇಪಣೆ.

ಹಿಂದೂ ಧರ್ಮದಲ್ಲಿ ಪೊವಾಡಗಳ ವಿವರಣೆಗಳು ಮಿತಿ ಮೀರಿ ಇದ್ದು ಇವು ಸಮಾಜದಲ್ಲಿ ಅಂಧಶ್ರದ್ಧೆಯನ್ನು ಹೆಚ್ಚಿಸುತ್ತವೆಂಬುದು ಡಾ|| ಅಂಬೇಡಕರರು ಮಾಡುವ ೩ ನೇ ಆಕ್ಷೇಪಣೆ ಇದೆ. ಆದರೆ ಶಿವಶರಣರ ಧರ್ಮದಲ್ಲಿ ಪೊವಾಡಗಳಿಗೆ ಇಂಬಿಲ್ಲ. ಅವರು ಪೊವಾಡಗಳನ್ನು ಮಾಡ

ಕೂಡದೆಂದು ಅವರ ಅಸಂಖ್ಯವಚನಗಳಿವೆ. ಅವರು ಆಕಾಶಗಮನ ಜಲಸ್ತಂಭ ಅಗ್ನಿಸ್ತಂಭ ಇಂಥ ಕೃತಿಗಳನ್ನು ನಿರಾಕರಣೆಮಾಡಿದ್ದಾರೆ. ಯೋಗಾಭ್ಯಾಸದ ಮೂಲಕ ಮನುಷ್ಯನು ತನ್ನ ಇಂದ್ರಿಯಗಳ ಸಾಮರ್ಥ್ಯವನ್ನು ಬೆಳಿಸಲು ಶಕ್ಯವಿದ್ದರೂ ಅವನು ಈ ರೀತಿಯ ಸಾಧನೆಗಳನ್ನು ಮಾಡಕೂಡದೆಂದು ಅವರು ಬಹು ಸ್ಪಷ್ಟವಾಗಿ ತಮ್ಮ ವಚನಗಳಲ್ಲಿ ನಿವೇದಿಸಿದ್ದಾರೆ. ಆದರೆ ಇವುಗಳ ಬದಲು ಮನುಷ್ಯನು ತನ್ನ ನಡೆ, ಸದ್ಗುಣಗಳು, ಧರ್ಮವೃತ್ತಿ, ಸದಾಚಾರ ಇವುಗಳನ್ನು ಹೆಚ್ಚಿಸಲು ಪದೇ ಪದೇ ಬೋಧಿಸುತ್ತಾರೆ ವೀರಶೈವ ಪುರಾಣಗಳಲ್ಲಿ ಶಿವಶರಣರ ಅಸಂಖ್ಯ ಚರಿತ್ರೆಗಳು ಇರುತ್ತವೆ ಅವುಗಳಲ್ಲಿ ಪವಾಡಗಳ ವರ್ಣನೆಗಳಿವೆ. ಆದರೆ ಅವೆಲ್ಲವು ಶಿವಶರಣರು ಗತಿಸಿಹೋದ ಬಳಿಕ ಅವರ ವಿಷಯವಾಗಿ ಭಕ್ತಿಭಾವವುಳ್ಳವರು ಅವರ ಮಹತ್ವವನ್ನು ಜನತೆಯಲ್ಲಿ ಹೆಚ್ಚಿಸುವದರ ಸಲುವಾಗಿ ಕಲ್ಪಿಸಿದವುಗಳಿರುತ್ತವೇ ಹೊರತು ಅವು ನಿಜವಾದ ಸಂಗತಿಗಳಲ್ಲ. ಯಾಕಂದರೆ ಪವಾಡಗಳನ್ನು ಮಾಡಕೂಡದೆಂದು ಶಿವಶರಣರ ಸ್ಪಷ್ಟಉಕ್ತಿಗಳಿರುತ್ತವೆ. ಆದ್ದರಿಂದ ಈ ಆಕ್ಷೇಪಣೆಯು ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲ.

## ೪ನೇ ಆಕ್ಷೇಪಣೆಯು.

ಹಿಂದೂ ಧರ್ಮದಲ್ಲಿ ವಿಧಿ ವಿಧಾನಗಳ ಆಚರಣೆಗಳೂ ಅನೇಕ ತರದ ಕರ್ಮಗಳೂ ತುಂಬಿಹೋಗಿದ್ದು ಇವು ಮನುಷ್ಯನ ವಿಕಾಸಕ್ಕೆ ಕಾರಣವಲ್ಲ, ಇಂಥವುಗಳು ಬುದ್ಧನ ಧರ್ಮದಲ್ಲಿ ಇರುವದಿಲ್ಲ, ಆದುದರಿಂದ ಹಿಂದೂ ಧರ್ಮವನ್ನು ಅನುಸರಿಸುವದರಿಂದ ಆವ ಪ್ರಯೋಜನವಿಲ್ಲವೆಂದು ಡಾ || ಅಂಬೇಡಕರರ ೪ನೇ ಆಕ್ಷೇಪಣೆ ಇದೆ ಇದು ಕೆಲಮಟ್ಟಿಗೆ ಬ್ರಾಹ್ಮಣ ಧರ್ಮಕ್ಕೆ ಅನ್ವಯಿಸಬಹುದು. ಯಾಕಂದರೆ ಅದರಲ್ಲಿ ಅಸಂಖ್ಯ ಕರ್ಮಗಳ ವಿವರಣೆಯು ಇದೆ. ಆದರೆ ಇದು ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲ. ವೀರಶೈವರು ಕರ್ಮಮಾರ್ಗವನ್ನು ತ್ಯಜಿಸಿದ್ದಾರೆ. ಬ್ರಾಹ್ಮಣರು ಆಚರಿಸುವ ಕರ್ಮಗಳನ್ನು ಅವರು ಬಹುಬಗೆಯಾಗಿ ಖಂಡಿಸಿದ್ದಾರೆ. ಆದರೆ ಈ ಕರ್ಮಗಳನ್ನು ಶಿವಶರಣರು ಹೊಡೆದು ಹಾಕಿ ಪರಿಶುದ್ಧವಾದ ತಮ್ಮ ಷಟ್‌ಸ್ಥಲ ಮಾರ್ಗವನ್ನು ಕಂಡುಹಿಡಿದು ಅದ

ರಂತೆ ಆಚರಿಸುತ್ತ ಬಂದಿದ್ದಾರೆ. ಈ ಮಾರ್ಗದಲ್ಲಿ ಭಕ್ತಿ, ಜ್ಞಾನ, ಯೋಗ ಇವುಗಳ ಸುಂದರವಾದ ಸಮ್ಮೇಲನವಿದೆ. ಇವುಗಳ ತಿಳವಳಿಕೆಯನ್ನು ಮಾಡಿಕೊಂಡು ಮನುಷ್ಯನು ಆಚರಿಸತಕ್ಕದ್ದು. ಇದರಲ್ಲಿ ಅಂಧ ಶ್ರದ್ಧೆ ಎಂಬುದಿಲ್ಲ. ಈ ಕ್ರಿಯೆಗಳ ಮೂಲಕ ಮನುಷ್ಯನು ತನ್ನ ಬಹಿರಂಗದ ಮತ್ತು ಅಂತರಂಗದ ಆಚರಣೆಗಳನ್ನು ಹೇಗೆ ಶುದ್ಧಗೊಳಿಸಬೇಕೆಂಬುದನ್ನು ಶಿವಶರಣರು ತಮ್ಮ ಉಕ್ತಿಗಳಲ್ಲಿ ಬಹು ಸ್ಪುಟವಾಗಿ ಹೇಳಿದ್ದಾರೆ. ಇವುಗಳಲ್ಲಿ ಮುಚ್ಚು ಮರೆಗಳೆಂಬುವು ಇಲ್ಲ. ಈ ವಿಷಯದಲ್ಲಿ ಶಿವಶರಣರ ಧರ್ಮವನ್ನು ಸರಿಗಟ್ಟುವಂಥ ಧರ್ಮವು ಹಿಂದುಸ್ತಾನ ದೇಶದಲ್ಲಿ ಕೆಲವು ಮಾತ್ರ ಇವೆ. ಆದುದರಿಂದ ಡಾ|| ಅಂಬೇಡಕರ ಇವರ ಈ ಆಕ್ಷೇಪಣೆಯು ಈ ವಿಷಯದಲ್ಲಿ ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲ.

## ೫ ನೆಯ ಆಕ್ಷೇಪಣೆಯು.

ಹಿಂದೂಧರ್ಮವು ಚಾತುರ್ವರ್ಣಗಳನ್ನು ಕಲ್ಪಿಸಿ ಸಮಾಜದಲ್ಲಿ ಉಚ್ಚನೀಚವೆಂಬ ಸಂಕುಚಿತ ವೃತ್ತಿಯನ್ನು ಉಂಟುಮಾಡಿದೆ ಇದರಿಂದ ಸಮಾಜಕ್ಕೆ ಅದು ಅತ್ಯಂತ ಹಾನಿಯನ್ನು ಮಾಡಿದೆ. ಈ ಕಾರಣಕ್ಕೋಸ್ಕರ ಕೆಳಗಿನ ವರ್ಗದವರು ಉನ್ನತ ಸ್ಥಿತಿಗೆ ಬರದಂತೆ ಆಗಿದೆ. ಅಸ್ಪೃಶ್ಯರೆನಿಸಿಕೊಳ್ಳುವವರ ಸುಧಾರಣೆಗೆ ಈ ವಿಚಾರಗಳು ತಡೆಯನ್ನುಂಟುಮಾಡಿರುತ್ತವೆ. ಹಿಂದೂಧರ್ಮದ ಮೇಲೆ ದೊಡ್ಡ ಮತ್ತು ಮಹತ್ವದ ಆಕ್ಷೇಪಣೆಯು ಇದಾಗಿರುತ್ತದೆಂದು ಡಾ|| ಅಂಬೇಡಕರರವರು ತಮ್ಮ ಲೇಖದಲ್ಲಿ ಬಹು ವಿಸ್ತಾರವಾಗಿ ಹೇಳಿದ್ದಾರೆ.

ಈ ಆರೋಪವು ನಿಜವಾಗಿರುತ್ತದೆಂದು ಎಲ್ಲ ಹಿಂದುಗಳು ಒಪ್ಪತಕ್ಕ ಸಂಗತಿಯಾಗಿದೆ. ಇದರಿಂದ ಹಿಂದೂ ಸಮಾಜದಲ್ಲಿ ಭಿನ್ನತೆಗಳುಂಟಾಗಿ, ಅದರ ಪ್ರಗತಿಗೆ ಹಾನಿಯಾಗಿರುತ್ತದೆಂಬುದು ನಿರ್ವಿವಾದವು. ಇದು ಹಿಂದೂ ಸಮಾಜಕ್ಕೆ ಸಾಮಾನ್ಯವಾಗಿ ಅನ್ವಯಿಸಿದರೂ ಇದು ವೀರಶೈವ ಸಮಾಜಕ್ಕೆ ಮಾತ್ರ ಅನ್ವಯಿಸುವದಿಲ್ಲ. ವೀರಶೈವ ಧರ್ಮವು ಚಾತುರ್ವರ್ಣಗಳನ್ನು ಒಪ್ಪಿಕೊಳ್ಳುವದಿಲ್ಲ. ಸ್ತ್ರೀಪುರುಷರೆಲ್ಲ ಸಮಾನರೆಂಬ ವಿಚಾರಗಳನ್ನು ಅದು ಯಾವಾಗಲೂ ಪ್ರಸ್ಥಾಪಿಸುತ್ತ ಬಂದಿದೆ. ಈ ವಿಷಯವಾಗಿ ನಾವು ಅಸಂಖ್ಯ ಉಕ್ತಿಗಳನ್ನು ಉದಹರಿಸಬಹುದು.

ಈ ಪ್ರಕಾರ ಶಿವಶರಣರು ಅಸ್ಪೃಶ್ಯರು ಸಹ ಉಚ್ಚವರ್ಣದವರಿಗೆ ಸರಿ ಸಮಾನರೆಂದು ಪ್ರತಿಪಾದಿಸುತ್ತ ಬಂದಿದ್ದಾರೆ. ಇಷ್ಟೇ ಅಲ್ಲ, ಅವರು ಈ ತತ್ವವನ್ನು ಪ್ರಚಾರದಲ್ಲಿ ಸಹ ತಂದಿರುತ್ತಾರೆ. ಅಸ್ಪೃಶ್ಯರ ಕೂಡ ಇತರೇ ಸಮಾಜದವರು ಊಟಉಪಚಾರ ಲಗ್ನಾದಿ ವ್ಯವಹಾರಗಳನ್ನು ಸಹ ಮಾಡಿದ್ದರ ಉದಾಹರಣೆಗಳು ವೀರಶೈವ ಸಮಾಜದಲ್ಲಿ ಅನೇಕ ಇರುತ್ತವೆ. ವೀರಶೈವ ಸಮಾಜದವರು ಈ ವಿಷಯದಲ್ಲಿ ಹೇಗೆ ವ್ಯವಹರಿಸಿದರೋ ಹಾಗೆ ಬೇರೆ ಸಮಾಜಗಳಲ್ಲಿಯುವರು ವ್ಯವಹರಿಸಿರಲಿಕ್ಕಿಲ್ಲ ಆದರೆ ಹಿಂದೂ ಧರ್ಮದಲ್ಲಿ ಜಾತಿಭೇದವನ್ನು ನಿರಾಕರಿಸಿ ವರ್ತಿಸಿದ ಸಮಾಜಗಳು ಕೆಲವಾದರೂ ಇವೆ, ಎಂಬಸಂಗತಿಯು ಮಹತ್ವದ್ದದೆ. ಸಮಾಜದಲ್ಲಿ ಅನೇಕ ಕಾರಣಗಳಮೂಲಕ ದೋಷಗಳು ಉಂಟಾಗಿರಬಹುದು. ಆದರೆ ಅವುಗಳನ್ನು ನಿವಾರಣೆ ಮಾಡುವದಕ್ಕೆ ನಾವು ಪ್ರಯತ್ನಿಸತಕ್ಕದ್ದೇ ಹೊರ್ತು ಸಮಾಜವನ್ನೇ ಬಿಟ್ಟುಕೊಡುವದು ಯೋಗ್ಯವಾಗಲಾರದು. ಈ ರೀತಿಯಾಗಿ ಡಾ॥ ಅಂಬೇಡಕರರು ವರ್ತಿಸಿದ್ದು ಶೋಚನೀಯವಾಗಿರುತ್ತವೆ.

## ೬ನೇ ಆಕ್ಷೇಪಣೆಯು.

ಡಾ॥ ಅಂಬೇಡಕರರವರು ಹಿಂದೂ ಜನರಲ್ಲಿರುವ ಸನ್ಯಾಸಿಗಳು ಮತ್ತು ಬೌದ್ಧ ಸಮಾಜದಲ್ಲಿರುವ ಭಿಕ್ಕು (ಭಿಕ್ಷು) ಗಳು ಇವರಲ್ಲಿ ತುಲನೆ, ಮಾಡಿ ಬೌದ್ಧ ಸನ್ಯಾಸಿಗಳಿಗಿರುವ ನಿಯಮಗಳು ಸರಿಯಾದವುಗಳು ಆದರೆ ಹಿಂದೂ ಸಮಾಜದಲ್ಲಿರುವ ಸನ್ಯಾಸಿಗಳು ಪಾಲಿಸಬೇಕಾದ ನಿರ್ಬಂಧಗಳು ಅಯೋಗ್ಯವಾದವುಗಳು, ಇವು ಪ್ರತಿಗಾಮಿ ಸ್ವರೂಪದವೆಂದು ಪ್ರತಿಪಾದಿಸಿದ್ದಾರೆ. ಬೌದ್ಧ ಸನ್ಯಾಸಿಗಳು ಸನ್ಯಾಸವ್ರತವನ್ನು ಸ್ವೀಕರಿಸಿದ ಬಳಿಕ ಅವರು ಇಚ್ಛಿಸಿದಲ್ಲಿ ಈ ವ್ರತವನ್ನು ಹಿಂದುಗಡೆ ಬಿಟ್ಟುಕೊಟ್ಟು ವ್ಯವಹಾರವನ್ನು ಸೇರಬಹುದೆಂದು. ನಿಯಮವಿವೆ. ಈ ನಿಯಮವನ್ನು ಡಾ॥ ಅಂಬೇಡಕರು ಶ್ಲಾಘಿಸುತ್ತಾರೆ. ಇದರಿಂದ ಧಾರ್ಮಿಕ ವರ್ಗದವರು ಸುಶೀಲರಾಗಿ ಉಳಿಯುವರೆಂದು ಅವರ ಅಭಿಪ್ರಾಯವಿರುತ್ತದೆ. ಅವರು ಪ್ರತಿಪಾದಿಸುವ ಈ ವಿಚಾರಗಳಲ್ಲಿ ಸತ್ಯಾಂಶವು ಇದೆ ಎಂಬುದನ್ನು ನಾವು ಒಪ್ಪತಕ್ಕ ಸಂಗತಿಯಾಗಿದೆ. ಇಂಥ ಪದ್ಧತಿಯು ಅನುಸರಿಸಲು ಯೋಗ್ಯವೆಂದು ಬಹು ಜನರ ಅಭಿಪ್ರಾಯವೂ ಇದೆ.

ವೀರಶೈವರಲ್ಲಿ ಪೂರ್ವಕಾಲದಲ್ಲಿ ಆಗಿಹೋದ ಆಚಾರ್ಯರು ಲಗ್ನವಾದವರಿದ್ದುದು ತಿಳಿದು ಬರುತ್ತದೆ. ರೇವಣಸಿದ್ಧ, ಪಂಡಿತಾರಾಧ್ಯ ಇವರು ಲಗ್ನವಾದವರಿದ್ದರು. ಆದರೂ ಅವರ ಉಚ್ಚಸ್ಥಿತಿಗೆ ಅವರು ಲಗ್ನವಾದುದು ಬಾಧೆಯನ್ನು ಉಂಟು ಮಾಡಲಿಲ್ಲ, ಅಷ್ಟೇ ಅಲ್ಲ, ಅವರ ಮಕ್ಕಳಿಗೂ ಉಚ್ಚ ಧಾರ್ಮಿಕಸ್ಥಾನವು ಉಂಟಾಯಿತು. ಆದರೂ ಸಮಾಜವು ಅವರ ಅವಹೇಲನೆ ಮಾಡಿದ್ದು ಕಂಡು ಬರುವದಿಲ್ಲ. ರೇವಣಸಿದ್ಧೇಶ್ವರನ ಮಗನಾದ ರುದ್ರಮುನಿಯು ವೀರಶೈವ ಶಿವಶರಣರಲ್ಲಿ ಉಚ್ಚಸ್ಥಾನವನ್ನು ಹೊಂದಿದ್ದಾನೆ. ಹಾಗೆಯೇ ಪಂಡಿತಾರಾಧ್ಯನ ಮಕ್ಕಳೂ ಅವನ ಸ್ಥಾನವನ್ನು ಹೊಂದಿ ಪೂಜ್ಯರೆನಿಸಿಕೊಂಡರು. ದೇವರ ದಾಸಿಮಯ್ಯ ಬಸವೇಶ್ವರ ಮೊದಲಾದ ಮಹಾನುಭಾವರು ಲಗ್ನವಾದವರಾಗಿದ್ದರು. ಆದರೂ ಅವರ ಧಾರ್ಮಿಕ ಸ್ಥಾನಕ್ಕೆ ಸಮಾಜದಲ್ಲಿ ಯಾವ ಚ್ಯುತಿಯೂ ಉಂಟಾಗಿರುವದಿಲ್ಲ. ಆದರೆ ಈಚೀಚೆಗೆ ವೀರಶೈವ ಸಮಾಜವಲ್ಲಿ ಬ್ರಾಹ್ಮಣ ಸಮಾಜದ ಅನುಕರಣವು ಉಂಟಾಗಹತ್ತಲು ಬ್ರಾಹ್ಮಣರಲ್ಲಿರುವ ಮಠಗಳ ವಿಷಯವಾಗಿ ಇರುವ ಪದ್ಧತಿಗಳು ವೀರಶೈವ ಸಮಾಜವಲ್ಲಿಯೂ ರೂಢವಾಗಹತ್ತಿದವು. ಈಚೀಚೆಗೆ ವಿರಕ್ತಾಶ್ರಮಿಗಳು ಬಾಲಬ್ರಹ್ಮಚಾರಿಗಳಾಗಿರಬೇಕೆಂಬ ತತ್ವವು ಸಮಾಜದಲ್ಲಿ ಎಲ್ಲರಿಗೆ ಗ್ರಾಹ್ಯವಾಗಿ ಅದು ಪಾಲಿಸಲ್ಪಡಹತ್ತಿತು. ಆದರೆ ಇದರಿಂದ ಅನೇಕ ಸ್ವೈರ ವೃತ್ತಿಗಳು ಮಠಾಧಿಕಾರಿಗಳಲ್ಲಿ ಉಂಟಾಗಿರುವದು ಕಂಡು ಬರುತ್ತದೆ. ಡಾ|| ಅಂಬೇಡಕರ ಇವರು ಪ್ರತಿಪಾದಿಸಿದಂತೆ ಈಚೆಗೆ ಬಂದ ಇಂಥ ರೂಢಿಯನ್ನು ತೆಗೆದು ಹಾಕಿ ಆರಂಭ ಕಾಲದಲ್ಲಿದ್ದ ರೂಢಿಯನ್ನು ವ್ಯವಹಾರದಲ್ಲಿ ತಂದರೆ ಸಮಾಜದಲ್ಲಿ ಶುದ್ಧತೆಯು ಉಳಿಯುವದರಲ್ಲಿ ಸಂದೇಹವಿರಲಾರದು.

## ೭ನೇ ಆಕ್ಷೇಪಣೆಯು.

ಹಿಂದೂ ಧರ್ಮದಲ್ಲಿ ಒಬ್ಬ ಮನುಷ್ಯನು ಪರಬ್ರಹ್ಮತ್ವವನ್ನು ಹೊಂದಬಹುದೆಂಬ ತತ್ವವಿದ್ದು ಇದನ್ನು ಡಾ || ಅಂಬೇಡಕರವರು ಬಹಳ ಆಕ್ಷೇಪಿಸಿರುವರು. ಇದರಿಂದ ಧರ್ಮವು ಉಳಿಯಲಾರದೆಂದು ಅವರ ತಿಳಿವಳಿಕೆಯಾಗಿದೆ. ಆದರೆ ಈ ತತ್ವದ ವಿಷಯವಾಗಿ ಹಿಂದೂ ಧರ್ಮ ಮತ್ತು ಬೌದ್ಧ ಧರ್ಮ ಇವುಗಳಲ್ಲಿ ಸಂಪೂರ್ಣ ವ್ಯತ್ಯಾಸವಿದೆ. ಪರಮಾತ್ಮನಲ್ಲಿ ಬೆರೆಯುವದೇ ಅಥವಾ ಅವನ ಸಾನ್ನಿಧ್ಯವನ್ನು ಹೊಂದುವದೇ ಎಲ್ಲ

ಹಿಂದುಗಳ ಅಂತಿಮಧ್ಯೇಯವಾಗಿದೆ. ಈ ತತ್ವದ ವಿಷಯವಾಗಿ ಅಸಂಖ್ಯ ಗ್ರಂಥಗಳು ಹಿಂದೂ ತತ್ವಜ್ಞಾನಿಗಳಿಂದ ಬರೆಯಲ್ಪಟ್ಟಿರುತ್ತವೆ. ಅವರು ಅದ್ವೈತ ಅಥವಾ ವಿಶಿಷ್ಟಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತ ಹೀಗೆ ಕೆಲವೊಂದು ಬಗೆಯ ಅದ್ವೈತವನ್ನು ಸ್ವೀಕರಿಸಿರುತ್ತಾರೆ. ಅದ್ವೈತವಿರದಿದ್ದರೂ ಮಾಧ್ವಮತದಂತೆ ಸಾಮಿಪ್ಯವನ್ನಾದರೂ ಮನುಷ್ಯನು ಹೊಂದುವನೆಂದು ಹಿಂದೂ ಶಾಸ್ತ್ರಕಾರರು ನಿರ್ಧರಿಸಿರುತ್ತಾರೆ. ಇದರಿಂದ ಹಿಂದೂ ಸಮಾಜದಮೇಲೆ ಮಹತ್ವದ ಪರಿಣಾಮಗಳಾಗಿರುತ್ತವೆ. ಅವುಗಳಲ್ಲಿ ಮುಖ್ಯವಾದುದು ಎಲ್ಲ ಹಿಂದುಗಳು ಪ್ರಗತಿಯ ಕಡೆಗೆ ಅರ್ಥಾತ್ ಪರಮಾತ್ಮನ ಕಡೆಗೆ ಧಾವಿಸ ಹತ್ತಿದ್ದಾರೆ. ವೀರಶೈವರಾದರೂ ಇದೇ ಮಾರ್ಗವನ್ನು ಅನುಸರಿಸಿದ್ದಾರೆ. ಲಿಂಗದಲ್ಲಿ ಬೆರೆಯಬೇಕೆಂತಲೇ ಅವರ ಮುಖ್ಯಧ್ಯೇಯವಾಗಿದೆ. ಈ ಧ್ಯೇಯದ ಮೂಲಕ ಅವರು ಸದಾಚಾರಿಗಳಾಗಿ ವರ್ತಿಸಲು ಮನಗೊಳ್ಳುತ್ತಾರೆ. ಸದಾಚಾರಿಗಳಾಗದಿದ್ದರೆ ಪರಮಾತ್ಮನಿಗೆ ಸಲ್ಲರೆಂದು ಅವರು ತಿಳಿದಿದ್ದಾರೆ. ಇದರಲ್ಲಿ ಡಾ॥ ಅಂಬೇಡಕರರವರು ತಪ್ಪುದಾರಿಯನ್ನು ಹಿಡಿದಿದ್ದಾರೆಂದು ನಮಗೆ ತೋರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಅವರು ಆಚರಿಸಿದಲ್ಲಿ ಅವರು ಹಿಂದೂ ಸಂಸ್ಕೃತಿಯನ್ನು ಪೂರ್ಣವಾಗಿ ಬಿಟ್ಟಂತೆಯೇ ಆಗುತ್ತದೆ. ಆದರೆ ಈ ತೆರದ ಒಲವು ಹಿಂದುಸ್ತಾನದಲ್ಲಿ ಈಗ ಉಂಟಾಗಿರುವ ಧಾರ್ಮಿಕವಾತಾವರಣದಲ್ಲಿ ಎಂದಿಗೂ ಫಲಿಸಲಾರದು. ಇದನ್ನು ಡಾ॥ ಅಂಬೇಡಕರರೂ ಅವರ ಅನುಯಾಯಿಗಳೂ ವಿಚಾರಮಾಡಿ ತಮ್ಮ ಹೆಜ್ಜೆಯನ್ನಿಡುವದು ಬಹು ಅವಶ್ಯಕವಾಗಿರುತ್ತದೆ.

ಈ ಪ್ರಕಾರ ಡಾ॥ ಅಂಬೇಡಕರರವರ ಆಕ್ಷೇಪಣೆಗಳು ಹಿಂದೂ ಸಮಾಜದ ಮೇಲೆ ಇದ್ದು ಇವುಗಳಲ್ಲಿ ಬಹುತರ ಯಾವವೂ ವೀರಶೈವ ಧರ್ಮಕ್ಕೆ ಅನ್ವಯಿಸುವದಿಲ್ಲ. ವೀರಶೈವರು ಬೌದ್ಧರಂತೆ ಉದಾರ ಮತವುಳ್ಳವರಾಗಿ ವರ್ತಿಸಿರುತ್ತಾರೆ ಆದರೆ ಅವರ ಪ್ರಾಪಂಚಿಕ ವಿಚಾರಗಳು ಮಾತ್ರ ಬೌದ್ಧರ ಸಿದ್ಧಾಂತವನ್ನು ಹೋಲುತ್ತವೆ. ಆದರೆ ದೇವರ ವಿಷಯವಾಗಿ ಉಭಯ ಧರ್ಮಗಳಲ್ಲಿ ಮತಭೇದವಿರುವದರಿಂದ ಅವುಗಳಲ್ಲಿ ಏಕ ವಾಕ್ಯತೆಯುಂಟಾಗಿರುವದಿಲ್ಲ.

---

# ಶಿವಾನುಭವ ಪತ್ರಿಕೆಯ ಕಾರ್ಯಗಳು.

**ಸಟೀಕ ಬಸವೇಶ್ವರನ ವಚನಗಳು** :— ಬಸವೇಶ್ವರನ ವಚನಗಳಿಗೆ ಆಧುನಿಕ ಭಾಷೆಯಲ್ಲಿ ಟೀಕೆಯನ್ನು ಬರೆಯುವ ಕಾರ್ಯವನ್ನು ನಾವು ಮುಂದವರಿಸುತ್ತ ಇದ್ದೇವೆ. ಅದರ ೧ನೇಯ ಭಾಗವನ್ನು ಶೀಘ್ರವಾಗಿ ಮುಗಿಸಬೇಕೆಂದು ಇಚ್ಛಿಸಿದ್ದೇವೆ. ನಾವು ಹಿಂದಿನ ಸಂಚಿಕೆಯಲ್ಲಿ ಇದಕ್ಕೋಸ್ಕರ ಸಹಾಯಧನವನ್ನು ಕೋರಿದ್ದೆವು. ಅದಕ್ಕನುಸರಿಸಿ ಶ್ರೀಮತಿ ಭಾಗೀರಥಿದೇವಿ ಸಿದ್ಧಬಸಪ್ಪ ಗಿಡ್ನವರ ಇವರು ೧೧ ರೂಪಾಯಿ ಶ್ರೀಯುತ ಸಿದ್ಧಬಸಪ್ಪ ಗಿಡ್ನವರ ಬಿ. ಏ. ಮಾಮಲೇದಾರರು ವಿಜಾಪೂರ ಇವರು ೧೧ ರೂ|| ಮತ್ತು ವೀರಶೈವ ತರುಣ ಸಂಘ ಚೋಳಚಗುಡ್ಡ ಇದರ ಪತಿಯಿಂದ ವೇ. ಮೂ ಚಂದ್ರಶೇಖರಯ್ಯ ಮಠ ಇವರು ೨೫ ರೂಪಾಯಿಗಳನ್ನು ನಮ್ಮ ಕಡೆಗೆ ಕಳಿಸಿದ್ದಾರೆ. ಇದಕ್ಕೋಸ್ಕರ ನಾವು ಈ ಎಲ್ಲ ಮಹನೀಯರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಇದರಲ್ಲಿ ವೇ ಮೂ ಚಂದ್ರಶೇಖರಯ್ಯನವರು ಕೆಳಗೆ ಕಾಣಿಸಿದಂತೆ ನಮಗೆ ಉತ್ತರವನ್ನು ಬರೆದಿದ್ದು ಅದರಲ್ಲಿ ಅವರು ಕೆಲವು ಉಪಯುಕ್ತ ಸೂಚನೆಗಳನ್ನು ಮಾಡಿದ್ದಾರೆ ವೀರಶೈವ ಮಹಾಜನರು ಅವುಗಳನ್ನು ಲಕ್ಷಿಸುವರೆಂದು ಹಾರೈಸಿದ್ದೇವೆ.

## ಸಟೀಕ ಶ್ರೀ. ಬಸವಣ್ಣನವರ ವಚನಗಳು.

ರಾ || ಬ || ಫ. ಗು. ಹಳಕಟ್ಟಿ ವಕೀಲರು ತಮ್ಮ ಶಿವಾನುಭವದ ೧೯೩೦ನೇ ಅಗಷ್ಟ ಸಂಚಿಕೆಯ "ಟೀಕೆ ಟಿಪ್ಪಣಿ" ಯಲ್ಲಿ ಸಟೀಕ ಬಸವೇಶ್ವರ ವಚನ ಗ್ರಂಥವನ್ನು ಅಚ್ಚುಹಾಕುವ ಸ್ತುತ್ಯ ಕಾರ್ಯವನ್ನು ಕೈಕೊಳ್ಳುವ ಬಗ್ಗೆ ಪ್ರಸಿದ್ಧಿಸಿದ್ದು ನೋಡಿ ಯಾರಿಗೆ ಸಂತೋಷವಾಗಲಿಕ್ಕಿಲ್ಲ? ವೀರಶೈವ ಧರ್ಮಜ್ಯೋತಿ ಸ್ವರೂಪದಂತಿರುವ ಬಸವಣ್ಣನವರ ಹೃದಯವನ್ನು ಅರಿತು ಅನುಭವಿಸಿ ಆನಂದವನ್ನು ಹೊಂದಲು ಅವರ ವಚನಗಳೇ ನಮಗೆ ಸಾಧನ ಸಂಪತ್ತಲ್ಲದೆ ಬೇರೊಂದಿಲ್ಲ. ಇವರ ವಚನಗಳನ್ನು ಅಭ್ಯಸಿಸಿ ಅರಿತು ಆಚರಿಸುವದಕ್ಕೆ ಸಟೀಕ ವಚನಗಳು ಬಹು

ಉಪಯುಕ್ತವಾಗದೆ ಇರದು. ಆದ್ದರಿಂದ ಇಂಥ ದೊಡ್ಡ ಗ್ರಂಥವನ್ನು ಅಚ್ಚು ಹಾಕಿಸಿ ಪಂಡಿತ ಪಾಮರರ ಕೈಗೆ ಬರುವಂತೆ ಸುಗಮ ಮಾಡುವ ಕಾರ್ಯವು ಸಮಾಜ ಹಿತೈಷಿಗಳ ಮತ್ತು ಆಧ್ಯಾತ್ಮ ಜೀವಿಗಳ ಮೇಲೆ ಹೆಚ್ಚಾದ ಹೊಣೆಯದೆ ಎಂಬದನ್ನು ಮರಿಯತಕ್ಕದ್ದಲ್ಲ.

ನಮ್ಮ ಸಮಾಜದಲ್ಲಿ ಶಿವಾನುಭವ ಸಂಘ, ಅಕ್ಕನ ಬಳಗ, ವೀರ ಶೈವ ತರುಣಸಂಘ, ಮೊದಲಾದ ಸಂಘಗಳಿದ್ದು ಅವು ತಮ್ಮ ಕಾರ್ಯವನ್ನು ನಿರ್ವಹಿಸುತ್ತಲಿವೆ. ಆಯಾ ಸಂಘಗಳು ತಮ್ಮ ಸಂಘಗಳಿಂದ ದೇಣಿಗೆ ಗಳನ್ನು ಕಳಿಸುವದಲ್ಲದೆ, ತಮ್ಮ ಗ್ರಾಮದಲ್ಲಿ ಮತ್ತು ತಮ್ಮ ಪರಿಚಿತರಲ್ಲಿ ಪ್ರಚಾರ ಮಾಡಿ ದೇಣಿಗೆಗಳನ್ನು ಕೂಡಿಸಿ ಕಳಿಸುವ ಕಾರ್ಯವನ್ನು ಬಹು ಆಸ್ಥೆಯಿಂದ ಮಾಡತಕ್ಕದ್ದು. ಈಗ ಅನಾಯಾಸವಾಗಿ ಶ್ರಾವಣ ಮಾಸ ಇರುವದರಿಂದ ಪುರಾಣ ಪ್ರವಚನ ಪ್ರಸ್ತಗಳಿಗೆ ಸಹಜವಾಗಿ ಪಟ್ಟೀ ಮಾಡುವರು. ತಮ್ಮಲ್ಲಿಯ ಪುರಾಣ ಪಟ್ಟಿಯು ಪ್ರಮಾಣಕ್ಕನು ಸರಿಸಿ ವಸೂಲಾದ ಹಣದಲ್ಲಿ ೧೦೦ ರೂಪಾಯಿ, ೫೦ ರೂಪಾಯಿ ಕನಿಷ್ಟ ಪಕ್ಷಕ್ಕೆ ೨೫ ರೂಪಾಯಿಗಳನ್ನಾದರೂ ದೇಣಿಗೆ ಕಳಿಸಬೇಕು. ಅಂದರೆ ಈ ವರ್ಷದ ಶ್ರಾವಣಮಾಸದ ಆಚರಣೆಯು ಯಥಾಯೋಗ್ಯವಾಗುವದ ಲ್ಲದೆ ಶಿವಶರಣರ ಕೃಪೆಗೂ ಪಾತ್ರರಾಗುವರು. ಆದ್ದರಿಂದ ಈ ಗ್ರಂಥವು ತೀವ್ರ ಅಚ್ಚು ಆಗುವ ಸುಸಂಧಿಯನ್ನು ಕಳೆದುಕೊಳ್ಳದೆ, ಸಮಾಜ ಬಂಧುಗಳು ಉದಾರ ಹೃದಯ ವುಳ್ಳವರಾಗಿ ದೇಣಿಗೆಗಳನ್ನು ನಾ ಮುಂದೆ ನೀ ಮುಂದೆ ಎಂದು ತಮ್ಮ ಶಕ್ತ್ಯಾನುಸಾರ ಸಲ್ಲಿಸಿ ಈ ಪವಿತ್ರ ಕಾರ್ಯವು ತೀವ್ರವಾಗಿ ಕೈಗೂಡುವಂತೆ ಶ್ರೀಮಾನ್ ಹಳಕಟ್ಟಿಯವರನ್ನು ಪ್ರೋತ್ಸಾ ಹಿಸುವರೆಂದು ವೀರಶೈವರಲ್ಲಿ ವಿಜ್ಞಾಪಣೆಗಳು.

ನಮ್ಮ ವೀರಶೈವ ತರುಣಸಂಘದಿಂದ ಶಿವಾನುಭವ ಸಂಪಾದಕರಿಗೆ ೨೫ ರೂಪಾಯಿ ದೇಣಿಗೆ ಕಳಿಸಿದ್ದು ಸ್ವೀಕರಿಸಬೇಕಾಗಿ ವಿನಂತಿ.

ಚಂದ್ರಶೇಖರಯ್ಯ. ಶಿವರುದ್ರಯ್ಯ ಮಠ.
ಗೌ. ಕಾರ್ಯದರ್ಶಿ
ಚೊಳಚಗುಡ್ಡ ವೀರಶೈವ ತರುಣಸಂಘ.
ತಾ. ಬದಾಮಿ.

**ಸಿದ್ಧರಾಮೇಶ್ವರನ ವಚನಗಳು:**— ಬಸವೇಶ್ವರನ ವಚನಗಳಂತೆಯೇ ಶ್ರೀ ಸಿದ್ಧರಾಮೇಶ್ವರನ ವಚನಗಳು ಬಹು ಮಹತ್ವದವಾಗಿವೆ. ಇವುಗಳನ್ನು ಸಹ ಪ್ರಸಿದ್ಧಿಸುವ ಕಾರ್ಯವನ್ನು ನಾವು ಕೈಕೊಂಡಿದ್ದೇವೆ. ಈ ವಚನಗಳನ್ನು ಅಚ್ಚುಹಾಕುವ ಕಾರ್ಯವನ್ನು ಸೊಲ್ಲಾಪುರದ ಶ್ರೀ. ಸಿದ್ಧರಾಮೇಶ್ವರ ದೇವಾಲಯದ ಟ್ರಸ್ಟ ಮಂಡಳಿಯವರು ಕೈಕೊಳ್ಳಬೇಕೆಂದು ಅಲ್ಲಿ ಕೂಡಿದ್ದ ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ನಿರ್ಣಯವಾಗಿರುತ್ತದೆ. ಇಂಥ ಮಹತ್ವದ ಸಂಸ್ಥೆಯವರು ಈ ಕಾರ್ಯಕ್ಕೆ ಬೆಂಬಲವನ್ನು ಇತ್ತರೆ ಈ ಕೆಲಸವಾದರೂ ತೀವ್ರವಾಗಿ ಜರಗುವದರಲ್ಲಿ ಸಂದೇಹವಿರಲಾರದು.

**ಶಿವಶರಣರ ಚರಿತ್ರೆಗಳು ಭಾಗ ೩:**— ಈ ಗ್ರಂಥವಾದರೂ ಮುಗಿಯಲಿಕ್ಕೆ ಬಂದಿದ್ದು ಅದರ ಅಂತ್ಯ ಭಾಗದಲ್ಲಿ 'ಜಂಗಮರು' ಪುರಾತನ ಕಾಲದಲ್ಲಿ ಹೇಗೆ ಧರ್ಮಾಭಿವೃದ್ಧಿಯ ಕಾರ್ಯದಲ್ಲಿ ಸಮಾಜದವರಿಗೆ ಸಹಾಯ ಮಾಡುತ್ತಿದ್ದರೆಂಬುದನ್ನು ಸುವಿಸ್ತಾರವಾಗಿ ಬರೆಯುವವರಿದ್ದೇವೆ. ಇದು ಪೂರ್ಣವಾಗದ್ದರಿಂದ ಈ ಗ್ರಂಥವನ್ನು ನಾವು ಈ ಸಂಚಿಕೆಯಲ್ಲಿ ಮುಂದುವರಿಸಿಲ್ಲ. ಆದರೆ ಅದನ್ನು ನಾವು ಮುಂದಿನ ಸಂಚಿಕೆಯಲ್ಲಿ ಪೂರ್ಣ ಮಾಡಿ ಈ ಭಾಗವನ್ನು ಮುಗಿಸುವೆವು. ಆಮೇಲೆ ನಾವು ೪ನೇ ಭಾಗವನ್ನು ಪ್ರಾರಂಭಿಸುವೆವು ಅದರಲ್ಲಿ ಬಸವೇಶ್ವರನ ಸಮಕಾಲೀನರಾದ ಮತ್ತು ಅವನಿಗೆ ಮಹತ್ವದ ಸಹಾಯವನ್ನು ಮಾಡಿದವರಾದ ಶಿವಶರಣರ ಚರಿತ್ರೆಗಳನ್ನು ಕೊಡುವೆವು. ಅವರು ಅಲ್ಲಮಪ್ರಭು, ಮಹಾದೇವಿಯಕ್ಕ, ಚನ್ನಬಸವ, ಕಿನ್ನರೀ ಬೊಮ್ಮಯ್ಯ ಇವರೇ ಮೊದಲಾದವರು ಇದ್ದಾರೆ. ಈ ಚರಿತ್ರೆಗಳ ತರುವಾಯ ಬಸವೇಶ್ವರನ ಚರಿತ್ರೆಯನ್ನು ಬರೆಯುವೆವು.

**ಶೂನ್ಯ ಸಂಪಾದನೆ:**— ಇದರಲ್ಲಿ ಷಟ್‌ಸ್ಥಲ ತತ್ವಗಳ ವಿವೇಚನೆಗಳು ಪೂರ್ಣವಾಗಿ ಬಂದಿರುತ್ತವೆ. ಅವುಗಳನ್ನು ನಾವು ಆಧುನಿಕ ಭಾಷೆಯಲ್ಲಿ ಬರೆಯುವ ಕಾರ್ಯವನ್ನು ಕೈಕೊಂಡಿದ್ದೇವೆ. ಹೇಗೆ ವಚನಶಾಸ್ತ್ರಸಾರ ಭಾಗ ೨ ಮತ್ತು ೩ ಇವುಗಳನ್ನು ಆಧಾರವಾಗಿಟ್ಟುಕೊಂಡು

ಶಿವಾನುಭವ ಶಬ್ದಕೋಶ ' ವನ್ನು ರಚಿಸಿದೆವೋ ಹಾಗೆಯೇ ಈ ಗ್ರಂಥವನ್ನು ರಚಿಸಬೇಕೆಂದು ಮಾಡಿದ್ದೇವೆ. ಇದಾದರೂ ಶಬ್ದಕೋಶದಂತೆಯೇ ಮಹತ್ವದ ಗ್ರಂಥವಾಗುವದೆಂದು ಭಾವಿಸಿದ್ದೇವೆ.

**ಮುಗಿದುಹೋದ ಗ್ರಂಥಗಳ ಪುನರ್ಮುದ್ರಣಃ—**

ಈಚಿಗೆ ಬಹುವ ಜನರು ವಚನ ಗ್ರಂಥಗಳನ್ನು ಅಭ್ಯಾಸಮಾಡಬೇಕೆಂದು ಅವುಗಳನ್ನು ಕಳಿಸಲು ನಮಗೆ ಪತ್ರ ಬರೆಯುತ್ತಿದ್ದಾರೆ. ಆದರೆ ಅವು ಈಗ ದೊರೆಯುವದಿಲ್ಲೆಂದು ನಾವು ಅವರಿಗೆ ವಿಷಾದ ಪೂರ್ವಕವಾಗಿ ಬರೆಯಬೇಕಾಗಿದೆ. ಈಗಿನ ಕಾಲದಲ್ಲಿ ಪುನರ್ಮುದ್ರಣವು ಬಹು ಖರ್ಚಿನದಾಗಿದೆ. ಈಗ ನಾವು ಬಸವೇಶ್ವರರ ವಚನಗಳು ಮತ್ತು ಮಹಾದೇವಿಯಕ್ಕನ ವಚನಗಳು ಇವುಗಳ ಮುದ್ರಣವನ್ನು ಮುಗಿಸಿದೆವು. ಉಳಿದ ವಚನ ಗ್ರಂಥಗಳು ಅಂದರೆ ಪ್ರಭುದೇವರ ವಚನಗಳು, ಸಿದ್ಧರಾಮೇಶ್ವರರ ವಚನಗಳು, ಶೂನ್ಯ ಸಂಪಾದನೆ, ಚನ್ನಬಸವೇಶ್ವರರ ವಚನಗಳು, ಅಂಬಿಗರ ಚೌಡಯ್ಯನ ವಚನಗಳು ದೊಡ್ಡ ಗ್ರಂಥಗಳಾಗಿವೆ. ಸಮಾಜದಲ್ಲಿರುವ ಉದಾರ ಹೃದಯಗಳ ಸಹಾಯವಿಲ್ಲದೆ ನಾವು ಇವುಗಳನ್ನು ಮುದ್ರಣಗೊಳಿಸುವದು ಈಗಿನ ಕಠಿಣ ಕಾಲದಲ್ಲಿ ಶಕ್ಯವಾಗಲಾರದು. ಸಮಾಜದಲ್ಲಿಯ ಮಹನೀಯರು ಈ ಕಾರ್ಯದಲ್ಲಿ ನಮಗೆ ಸಹಾಯಮಾಡಲು ಉದ್ದೇಶ ಪಟ್ಟು ತಮ್ಮ ಕರ್ತವ್ಯವನ್ನು ಲಕ್ಷಿಸಿದಲ್ಲಿ ಅವರು ಸಮಾಜದ ಸಂಸ್ಕೃತಿಯ ರಕ್ಷಣೆಗೋಸ್ಕರ ಬಹಳ ಸಹಾಯ ಮಾಡಿದಂತೆ ಆಗುವದು.

**ಶಿವಾನುಭವದಲ್ಲಿಯ ಲೇಖಗಳುಃ—** ಈ ಸಂಚಿಕೆಯಲ್ಲಿ ಅನೇಕ ಮಹನೀಯರು ಷಟ್‌ಸ್ಥಲ ಶಾಸ್ತ್ರದ ವಿಷಯವಾಗಿ ಮಹತ್ವದ ಲೇಖಗಳನ್ನು ಬರೆದಿದ್ದಾರೆ. ಅವು ಕಠಿಣವಾಗಿ ತೋರಿದರೂ ಅವುಗಳನ್ನು ವಾಚಕರು ಅವಶ್ಯವಾಗಿ ಲಕ್ಷಿಸಬೇಕೆಂದು ನಾವು ಸೂಚಿಸುತ್ತೇವೆ

---

# ವೈರಾಗ್ಯ ದೇವಿ.

( ಲೇಃ— ಶ್ರೀ ಸುರೇಶ. ಎಸ್. ಹೊಸಟ್ಟಿ. ನಾಗಠಾಣ. )



ಅನಿಮಿಷ ನೇತ್ರದಿಂ ಮನಾಕುಳಳಾಗಿ
ಏಂ ನಿರೀಕ್ಷಿಸುವೆ ಅನುರಾಗದಿಂದಲಿ

ಬಸವಾದಿ ಪ್ರಮಥರ ಶೂನ್ಯಪೀಠದಲಿ
ವಿರಕ್ತಿಯು ವೈರಾಗ್ಯದಧಿದೇವಿಯಾಗಿ
ವಿಮುಕ್ತತೆಯು ವಿಭಾತ ವಚನಾಂಗಣದಲಿ
ಬೆಳಗಿದೆ ತಾಯಿ ನೀಂ ಧೃವತಾರೆಯಾಗಿ

ಓ ಗಿರಿಜೆ ಓ ಗೌರಿ ಓ ಗಂಗೆ ನೀನು
ಮಾಯೆಯ ತಾಯಾಗಿ ಮಾಯೆಯ ಸತಿಯಾಗಿ
ವೀರಶೈವರುದ್ಧರಿಸಿದ ಮಾತೆ ನೀನು
ಆತ್ಮಶ್ರೀಯ ಧೀಶಕ್ತಿಯನು ನೀ ಬೆಳಗಿ

ವನವನವ ಅಲೆದಿಯಾ ಶಕ್ತಿಪತಿಗಾಗಿ?
ವನವನವ ತುಳಿದೆಯಾ ಶಶಿಧರನಿಗಾಗಿ?
ವನವನವ ನಡೆದಿಯಾ ಶಂಕರನಿಗಾಗಿ?
ವನವನವ ಹೊರಟೆಯಾ ಶ್ರೀ ಶೈಲಕಾಗಿ?

ನಶನವಂ ನೀಗಿ ನಳನಳಿಪ ನಳಿಪಂತೆ
ನಂಜುಂಡನನಂಟಿತಿಯಾಗಿ ನಾಕನದವ ಕಂಡೆ.



ಲೋಭಿಯನ್ನು ಕೊಲ್ಲಲೀ ಜಗದೊಳ್ ಬೇರೆ ।
ಮದ್ದದೇತಕಿನ್ನು ಮಾತವದಿಹುದು ॥
ಧನವು ಕೇಳಿದೊಡನೆ ತಕ್ಷಣ ಸಾಯುವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೧ ॥

ಕೃಪಣ ನರನ ಮನೆಯೊಳ್ ಕುಣಪವು ಹೊರಟರುಂ ।
ಬೆರಣೆ ಕಾಷ್ಠಗಳಿಗೆ ಕಾಸು ಕೊಟ್ಟು ।
ವೆಚ್ಚವಾಯಿತೆಂದು ಬಿಕ್ಕಿ ಬಿಕ್ಕಿಯಳುವನ್ನೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೨ ॥

ನೊಣವು ಜೇನು ರುಚಿಗೆ ಹರುಷದಿ ಸಾಯ್ವುದು ।
ವಿಟನು ಕಾಮರುಚಿಗೆ ಬಿದ್ದು ಸಾಯ್ವ ॥
ಲೋಭಿಯಾದ ನರನು ಧರ್ಮವೆಂದೊಡೆ ಸಾಯ್ವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೩ ॥

ಗೊಡ್ಡು ಹಸುವ ಕರೆವುದಕೆ ಪಾತ್ರೆ ಕೊಂಡೊಯ್ಯೆ ।
ಹಾಲು ಕೊಡದೆ ಹಲ್ಲು ಮುರಿಯುವೊದೆಗುಂ ॥
ಲೋಭಿ ನರನ ಕೇಳೆ ಲಾಭವೇನಿಲ್ಲವೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೪ ॥

ಮೇಕೆ ಕತ್ತಲಿರುವ ಮೊಲೆಗಳ ಕುಡಿಯಲು ।
ಹಸಿವದೇಕೆ ಮಾಣ್ಗು ಮಾಸೆ ಹೊರತು ॥
ಲೋಭಿಯನ್ನು ಕೇಳೆ ಲಾಭವಿಲ್ಲವು ಜಗದಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೫ ॥

ದಾತೃವಿನೆಡೆಯೊಳು ಲುಬ್ಧ ತಾನಿರುತಿರೆ ।
ಸಾಯ್ವನಲ್ಲದವನು ಸಾಗಗೊಡನು ॥
ಕಲ್ಪವೃಕ್ಷದಡಿಯೊಳ್ ಬೊಬ್ಬುಳಿಗಿಡದಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೬ ॥

## ದುರಾಶೆಯನ್ನು ಬಿಡು

ನೀರೊಳಿರ್ಪ ಮೀನು ಮಾಂಸದ ಆಸೆಯಿಂ ।
ಗಾಲದಲ್ಲಿ ಸಿಗುವ ತೆರದಿ ಭುವಿಯೊಳ್ ॥
ಆಸೆಯಿಂದ ನರರು ನಾಶವಾಗುವರಯ್ಯ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೫೭ ॥

ಈಷಣತ್ರಯಂಗಳನು ಗೆಲಲಾರದೆ ।
ಮೋಹರಾಸಿಯಲ್ಲಿ ಮುಳುಗುತಿರ್ಪ ॥
ನರರಿಗೆಂತು ಮೋಕ್ಷ ಸೌಖ್ಯವು ಲಭಿಪುದು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೫೮ ॥

ಆಸೆಯಿಂದ ನರನು ಜೀವಿತ ಪರಿಯಂತ ।
ತಿರುಗುತಿಹನಾ ಭ್ರಮೆಯು ತಿರುಗಿಸದಲೆ ॥
ಕೊಳಕು ಪಾತ್ರೆಯಲ್ಲಿ ಮುತ್ತುವ ನೊಣದಂತೆ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೫೯ ॥

ಕನಕ ಪರ್ವತದೊಳು ವಾಸಿಸುತಿರ್ದೊಡಂ ।
ಅನಿಮಿಷೇಶ್ವರನಿಗೆ ಆಶೆ ಬಿಡದು ॥
ಕನಕ ಕುಂಡಲಗಳ ಕರ್ಣನ ಕೇಳನೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೬೦ ॥

ನಾರಿಯುರನುಂ ಭೂರಿ ದ್ರವ್ಯವನು ನೋಡಿದರೆ ।
ಸಾರತರ ರುಚಿಗಳನು ಕೇಳಿದೊಡನೆ ॥
ಯಾರಿಗಾದರು ಆಶೆಗಳು ಪುಟ್ಟದಿರ್ಪವೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೬೧ ॥

ಕಳ್ಳ ಗುಡಿಗೆ ಹೋಗಿ ಮುಡುಪನ್ನು ಬಿಚ್ಚುವ ।
ನಲ್ಲಿ ದೇವರನ್ನು ನೋಡನವನು ॥
ನಾಯಿ ಮನೆಯ ಹೊಕ್ಕು ಸೋರೆಗಳ್ ಬೆದಕದೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೬೨ ॥

ತಂದೆತಾಯಿ ಸಾಯೆ ತನಯನು ದುಃಖಿಪ ।
ಪತಿಯು ಸಾಯೆ ಸತಿಯು ಮರುಗುತಿಹಳು ॥
ಕಾರ್ಯವಶದಿ ಹೊರತು ಮೋಹವುಂಟಾಗದೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೬೩ ॥

---

**ಅಹಂಕಾರಿಯಾಗಬೇಡ.**

ಅತ್ತಿ ಹಣ್ಣು ಮೇಲೆ ರಮ್ಯ ವಾಗಿರುವುದು ।
ಹೊಟ್ಟೆ ಬಿಚ್ಚೆ ನೋಡೆ ಹುಳುಗಳಿಹವು ॥
ಹುಚ್ಚ ನರನ ಮನದ ಬಿಂಕವೀ ರೀತಿಯೊಳ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೬೪ ॥

ಕಣ್ಣಿನಲ್ಲಿ ಮದವು ವ್ಯಾಪಿಸಿ ಕಾಣರು ।
ಹೋದ ಆಚೆ ವರುಷ ನಿನ್ನೆ ಮೊನ್ನೆ ॥
ದಗ್ಧರಾದ ನರರು ತಮಗಿಂತ ಕಡಮೆಯೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೬೫ ॥

ಕತ್ತಿ ಕೈಲಿ ಪಿಡಿದು ಘನ ಸಾಧನೆಯ ಮಾಡಿ।
ಮತ್ತನಾಗ ಮೆರೆವ ವೀರ ವರನು ॥
ಕಾಲವಾದ ಬಳಿಕ ಕಾಲನ ಕೈಯ್ಯಿಂದ ।
ಕಷ್ಟಬಿದ್ದು ಕೊನೆಗೆ ಜನಿಪ ವೇಮಾ ॥ ೬೬ ॥

ಮೊಂಡ ಮಾತುಗಳಿಂದ ಕೂಡಿಹುದು ವಿರಕ್ತಿ ।
ಯಮನ ಗೆಲ್ವುದಕ್ಕೆ ಸಾಧ್ಯವಲ್ಲ ॥
ಕಲಿಯುಗದ ವಿರಕ್ತಿ ಹೆಂಡ ಕುಡಿಯುವುದೊಂದೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೬೭ ॥

ರಂಡೆಮುಂಡೆಗೇಕೆ ಮುತ್ತಿನ ಬೈತಲೆ ।
ಬಣ್ಣವೆಲ್ಲ ಭಾಗ್ಯವತಿಗೆ ಹೊರತು ॥
ಕುಂಟ ಕುದುರೆಗೇಕೆ ಕುಚ್ಚುಗಳ್ ಮಣಿಗಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೬೮ ॥

---

## ಕಾಪಟ್ಯವನ್ನು ಬಿಡು.

ತನ್ನೊಳ್ಕಪಟಗಳಿರ್ದೊಡೆ ।
ತನ್ನಂದದೆ ಕಪಟ ಗುಣಗಳೆಣಿಪರು ಪರರೊಳ್ ॥
ತನ್ನೊಳ್ ಕಪಟಗಳಡಗಲ್ ।
ತನಗಾರುಂ ಕಪಟಿಯಿಲ್ಲ ಧರೆಯೊಳ್ ವೇಮಾ ॥ ೬೯ ॥

ಜಪವು ಬಾಹ್ಯ ಪೂಜೆ ಮಿಗಿಲು ಮಾಡಿದ ಮೇಲೆ ।
ಕಪಟವನ್ನು ಬಿಡದೆ ಕಷ್ಟ ನರರು ॥
ಮುಕ್ತಿ ಸೂರೆಗೊಳದೆ ಮುಳುಗಿದರ್ತಮದೊಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೭೦ ॥

ವೇಷಧಾರಿಗೆಂದು ವಿಶ್ವಾಸ ಕೂಡದು ।
ವೇಷವೆಷ್ಟೋ ದೋಷಕಾರಿಯಲ್ತು ॥
ರಟ್ಟು ಮಾಡಲಿಲ್ಲೆ ರಾವಣವೇಷವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೭೧ ॥

ಪಾಗು ಹಚ್ಚಡಗಳು ಧನ ಧಾನ್ಯಸಂಪದ ।
ಬೀಗ ಉಂಗುರಗಳು ದೊಡ್ಡ ಹೊಟ್ಟೆ ॥
ನೋಡಿ ಗೌರವಿಪರು ಒಳಗುಟ್ಟು ನೋಡರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೭೨ ॥

---

## ಪರಹಿತಮಾಡು.

ಸಾಧು ಜನರ ಮೇಲೆ ಸಂತೋಷಪಡುವಾತ ।
ಪರರ ಮೇಲು ನೋಡಿ ವೈರಿಪಾತ ॥
ಮನೆಯೊಳಿರ್ದೊಡೇನು ಅಡವಿಯೊಳಿರಲೇನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೭೩ ॥

ಅಕ್ಷರವರಿಯದ ಆಚಾರವದು ಯೇಕೆ ।
ತಾನು ತಿನ್ನದಿರುವ ಧನವದೇಕೆ ।

ಪರರ ಮೇಲು ನೋಡಿ ಸಹಿಸದ ತನುವೇಕೆ |
ವಿಶ್ವತೋಭಿರಾಮ ಕೇಳೊ ವೇಮಾ || ೭೪ ||

---

## ಸಜ್ಜನರ ಸಂಗದಲ್ಲಿರು.

ಹಾಲು ಕಲೆತು ನೀರು ಹಾಲಾಗಿ ಶೋಭಿಸಿ |
ಪಾನಯೋಗ್ಯವಾದ ತೆರದೊಳದುವೆ |
ಸಾಧು ಜನರ ಕೂಡಿಯಾಡುವ ಮನುಜರು |
ಮುಕ್ತರಹರು ಮಾನನೀಯ ವೇಮಾ || ೭೫ ||

ಈಡಿಗನ ಮನೆಯಲ್ಲಿ ಹಾಲನ್ನು ಕುಡಿದೊಡೆ ||
ನೋಡಿ ಜನರು ಮದ್ಯವೆಂದು ನುಡಿವರ್ ||
ಜೋಡಿಲ್ಲದಿಹ ಸ್ಥಳದಿ ನಿಲೆ ನಿಂದೆ ತಪ್ಪದೈ !
ವಿಶ್ವತೋಭಿರಾಮ ಕೇಳೊ ವೇಮಾ || ೭೬ ||

ಬೇರುಹುಳುವು ಸೇರಿ ವೃಕ್ಷವು ಕೆಡಿಸುದು |
ಜೇಡ ಹುಳವು ಸೇರಿ ಗಿಡವು ಕೆಡಗುಂ ||
ಕುಚ್ಛಿತ ಸೇರಲು ಗುಣವಂತ ಕೆಡುವನು |
ವಿಶ್ವತೋಭಿರಾಮ ಕೇಳೊ ವೇಮಾ || ೭೭ ||

ಹಂದಿಮರಿಗಳೀನುವುದು ಹತ್ತನ್ನೈದನು ||
ಆನೆಯೀನುತಿರ್ಪುದೊಂದು ಮರಿಯು |
ಉತ್ತಮ ಪುರುಷನು ಓರ್ವನೇ ಸಾಲದೇ |
ವಿಶ್ವತೋಭಿರಾಮ ಕೇಳೊ ವೇಮಾ || ೭೮ ||

---

## ಸಮಾಧಾನಿಯಾಗಿರು.

ಹೊಟ್ಟೆಗಾಗಿ ಮನವೆ ಕಳವಳವೇತಕೆ |
ಹೊಟ್ಟೆಗಾಗಿ ತೃಪ್ತಿ ಹೊಂದು ಬೇಗ ||
ಹೊಟ್ಟೆಕಲ್ಲಿನಲ್ಲಿ ಕಪ್ಪೆಗೆ ಯಿಲ್ಲವೇ |
ವಿಶ್ವತೋಭಿರಾಮ ಕೇಳೊ ವೇಮಾ || ೭೯ ||

---

## ಮೃದುವಚನವನ್ನಾಡು.

ಅಲ್ಪನಾಡುತಿರ್ಪ ನಾಡಂಬರದೊಳ್ಳೈದೆ ।
ಸುಜನನಾಡುತಿರ್ಪ ಸೌಮ್ಯವಾಗಿ ॥
ಕಂಚಿನಂತೆ ಕನಕವೇಂ ಶಬ್ದ ಗುಡುವುದೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೦ ॥

---

## ತಂದೆತಾಯಿಗಳನ್ನು ಮನ್ನಿಸು

ತಂದೆತಾಯಿಗಳೊಳು ದಯೆಯಿಲ್ಲದಿಹ ಸುತ ।
ಹುಟ್ಟಲೇನು ತಾನು ಸಾಯಲೇನು ॥
ಹುತ್ತದಲ್ಲಿ ಗೆದ್ದಲುದಿಸಿ ಲಯ ವೈದದೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೧ ॥

ತಾಯಿ ಗೌರಿ ತನಗೆ ತಂದೆಯು ಶಂಭುವು ।
ಪ್ರಮಥಗಣಗಳಖಿಳ ಬಂಧುಜನರು ॥
ತನ್ನ ತವರುಮನೆಯು ನಿರುತ ಕೈಲಾಸವು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೨ ॥

ಧರಣಿಯಲ್ಲಿ ನರರು ಮಕ್ಕಳ ಬಯಸುತೆ ।
ಮರುಗುತಿಹರು ಬಹಳ ಆಶೆಯಿಂದೆ ।
ಮಗನು ಜನಿಸಲವನು ಕುಲವನುದ್ಧರಿಪನೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೩ ॥

---

## ಮತ್ಸರಭಾವವನ್ನು ಬಿಡು.

ಸಚ್ಚರಿತೆ ಲೋಕವಶ್ಯವು ।
ಕುಚ್ಛಿತವೇ ಲೋಕನಿಂದೆ ಕೋವಿದನಿಂಗುಂ ॥
ತುಚ್ಛದೊಳು ಹಾನಿ ಬರ್ಪುದು ।
ಮತ್ಸರವೇ ತನ್ನ ಕೆಡಿಸುವುದು ವರ ವೇಮಾ ॥ ೮೪ ॥

---

## ಜನರ ಮೆಚ್ಚಿಗೆಯನ್ನು ಪಡೆ

ಹಲವರಾಡ್ವ ಮಾತು ಫಲವೀವುದದು ಶ್ಲಾಘ್ಯ ।
ಒಬ್ಬನಾಡುವ ಮಾತು ನಡೆಯದೆಂದುಂ ॥
ಸುಮ್ಮನಿರುವ ನರನಿಗೂರೆಲ್ಲ ಸಮನಲ್ಲ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೫ ॥

ಶ್ವಾಸವಿಲ್ಲದಿರ್ಪ ತಿದಿಯನೂದಿದೊಡೈದೆ ।
ಪಂಚ ಲೋಹವೆಲ್ಲ ಭಸ್ಮವಹವು ॥
ಹಿರಿಯರು ಸೂರೆನ್ನಲುರಿ ಯೇಳದಿರ್ಪುವೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೬ ॥

ಡೊಂಕು ಗುಳವನು ಕಾಸಿ ಡೊಂಕು ತಿದ್ದಲು ಬಹುದು।
ಬೆಟ್ಟವೆಲ್ಲವ ಹಿಟ್ಟು ಮಾಡಬಹುದು ॥
ಕಠಿಣ ಚಿತ್ತನ ಮನವ ತಿರಗಿಸಲಾಗದು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೭ ॥

ಲೋಹ ಮುರಿಯಲದನು ಕಾಸಿ ಬೆಸೆಯಲುಬಹುದು ।
ಮನಸು ಮುರಿದ ಮೇಲೆ ಬೆಸೆಯಲರಿದು ॥
ಜನಗಳಿದನರಿಯುತ್ತೆ ಜಾಣರಾಗಿರ್ಪುದೈ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೮ ॥

---

## ಉತ್ತಮರ ನಡೆಯಂತೆ ನಡೆ

ದೊಡ್ಡವರುಕ್ತಿಯ ಪ್ರೇಮದಿ ಕೇಳಿ ತಾ ।
ನವರ ತೆರದಿ ನಡೆಯಲನುಕರಿಪನು ॥
ಹುಲಿಬಣ್ಣ ನೋಡಿ ನರಿ ಬರೆಯೊಳಸಿಕೊಂಡಂತೆ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೮೯ ॥

## ಸತ್ಯವನ್ನು ನುಡಿ

ನಿಜವ ನುಡಿಯುವವನು ನಿರ್ಮಲನಾಗಿರ್ಪ ।
ನಿಜವ ನುಡಿಯುವವನೆ ನೀತಿಪರನು ।
ನಿಜವ ನುಡಿಯದವನೇ ನೀಚ ಚಂಡಾಲನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೯೦ ॥

ನಿರುತ ಸಟೆಯನಾಡುವವರ ನಿವಾಸದಿಂ ।
ಭರದಿ ಲಕ್ಷ್ಮಿ ಹೊರಡದೇತಕಿಹಳು ॥
ಪಿರಿದು ರಂಧ್ರವಿರ್ಪ ಕುಂಭದ ನೀರಿನೋಲ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೯೧ ॥

ಎಷ್ಟು ತೊಳೆಯೆ ಬಾಯಿಯೆಂಜಲು ಪೋಪುದೆ ।
ಸರ್ವ ಕಾಲದಲ್ಲಿ ಯೆಂಜಲಹುದು ॥
ಅನುದಿನದೊಳು ನೋಡಲನೃತವಾಡುವ ಬಾಯಿ ।
ಬಾಯಿಯಲ್ಲ ತಳದ ಬಾಯಿ ವೇಮಾ ॥ ೯೨ ॥

ಸುಳ್ಳು ನಿಜವೆರಡನ್ನು ಕರಕಂಠನರಿವನು ।
ನೀರು ಹಳ್ಳವರಿಗುಂ ನಿಜದಿ ನೋಡೆ ॥
ತನಯನ ಜನನವ ತಾಯಿ ತಾನರಿವಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೯೩ ॥

---

## ರಾಜನೀತಿ.

ಚತುರೋಪಾಯ ಸಮರ್ಥತೆ ।
ವಿತರಣೆ ಗಾಂಭೀರ್ಯ ಧೈರ್ಯವಿಭವಸ್ಫುರಣಾ ।
ದಿತರ ಗುಣಂಗಳು ಮೂಡಿ ।
ರ್ದ ತುಲಿತನಾದವನೆ ರಾಜನೆನಿಪನು ವೇಮಾ ॥ ೯೪ ॥

ಅರಿಯೆ ಸತ್ಯದಲ್ಲಿ ವರ ಹರಿಶ್ಚಂದ್ರ ತಾಂ ।
ನಿತ್ಯವಾದ ಕೀರ್ತಿ ನಿಲಿಸಿಕೊಂಡ ॥
ಸತ್ಯವೆ ರಾಜರ್ಗೆ ಸರ್ವದಾ ಯೋಗ್ಯವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೯೫ ॥



# ಶಿ ವಾ ನು ಭ ವ

ಸಂಪುಟ ೨೪ ]                                    [ ಸಂಚಿಕೆ ೬+೭



ಮಾರ್ಚ—ಎಪ್ರೀಲ. ೧೯೫೦

ವಿಜಾಪುರ.

# ವಿಷಯಗಳು.



# ಶಿವಾನುಭವ

ವರ್ಷ ೨೪ | ಎಪ್ರೀಲ ೧೯೫೦ | ಸಂಚಿಕೆ ೬[illegible]

## ವಿಶ್ವಧರ್ಮ

ಲೇಖಾಂಕ ೨.

(ಲೇಖಕಃ- ಶ್ರೀಯುತ ಸಿ. ನಾ. ಮಹಾಂತಣ್ಣವರ ಮು. ಧಾರವಾಡ)

---

ಆದಿಕಾಲದಿಂದ ಮಾನವಕೋಟಿಯು ತನ್ನ ಬುದ್ಧಿಶಕ್ತಿಯಿಂದ ಅಗಾಧವಾಗಿ ತೋರುವ ವಿಶ್ವವನ್ನು ವಿಮರ್ಶಿಸುತ್ತ ಬಂದಹಾಗೆಲ್ಲ ತನಗಾದ ಅನುಭವಗಳನ್ನು ದೂರದೃಷ್ಟಿಯಿಂದಲೂ ಜ್ಞಾನದೃಷ್ಟಿಯಿಂದಲೂ ನಿರ್ಧರಿಸಿ ವಿಶ್ವದ ಧರ್ಮಗಳನ್ನೂ ತತ್ವಗಳನ್ನೂ ಸದ್ಯದ ಮಾನವಕೋಟಿಯ ಜೀವನದ ಬಳಿಕೆಗೆ ಸಹಕಾರವನ್ನುಂಟು ಮಾಡಿದ್ದು ಸ್ವಾಭಾವಿಕವು. ಈ ವಿಶ್ವವನ್ನು ನಿರೀಕ್ಷಿಸಿದಲ್ಲಿ ಅಗಾಧವಾದ ಬಯಲೇ ಬಯಲು, ಅಸಂಖ್ಯವಾದ ನಕ್ಷತ್ರಮಾಲೆಯೂ ಮತ್ತು ಸೂರ್ಯಮಾಲೆಯೂ ಗ್ರಹೋಪಗ್ರಹಮಾಲೆಯೂ ಬೈಲಿನಲ್ಲಿ ವಿರಾಜಿಸುತ್ತಿರುವವು. ಇಂಥ ಮಾಲಾಮಾಲೆಗಳಲ್ಲೊಂದಾದ ನಮ್ಮ ವಾಸಸ್ಥಳವಾದ ಪೃಥ್ವಿಯೆಂಬ ಗ್ರಹಮಾಲೆಯಲ್ಲಿ ಕುಳಿತು ನಮ್ಮ ಮೈಸುತ್ತ ತಿರುಗುತ್ತ ಸೂರ್ಯನ ಸುತ್ತಲೂ ತಿರುಗುತ್ತಿರುವದು ನಮ್ಮ ತಿಳುವಳಿಕೆಗೆ ಬಾರದಷ್ಟು ಸಹಜ ಸಂಚಾರವಾಗಿದೆ. ಓಣಿಯಲ್ಲಿ ದುರ್ಗಮುರ್ಗಿಯು ದುರ್ಗಾದೇವಿಯ ಮುಂದೆ ಮರದೊ[illegible] ಕಾಳುಹಾಕಿ ಮರವನ್ನು ಓರೆ ಮಾಡಿ ತಿರುಗಿಸಿದಂತೆಯೂ ಮತ್ತು ನೀರಿನಿಂದ ತುಂಬಿದ ತಂಬಿಗೆಗೆ ಔಡಲ ಎಲೆ ಮುಚ್ಚಿ ಡಬ್ಬು ಮಾಡಿ ತಿರುಗಿಸಿದಂತೆಯೂ ಆ ಕಾಳು ನೀರುಗಳು ಬೀಳದೋಪಾದಿಯಲ್ಲಿ ನಾವೆಲ್ಲರೂ ನಮ್ಮ ಮನೆಮಾರುಗಳೂ ಗುಡ್ಡ ಗಹ್ವರಗಳೂ ಗಿಡಗಂಟಿಗಳೂ ಇದ್ದಲ್ಲಿಯೇ ಇದ್ದು, ಪ್ರಕೃತಿದೇವಿಯು ನಮಗಿತ್ತ ಚೇತನದಿಂದಲೂ ನಾವು

ರೂಪ ಕ್ರಿಯಾದಿಗಳಿಂದಲೂ ಪ್ರಕೃತಿ ಗುಣ ಸ್ವಭಾವಗಳಿಂದಲೂ ನಮ್ಮ ನಮ್ಮ ಪರಿಸ್ಥಿತಿಗನುಸರಿಸಿ ಜೀವನ ಕ್ರಮವನ್ನು ಶಾಂತತೆಯಿಂದ ಸಾಗಿಸುತ್ತಲಿದ್ದೇವೆ. ಆದರೆ ಪ್ರಕೃತಿ ದೇವಿಯು ಕ್ಷೋಭೆಯುಂಟಾದಾಗ ಒಮ್ಮೊಮ್ಮೆ ಕ್ರಮತಪ್ಪಿ ಪ್ರಕೃತಿ ಸೌಂದರ್ಯಕ್ಕೆ ಭಂಗ ಬರುವದು. ಸ್ವಾಭಾವಿಕ ಭೂಕಂಪಗಳೂ ಜ್ವಾಲಾಮುಖಿಗಳೂ ಜಲಪ್ರಳಯಗಳೂ ಅಗ್ನಿ ವಾಯು ಗುಡುಗು ಪ್ರಕಾಶಗಳ ಅತಿರೇಕಗಳೇ ಪ್ರಕೃತಿಯ ಪ್ರಳಯಗಳು. ಇದಲ್ಲದೆ ಮಾನವನು ಸೃಷ್ಟಿದೇವತೆಯು ತನಗಿತ್ತ ಕ್ರಿಯಾ, ಜ್ಞಾನ, ಇಚ್ಛಾ ಆದಿ ಪರಾ ಚಿಚ್ಛಕ್ತಿಗಳ'ದುರುಪಯೋಗ ಮಾಡಿಕೊಂಡು ವಿಶ್ವದಲ್ಲಿ ಅಂದರೆ ತಾನಿದ್ದ ಜಗತ್ತಿನಲ್ಲಿ ಅಶಾಂತತೆಯನ್ನುಂಟುಮಾಡಿ, ಎಲ್ಲ ಪ್ರಾಣಿಗಳಿಗೂ ತನಗೂ ಪ್ರಳಯಾಂಶವನ್ನು ಬೀರುವನಲ್ಲ; ಇದರಿಂದ ಅವನು ವಿಶ್ವಧರ್ಮವನ್ನು ತಿಳಿದು ಆಗಲಿ ತಿಳಿಯದಾಗಲಿ ಹೀಗೆ ವರ್ತಿಸಬಹುದಾಗಿದೆ ಕಾರಣ ವಿಶ್ವಕ್ಕೇ ಸರಿಹೋಗುವ ವಿಶ್ವಧರ್ಮ ಜ್ಞಾನಿಯಾಗಿ ತನ್ನ ಪ್ರಕೃತಿ ಧರ್ಮ, ಅರ್ಥಾತ್ ದೇಹಧರ್ಮ ಹಾಗು ಅಸಂಖ್ಯಾತವಾದ ಪ್ರಾಣಿಧರ್ಮ, ಅದರಲ್ಲಿ ವಿಶಿಷ್ಟವಾದ ಮಾನವಧರ್ಮ ಅಂದರೆ ವ್ಯಷ್ಟಿ ಸಮಷ್ಟಿ ಧರ್ಮಗಳ ಅಭ್ಯಾಸಾಚರಣೆಗಳ ಅವಶ್ಯಕತೆ ಎಷ್ಟೆಂಬದನ್ನು ಹೇಳಲಾಸಲ್ಲ.

ಬ್ರಹ್ಮಾದಿ ಸ್ತಂಭಾತ್ಮವಾದ ಪಿಂಡವೂ ಶಿವಾದ್ಯವನೀ ಪರ್ಯಂತವಾದ ಅಜಾಂಡವೂ ಈ ಎರಡೂ ಒಂದೇ ಸ್ವರೂಪವಾಗಿರುತಿಹವು. ಅದು ಹೇಗೆಂದೊಡೆ ಪಿಂಡ ಹೆಚ್ಚಿಲ್ಲ. ಬ್ರಹ್ಮಾಂಡ ಕಡಿಮೆಯಿಲ್ಲ. ಬ್ರಹ್ಮಾಂಡ ಹೆಚ್ಚಿಲ್ಲ ಪಿಂಡಾಂಡ ಕಡಿಮೆಯಿಲ್ಲ. ಅದು ಹೇಗೆಂದೊಡೆ— ಪಿಂಡವು ಪಂಚಭೂತ ಪಂಚವಿಂಶತಿ ತತ್ವಾತ್ಮಕವಾದಂಥಾದ್ದು ಬ್ರಹ್ಮಾಂಡವು. ಪಂಚಭೂತ ಪಂಚವಿಂಶತಿ ತತ್ವಾತ್ಮಕವಾದದ್ದು. ಬ್ರಹ್ಮಾಂಡದೊಳಗುಂಟಾದ ಗುಣಂಗಳ ತತ್ವಂಗಳ ಆಶ್ರಯವು ಪಿಂಡದಲ್ಲಿ ಒಂದು ನೂರು, ಅಥವಾ ಮೂರುವರೆ ಮೊಳ ಅಥವಾ ತೊಂಭತ್ತಾರು ಅಂಗುಲ ಪರಿ ಪ್ರಮಾಣವನುಳ್ಳ ಮನುಜ ದೇಹದೊಳಗೆ ಸೂಕ್ಷ್ಮ ರೂಪಿನಿಂದ ಪರಮಾಣು ಸ್ವರೂಪಿನಿಂದ ಸಂಗ್ರಹವಾಗಿ ಆ ಲೋಕದಲ್ಲಿ ಅಕ್ಷರವಡಗಿದ ಹಾಗೆಯೂ ಅಕ್ಷರದಲ್ಲಿ ಅರ್ಥವಡಗಿದ ಹಾಗೆಯೂ ಅಡಗಲ್ಪಟ್ಟವಾಗಿ ತೋರ್ಪುದು ಪಿಂಡ ಮರ್ಯಾದೆಯಲ್ಲಿ ನೋಡಿದರೆ ಕಾಣಬಾರದು ಶಾಸ್ತ್ರಜ್ಞಾನಕ್ಕೆ ಅಸ್ಪಷ್ಟ ಮಾತ್ರ ಕಾಣಬಹುದು. ಸ್ವಾತ್ಮಜ್ಞಾನಕ್ಕೆ ಪ್ರತ್ಯಕ್ಷವಾಗಿ ಕಾಣಬರುತಿಹುದು.

ಪರಶಿವನ ಚಿತ್ಕಿರಣಂಗಳು ಈ ಜಗತ್ತಿನ ಶಿರೋಮಧ್ಯಕ್ಕೆ ಬಿಂಬಿಸಿ ಅದಕ್ಕೆ ಚೈತನ್ಯಗೊಳಿಸಿದಲ್ಲಿ ಅದೇ ಪರಮಾತ್ಮನಾಯಿತ್ತು. ಆ ಪರಮಾತ್ಮನು ಜಗತ್ತಿನ ಭ್ರೂಮಧ್ಯದಲ್ಲಿ ಬಿಂಬಿಸಿದಲ್ಲಿ ಅದೇ ಅಂತರಾತ್ಮನಾಯಿತ್ತು. ಅಂತರಾತ್ಮನು ಜಗತ್ತಿನ ಹೃನ್ಮಧ್ಯಕ್ಕೆ ಬಿಂಬಿಸಿದಲ್ಲಿ ಅದೇ ಜೀವಾತ್ಮನಾಯಿತ್ತು. ಆ ಜೀವಾತ್ಮನೇ ಘಟ, ಅಂತರಾತ್ಮನೆ ಪ್ರಾಣ, ಪರಮಾತ್ಮನೆ ಸರ್ವ ಸಾಕ್ಷಿಕ, ಆ ಸಾಕ್ಷಿಕನೆ ವಸ್ತು. ಆ ಪರವಸ್ತು ಜೀವಾಂತರಾದಿಗಳೆಂಬ ಅಂಗ ಪ್ರಾಣಕ್ಕೆ ಪಂಚವಿಂಶತಿಗಳೆಂಬ ತುಷಾ ಪಾಶಮಂ ತೊಡಿಸಿ ಅಂತವನೆ ಪಶುವೆನಿಸಿ ತಾನವಕೆ ಪತಿಯಾಗಿ ಅಲ್ಲಿ ನಾನಾ ವಿನೋದಂಗಳಂ ನೋಡಿ ವಿನೋದಿಸುತ್ತ ಬಸವ ಪ್ರಿಯ ಕೂಡಲ ಚನ್ನ ಸಂಗಯ್ಯನಿಂತೀ ಪರಿಯಲ್ಲಿ ಆಡಿಸುತ್ತಿದ್ದ ಜಗತ್ತು.

ಪೃಥ್ವಿಯಲ್ಲಿಯ ಪೃಥ್ವಿ ಪಾಯುವಿಂದ್ರಿಯ, ಪೃಥ್ವಿಯಲ್ಲಿಯ ಅಪ್ಪು ಗಂಧ, ಪೃಥ್ವಿಯಲ್ಲಿಯ ಅಗ್ನಿ ಘ್ರಾಣೇಂದ್ರಿಯ, ಪೃಥ್ವಿಯಲ್ಲಿಯ ವಾಯು ಪ್ರಾಣವಾಯು, ಪೃಥ್ವಿಯಲ್ಲಿಯ ಆಕಾಶ ಅಹಂಕಾರ, ಈ ಐದು ಪೃಥ್ವಿಯ ಪಂಚೀಕೃತಿ. ಉದಕದಲ್ಲಿಯ ಪೃಥ್ವಿ ಗುಹ್ಯೇಂದ್ರಿಯ, ಉದಕದಲ್ಲಿಯ ಅಪ್ಪುರಸ, ಉದಕದಲ್ಲಿಯ ಅಗ್ನಿ ಜಿಹ್ವೇಂದ್ರಿಯ, ಉದಕದಲ್ಲಿಯ ವಾಯು ಅಪಾನವಾಯು, ಉದಕದಲ್ಲಿಯ ಆಕಾಶ ಚಿತ್ತ ಈ ಐದು ಉದಕದ ಪಂಚೀಕೃತಿ. ಅಗ್ನಿಯಲ್ಲಿಯ ಪೃಥ್ವಿಪಾದೇಂದ್ರಿಯ, ಅಗ್ನಿಯಲ್ಲಿಯ ಅಪ್ಪು ರೂಪು ಅಗ್ನಿಯಲ್ಲಿಯ ಅಗ್ನಿ ನೇತ್ರೇಂದ್ರಿಯ, ಅಗ್ನಿಯಲ್ಲಿಯ ವಾಯು ಉದಾನವಾಯು, ಅಗ್ನಿಯಲ್ಲಿಯ ಆಕಾಶ ಬುದ್ಧಿ ಈ ಐದು ಅಗ್ನಿ ಪಂಚೀಕೃತಿ. ವಾಯುವಿನಲ್ಲಿಯ ಪೃಥ್ವಿ ಪಾಣೀಂದ್ರಿಯ, ವಾಯುವಿನಲ್ಲಿಯ ಅಪ್ಪು ಸ್ಪರ್ಶನ, ವಾಯುವಿನಲ್ಲಿಯ ಅಗ್ನಿ ತ್ವಗಿಂದ್ರಿಯ, ವಾಯುವಿನಲ್ಲಿಯ ಆಕಾಶ ಮನಸ್ಸು ಈ ಐದು ವಾಯುವಿನ ಪಂಚೀಕೃತಿ. ಆಕಾಶದಲ್ಲಿಯ ಪೃಥ್ವಿ ವಾಗಿಂದ್ರಿಯ ಆಕಾಶದಲ್ಲಿಯ ಅಪ್ಪು ಶಬ್ದ, ಆಕಾಶದಲ್ಲಿಯ ಅಗ್ನಿ ಶ್ರೋತ್ರೇಂದ್ರಿಯ, ಆಕಾಶದಲ್ಲಿಯ ವಾಯು ಸಮಾನವಾಯು, ಆಕಾಶದಲ್ಲಿಯ ಆಕಾಶ ಜ್ಞಾತೃತತ್ವ. ಈ ಐದು ಆಕಾಶದ ಪಂಚೀಕರಣ.

ಬ್ರಹ್ಮಾಂಡದಂತೆ ಪಿಂಡಾಂಡವಿರುವದೆಂಬದು ಆತ್ಮಜ್ಞಾನಿಗೆ ಅರಿವು ವುಂಟು. ಮಾನವನಿಗೆ ಉಪಜೀವಿಸಲು ಹೊಲಮನೆ, ಕುಡಿಯಲು ನೀರು, ಅಡಿಗೆಗೆ ಅಗ್ನಿ, ಉಸರಾಡಿಸಲು ಹವೆ, ಮಾತಾಡಲು ಧ್ವನಿ, ನೋಡಲು ಪ್ರಕಾಶವು ಸಹಕಾರಿಗಳಷ್ಟೇ; ಈ ಭೂತಾಂಶಗಳು ವಿಶ್ವದ ತತ್ವಗಳಾಗಿವೆ.

ಈ ಮೂಲ ತತ್ವ ಹಾಗು ಮಿಶ್ರ ತತ್ವಗಳಿಂದ ಬ್ರಹ್ಮಾಂಡವೂ ಈ ಮಾನವನ ದೇಹವೂ ಉಂಟಾಗಿವೆ. ಅಂದಬಳಿಕ ಈ ದೇಹ ಧರ್ಮಕ್ಕೂ ವಿಶ್ವ ಧರ್ಮಕ್ಕೂ ಎಷ್ಟೂ ಅಭ್ಯಂತರವಿಲ್ಲ. ಮಾನವನ ಧರ್ಮವೇ ವಿಶ್ವಧರ್ಮ, ವಿಶ್ವಧರ್ಮವೇ ಮಾನವ ಧರ್ಮ. ಎಂಬದನ್ನು ಅರುಹುವ ಧರ್ಮವೇ ವಿಶ್ವ ಧರ್ಮವೆಂದು ಸ್ಪಷ್ಟವಾಗುವದು. ಈ ಶ್ರೇಷ್ಠವಾದ ಧರ್ಮದ ನಿಜತತ್ವ ಗಳು ಯಾವ ವ್ಯಕ್ತಿಯ ರಕ್ತನಾಳಗಳಲ್ಲಿ ಪ್ರವಹಿಸುವವೋ ಯಾವ ಸಮಾಜ ರಚನೆಯಲ್ಲಿ ಸ್ಪಷ್ಟವಾಗಿ ಗೋಚರಿಸುವವೋ ಯಾವ ಸಮಾಜದಲ್ಲಿ ಮುಖ್ಯ ವಾದ ದಯಾಗುಣವು ಬಿಗಿಯಲ್ಪಟ್ಟಿರುವದೋ ಯಾವ ಸಮಾಜದಲ್ಲಿ ತ್ಯಾಗ ಅಹಿಂಸೆ, ಶಾಂತಿ, ನಿಸ್ವಾರ್ಥ, ಸಮಾಜಸೇವೆ, ನಿರಾಶೆ, ಬಂಧುತ್ವ ಸತ್ಕ ಯಕ, ಸದ್ಧರ್ಮ, ಸದಾಚಾರ, ನಿತ್ಯಾಚಾರ, ಗಣಾಚಾರ ( ವೀರತ್ವ ) ಸದ್ಭಕ್ತಿ, ಸಚ್ಛೀಲ ಸದ್ವಾಸನೆ, ಸನ್ನಿಷ್ಠೆ, ಸದ್ಬೋಧ, ಸದ್ವರ್ತನ, ಸದ್ಭಾ ವನೆ, ಸುಸಂಘಟನೆಗಳಿರುವವೂ ಮತ್ತು ದೇಹವೇ ದೇಗುಲ, ಆತ್ಮನೇ ವಿಶ್ವನಾಥನೆಂಬದನ್ನು ಭೇದಿಸಿ ಪ್ರತ್ಯಕ್ಷಿಸಿ ಅದನ್ನು ಕರತಲಾಮಲಕವಾಗಿ ಮಾಡಲ್ಪಟ್ಟು ಪೂಜಿಸಲು ಭಕ್ತಿ ಜ್ಞಾನ ವೈರಾಗ್ಯ ದಾಸೋಹ ಆಚಾರ ಕ್ರಿಯೆಗಳು ನಿತ್ಯಶಃ ತೋರುವವೋ ಅಂಥ ಧರ್ಮವೇ ವಿಶ್ವಧರ್ಮವೆಂದು ಯಾರು ಒಪ್ಪಲಾರರು ?

ವಿಶ್ವದಲ್ಲಿ ಪಂಚಭೂತಗಳೂ ಸೂರ್ಯಚಂದ್ರ ಪರಮಾತ್ಮಗಳೆಂಬ ಅಷ್ಟಾಂಗಗಳೂ ಕಂಡುಬರುವಂತೆ ಈ ಮಾನವನ ಶರೀರವಲ್ಲಿಯೂ ಅಷ್ಟಾಂ ಗಗಳು ತೋರಿಬರುವವು. ಸೃಷ್ಟಿಯ ವ್ಯಾಪಾರಗಳು ಅವ್ಯಾಹತವಾಗಿ ನಡೆಯಲು ಈ ಅಷ್ಟಾವರಣಗಳು ಕಾರಣವಿರುವಂತೆ ಮಾನವ ದೇಹವು ಅಷ್ಟಾವರಣಗಳಿಂದ ಆಚ್ಛಾದಿತವಾಗಿದೆ. ಈ ದೇಹದಲ್ಲಿ ಕರ್ಮೇಂದ್ರಿಯ ಗಳೂ ಜ್ಞಾನೇಂದ್ರಿಯಗಳೂ ಕರಣೇಂದ್ರಿಯಗಳೂ ಆತ್ಮೋನ್ನತಿಗೂ ಆತ್ಮ ವಿಕಾಸಕ್ಕೂ ಆತ್ಮೋದ್ಧಾರಕ್ಕೂ ಒಟ್ಟೀ ಸಹಕಾರಿಗಳಾಗಿವೆ. ಇದನ್ನು ಮಾನವನು ಸದ್ಭಾವದಲ್ಲಿಯೂ ದುರ್ಭಾವದಲ್ಲಿಯೂ ಉಪಯೋಗಿಸಬಹುದು ವಿಶ್ವಧರ್ಮವು ಇವುಗಳನ್ನು ಸದ್ಗುಣ ಸದ್ವರ್ತನಾದಿ ಸದ್ಭಾವಪೂರಿತ ಆತ್ಮವಿಕಾಸದಲ್ಲಿ ಉಪಯೋಗಿಸುವಂತೆ ಸಮಾಜವೆಂಬ ಪುರುಷನ ಅಂಗೋ ಪಾಂಗ ಪ್ರತ್ಯಂಗಗಳಲ್ಲಿ ಕಟ್ಟಳೆಯಿಂದ ಕಟ್ಟಿ ಭಕ್ತಿಭಾವದಿಂದ ನೀತಿ ನೆಲಗಟ್ಟಿನ ಮೇಲೆ ವೀರಶೈವವೆಂಬ ವಿಶ್ವಧರ್ಮದ ಮಹಾಮಂದಿರವನ್ನು ಅಚ್ಚಳಿಯದೆ ಬಿಚ್ಚಿಬೀಳದೆ ನಿಲ್ಲುವಂತೆಯೂ ಅದರ ಅಚಲವಾದ ಸುಖ

ಶಾಂತಿ ಸೌಭಾಗ್ಯವು ವಿಶ್ವದ ಪ್ರತಿಯೊಂದು ವ್ಯಕ್ತಿಗೆ ಸಹಜ ಸಂಭವಿಸು ವಂತೆಯೂ ರಚಿಸಿದ್ದು ವಿಶ್ವಂಭರಿ ವಿಶ್ವನಾಥರ ಕರಕಮಲದಿಂಮುದ್ಭವಿಸಿದ ವಿಶ್ವಾರಾಧ್ಯರೆಂದೆನಿಸಿದ ಮಹಾಮಹಿಮರಿಂದಲ್ಲವೆ ಮತ್ತೇನು ?

ಮಾನವನು ತಾನು ಕೈಕೊಂಡ ಕಾಯಕವು ತನಗೂ ತನ್ನ ಕುಟುಂಬಕ್ಕೂ ವಿಶ್ವಕ್ಕೂ ವಿನಿಮಯವಾಗುವಂತೆ ಸಮಾಜದ ಕಾರ್ಯಾಂಶವನ್ನು ಕೈಕೊಂಡು ಆ ಕಾರ್ಯವು ಪೂರ್ಣವಾಗುವ ಕಾಲವರಿತು ಇಡೀ ಕಾಲ ಕಾರ್ಯಾಂಶಗಳ ಭಾಗಗಳಾದ ಪ್ರತಿದಿನದ ಕಾಯಕದಲ್ಲಿ ಪೂರ್ಣಮಾಡಿ ಆ ಕಾಯಕದ ಹಾಗದ ಹಣದಿಂದ ಸತಿಪತಿಗಳು ಸಮಾಜಸೇವಾಸಕ್ತನಾದ ತ್ರಿಗುಣಾತೀತನಾದ ಜ್ಞಾನರೂಪಿಯಾದ ಜಂಗಮನೊಡನೆ ಪಂಚಾಚಾರ ಗಳಿಂದೊಡಗೂಡಿ ಸದ್ಭಕ್ತಿಯುತರಾಗಿ ಅಷ್ಟಾವರಣಕ್ರಿಯೆಯಿಂದ ಪಂಚ ಪ್ರಸಾದವನ್ನು ಪಡೆದು ಪರಿಪೂರ್ಣಾನಂದವನ್ನು ನಿತ್ಯ ನಿತ್ಯ ಹೊಂದುವ ಪರಮ ವಿಶ್ವಧರ್ಮದ ನಿತ್ಯದ ನೆಲೆಯು. ಸತ್ಯದ ಸದನವು.

ಅಂಗನ ದೇಹತ್ರಯ, ಆತ್ಮತ್ರಯ, ಕಲಾತ್ರಯ, ಭಾವತ್ರಯ, ಗುಣತ್ರಯ, ಅವಸ್ಥಾತ್ರಯ, ತನುತ್ರಯ, ಮನತ್ರಯ, ಅಂಗತ್ರಯಾದಿ ಗಳನ್ನರಿತು ಲಿಂಗತ್ರಯಗಳನ್ನು ಅಂಗತ್ರಯಂಗಳಲ್ಲ ಅಂಗೈಸಿ ಶರೀರ ತ್ರಯಗಳಿಂದ ಆತ್ಮಾನುಭಾವಿಯಾಗಿ ಈ ಶರೀರದ ಷಟ್‌ಸ್ಥಲಗಳ ಷಡಂ ಗಗಳಲ್ಲಿ ಷಡ್‌ಲಿಂಗಗಳನ್ನು ಅಳವಡಿಸುವ ಸುಲಭಮಾರ್ಗಗಳನ್ನರಿತು, ಆತ್ಮನು ಸುಶಬ್ದ, ಸುಸ್ಪರ್ಶ, ಸುರೂಪ, ಸುರಸ, ಸುಗಂಧಗಳಿಂದ ತೃಪ್ತ ನಾಗುವಂತೆ ಆತ್ಮನಲ್ಲಿ ಮಹಾಲಿಂಗವನ್ನೂ ಸುಶಬ್ದದಲ್ಲಿ ಪ್ರಸಾದಲಿಂಗ ವನ್ನೂ ಸುಸ್ಪರ್ಶದಲ್ಲಿ ಜಂಗಮಲಿಂಗವನ್ನೂ ಸುರೂಪದಲ್ಲಿ ಶಿವಲಿಂಗವನ್ನೂ ಸುರುಚಿಯಲ್ಲಿ ಗುರುಲಿಂಗವನ್ನೂ ಸುಗಂಧದಲ್ಲಿ ಆಚಾರಲಿಂಗವನ್ನೂ ಅವ ಗ್ರಹಿಸಿ ಬಗಾಗ್ಗೆ ಆನಂದಿಸುವ ಸರ್ವಾಚಾರ ಸಂಪನ್ನನ ವಿಶ್ವಧರ್ಮದ ಸುಲಭಸಾಧ್ಯವಾದ ಸದಾಚಾರದ ಸಂಭ್ರಮವು.

ಶಿವಭಕ್ತರಿಗಿಂತ ಹಿರಿಯರಾರಿಲ್ಲವಯ್ಯಾ ತನಗಿಂತ ಕಿರಿಯರಾರಿಲ್ಲ ವಯ್ಯಾ ಎಂಬ ಶ್ರೀ ಬಸವಣ್ಣನ ವಚನಾಮೃತದಂತೆ ಪ್ರತಿಯೊಬ್ಬ ಲಿಂಗಾಂ ಗಿಯು ಮುಂಜಾನೆ ತನ್ನ ಕಾಯಕಕ್ಕೆ ಕಾಲಿಡುವಾಗ್ಗೆ ಎದುರಿಗೆ ಬಂದ ಪ್ರತಿಯೊಬ್ಬ ಮಾನವನಿಗೆ ಶರಣು ಹೊಡೆಯದೆ ಮುಂದಡಿಯಿಡನು

ಅಹಹ ಇದೆಂಥ ಭೃತ್ಯಾಚಾರವು; ತನ್ನ ದೃಷ್ಟಿಪಥದಲ್ಲಿ ಸಿಕ್ಕ ಆತ್ಮರುಗಳೆಲ್ಲ ಶಿವಾತ್ಮ ಬುದ್ಧಿಯಿಂದ ಬಂಧುಗಳೆಂದು ಭಾವಿಸುವದು; ತನ್ನ ತನುವೇ ಗುರು, ಮನವೇ ಲಿಂಗ, ಭಾವವೇ (ಜ್ಞಾನವೇ) ಜಂಗಮವೆಂದರಿತ ಶಿವಭಕ್ತನು ತನ್ನಂತೆ ಪರರನ್ನು ಬಗೆದು 'ಆತ್ಮವತ್ ಸರ್ವಭೂತಾನಿ' ಎಂಬ ಅಹಿಂಸಾ ತತ್ವವನ್ನು ತಿಳಿದು ತನ್ನ ನಡೆಯಲ್ಲಿ ನುಡಿಯಲ್ಲಿ ಮನದಲ್ಲಿ ಭಾವದಲ್ಲಿ ಸಹ ನೆಲೆಗೊಂಡ ಭೃತ್ಯಾಚಾರವು ವೀರಶೈವ ಸಮಾಜದ ದಾಸೋಹದಲ್ಲಿ ಅಂದರೆ ಪ್ರತಿಯೊಂದು ಮನೆ, ಮಠ, ಸಾರ್ವಜನಿಕ ಸಂಸ್ಥೆ, ಜಾತ್ರೆ, ಕ್ಷೇತ್ರ, ಶಿವಶರಣಸ್ಥಾನಗಳಲ್ಲಿ ಸದ್ಯಕ್ಕೂ ಅಡಿಗಡಿಗೆ ದೃಷ್ಟಿಗೋಚರವಾಗುತ್ತದಲ್ಲ? "ನಾನೊಂದು ಸುರಗಿಯನೇನೆಂದು ಹಿಡಿಯುವೆ, ಏನ ಕಿತ್ತೇನನಿರಿಯುವೆ? ಜಗವೆಲ್ಲ ನೀನಾಗಿಪ್ಪುದರಿಂದ ನೀನೆ ಶರಣೆಂದ ನಮ್ಮ ರಾಮನಾಥ" ಇಂಥ ಸದುಹೃದಯದ ಭೃತ್ಯಾಚಾರವು ಭಕ್ತವತ್ಸಲದ ೧೫ ಸ್ಥಲಗಳಕಡೆಗಿರುವ ಉಪಾಧಿ, ನಿರುಪಾಧಿ, ಸಹಜ ಮಾಟಸ್ಥಲಗಳಾದ ದಾಸೋಹಾಚರಣೆಗಳ ಕಾರುಣ್ಯದ ಕುರುಹು ನೆನಹುಗಳ ನೆಮ್ಮದಿಯು.

ತನ್ನ ಅಂಗದ ಮೇಲಿನ ಸ್ವಾತ್ಮನ ಕುರುಹು ವಿಶ್ವವ್ಯಾಪಿಯಾದ ಅಂತರ್ಯಾಮಿಯಾದ ವಿಶ್ವನಾಥನೇ ಲಿಂಗವೆಂದರಿದು ಚಿಚ್ಛಕ್ತಿರೂಪಾದ ಚಿಜ್ಯೋತಿಯಾದ ಚಿದ್ರೂಪಾದ ಲಿಂಗದೇವನನ್ನು ತ್ರಿಮಲ ರಹಿತನಾಗಿ ತ್ರಿಗುಣಾತೀತನಾಗಿ ಅಂಗತ್ರಯ ಶುದ್ಧನಾಗಿ ತನು ಮನೋಭಾವದಲ್ಲಿ ಇಷ್ಟ ಪ್ರಾಣ ಭಾವಲಿಂಗಗಳನ್ನು ಸಂಬಂಧಿಸಿಕೊಂಡು ತ್ರಿಕಾಲಗಳಲ್ಲಿ ತ್ರಿಲಿಂಗಗಳ ಪೂಜೆಯನ್ನು ನಿತ್ಯಶ: ಮಾಡುವುದೇ ನಿತ್ಯಾಚಾರವು. ಮುಂಜಾನೆಯ ಯಾವತ್ತೂ ಕ್ರಿಯೆಗಳು ಇಷ್ಟಲಿಂಗದವೆಂದು ಭಾವಿಸಿ ತನುಶುದ್ಧ ಮನಶುದ್ಧ ಭಾವಶುದ್ಧ ಕೈಶುದ್ಧ ಕಾಲು ಶುದ್ಧ ಕಣ್ಣು ಶುದ್ಧ ಜ್ಞಾನ ಶುದ್ಧ ಯಾವತ್ತೂ ಅಂಗೋಪಾಂಗ ಶುದ್ಧೀಕರಿಸುವಾಗ ಲಿಂಗ ದೇವನ ಷಟ್‌ಸ್ಥಲ ಶುದ್ಧವನ್ನು ಕರಮನ ಭಾವಂಗಳಿಂದ ಭಾವಿಸಿ ಪ್ರಾತ:ಕಾಲದ ಶಿವಾರ್ಚನೆಯನ್ನು ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಮಾಡಿ ಸತ್ಕಾಯಕಕ್ಕೆ ಅಣಿಯಾಗಿ ಆ ಸತ್ಕಾಯಕವನ್ನು ಮನಮುಟ್ಟಿ ಶಿವನ ಕಾಯಕವೆಂದು ಭಾವಿಸಿ ಮುಗಿಸಿ ಮಧ್ಯಾಹ್ನದಲ್ಲಿ ಪ್ರಾಣಲಿಂಗ ಪೂಜೆಯು ಯಥಾಪ್ರಕಾರ ನಡೆದು ಗುರುಲಿಂಗ ಜಂಗಮಾರ್ಚನೆಯುಂಗೈದು ಶೇಷ ಪ್ರಸಾದವ ಪಡೆಯುವದೇ ಪರಮಾನಂದವಾದ ಲಿಂಗಾಚಾರವು.

ಅನೃತ, ಅಸ್ಥಿರ, ವಾಕ್ಯವಂಚನೆ, ಪಂಕ್ತಿಭೇದ, ಉದಾಸೀನ, ನಿರ್ದಯ ಎಂಬ ಆರು ಅಂತರಂಗದ ಭವಿಯಂ ಕಳೆದು ೩೬ ನಿಯಮ, ೫೬ ವ್ರತ, ೬೪ ಶೀಲಗಳಲ್ಲಿ ತನ್ನ ಆಚಾರಕ್ರಿಯೆ ಜ್ಞಾನಕ್ಕನುಕೂಲವಾದವುಗಳನ್ನು ಹಿಡಿದು ಬಿಡದಲೆ ತನ್ನ ಈ ವೀರ ವ್ರತಕ್ಕೆ ಆತಂಕವಾದರೆ ಗಣಾಚಾರ (ವೀರತ್ವ) ವನ್ನಾಚರಿಸುವದೇ ವೀರಶೈವದ ಮುಖ್ಯ ಗುರಿಯು. ಇದರಲ್ಲಿ ಗಣಾಚಾರಿಯು ಜೀವನ ಗುಣಗಳನ್ನು ಅಂದರೆ ಅನಿಷ್ಟಗಳನ್ನು ದೂಡುತ್ತ ಇಷ್ಟವಾದವುಗಳನ್ನು ಹಿಡಿಯುತ್ತ ಹೋಗುವದೇ ಜಾಣತನವು. ಒಂದು ಬಿಟ್ಟು ಒಂದು ಹಿಡಿಯುವದೆಂದರೆ, ಅಹಂ ಬ್ರಹ್ಮಾಸ್ಮಿ ಎಂಬದನ್ನು ಬಿಟ್ಟು ಶಿವಾದ್ವೈತವನ್ನು ಹಿಡಿಯುವದು. ಎರಡು ಬಿಟ್ಟು ಎರಡು ಹಿಡಿಯುವ ದೆಂದರೆ, ಅಂಗ ಬೇರೆ ಲಿಂಗ ಬೇರೆ ಎಂಬ ಭೇದಭಾವವನ್ನು ಬಿಟ್ಟು ಭಕ್ತಿ ಜ್ಞಾನಗಳ ಅಭೇದವನ್ನು ಅನುಕರಿಸುವದು. ಮೂರು ಬಿಟ್ಟು ಮೂರು ಹಿಡಿಯುವದೆಂದರೆ, ತಾಪತ್ರಯಗಳಾದ ಆದಿಭೌತಿಕ, ಆದಿದೈವಿಕ, ಆಧ್ಯಾತ್ಮಿಕಗಳೆಂಬವುಗಳನ್ನು ಬಿಟ್ಟು; ಇಷ್ಟ, ಪ್ರಾಣ, ಭಾವಲಿಂಗ ಗಳನ್ನು ಹಿಡಿಯುವದು. ನಾಲ್ಕು ಬಿಟ್ಟು ನಾಲ್ಕು ಹಿಡಿಯುವದೆಂದರೆ, ಮನ, ಬುದ್ಧಿ, ಚಿತ್ತ ಅಹಂಕಾರಗಳನುಳಿದು, ಗುರುಗಳಲ್ಲಿ ಅಂಗ, ಅಪ್ತ, ಸ್ಥಾನ, ಸದ್ಭಾವಗಳೆಂಬ ಭಕ್ತಿಯುತನಾಗುವದು. ಐದು ಬಿಟ್ಟು ಐದು ಹಿಡಿ ಯುವದೆಂದರೆ; ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಾವ ಎಂಬ ಪಂಚ ಕ್ಲೇಶಗಳನು ವರ್ಜಿಸಿ, ನಕಾರಾದಿ ಯಕಾರಾಂತವಾದ ಪಂಚಾಕ್ಷರವಂ ಸ್ಮರಿಸುತ್ತ ಇರುವದು, ಆರು ಬಿಟ್ಟು ಆರು ಹಿಡಿಯುವದೆಂದರೆ; ಕ್ಷುತ್, ಪಿಪಾಸೆ, ಶೋಕ, ದ್ರೋಹ, ಜನನ, ಮರಣಗಳೆಂಬ ಷಡೂರ್ಮಿಗಳ ನುಳಿದು; ದಾಸತ್ವ, ವೀರದಾಸತ್ವ, ಭೃತ್ಯತ್ವ, ಸಮಯಾಚಾರತ್ವ, ಶಾಂತತ್ವ ಸಕಳ ವಸ್ತುತ್ವಗಳೊಳುಳಿವುದು. ಏಳು ಬಿಟ್ಟು ಏಳು ಹಿಡಿಯುವದೆಂದರೆ ತನುವ್ಯಸನ, ಮನವ್ಯಸನ, ಧನವ್ಯಸನ, ರಾಜ್ಯವ್ಯಸನ, ವಿಶ್ವವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನಂಗಳುಳಿದು. ಸುಖೇಚ್ಛೆ, ಸುವಿಚಾರಣೆ, ತನುಮಾನಸಿ, ಸಂಸಕ್ತಿ, ಸತ್ವಾಸತ್ತಿ, ಪದಾರ್ಥಭಾವನೆ, ತೂರ್ಯಗಾಮಿ ಯೆಂಬ ಸಪ್ತಜ್ಞಾನಭೂಮಿಕೆಯುಳ್ಳವನಾಗುವದು. ಎಂಟು ಬಿಟ್ಟು ಎಂಟು ಹಿಡಿಯುವದೆಂದರೆ; ಆಲಸ, ಮೋಹ, ಅತಿನಿದ್ರೆ, ಚಾಪಲ್ಯ, ಹೀನವೃತ್ತಿ, ಪರನಿಂದೆ, ಹಿಂಸತ್ವ, ಪಾಪಿಷ್ಟತ್ವ ಎಂಬ ಗುಣಗಳನ್ನು ಕಳೆದು. ಶಿವ ಭಕ್ತಜನವಾತ್ಸಲ್ಯ, ಶಿವಪೂಜಾರತಿ, ಶಿವಾರ್ಚನೆ, ಶಿವಾರ್ಥವಾದ ವ್ಯಾಪಾರ.

ಶಿವಕಥಾಶ್ರವಣೇಚ್ಛೆ, ಶಿವಧ್ಯಾನ, ಶಿವಾದ್ವೈತಮತಾನುಕೂಲತೆ, ಪರಮ ಸಾತ್ವಿಕಗಳೆಂಬ ಅಷ್ಟವಿಧ ಭಕ್ತಿಯುತನಾಗಿರುವದು. ಒಂಭತ್ತು ಬಿಟ್ಟು ಒಂಭತ್ತು ಹಿಡಿಯುವದೆಂದರೆ; ಸುಖ, ದುಃಖ. ರಾಗ, ದ್ವೇಷ. ಮದ, ಮನ, ಧರ್ಮ, ಅಧರ್ಮ, ಭಾವನೆಗಳುಳಿದು. ಅಕ್ರೋಧ, ಆರೋಗ್ಯ, ಜಿತೇಂದ್ರಿಯತ್ವ, ಕ್ಷಮೆ, ಜನಪ್ರಿಯತ್ವ, ಅಲೋಭ, ದಾತೃತ್ವ, ಅಭಯ, ನಿರ್ಮದಗಳೆಂಬವನ್ನು ಬೆರಿಸಿದವನಾಗುವದು. ಹತ್ತು ಬಿಟ್ಟು ಹತ್ತು ಹಿಡಿಯುವದೆಂದರೆ, ಕರ್ಮೇಂದ್ರಿಯ ಐದು, ಜ್ಞಾನೇಂದ್ರಿಯ ಐದು, ಇವುಗಳ ಮರ್ಯಾಪಾರಂಗಳನುಳಿದು, ಸ್ಪರ್ಶನೋದಕ, ಅವಧಾರೋಧಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸತ್ಯೋದಕಗಳಲ್ಲಿ ಮಗ್ನನಾಗುವದು. ಹನ್ನೊಂದು ಬಿಟ್ಟು ಹನ್ನೊಂದು ಹಿಡಿಯುವದೆಂದರೆ; ಏಕಾದಶವೆಂದು ಪಕ್ಷಪಕ್ಷಕ್ಕೆ ಮಾಡುವ ಇತರ ಮತದವರ ಏಕಾದಶ ವ್ರತವ ವರ್ಜಿಸಿ, ಘ್ರಾಣದಲ್ಲಿ ಸುಗಂಧ, ಜಿಹ್ವೆಯಲ್ಲಿ ಸುರುಚಿ, ನೇತ್ರದಲ್ಲಿ ಸುರೂಪು, ತ್ವಕ್ಕಿನಲ್ಲಿ ಸುಸ್ಪರ್ಶ, ಶ್ರೋತ್ರದಲ್ಲಿ ಶಬ್ದ, ಹೃದಯದಲ್ಲಿ ತೃಪ್ತಿ, ತನುವಿನಲ್ಲಿ ಗುರುಪ್ರಸಾದ, ಮನದಲ್ಲಿ ಲಿಂಗಪ್ರಸಾದ, ಭಾವದಲ್ಲಿ ಜಂಗಮ ಪ್ರಸಾದ, ಮಹಸ್ಥಳದಲ್ಲಿ ಘನಶೇಷಪ್ರಸಾದ, ಸಕಲೇಂದ್ರಿಯಗಳಲ್ಲಿ ಸಮಯುಕ್ತಿ ಪ್ರಸಾದಗಳೆಂಬ ಏಕಾದಶ ಪ್ರಸಾದಗಳಲ್ಲಿ ಕಾಯವಡಗಿಸುವ ಪರಿಯೇ ಶಿವಾಚಾರವು.

ವ್ಯಕ್ತಿಯು ತನ್ನ ಯಾವತ್ತು ಶಕ್ತಿಯನ್ನು ಹಸ್ತದಲ್ಲಿ ಕೇಂದ್ರೀಕರಿಸಿ ಹಿಡಿದ ಕಾಯಕದಲ್ಲಿ ಎಂಥ ಎಡರು ತೊಡರುಗಳುಂಟಾದರೂ ಎದುರಿಸಿ ಅಂದಂದಿಗೆ ನೂರು ತುಂಬಿತ್ತೆಂದು ಜೀವದ ಹಂಗುದೊರೆದು ವೀರವ್ರತಿಯಾಗಿ ತಾನು ವಹಿಸಿದ ಸಮಾಜದ ಕಾರ್ಯವನ್ನು ಭೃತ್ಯ ಭಾವದಿಂದ ನಿರ್ವಹಿಸಿ ಉತ್ಸಾಹ ಪೂರ್ಣವಾಗಿ ಕಡೆಗಾಣಿಸಲು ಯಾವ ಅಭ್ಯಂತರವೂ ಇಲ್ಲ. ಇದನ್ನರಿತು "ತನ್ನ ಕೈಯಲ್ಲಿ ಪರುಷವಿರಲು ಪರರನ್ನು ಬೇಡಲೇಕೆ? ಎಂಬ ಶಿವಶರಣರ ನುಡಿಯು ಬಳಿಕೆಯಲ್ಲಿ ಬಂದುಬಿಟ್ಟಿದೆ. ಈ ವೀರಶೈವ ಸಮಾಜದ ಪ್ರತಿಯೊಂದು ವ್ಯಕ್ತಿಯು ಪರರನ್ನು ಎಂದೂ ಬೇಡಲಾರರು. ಹಿಂದೆ ಆಗಿಹೋದ ಶಿವಶರಣರ ಚರಿತಾರ್ಥವನ್ನೂ ಈಗಿನ ಸದ್ಭಕ್ತ ಶಿರೋಮಣಿಗಳನ್ನೂ ದೃಷ್ಟಿಪಥದಲ್ಲಿ ತಂದಿದ್ದಾದರೆ ಈ ಮಾತಿನ ಅನುಭವವು ಸಹಜ ಕಂಡುಬರುವದು. " ತನ್ನ ಜೀವನೋಪಾಯಕ್ಕೆ ಬೇಡದಾತನೇ ಜಂಗಮನು. " ಎಂದಮೇಲೆ ಜಂಗಮನಾದರೂ ಸಮಾಜೋನ್ನತಿಗಾಗಿ

ಕೈಯಾನನೇ ಹೊರತು ತನ್ನ ಜೀವನಾಧಾರಕ್ಕೆ ಎಂದೂ ಬೇಡನು. ಈ ಸಮಾಜದ ಪ್ರತಿ ವ್ಯಕ್ತಿಯು ಕಾಯಕದಿಂದಲೇ ಜೀವಿಸಿ ದಿನದಿನದೊಳು ಗಳಿಸಿದ ಹಣವನ್ನು ಅಂದಂದೇ ಸಮಾಜ ಹಿತಕ್ಕೆ ಸದ್ವಿನಿಯೋಗ ಮಾಡು ವದೇ ಸದ್ಧರ್ಮದ ಗುಟ್ಟು. ನಿನ್ನೆ ಗಳಿಸಿದ ಧನವು ಇಂದಂದು ತಂಗುಳ ವಾಯಿತೆಂಬ ಶಿವಶರಣರ ನಂಬಿಗೆ. ಕಾರಣ ಈ ವಿಶ್ವಧರ್ಮವು ನಿಸ್ವಾ ರ್ಥದ ನಿಧನ, ನಿರಾಶೆಯ ಕಾರಣ, ನಿಗಮಾಗಮದ ಹರಣವಾಗಿದೆ. "ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯವಾಗಿರಬೇಕು. ಭೂತಹಿತವಹ ವಚನವ ನುಡಿಯಬೇಕು. ಲಿಂಗ ಜಂಗಮವಲ್ಲ ನಿಂದೆ ಕಂದುಗಳಿಲ್ಲದಿರಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು. ತನು ಮನ ಧನವ ಗುರುಲಿಂಗ ಜಂಗಮಕ್ಕೆ ಸಮರ್ಪಿಸಬೇಕು. ಅಪಾತ್ರ ದಾನಂಗೆ ಯ್ಯದಿರಬೇಕು. ಸಕಲೇಂದ್ರಿಯಗಳು ತನ್ನ ವಶವಾಗಿರಬೇಕು. ಇದೇ ಮೊದಲಲ್ಲಿ ದೇಹಶೌಚನೋಡಾ. ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ ಎನಗಿದೆ ಸಾಧಕವು ನೋಡಾ ಕೂಡಲ ಸಂಗಮದೇವಾ" ಈ ವಚನವು ಧರ್ಮಾಚಾರದ ಧಮನಿಯಾಗಿದೆ.

ಆತ್ಮನ ಸೂಕ್ಷ್ಮಾಂಗದ ಷಟ್‌ಸ್ಥಲಗಳಲ್ಲಿ ಪ್ರಕಾಶಿಸುವ, ಷಡಂಗಗ ಳನ್ನು ವ್ಯಾಪಿಸಿರುವ ಷಡ್‌ಲಿಂಗಗಳ ಸಾದಾಖ್ಯಗಳೇ (ಪ್ರಕಾಶಗಳೇ) ಆಚಾರ ಲಿಂಗದ ಕರ್ಮಸಾದಾಖ್ಯವಾದ ಸುಗಂಧ (ಸದ್ವಾಸನೆ) ವನ್ನು ಬೀರುವ ರಂಭಾ ಪೀಠವೂ, ಕರ್ತೃಸಾದಾಖ್ಯವಾದ ಸುರುಚಿಮಯವಾದ ಉಜ್ಜಯಿನಿ ಪೀಠವೂ, ಮೂರ್ತಿ ಸಾದಾಖ್ಯವಾದ ಸುರೂಪವನ್ನು ತೋರುವ ಶ್ರೀಶೈಲ ಪೀಠವೂ, ಅಮೂರ್ತಿ ಸಾದಾಖ್ಯವಾದ ಸುಸ್ಪರ್ಶನವನ್ನರುಹುವ ಕೇದಾರ ಪೀಠವೂ, ಶಿವಸಾದಾಖ್ಯವಾದ ಸುಶಬ್ದವನ್ನು ಆಲಿಸುವ ಕಾಶೀಪೀಠವೂ, ಇವೆಲ್ಲವುಗ ಳಿಂದ ತೃಪ್ತಿಬಡುವ ಮಹಾಸಾದಾಖ್ಯವಾದ ಶೂನ್ಯ ಸಿಂಹಾಸನವೂ, ಸಮಾಜ ದಲ್ಲಿಯೂ ವ್ಯಕ್ತಿಯ ಹೃದಯದಲ್ಲಿಯೂ ಕಂಗೊಳಿಸುತ್ತವೆ. ಇಷ್ಟೇ ಅಲ್ಲ, ಆಯಾ ಪಂಚಪೀಠಾಧಿಕಾರಿಗಳ ಕರ್ತವ್ಯವನ್ನು ಅನುದಿನ ಜರಗಿಸುವಂತೆ ಮೂರ ಮನೆಯ ಹಳ್ಳಿಯಲ್ಲಿಯೂ ಕೂಡ ಪಂಚಕಲಶಗಳ ಹಕ್ಕುದಾರ ರಾದ ಪಂಚಾಚಾರಕ ವ್ಯವಸ್ಥೆಯು ಕಂಡುಬರುವದು. ಇಂಥ ಸಮಾಜ ಸಂಘಟನೆಯು ವಿಶ್ವಧರ್ಮದವಿನಾ ಆವ ಧರ್ಮದಲ್ಲಿಯೂ ಕಾಣಲಶಕ್ಯವು. "ಜಗವನ್ನೆಲ್ಲ ಒಂದೂರಮಾಡಿ ಊರನ್ನೆಲ್ಲ ಮನೆಯ ಮಾಡುವ" ವಿಶಾಲ ದೃಷ್ಟಿಯು, ವಿಶಾಲಹೃದಯದ, ವಿಶ್ವಧರ್ಮಿಯ ಮುಖ್ಯವಾದ ತತ್ವವು.

ಕೂಸಿರುವಾಗ ತಾಯಿಯು ಅದರ ಮಲಮೂತ್ರಗಳ ವ್ಯವಸ್ಥೆಯನ್ನೂ ಹೊಟ್ಟೆಬಟ್ಟೆಗಳ ವ್ಯವಸ್ಥೆಯನ್ನೂ ಹಾಸಿಗೆ ಹೊದಿಕೆಗಳ ವ್ಯವಸ್ಥೆಯನ್ನೂ ಮಾಡುತ್ತಿರುವಳು. ಅದು ಬೆಳೆದು ದೊಡ್ಡದಾದಂತೆ, ಹರಿದಾಡಹತ್ತುವದು. ಆಗ ಅದು ನೋಡಿದ ಕೈಗೆ ಸಿಕ್ಕ ಎಲ್ಲ ಪದಾರ್ಥಗಳನ್ನು ಹಿಡಿಯುವದು, ಹಿಚುಕುವದು, ಮುರಿಯುವದು, ಹರಿಯುವದು, ಬಾಯಿಯಲ್ಲಿ ಹಾಕಿ ಕೊಳ್ಳುವದು ಮತ್ತು ಇದನ್ನ ತಿನ್ನಬೇಕು, ಇದನ್ನು ತಿನ್ನಬಾರದೆಂಬ ಜ್ಞಾನವು ಅದಕ್ಕಿರುವದಿಲ್ಲ. ತನ್ನ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳನ್ನು ಸಿಕ್ಕಂತೆ ಬಳಿಸಿ ತೊಂದರೆಗೊಳಗಾಗುತ್ತದೆ ತಾಯಿಯ ಅಲಕ್ಷತೆಯಿಂದ ಎರಡು ವರ್ಷದ ಹುಡುಗರು ಮಲಮೂತ್ರ ಮಾಡಿ ಕೈಯಿಂದ ಸಾರಿಸುವ ದನ್ನು ನೋಡುತ್ತೇವೆ. ಆ ಬಾಲಕರ ಕ್ರಿಯಾಶಕ್ತಿಯು ಆ ಕಾಲಕ್ಕೆ ಅಷ್ಟು ಬಲವತ್ತರವಿರುತ್ತದೆ. ಬೆಂಕಿಯನ್ನು ಹಿಡಿದು ಸುಟ್ಟುಕೊಳ್ಳಲಿಕ್ಕೂ ಫಲಂಗದ ಮೇಲಿಂದ ಜಿಗಿಯಲಿಕ್ಕೂ ಅದು ಹಿಂದೆ ಮುಂದೆ ನೋಡುವದಿಲ್ಲ. ಬರ ಬರುತ್ತ ಅದು ತನ್ನ ಅನುಭವದಿಂದಲೂ ತಾಯಿಯ ಶಿಕ್ಷಣದಿಂದಲೂ ಹಿಡಿಯಬಾರದ್ದನ್ನು ಹಿಡಿಯದೆ ಮಾಡಬಾರದ್ದನ್ನು ಮಾಡದೆ ತನ್ನ ಶರೀರ (ಜೀವ) ಸಂರಕ್ಷಣೆಯ ಜ್ಞಾನವನ್ನು ಮಾಡಿಕೊಳ್ಳುತ್ತಿರುತ್ತದೆ. ಅಂತು ಹಿತಾಹಿತಗಳನ್ನೂ ತನ್ನ ಪರಿಸ್ಥಿತಿಯ ಪದಾರ್ಥಗಳ ಜ್ಞಾನವನ್ನೂ ಮಾಡಿ ಕೊಳ್ಳುತ್ತಿರುತ್ತದೆ. ತಿನ್ನುವ ಪದಾರ್ಥಗಳಲ್ಲಿ ಇದು ಮಣ್ಣು, ಇದು ಹಣ್ಣು ಎಂಬ ಜ್ಞಾನವಾಗುವತನಕ ಮಣ್ಣನ್ನಾದರೂ ತಿನ್ನಲು ಹವಣಿಸಹತ್ತುವದು. ಇದು ರೂಪು ರುಚಿಗಳಸಲುವಾಗಿ ಸ್ವಾಭಾವಿಕವಾಗಿ ಮಾನವ ಜಾತಿಯ ಲ್ಲಿಯ ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ, ಚಿಚ್ಛಕ್ತಿ ಗಳ ಕಾರ್ಯವಾಗಿರುವದು. ಈ ಪ್ರತಿಯೊಂದು ಶಕ್ತಿಯಲ್ಲಿ ಎರಡು ವಿಧ ವಾದ ಶಕ್ತಿಗಳಿರುತ್ತವೆ.

ಕ್ರಿಯಾಶಕ್ತಿಯ ವಿಷಯವಾಗಿ ವಿಚಾರಿಸಿದರೆ "ಶಕ್ತಿಶ್ಚದ್ವಿವಿಧಾ ಪ್ರೋಕ್ತಾ" ಎಂದು ಹೇಳುತ್ತಿಹುದಾದ ಕಾರಣ ಲೋಕದ ಜನರು ಅಸಿ, ಮಸಿ, ಕೃಷಿ, ವಾಣಿಜ್ಯ, ಯಾಚನೆ, ಗೋಪಾಲಿಕೆಗಳೆಂಬ ಷಡ್‌ಕರ್ಮಂಗಳನ್ನು ಮಾಡು ವರು. ಅಪರೆ ಲಿಂಗಾಂಗಿಗಳು ಇವುಗಳಲ್ಲಾವಕಾಯಕ ಮಾಡಿದರೂ ಗುರು ಸೇವೆ, ಲಿಂಗಪೂಜೆ, ಜಂಗಮ ದಾಸೋಹಗಳೆಂಬ ಸತ್ಕ್ರಿಯೆಗಳನ್ನಿಟ್ಟು ಕೊಂಡು ವಾಗಾದಿ ಕರ್ಮೇಂದ್ರಿಯಗಳಲ್ಲಿ ಕ್ರಿಯಾಶಕ್ತಿ ಇದ್ದುದರಿಂದ ಶಿವಾ

ಎಂಬುದೇ ವಾಕ್ಕು, ಶಿವಾಚಾರ ದೃಢಪಡಿಸುವದೇ ಪಾಣಿ, ಗುರುಮಾರ್ಗಾ ಚಾರಿಸುವವೇ ಪಾದ, ಅಧೋಗತಿಗೆಳೆವ ಮಲತ್ರಯಂಗಳಂ ಬಿಡುವುದೇ ಪಾಯು, ಶಿವಾನುಭಾವಿಗಳ ಸತ್ಸಂಗದಲ್ಲಿ ಸದಾ ಆನಂದಿಸುವದೇ ಗುಹ್ಯ ವಾಗಿರ್ದ ವಾಗಾದಿ ಕರ್ಮೇಂದ್ರಿಯಗನ್ನು ಪ್ರವೃತ್ತಿ ಮಾರ್ಗದಿಂದ ನಿವೃತ್ತಿ ಮಾರ್ಗದತ್ತ ಸಾಗಿಸುವುದೇ ಕ್ರಿಯಾಚಾರದ ಕಿರಣವು.

ಜ್ಞಾನಶಕ್ತಿಯ ವಿಷಯವಾಗಿ ವಿಚಾರಿಸಿದರೆ ಜ್ಞಾನಶಕ್ತಿಯು ಎರಡು ತೆರನಾಗಿಹಳು. ಹೇಗೆಂದರೆ ಲೋಕದಾತ್ಮರುಗಳಿಗೆ ಗುರು ನರ, ಲಿಂಗ ಶಿಲೆ, ಜಂಗಮನು ಮನುಜ, ಪಾದೋದಕ ನೀರು, ಪ್ರಸಾದ ಎಂಜಲು ಎಂಬ ಅಜ್ಞಾನವನ್ನೇ ಪ್ರೇರಿಸಿ ಕೊಡುತ್ತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಯಾಗಿ ಆಚರಿಸುವ ಶಿವಶರಣರಿಗೆ ನಿಃಕಲ ಬ್ರಹ್ಮದ ಸದ್ರೂಪವೇ ಗುರು, ಚಿದ್ರೂಪವೇ ಲಿಂಗ, ಆನಂದವೇ ಜಂಗಮ, ನಿತ್ಯತ್ವವೇ ಪ್ರಸಾದ, ಪರಿಪೂರ್ಣತ್ವವೇ ಪಾದೋದಕವೆಂದರಿವ ಸುಜ್ಞಾನ ವನ್ನೇ ಪ್ರೇರಿಸಿ ಕೊಡುತ್ತಿಹಳು. ಈ ರೀತಿಯಲ್ಲಿ ಜ್ಞಾನಶಕ್ತಿಯು ಎರಡು ತೆರನಾಗಿರುತ್ತಿಹಳು ಪ್ರತ್ಯಂತು ಮಲ್ಲದೆ ಶ್ರೋತ್ರಾದಿ ಜ್ಞಾನಂಗಳೈದು ಜ್ಞಾನ ಶಕ್ತಿಯ ಸ್ವರೂಪದಿಂದಿದ್ದ ಕಾರಣ ಆ ಜ್ಞಾನ ಶಕ್ತಿಯ ಸ್ವರೂಪಾದ ಶ್ರೋತ್ರಾದಿ ಜ್ಞಾನೇಂದ್ರಿಯಗಳೊಳಗೆ ಶ್ರೋತ್ರದಲ್ಲಿ ಶಿವಕಥೆ ಶಿವಪುರಾಣ ಆದ್ಯರ ವಚನವಲ್ಲದೆ ಅನ್ಯವಪ್ಪ ಮಯಾ ಕುಶಾಸ್ತ್ರ ಕುಭಾಷೆಗಳಂ ಕೇಳ ದಿಹುದು. ತ್ವಕ್ಕಿನಲ್ಲಿ ಶ್ರೀವಿಭೂತಿ ರುದ್ರಾಕ್ಷಿ ಶಿವಲಿಂಗಧಾರಣೆಯಲ್ಲದೆ ಅನ್ಯವಪ್ಪ ಮಾಯಾ ಚೋಪಂಗಳಂ ಧರಿಸದಿಹದು. ಜಿಹ್ವೆಯಲ್ಲಿ ಶಿವ ಸುಖ ಪ್ರಸನ್ನವಪ್ಪ ಪ್ರಸಾದವ ಸ್ವೀಕರಿಸುವದಲ್ಲದೆ ಅನ್ಯವಪ್ಪ ಮಾಯೋ ಚ್ಚಿಷ್ಟಂಗಳಂ ಭುಂಜಿಸದಿಹುದು. ಘ್ರಾಣದಲ್ಲಿ ಶಿವ ನಿರ್ಮಾಲ್ಯ ಗಂಧವಲ್ಲದೆ ಅನ್ಯವಪ್ಪ ಮಾಯಾ ದುರ್ವಾಸನೆಯು ಘ್ರಾಣಿಸದಿಹುದು. ಈ ರೀತಿಯಲ್ಲಿ ಶ್ರೋತ್ರಾದಿ ಜ್ಞಾನೇಂದ್ರಿಯಗಳೈದನ್ನು ಸುಜ್ಞಾನ ಜ್ಯೋತಿಯುಕಡೆಗೆ ಎಳೆ ಯುವದೇ ಜ್ಞಾನಾಚಾರವು.

ಮೇಲಿನ ಶಕ್ತಿಗಳಂತೆ ಇಚ್ಛಾಶಕ್ತಿಯ ೧ನೇ ವಿಧವಾದ ಹುಸಿ, ಕಳವು, ಪರದಾರ, ಪರಹಿಂಸೆ, ಅತಿಕಾಂಕ್ಷೆಗಳನ್ನತಿಗಳೆದು. ಲಿಂಗಾಂಗಿಗಳು ೨ ನೇ ವಿಧದ ಪಂಚಾಚಾರಗಳಲ್ಲಿ ಇಚ್ಛೆಯುಳ್ಳವರಾಗುವರು. ಆ ಇಚ್ಛಾಶಕ್ತಿಯ ಸ್ವರೂಪವಾದ ಶಬ್ದಾದಿ ವಿಷಯಂಗಳೊಳಗೆ ಶಬ್ದ ಗುರು, ಸ್ಪರ್ಶಲಿಂಗ,

ರೂಪು ಶಿವಲಾಂಛನ, ರಸ ಶಿವಪ್ರಸಾದ ಸೇವನೆ, ಗಂಧ ಶಿವನಿರ್ಮಾಲ್ಯಗಳಲ್ಲಿ ತಮ್ಮ ಇಚ್ಛೆಯನ್ನು ಒಲಿಸುತ್ತಿರುವರು. ಮತ್ತು ಆದಿಶಕ್ತಿಯು ಎರಡು ವಿಧಗಳಲ್ಲಿ ಒಂದನೆಯ ವಿಧವಾದ ಜಾತಿ, ವರ್ಣ, ಕುಲ, ಗೋತ್ರ, ಸೂತ್ರ ನಾಮಾಚಾರಗಳನ್ನತಿಗಳೆದು. ಲಿಂಗಾಂಗಿಗಳು ೨ ನೇ ವಿಧವಾದ ಭಕ್ತಿ, ಜ್ಞಾನ, ವೈರಾಗ್ಯಗಳ ಆದಿವಿಡಿದು ಕುಲವೇ ಶಿವಕುಲ, ಗೋತ್ರವೇ ನಂದೀಶ್ವರ ಗೋತ್ರ, ಸಕಲ ಸದ್ಭಕ್ತಜನಗಳೇ ತಂದೆ ತಾಯಿ ಬಂಧು ಬಳಗ ವವರೆಂದು ಆಚರಿಸುವರು. ಇದಲ್ಲದೆ ಪ್ರಾಣಾದಿಗಳೈದು ಆದಿಶಕ್ತಿಯು ರೂಪುಗಳಾದ ಕಾರಣ ಪ್ರಾಣವಾಯುವೆ ಸತ್ತು, ಅಪಾನವಾಯುವೆ ಚಿತ್ತು ವ್ಯಾನವಾಯುವೆ ಆನಂದ, ಉದಾನವಾಯುವೆ ನಿತ್ಯ, ಸಮಾನವಾಯುವೆ ಪರಿಪೂರ್ಣವಾಗಿ ಆದಿಶಕ್ತಿಯನ್ನನುಸರಿಸುವರು. ಹಾಗು ಪರಾಶಕ್ತಿಯು ದ್ವಿವಿಧವಲ್ಲಿ ೧ನೆಯ ವಿಧದಲ್ಲಿ ಲೋಕದಾತ್ಮರುಗಳು, ಇಂದ್ರಿಯ ವಿಷಯುಪ ಪ್ರಪಂಚದಲ್ಲಿಯೇ ಪರವಶರಾಗುತಿಹರು. ಈ ಲಿಂಗಾಂಗ ಸಂಬಂಧಿಗಳು ಎರಡನೇ ವಿಧವಾದ ಶಕ್ತಿಯು ಶರಣ ಸತಿ, ಲಿಂಗ ಪತಿಯಾಗಿ ಇಂದ್ರಿಯಗಳೇ ಲಿಂಗೇಂದ್ರಿಯಗಳಾಗಿ, ವಿಷಯಂಗಳೆಲ್ಲ ಲಿಂಗಪ್ರಸಾದವಾಗಿ ಅಳವಡಿಸಿ ಕೊಂಡು, ಆಚರಿಸುವ ಶಕ್ತಿಯುತರಾಗುವರು. ಮನಸಾದಿ ಕರಣಂಗಳೈದು ಪರಾಶಕ್ತಿಯು ಸ್ವರೂಪದಿಂದಿದ್ದ ಕಾರಣ ಮನದಲ್ಲಿ ಶಿವಧ್ಯಾನ, ಬುದ್ಧಿಯಲ್ಲಿ ನಿರ್ವಂಚನೆ, ಚಿತ್ತದಲ್ಲಿ ಶಿವದಾಸೋಹ, ಅಹಂಕಾರದಲ್ಲಿ ನಿರಹಂಕಾರ, ಅಜ್ಞಾನದಲ್ಲಿ ಸುಜ್ಞಾನಗಳನ್ನು ಸುಳಿಸುವ ಸುಚರಿತರು. ಇನ್ನು ಚಿಚ್ಛಕ್ತಿಯು ಲೋಕದಾತ್ಮರುಗಳಿಗೆ ದಾಸೋಹವೆಂದು, ಉಲಿವ ಮೂಲ ಅಹಂಕಾರ ವನುಂಟು ಮಾಡಿಕೊಡುತಿಹಳು. ಇತ್ತ ಶಿವಶರಣರಿಗೆ ತಮ್ಮ ನಿಜವನರಿ ವಂಥ, ಮೂಲ ಜ್ಞಾನವನ್ನುಂಟು ಮಾಡಿಕೊಡುತಿಹಳು. ಇದಲ್ಲದೆ ಮೇಲಿನ ಭಾವಾದಿಕರಣಗಳು ಚಿಚ್ಛಕ್ತಿರೂಪವಾಗಿಯೂ ಇದ್ದದರಿಂದ ಆ ಕರಣಂಗ ಳೊಳಗೆ ಭಾವವೆ ಭಕ್ತಿ, ಮನವೆ ಲಿಂಗ, ಹೃದಯವೆ ಮುಖ, ಪರಿಣಾಮವೆ ಪದಾರ್ಥ, ಚಿತ್ತವೆ ಹಸ್ತವಾಗಿ, ಭಾವಾದಿಗಳು ನಿವೃತ್ತವಾಗುವದೆ ಚಿಚ್ಛಕ್ತಿಯ ಮೂರನೆಯ ವಿಧವಾದ ಚಿದ್ವಿಲಾಸವು.

ವಿಶ್ವಧರ್ಮಾನುಯಾಯಿಗಳು ಯಾವ ಮೂಲ ಶಕ್ತಿಯಿಂದ ಉಂಟಾ ಗಿವೆಯೋ ಆ ಶಕ್ತಿಯ ರೂಪುಗಳನ್ನೂ ಚನ್ನಾಗಿ ವಿಮರ್ಶಿಸಿ; ಆತ್ಮೋ ನ್ನತಿಗೆ ಅನುಕೂಲವಾದ ಶಕ್ತಿಸಹಾಯವನ್ನು ಪಡೆಯುತ್ತಿದ್ದದರಿಂದ, ಶಕ್ತಿ ವಿಶಿಷ್ಟಾದ್ವೈತ ಮತವೆಂದು ವಿಶ್ವಧರ್ಮಕ್ಕೆ ಒಪ್ಪುವ ಹೆಸರಾಗಿದೆ. ಕಾರಣ

ಪ್ರಪಂಚ ಬಿಟ್ಟು ಪಾರಮಾರ್ಥವಿಲ್ಲ. ಪಾರಮಾರ್ಥ ಬಿಟ್ಟು ಪ್ರಪಂಚವಿಲ್ಲ ಎಂಬ ನುಡಿಯು ಬಳಿಕೆಯಲ್ಲಿ ಬಂದಿದೆ. ವೀರಶೈವ ಸದ್ಭಕ್ತರು ಶಕ್ತಿಸಹ ವಾಗಿ ಅಂದರೆ ದಂಪತಿಗಳೀರ್ವರೂ ಲಿಂಗಾಂಗ ಸಾಮರಸ್ಯಕ್ಕೆ ಯೋಗ್ಯರು. ಇತರ ಮತದವರಂತೆ ಹೆಂಗಸು ಶೂದ್ರ, ಗಂಡಸು ಬ್ರಾಹ್ಮಣನೆಂಬ ಭೇದ ಭಾವವು ಇಲ್ಲವೇ ಇಲ್ಲ. ವೀರಶೈವ ದೀಕ್ಷಾ ಸಂಸ್ಕಾರಗಳು ಗರ್ಭದಿಂದ ಕೂಸು ಬಾಲ ಬಾಲಿಕೆ ದಂಪತಿಗಳಿಗೆ ಕಾಲವರಿತು ಆಗುವದುಂಟು. ಅದ ರಲ್ಲಿ ಲಿಂಗಧಾರಣವು ಮುಖ್ಯ. ಲಿಂಗಪೂಜೆಯು ಹೊರತು ಅನ್ಯ ದೈವಂಗ ಳಿಲ್ಲ. ಗುರುಸೇವೆ ಲಿಂಗಪೂಜೆ ಜಂಗಮಾರ್ಚನೆಯೇ ಇವರ ಪೂಜಾಂಗ ಗಳು. ಈ ವೀರಶೈವ ಪದ್ಧತಿಯು ಸದ್ಭಕ್ತ ಶಿವಶರಣರ ಮನೆತನಗಳು ಕರ್ನಾಟಕದಲ್ಲಿ ಕಾಣಬರುವವು. ಅವರ ಆಚಾರ ವಿಚಾರಗಳೂ ಭಕ್ತ್ಯಾನು ಭವಗಳೂ ಅನುಕರಣೀಯವಾಗಿವೆ. ಇದಲ್ಲದೆ ಸಮಾಜ ಸಂಘಟನೆ, ಹಾಗು ಸೇವೆಯ ಕರ್ತವ್ಯವನ್ನು ಚನ್ನಾಗಿ ಸಾಗಿಸುವದಕ್ಕಾಗಿ ವಿರಕ್ತರನ್ನೂ ಚರ ಪಟ್ಟಾಧಿಕಾರಿಗಳನ್ನೂ ಬ್ರಹ್ಮ ಚಾರಿಣಿಯಾದ ಶಿವಶರಣೆಯರನ್ನೂ ಈ ವಿಶ್ವಧರ್ಮದಲ್ಲಿ ನೋಡಬಹುದು ಒಟ್ಟಿನಲ್ಲಿ ವೀರಶೈವ ಸಮಾಜ ಸಂಸ್ಕೃತಿ ಯು ವಿಶ್ವದ ಎಲ್ಲ ಮಾನವ ಕೋಟಿಯು ಅನುಸರಿಸುವಷ್ಟು ಅನುಕೂಲ ದಾದದ್ದದೆ. ಕರ್ನಾಟಕದಲ್ಲಿ ವೀರಶೈವ ಸಂಸ್ಕೃತಿಯು ಬಸವಣ್ಣನ ಕಾಲ ದಿಂದಲೂ ಹೆಚ್ಚು ಬಳಿಕೆಯಲ್ಲಿದೆ. ವೀರಶೈವರು ತಮ್ಮ ಗ್ರಾಮಗಳಲ್ಲಿ ನಡೆ ಸುವ ಶ್ರಾವಣಮಾಸದ ಪುರಾಣ, ಪ್ರಸ್ತ, ಶಿವಶರಣರ ಕೀರ್ತನ ಪ್ರವಚನ ನಾಟಕಾದಿಗಳಲ್ಲಿ ಗ್ರಾಮದ ಎಲ್ಲಮತದ ಜನರೂ ಬರುವದುಂಟು. ಹಾಗು ಗ್ರಾಮಾಂತರಗಳಲ್ಲಿ ವೀರಶೈವ ಸಮಾಜದ ಪ್ರಮುಖರ ವರ್ಚಸ್ಸು ಅವರ ಸತ್ಯ, ಅಹಿಂಸೆ, ಪ್ರೇಮ, ಸಹಕಾರಾದಿ ಸದ್ಗುಣಗಳಿಂದ ಒಡೆದು ಕಾಣುತ್ತದೆ. ಒಟ್ಟಿನಲ್ಲಿ ಸಮಾಜ ಸಂಘಟನೆಯೂ ಸಂಸ್ಕೃತಿಯೂ ದೇಶೋನ್ನತಿಗೆ ಹಾಗು ಆತ್ಮೋನ್ನತಿಗೆ ಹೆಚ್ಚು ಅನುಕೂಲವಿರುವದು.

ವೀರಶೈವರಲ್ಲಿ ಕುಲ ಜಾತಿ ವರ್ಣ ಆಶ್ರಮಗಳಿಲ್ಲ. ಭಕ್ತನು ಮಹೇಶ ನಾಗಬಹುದು. ಮಹೇಶನು ಪ್ರಸಾದಿಯಾಗಬಹುದು. ಪ್ರಾಣಲಿಂಗಿಯು ಶರಣನಾಗಬಹುದು. ಶರಣನು ಐಕ್ಯಸ್ಥಲದವನಾಗಬಹುದು. ಅಷ್ಟಾವರಣ ಕ್ರಿಯೆಯಲ್ಲಿ ಸರ್ವರೂ ಸಮಾನರೆಂದೂ ಜಾತಿ ವರ್ಣಾದಿ ಭೇದಗಳು ಇಲ್ಲ ವೆಂದೂ ಪ್ರತಿವ್ಯಕ್ತಿಗೆ ಗೊತ್ತಾಗುವದು. ಆಪ್ಯಾಯನಕ್ಕೆ ಅನ್ನ, ಲಾಂಛ

ಸಕ್ಕೆ ನಮಸ್ಕಾರ, ಆಚಾರಕ್ಕೆ ಸಮರಸಗಳು ವರ್ಣ ಜಾತ್ಯಾತೀತವಾಗಿವೆ. ಇವು ಈಗಿನ ಸ್ವರಾಜ್ಯ ಶಕಟಚಲನೆಗೆ ಎಷ್ಟು ಸಹಾಯಕಾರಿಗಳಾಗಿವೆ ಯೆಂಬುದು ವಾಚಕರಿಗೆ ಹೊಳೆಯದಿರದು.

ವೀರಶೈವರಲ್ಲಿ ಪಂಚಸೂತಕಗಳಿಲ್ಲ. ಕವರ್ಣಾವಲಂಬನಂ ಚಿತ್ ಕೇಚಿತ್ ಜ್ಞಾನಾವಲಂಬನಂ ವಯಂತು ಶಿವಭಕ್ತಾನಾಂ ಪಾದುಕಸ್ಯಾವ ಲಂಬನಂ" ಎಂಬ ಬಸವಣ್ಣನ ಉಕ್ತಿಯಂತೆ ಶಿವಶರಣರ ಶ್ರೀ ಪಾದಪೂಜೆ ಯಿಂದ ಜಾತಿಸೂತಕವು ದೂರಾಗುವದು. ಜನನ ಸೂತಕ ಮರಣ ಸೂತಕಗಳು ಜಂಗಮ ಪಾದ ಧೂಳೋದಕದ ತೀರ್ಥಗಳಿಂದ ದೂರಾಗು ವವು. ರಜಃಸೂತಕವು "ಲಿಂಗದೇಹಿ ಸದಾಶುಚಿಃ" ಎಂಬುದನ್ನರಿತು ಆಚರಿಸುವ ಸರ್ವಾಚಾರ ಸಂಪತ್ತಿನಾಚಾರಸ್ಥರಿಗೆ ಸರ್ವ ಸೂತಕಗಳು ಇಲ್ಲವೇ ಇಲ್ಲ.

ಶರಣೆಂದವರಿಗೆ ಮರಣವಿಲ್ಲ, ಎಂಬ ನುಡಿನಡೆಯಿಂದ ಸಮಾಜದ ವಿನಯವು ವ್ಯಕ್ತವಾಗುವದು. ಇದನ್ನೇ ಬಸವಣ್ಣನು ಇದಕ್ಕೂ ಸೂಕ್ಷ್ಮ ವಾಗಿ ಅಯ್ಯ ಎಂದರೆ ಸ್ವರ್ಗ ಎಲೋ ಎಂದರೆ ನರಕ ಎಂದು ಹೇಳಿ ದ್ದಾನೆ.

"ಆಯುಷ್ಯ ತೀರದನ್ನಕ್ಕರ ಮರಣವಿಲ್ಲ. ಸತ್ಯದ ನುಡಿವನ್ನಕ್ಕರ ದಾರಿದ್ರ್ಯತನವಿಲ್ಲ" ಎಂಬ ಉಕ್ತಿಯು ಈ ಸಮಾಜದಲ್ಲಿ ಬೇರೂರಿರುವದ ರಿಂದಲೂ "ಕಳಬೇಡ ಕೊಲಬೇಡ ಹುಸಿಯಬೇಡ ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ, ತನ್ನನು ಬಣ್ಣಿಸಬೇಡ, ಇದೇ ಅಂತರಂಗದ ಶುದ್ಧಿ ಬಹಿರಂಗದ ಶುದ್ಧಿ. ಇಂತಿಲ್ಲದವರನೊಲ್ಲ ನಮ್ಮ ಕೂಡಲ ಸಂಗಮ ದೇವಾ" ಈ ವಚನದ ನಡೆಯೇ ತಳಹದಿಯಾದ್ದರಿಂದಲೂ ವೀರಶೈವವು ನೀತಿ ಕೃತಿಗಳ ಕಾಯಕವಾಗಿದೆ.

ಈ ಸಮಾಜದಲ್ಲಿ ನಡೆಶುದ್ಧ ನುಡಿಶುದ್ಧ ತನುಶುದ್ಧ ಮನಶುದ್ಧ ಭಾವ ಶುದ್ಧವಿದ್ದು ಅಂಗೇಂದ್ರಿಯಗಳೆಲ್ಲ ಲಿಂಗೇಂದ್ರಿಯಗಳೂ ಅಂಗ ಕರಣಗಳೆಲ್ಲ ಲಿಂಗ ಕರಣಗಳೂ ಆಗಿ ವಾಕ್ ಪರುಷ, ಮನೋಪರುಷ, ಭಾವಪರುಷ, ಹಸ್ತ ಪರುಷ ನೋಟಪರುಷಗಳು ತಲೆದೋರಿ ಇಂಥ ಪವಾಡ ಪುರುಷರಿಂದ ಜನಸಾಮಾನ್ಯರಲ್ಲಿ ಸದ್ಭಕ್ತಿ ಸದ್ಭಾವಗಳು ಬೆಳೆಯಹತ್ತುತ್ತವೆ. ದುಷ್ಟ ವಾಸನೆಯು ಕೆಟ್ಟಕಣ್ಣಿನ ಜನರ ನೋಟದಿಂದ ಹಿಂಡುವ ಆಕಳು ರಕ್ತ ಕರೆ

ಯುವದನ್ನೂ ಶಾಂತಮಯವಾದ ಕೂಸು ತಾಯಿಯ ಮೊಲೆಯುಣ್ಣದೆ ಒಂದೇ ಸವನೆ ಅಳುವದನ್ನೂ ಸೌಂದರ್ಯದ ಶಿಲಾಮೂರ್ತಿಯು ಛಟ್ಟನೆ ಒಡೆದು ಸೀಳುವದನ್ನೂ ನಾವೆಲ್ಲರೂ ನೋಡಿ ಮನಗಂಡ ಮಾತು. ಅಂದ ಬಳಿಕ ಸದ್ವಾಸನೆಯ ಚಿದ್ವೃತ್ತಿಯ ಶಿವಯೋಗಿಗಳ ನೋಟ ಹಸ್ತಾದಿಗಳು ಪರುಷಗಳಾಗುವದೇನಾಶ್ಚರ್ಯ; ಅಂತೇ ಶಿವಶರಣರು ತಮ್ಮ ಪಂಚ ಪರುಷಗಳ ಬಲದಿಂದ ಮಾಡಿದಷ್ಟೇ ಪ್ರಸಾದ (ಅಡಿಗೆ) ದಿಂದ ಬಂದಷ್ಟು ಜಂಗಮರ ತೃಪ್ತಿಯನ್ನು ಪಡಿಸುತ್ತಿರುವರು. ಇದರಿಂದ ಸತ್ಕಾಯಕದ ಮಹತ್ವವೂ ಸಚ್ಛೀಲ ಸದಾಚಾರೋದಾರ ಗುಣಗಳೂ ವ್ಯಕ್ತವಾಗುತ್ತವೆ.

ಲಿಂಗಕ್ಕೆ ಕರಮುಟ್ಟಿ ಜಂಗಮಕ್ಕೆ ಶಿರಮುಟ್ಟಿ ನಮಸ್ಕಾರ ಮಾಡುವ ಪದ್ಧತಿಯು ವೀರಶೈವರಲ್ಲಿ ಉಂಟು. ತನ್ನ ತನು ಮನ ಭಾವದಲ್ಲಿ ತುಂಬಿದ ಚಿಜ್ಜ್ಯೋತಿಯೇ ಇಷ್ಟಲಿಂಗ. ಇಂಥ ಜ್ಯೋತಿಯ ಶಕ್ತಿಯೇ ಕರಸ್ಥಲದಲ್ಲಿ ಕೇಂದ್ರೀಕೃತವಾಗಿದೆ. ಕಾರಣ ತಾನು ಮಾಡುವ ಕಾಯಕದಲ್ಲಿ ಪೂರ್ಣ ಶಕ್ತಿಯ ಉಪಯೋಗವಾಗಿ ಅಂದಂದಿನ ಕೆಲಸವು ಮುಗಿದು ಪೂರ್ಣಾನಂದ ಪಡೆಯುವ ಉದ್ದೇಶವೇ ಆಗಿದೆ. ಇವರಂತೆ ಶಿವಯೋಗಿಯಾದ ಜಂಗಮ ಪಾದಸ್ಥಳದಲ್ಲಿ ಜ್ಞಾನಜ್ಯೋತಿಯು ಕೇಂದ್ರೀಕೃತವಾದದ್ದರಿಂದ ಪಾದಕ್ಕೆ ಶಿರಮುಟ್ಟುವ ನಮಸ್ಕಾರದಿಂದ ತಲೆಯಲ್ಲಿ ಜ್ಞಾನೋದಯವಾಗುವ ಉದ್ದೇಶವದೆ. ಇದರಿಂದ ವೀರಶೈವರು ಮುಟ್ಟುತಟ್ಟುಗಳ ಉಪಯೋಗವನ್ನು ಯಾವಪರಿಯಲ್ಲಿ ಮಾಡಿಕೊಳ್ಳುವರೆಂಬದು ಗೊತ್ತಾಗುವದು.

ಮತ್ತು ಮಾನವನಲ್ಲಿ ಕ್ರಿಯಾಶಕ್ತಿಯು ಸ್ವಾಭಾವಿಕವಾಗಿದ್ದುದನ್ನು ಯಾವ ಪ್ರಕಾರ ಬದಲು ಮಾಡಿಕೊಳ್ಳುವರೆಂದರೆ ಜೀವಭಾವದ ಆಟದಲ್ಲಿ ಕರಣಗಳ ಓಟ, ಜ್ಞಾನೇಂದ್ರಿಯಗಳ ಬೇಟ, ಕರ್ಮೇಂದ್ರಿಯ ಕಾಟಗಳು ಹಿಂಗಿ, ಶಿವಭಾವದ ಆಟದೊಳು ಕರಣಗಳ ಕೂಟ, ಜ್ಞಾನೇಂದ್ರಿಯಗಳ ನೋಟ, ಕರ್ಮೇಂದ್ರಿಯಗಳ ಮಾಟಗಳಾಗಿ ಮಹಾ ಸ್ಥಳವೇ ಮನೆಯಾಗುವದು.

ಮಾನವನಿಗೆ ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಶರೀರಗಳು ಒಂದಕ್ಕೊಂದು ಸಂಬಂಧಿಸಿ ಒಂದೇಯಾಗಿ ಇರುತ್ತವೆಯಷ್ಟೇ; ದಿನಂ

ಪ್ರತಿ ಸೂರ್ಯೋದಯದೊಳಗಾಗಿ ಸ್ನಾನ ಉಪಹಾರಗಳಿಂದ ಸ್ಥೂಲ ದೇಹದ ಇಷ್ಟಲಿಂಗದ) ಪರಾಮರಿಕೆಯೂ ಮಧ್ಯಾಹ್ನದೊಳಗಾಗಿ ಊಟ ಉಪಚಾರಗಳಿಂದ ಸೂಕ್ಷ್ಮ ದೇಹದ (ಪ್ರಾಣಲಿಂಗದ) ಪರಾಮರಿಕೆಯೂ ರಾತ್ರಿಯಲ್ಲಿ ಸಿನೇಮಾ ಮೊದಲಾದ ಜ್ಞಾನಾನುಭವಗಳಿಂದ ಹಾಗು ಸ್ವಪ್ನ ಸುಷುಪ್ತಾದಿಗಳಿಂದ ಕಾರಣ ದೇಹದ (ಭಾವಲಿಂಗದ) ಪರಾಮರಿಕೆಯೂ ಸಹಜವಾಗಿ ಆಗೇ ಆಗುತ್ತವೆ. ಈ ಅಂಗಾನುಭವಗಳನ್ನು ಲಿಂಗಾನುಭವ ಮಾಡುವದೇ ವಿಶ್ವಧರ್ಮವಾದ ವೀರಶೈವದ ಗುರಿಯು.

ನಾವು ಶಿವಭಕ್ತರೆಂದು ಹೇಳುವ ಅಣ್ಣಗಳಿರಾ ಕೇಳಿರಣ್ಣಾ ಶಿವ ಭಕ್ತರಾಗುವ ನೆಲೆಕಲೆಯು. ಅರಿವೈರಿಗಳ ಹೆಡೆಮುಡಿಗಟ್ಟಿ, ಅಷ್ಟಮದವ ಜೊಳ್ಳುಮಾಡಿ, ತೂರಿ, ಸಪ್ತ ವ್ಯಸನಂಗಳ ಕಂಕಣವ ಮುರಿದು, ಸದ್ಭಕ್ತಿ ನೆಲೆಕಲೆ ತಿಳಿದು, ಅಷ್ಟಾವರಣದ ಗುಟ್ಟ ಮುಟ್ಟ ನೋಡಿ, ಪಂಚಾಚಾರದ ಭೇದವನರಿದು, ಷಡ್ವಿಧ ಲಿಂಗಾಂಗದ ಮೂಲವ ತಿಳಿದು, ಷಡ್ವಿಧ ಆರ್ಶಿತ ಅವಧಾನವನಾಚರಿಸಿ, ಷಟ್‌ಸ್ಥಲ ಮಾರ್ಗವ ಹಿಡಿದಾಚರಿಸುವ ಸದ್ಭಕ್ತರಿಗೆ ಅತಿ ಭೃತ್ಯನಾಗಿ, ಹಮ್ಮು ಬಿಮ್ಮುಗಳಿಲ್ಲದೆ ನಡೆನುಡಿ ಸಂಪನ್ನರಾದವರೇ ಸದ್ಭಕ್ತರು ಕಾಣಾ ಕಲಿದೇವರ ದೇವಾ.

ವಿಶ್ವಧರ್ಮದ ತಿಳಿವು ಉಳಿವುಗಳನ್ನು ಅಳಿಯದ ಅಚ್ಯೊತ್ತಿದ ಶಿವ ಸದ್ಭಕ್ತರ ಹೃದಯಾರವಿಂದವರಳಿದ ಅರಲಿದು. ಇದರ ಪರಿಮಳವು ವಿಶ್ವವನ್ನು ವ್ಯಾಪಿಸಿ ವಿಶ್ವದಲ್ಲಿ ವಾಸಿಸುವ ಮಾನವಕೋಟಿಯನ್ನು ಸತತವಾಗಿ ಸಂತೋಷಪಡಿಸುವ ಸುಗಂಧವಿದು. ವಿಶ್ವೋದ್ಯಾನದ ವಿಶ್ವ ಕುಟುಂಬಿಗಳ ಸ್ವಾನುಭಾವದ ಸಂಭ್ರಮವಿದು. ಇಂಥ ಸಂಭ್ರಮವಾತಿಶಯವು ಸಕಲ ವಿಶ್ವಾತ್ಮರಲ್ಲಿ ಉಂಟಾಗಲೆಂದು ಹಾರೈಸುತ್ತೇನೆ.

# ಪಾದೋದಕ.

(ಲೇಖಕ: ಶ್ರೀಯುತ ಬಸಪ್ಪ ಚನ್ನಪ್ಪ ಪಟ್ಟೇದ-ಪಂಟಮುರಿ)

[ಹಿಂದಿನಿಂದ ಮುಂದೆ ಸಾಗಿದ್ದು]

ಪಾದೋದಕ ಈ ಶಬ್ದವು ಪಾದ+ಉದಕಗಳ ಸಂಧಿಯಿಂದ ಉಂಟಾಗಿದೆ. ಲಿಂಗಾಯತರು (ಪರಶಿವ ಪರಬ್ರಹ್ಮ)ನಿಗೆ ಸ್ಥಳವೆಂಧು ಹೆಸರಿಟ್ಟಿರುವರು. ಆ ಸ್ಥಳನ ಅಡಿಯೇ ಪಾದವು. ಅದರಿಂದ ಒಸರುವ ಅನುಗ್ರಹ ಜಲವೇ (ಕರುಣಾಮೃತವೇ) ಪಾದೋದಕವು, ಎಂದು ಪ್ರಸಿದ್ಧಿ ಪಡೆದಿದೆ. ಆ ಶಿವನೇ ಗುರು-ಲಿಂಗ-ಜಂಗಮವೆಂಬ ತ್ರಿವಿಧ ರೂಪದಿಂದ ವರ್ತಿಸುತ್ತಿರುವನೆಂಬುದು ಸಿದ್ಧಾಂತ ಶಿಖಾಮಣಿಯ ಮುಂದಿನ ಪದ್ಯದಿಂದ ತಿಳಿಯುವದು.

(೨) ಏಕಂ ಏಕ ಶಿವಃ ಸಾಕ್ಷಾತ್ । ಸರ್ವಾನುಗ್ರಹಕಃ ಪ್ರಭುಃ ।
ಗುರು ಜಂಗಮ ಲಿಂಗಾತ್ಮ । ವರ್ತತೆ ಭಕ್ತಿ ಮುಕ್ತಿದಾ ॥

ಅಂತೆಯೇ ಗುರು-ಲಿಂಗ-ಜಂಗಮಗಳ ಪಾದೋದಕ ಪ್ರಸಾದ ಪಡೆಯುವದು ಅವಶ್ಯವಾಗಿದೆ.

ಈ ಪಾದೋದಕವು ದಶವಿಧವಾಗಿದೆ ಎಂದು ಹೇಳಲ್ಪಟ್ಟಿದೆ.

(೧) ಗುರು ಪಾದೋದಕ (೨) ಲಿಂಗ ಪಾದೋದಕ (೩) ಜಂಗಮ ಪಾದೋದಕ (೪) ಸ್ಪರ್ಶನೋದಕ (೫) ಅವಧಾನೋದಕ (೬) ಲಿಂಗೋದಕ (೭) ಆಪ್ಯಾಯನೋದಕ (೮) ಪರಿಣಾಮೋದಕ (೯) ನಿರ್ಣಾವೋದಕ

## (೧೦) ಸತ್ಯೋದಕ.

ಇವುಗಳನ್ನು ವಿವರಿಸುವ ಪೂರ್ವದಲ್ಲಿ ಗುರು ಲಿಂಗ ಜಂಗಮಗಳ ಬಗೆಗೆ ಸ್ಪಷ್ಟವಾದ ಕಲ್ಪನೆಯನ್ನು ಕೊಡುವದು ಅವಶ್ಯವದೆ. ಇವುಗಳ ನಿಜವಾದ ಅರ್ಥವನ್ನು ಮೇಲೆ ವಿವರಿಸಿದೆ. ಆದರೆ ಇವುಗಳ ವ್ಯಾವಹಾರಿಕ ಅರ್ಥವು ಮಾತ್ರ ತೀರ ಭ್ರಮೆಗೊಳಿಸುವಂತಹದಿದೆ. ಜನತೆಯು ಸಾಮಾನ್ಯವಾಗಿ ಅಯ್ಯಗಳೇ ಗುರು. ಲಿಂಗ ಜಂಗಮಗಳೆಂದು ನಂಬಿದೆ. ಲಿಂಗವಂತರ ಶಿವನಾಗಲೀ ಗುರು ಲಿಂಗ ಜಂಗಮವಾಗಲೀ ಭಕ್ತನನ್ನು ಬಿಟ್ಟು

ಭಿನ್ನವಾಗಿ (ಹೊರಗೆ) ಇರುವದಿಲ್ಲ. "ಭಕ್ತದೇಹಿಕ ಲಿಂಗ ಸ್ಥಳ" ವೆಂದು ಏಕೋತ್ತರ ಶತಸ್ಥಲದಲ್ಲಿ ಹೇಳಿ, ಭಕ್ತನ ದೇಹದಲ್ಲಿಯೇ ಶಿವನಿರುವನೇ ಹೊರತು ಹೊರಗಲ್ಲವೆಂದು ಧೃಡವಾಗಿ ನಂಬಿ ನಡೆಯಲಿಕ್ಕೆ ನಮ್ಮ ಶಾಸ್ತ್ರವು ಆಜ್ಞಾಪಿಸಿದೆ. "ತನುವೇ ಗುರು, ಪ್ರಾಣವೇ ಲಿಂಗ, ಸುಜ್ಞಾನವೇ ಜಂಗಮ" ಎಂತಲೂ ವಚನಶಾಸ್ತ್ರವು ಸಾರುತ್ತಿದೆ. ದೇಹ ಪ್ರಾಣ ಜ್ಞಾನಗಳು ಸ್ವಾಭಾವಿಕವಾಗಿ ಜನ್ಮದಿಂದಲೇ ಪ್ರತಿಯೊಬ್ಬ ಭಕ್ತನಿಗೆ ದೊರೆತಿವೆ. ಆದುದರಿಂದ ಈ ನಿಸರ್ಗದತ್ತ ಗುರುಲಿಂಗ ಜಂಗಮುಗಳ ಆರಾಧನೆಯನ್ನು ಹಿಂದೆ ವಿವರಿಸಿದಂತೆ ಮಾಡಿ ಅವುಗಳನ್ನು ಮೇಲ್ಮಟ್ಟಕ್ಕೊಯ್ದು ಅವರಿಂದಲೇ ಆತ್ಮೋದ್ಧಾರವನ್ನು ಸಾಧಿಸುವದಿದೆ. ಈ ಮೂರನ್ನೂ ಮರೆತು ಬರೇ ಹೊರಗಣ ಗುರುಲಿಂಗ ಜಂಗಮುಗಳನ್ನೇ ಅದೆಷ್ಟೆಷ್ಟು ಪೂಜಿಸಿದರೂ ವ್ಯರ್ಥವೇ ಸರಿ. ಆದರಿಂದ ಜನ್ಮೋದ್ಧಾರವು ಆಗುವದು ದೂರಾಪಾಸ್ತವೇ ಸರಿ. ಆಕಾರಣ ತನ್ನನ್ನು ಹೊಂದಿದ ಗುರು (ದೇಹ) ಲಿಂಗ (ಪ್ರಾಣ) ಜಂಗಮ (ಜ್ಞಾನ) ಇವುಗಳನ್ನು ಆರಾಧಿಸುವದೇ ಅತ್ಯಂತಾವಶ್ಯಕವೂ ಜನ್ಮೋದ್ಧಾರಕವೂ ಆಗಿರುವದೆಂಬುದನ್ನು ಎಲ್ಲರೂ ಲಕ್ಷದಲ್ಲಿಡಬೇಕು. ಇದೇ ತಳಹದಿಯ ಮೇಲೆ ಷಟ್‌ಸ್ಥಲಗಳ ಏರ್ಪಾಡು ಆಗಿದೆ. ಇದಕ್ಕೆ ಸಹಾಯಭೂತವಾಗಿಯೇ ಬಹಿರಂಗದ ಗುರು ಲಿಂಗ ಜಂಗಮುಗಳನ್ನು ಆರಾಧಿಸತಕ್ಕದ್ದು. ಆದರೆ ಕೇವಲ ಬಹಿರಂಗದವೇ ಮುಖ್ಯವೆಂದು ತಿಳಿಯುತಕ್ಕದ್ದಲ್ಲ. ಹಾಗಾದರೆ ಭಕ್ತನು ಮೋಸ ಹೋಗುವನೆಂದೇ ತಿಳಿಯುತಕ್ಕದ್ದು.

ಇನ್ನು ವಿವಿಧ ಪಾದೋದಕತ್ತ ಹೊರಳುವಾ—

ಪಾದೋದಕವನ್ನು ನಾವು ಜಂಗಮ (ಅಯ್ಯ)ನಿಂದ ಪಡೆದುಕೊಳ್ಳುತ್ತೇವೆ. ಅಂತಹ ಗುರುಜಂಗಮರು ಒಳ್ಳೇ ಸದಾಚಾರಿಗಳೂ ಷಟ್‌ಸ್ಥಲ ಜ್ಞಾನಿಗಳೂ ಇರಬೇಕಾಗುವದು. ಇಂತಹರೇ ಎಲ್ಲೆಡೆ ಸಿಕ್ಕುವದು ಅಶಕ್ಯ. ಆದುದರಿಂದ ಸಾಧಾರಣ ಸದಾಚಾರಿಗಳೂ ಜ್ಞಾನವಂತರೂ ಆದವರಿಂದಲೇ ಈ ಕಾರ್ಯ ಬಗೆಹರಿಸಿಕೊಳ್ಳಬೇಕಾಗುತ್ತದೆ. ಆಗ ಪಾದೋದಕ ಪಡೆಯುವವನು ಆ ಗುರುವನ್ನು ಕೇವಲ ಸ್ಥಳ (ಶಿವ) ಎಂಬ ಸದ್ಭಾವನೆಯಿಂದ ಪೂಜಿಸತಕ್ಕದ್ದು. ಅವನನ್ನು ನರನೆಂದು ಎಷ್ಟೆಷ್ಟೂ ತಿಳಿಯುತಕ್ಕದ್ದಲ್ಲ. ಪಡೆದುಕೊಳ್ಳುವಾಗ ಪೂರ್ವ ವಿಧಿಗಳನ್ನೆಲ್ಲ ಜರುಗಿಸಿ, ಗುರುವಿನ ಬಲ ಪಾದಾಂಗುಷ್ಟದ ಮೇಲೆ ಎರೆದ ಜಲವೇ ಗುರು ಪಾದೋದಕ, ಎಡ

ಪಾದಾಂಗುಷ್ಟದ ಮೇಲೆ ಎರೆದ ಜಲವೇ ಲಿಂಗ ಪಾದೋದಕ, ಇವೆರಡು ಅಂಗುಷ್ಟಗಳು ಕೂಡಿದ ಮಧ್ಯಸ್ಥಳದಲ್ಲಿ ಎರೆದ ಜಲವೇ ಜಂಗಮ ಪಾದೋದಕ ಆಗುವವು.

ಅವನ್ನು ಸ್ವೀಕರಿಸುವ ದೆಸೆಯಿಂದ , ಬಟ್ಟಲದೊಳಗಿನ ಕರುಣಾಮೃತಕ್ಕೆ ಕರ ಸ್ಪರ್ಶ ಮಾಡಿದೊಡನೆಯೇ ಸ್ಪರ್ಶನೋದಕವಾಗುವದು.

ಪಂಚಾಂಗುಲಿಗಳಿಂದ ಕರುಣಾಮೃತವನ್ನು ಬಹು ಎಚ್ಚರದಿಂದ ಸಾವಕಾಶವಾಗಿ ತೆಗೆದುಕೊಂಡೊಡನೆಯೇ ಅದು ಅವಧಾನೋದಕವಾಗುವದು. ಇವೆರಡನ್ನು ತನುವಿನ ಸಹಾಯದಿಂದಲೇ ಮಾಡಬೇಕಾಗುವದರಿಂದ, ಅವು ಗುರು ಪಾದೋದಕದ ಅಂಗಗಳೆನ್ನಿಸುವವು

ಈ ಮೂರರಿಂದೊಡಗೂಡಿದ ಗುರು ಪಾದೋದಕ ಸ್ವೀಕಾರದಿಂದ ಕೈಕೊಳ್ಳುವವನಲ್ಲಿ "ಕರುಣೆ" ಅಂದರೆ ದಯೆಯು ಉತ್ಪನ್ನ ಹೊಂದಲೇಬೇಕು. ಏಕೆಂದರೆ ಗುರು ಪಾದೋದಕವು ಕರುಣ ಜಲವೆಂದು ಕರೆಯಲ್ಪಟ್ಟಿದೆ. ಭಕ್ತನು ಇದರಿಂದ ಉದಾರ ಹಸ್ತದವನು; ಅಂದರೆ ಸತ್ಪಾತ್ರದಲ್ಲಿ ದಾನ ಧರ್ಮ ಗಳಿಸತಕ್ಕವನು ಆಗಲೇ ಬೇಕು.

ಇವರಂತೆಯೇ ಅವಧಾನೋದಕವನ್ನು ಎಡಗೈಯೊಳಗಿನ ಇಷ್ಟಲಿಂಗದ ಮೇಲೆ ಎರೆಯಲು, ಅದು ಲಿಂಗೋದಕವಾಗುವದು. ಆ ಲಿಂಗೋದಕವನ್ನು ಮೆಲ್ಲನೇ ಬಾಯಿಯಲ್ಲಿ ಹಾಕಿಕೊಂಡು ನುಂಗಿದರೆ, ಅದು ಒಳಗಿನ ಪ್ರಾಣಲಿಂಗಕ್ಕೆ ಸಂಬಂಧಿಸುವದು. ಇದೇ ಆಪ್ಯಾಯನೋದಕವೆನ್ನಿಸುವದು. ಇವೆರಡೂ ಲಿಂಗಕ್ಕೆ ಸಂಬಂಧಿಸಿರುವದರಿಂದ, ಇವು ಲಿಂಗ ಪಾದೋದಕದೊಳಗೆ ಅಂತರ್ಭಾವವಾಗುವವು. ಈ ಮೂರೂ ಲಿಂಗಕ್ಕೆ (ಸುಜ್ಞಾನಕ್ಕೆ) ಸಂಬಂಧಿಸಿರುವದರಿಂದ, ಭಕ್ತನು ವಿನಯಶಾಲಿಯಾಗತಕ್ಕದ್ದು. ಆದುದರಿಂದ ಲಿಂಗ ಪಾದೋದಕಕ್ಕೆ ವಿನಯ ಜಲವೆಂದು ಹೆಸರಿಟ್ಟಿರುವರು.

ಬಳಿಕ ಬಟ್ಟಲವನ್ನೆತ್ತಿ ಕುಡಿಯುವದೇ (ಇಲ್ಲವೆ ಮಧ್ಯಮಾಂಗುಲಿಯಿಂದ ಅದ್ದಿ ಸ್ವೀಕರಿಸುವದೇ ಪರಿಣಾಮೋದಕವು. ಇದು ಆತನ ಮನದಲ್ಲಿ ಒಳ್ಳೆಯ ಪರಿಣಾಮವನ್ನುಂಟುಮಾಡುವದು. ಹೀಗೆ ಭಕ್ತನು ಸುಪರಿಣಾಮಿಯಾಗಲೇಬೇಕು. ತರುವಾಯ ತನ್ನ ಕೈಗೆ ಹತ್ತಿದ, ಪಾದೋದಕವನ್ನು ಮೈಯಲ್ಲಿ ಸವರಿಕೊಂಡು ದ್ರವ (ತೊಂಬಲ) ಆರಿಸುವದೇ

ನಿರ್ಣಾಯೋದಕವು. ಇದರಿಂದ ಸುಪರಿಣಾಮಹೊಂದಿದ ಗುರುವು, ತನ್ನ ಹಾಗೂ ಉಳಿದ ಭಕ್ತರ, ಅಷ್ಟೇ ಏಕೆ ಸರ್ವ ವಸ್ತುಗಳ) ನಾಮರೂಪಗಳನ್ನು ಕಿತ್ತುಹಾಕಿ, ಅವನ್ನೆಲ್ಲ ಶಿವರೂಪವಾಗಿ, (ಏಕಮೇವಾ ದ್ವಿತೀಯ ರೂಪವಾಗಿ) ಭಾವಿಸಬೇಕು. ("ಓಂ ತತ್ ಸತ್" ಎಂದು ಹೇಳುವದರಿಂದ, ಸತ್ತಿಗೂ ತತ್ತಿಗೂ ಅಭೇದವು. ತತ್ ಎಂಬುದೇ ಶಿವನು.) ಇದರಿಂದ ಭಕ್ತನಲ್ಲಿ ಸಮತಾಭಾವವು ಸ್ಥಿರಪಡಲಿಕ್ಕೇ ಬೇಕು. ಇದನ್ನೇ ಸಮತಾ ಜಲವೆಂದು ಹೇಳಿರುವರು.

ಹೀಗೆ ಕರುಣೆ, ವಿನಯ, ಸಮಭಾವನೆಗಳು ನೆಲೆಗೊಳ್ಳುವದೇ ಸತ್ಯೋದಕವೆನಿಸುವದು. ಸತ್ಯೋದಕ ಗ್ರಹಣದಿಂದ ಎಲ್ಲವೂ ಸತ್ ಸ್ವರೂಪವಾಗಿಯೇ ತೋರಬೇಕು.

ಹೀಗೆ ಪಾದೋದಕ ಸ್ವೀಕಾರದಿಂದ ಭಕ್ತನು ಉನ್ನತ ಸ್ಥಿತಿಯನು ಸಾಧಿಸತಕ್ಕದ್ದಿರುವದು. ಇಲ್ಲವಾದರೆ ಅದೆಲ್ಲವೂ ವ್ಯರ್ಥವೇ ಸರಿ.

ಮೇಲೆಹೇಳಿದ ದಶವಿಧಪಾದೋದಕಗಳಲ್ಲದೆ ದೀಕ್ಷಾಪಾದೋದಕ ಶಿಕ್ಷಾಪಾದೋದಕ, ಜ್ಞಾನಪಾದೋದಕ, ಕ್ರಿಯಾಪಾದೋದಕ, ಸಾಮಾನ್ಯ ಪಾದೋದಕಗಳೆಂಬ ಬೇರೆ ಐದು ತರದ ಪಾದೋದಕಗಳುಂಟು.

(೧) **ದೀಕ್ಷಾ ಪಾದೋದಕ:—** ಗುರುವಿನಿಂದ ಲಿಂಗಪಡೆಯುವ (ಲಿಂಗವಂತನಾಗುವ) ಕೃಪೆ ಸಂಪಾದಿಸುವದೇ (ಭಕ್ತತ್ವ ಹೊಂದುವದೇ) ದೀಕ್ಷಾ ಪಾದೋದಕವು.

(೨) **ಶಿಕ್ಷಾ ಪಾದೋದಕ:—** ಲಿಂಗವಂತ ಮತದ ಸಾದ್ಯಂತ ಶಿಕ್ಷಣವನ್ನು ಹೊಂದುವದೇ ಶಿಕ್ಷಾ ಪಾದೋದಕವು.

(೩ **ಜ್ಞಾನ ಪಾದೋದಕ:—** ಜೀವ ಶಿವ ಜಗತ್ತುಗಳ ಅನುಭವ ಜ್ಞಾನ. (ಸಮ್ಯಕ್‌ಜ್ಞಾನ) ಪಡೆಯುವ ಅಂತಃಕರಣ ಗಳಿಸುವದೇ ಜ್ಞಾನ ಪಾದೋದಕ.

(೪) **ಕ್ರಿಯಾ ಪಾದೋದಕ:—** ಸಮಂತ್ರಕವಾಗಿ, ವಿಧಾನ ಪೂರ್ವಕವಾಗಿ ಪಡೆದ ಜಂಗಮ ಮೂರ್ತಿಯ ಪಾದೋದಕವೇ ಕ್ರಿಯಾ ಪಾದೋದಕವು.

(೫) **ಸಾಮಾನ್ಯ ಪಾದೋದಕ:-** ಮಂತ್ರವಿಲ್ಲದೆ ಬರಿಯ ಸಾದಾ ಅಯ್ಯನವರ ಪಾದೋದಕವನ್ನು ಸಾಂಪ್ರದಾಯಾನುಸಾರ ಪಡೆಯುವದೇ ಸಾಮಾನ್ಯ ಪಾದೋದಕ.

## ಪ್ರಸಾದ

ಗುರು ಲಿಂಗ ಜಂಗಮದ ಪಾದೋದಕ ಪಡೆಯುವದೆಂದರೆ, ಅವು ಗಳ ಕೃಪಾದೃಷ್ಟಿಯನ್ನು ಪಡೆಯುವದೆಂದು ಮೇಲೆ ಹೇಳಿದೆಯಷ್ಟೇ! ಅವರ ಈ ಕೃಪಾದೃಷ್ಟಿಯನ್ನು ಪಡೆದು ಮಾಡತಕ್ಕದ್ದೇನು? ಅವರಿಂದ ಮುಖ್ಯವಾಗಿ ಪ್ರಸ ದ ಪಡೆಯುವದಕ್ಕಾಗಿಯೇ ಈ ಅನುಗ್ರಹವನ್ನು ಪಡೆಯುವದು. ಪ್ರಸಾದವೆಂಬುದು ಶರಣನು ಬೆರೆಯತಕ್ಕ ಪ್ರಸಾದವೇ ಆಗಿರುವದು. ಅದನ್ನು ಸುಜ್ಞಾನ ಹಸ್ತದಿಂದ ಪೂಜಿಸಬೇಕಾಗುತ್ತದೆ. ಸುಜ್ಞಾನವಿಲ್ಲದೆ ಪ್ರಸಾದವು ಸಾಧ್ಯವಾಗಲಾರದು. ಆದುದರಿಂದ ಪ್ರಸಾದವೆಂದರೆ ಸುಜ್ಞಾನವೇ ಹೊರತು ಬೇರೊಂದಲ್ಲ. ಇದರಂತಹ ಪವಿತ್ರ ವಸ್ತುವು ಜಗದಲ್ಲಿ ಬೇರೊಂದಿಲ್ಲ. ಅಂತೆಯೇ ಭಗವದ್ಗೀತೆಯಲ್ಲಿ- "ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೆ" । ಎಂದು ಹೇಳಿದೆ. ಋಗ್ವೇದದಲ್ಲಿ ಪ್ರಜ್ಞಾನಂ ಬ್ರಹ್ಮ। ಎಂದು ಸಾರಲ್ಪಟ್ಟದೆ. ವಚನ ಗ್ರಂಥವು ಸುಜ್ಞಾನವೇ ಅಂಗ (ಪ್ರಸಾದಲಿಂಗ)'' ಬಣ್ಣಿಸಿದೆ ಇಂತಹ ಏಕವೇ ಪಾದ್ವಿತೀಯವಾದ ಪ್ರಸಾದವನ್ನು ಪಡೆದುಕೊಳ್ಳುವದೇ ಗುರು-ಲಿಂಗ-ಜಂಗಮಗಳ ಪಾದೋದಕ ಪಡೆಯುವವರ ಉದ್ದೇಶವಾಗಿದೆ.

ಷತ್+ಅ= ಸಾದ ಇದಕ್ಕೆ ಪ್ರ' ಎಂಬುದು ಹಿಂದೆ ಸೇರಿ ಪ್ರಸಾದ ಎಂದು ಶಬ್ದವುಂಟಾಗಿದೆ. ಈ ಪ್ರಸಾದವು ಏಕಾದಶ ವಿಧವೆಂದು ಬಲ್ಲವರು ಬೋಧಿಸಿರುವರು. ಅವನ್ನು ಕೆಳಗೆ ತೋರಿಸಿದೆ.

೧ (ಗುರು ಪ್ರಸಾದ) ಶುದ್ಧ ಪ್ರಸಾದ ೨ (ಲಿಂಗ ಪ್ರಸಾದ) ಸಿದ್ಧ ಪ್ರಸಾದ
೩ (ಜಂಗಮ ಪ್ರಸಾದ) ಪ್ರಸಿದ್ಧ ಪ್ರಸಾದ ೪ ಆಪ್ಯಾಯನ ಪ್ರಸಾದ
೫ ಸಮಯ ಪ್ರಸಾದ ೬ ಪಂಚೇಂದ್ರಿಯ ವಿರಹಿತ ಪ್ರಸಾದ
೭ ಅಂತಃಕರಣ ವಿರಹಿತ ಪ್ರಸಾದ ೮ ಪ್ರಸಾದಿಯ ಪ್ರಸಾದ
೯ ಸದ್ಭಾವ ಪ್ರಸಾದ ೧೦ ಸಮತ್ವ ಪ್ರಸಾದ
೧೧ ಸಮ್ಯಕ್‌ಜ್ಞಾನ ಪ್ರಸಾದ.

(೧) ಶುದ್ಧ ಪ್ರಸಾದ— ಮುಂದಿರುವ ಎಡೆಯಲ್ಲಿಯ ಪದಾರ್ಥಗಳನ್ನು ತನುವಿನ ಕರಾಂಗುಲಿಯಿಂದ ಸಮಂತ್ರಕ ಸ್ಪರ್ಶಿಸುವದರಿಂದ, ಅದು ಶುದ್ಧ ಪ್ರಸಾದವಾಗುವದು.

(೨) ಸಿದ್ಧ ಪ್ರಸಾದ— ಆ ಕರಾಂಗುಲಿಯಿಂದ ಸಮಂತ್ರಕ ಸ್ಪರ್ಶ ಮಾಡಿದುದನ್ನು ಮೂರು ವೇಳೆ ಲಿಂಗಕ್ಕೆ ತೋರಿಸಿದರೆ ಅದು ಸಿದ್ಧ ಪ್ರಸಾದವಾಗುವದು.

(೩) ಪ್ರಸಿದ್ಧ ಪ್ರಸಾದ— ಆ ಕರಾಂಗುಲಿಗಳನ್ನು ಬಾಯಲ್ಲಿ ನಾಲಿಗೆಯ ಮೇಲಿಟ್ಟು ಪ್ರಾಣಕ್ಕೆ ಅರ್ಪಿಸುವದೇ ಪ್ರಸಿದ್ಧ ಪ್ರಸಾದ ಮಾಡಿಕೊಂಬುವ ರೀತಿಯು.

೪ ಅಪ್ಯಾಯನ ಪ್ರಸಾದ— ಮುಂದೆ ಎಡೆಯೊಳಗಿನ ಪದಾರ್ಥಗಳನ್ನು ಬಾಯಲ್ಲಿಟ್ಟು ಚರ್ವಣ ಮಾಡಿ ನುಂಗುವದೇ ಅಪ್ಯಾಯನ ಪ್ರಸಾದವು.

(೫) ಸಮಯ ಪ್ರಸಾದ— ಹೀಗೆ ಪಪ್ಯಾಯನ ಮಾಡಿ, ಪ್ರಾಣಕ್ಕೆ ತೃಪ್ತಿಯೊದಗುವ ಕಾಲ ಒದಗುವದೇ ಸಮಯ ಪ್ರಸಾದ.

(ಈ ನುಂಗುವದು ಹಾಗೂ ಹೊಟ್ಟೆ ತುಂಬುವದು, ಎರಡೂ ದೇಹಕ್ಕೆ ಸಂಬಂಧಿಸಿರುವದರಿಂದ, ಶುದ್ಧ (ಗುರು ಪ್ರಸಾದದ ಅಂಗಗಳಾಗುವವು)

(೬) ಪಂಚೇಂದ್ರಿಯ ವಿರಹಿತ ಪ್ರಸಾದ— ಎಡೆಯೊಳಗಿನ ಪದಾರ್ಥಗಳೆಲ್ಲ ಗುರು ಲಿಂಗ ಜಂಗಮ (ಶಿವ) ಪ್ರಸಾದವಾಗಿರುವದರಿಂದ, ಅದರ ನಾಮ ರೂಪಗಳಲ್ಲಿ ನಷ್ಟವಾಗಿ, ಅದು ಕೇವಲ ಶಿವಸ್ವರೂಪವೇ ಆಗಿರುವದು. ಅದರಲ್ಲಿ ಷಡ್‌ರಸ ಮೊದಲಾದವಾವನ್ನೂ ಎಣಿಸಲಿಕ್ಕೆ ಅವಕಾಶವಿಲ್ಲ. ಪಂಚ ಜ್ಞಾನೇಂದ್ರಿಯಗಳಿದ್ದರೂ, ಅವಕ್ಕೆ ಆ ಪದಾರ್ಥಗಳ ಆವ ಗುಣವನ್ನೂ ಎಣಿಸಲಿಕ್ಕೆ ಸಾಧ್ಯವಿಲ್ಲ. ಎಲ್ಲ ಪದಾರ್ಥಗಳನ್ನು ಕೇವಲ ಪ್ರಸಾದವೆಂಬ ಭಾವನೆಯಿಂದ ಆನಂದದಿಂದಲೇ ಸ್ವೀಕರಿಸಬೇಕು. ಇದೇ ಪಂಚೇಂದ್ರಿಯ ವಿರಹಿತ ಪ್ರಸಾದವು "ಪಂಚೇಂದ್ರಿಯಗಳುನ್ನಕ್ಕರ, ಶರಣನೆಂತೆಂಬೆ" ಎಂದು ಶ್ರೀ ಬಸವಣ್ಣನವರು ನುಡಿದಿದ್ದಾರೆ. ಅಂತೇ ಷಡ್ರಸೋಪೇತಾನ್ನವನ್ನೂ ಸೊಪ್ಪನ್ನೂ ಸಮನಾಗಿ ಭಾವಿಸಬೇಕು.

(೭) ಅಂತಃಕರಣ ವಿರಹಿತ ಪ್ರಸಾದ . ಚಿತ್ತ, ಮನ, ಬುದ್ಧಿ ಅಹಂಕಾರಗಳೇ ಇವುಗಳಲ್ಲಿ ಪ್ರಸಾದದಲ್ಲಿ ಭೇದವನ್ನೂ ಎಂದೂ ಮಾಡದೆ ಆವ ವಸ್ತುವು ಬಂದರೂ ಅದನ್ನು ಪ್ರಸಾದವೆಂದೇ ಊಹಿಸಿ. ಹಿಗ್ಗು ತಗ್ಗುಗಳಿಲ್ಲದೆ, ಸ್ವೀಕರಿಸಬೇಕು. ಇದೇ ಅಂತಃಕರಣ ವಿರಹಿತ ಪ್ರಸಾದವು

(ಇವೆರಡೂ ಅಂತಃಕರಣಕ್ಕೆ ಸಂಬಂಧಿಸಿದವು ಇರುವದರಿಂದ, ಸಿದ್ಧ (ಲಿಂಗ) ಪ್ರಸಾದದ ಒಳಭೇದಗಳೆಂದು ತಿಳಿಯತಕ್ಕದ್ದು.)

(೮) ಪ್ರಸಾದಿಯ ಪ್ರಸಾದ— ತನು ಮನ ಧನಗಳನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಿ, ಆ ಗುರು ಲಿಂಗ ಜಂಗಮ ತೃಪ್ತಿಯಲ್ಲಿಯೇ ಭಕ್ತನು ತೃಪ್ತಿಪಡೆಯುವದೇ ಪ್ರಸಾದಿಯ ಪ್ರಸಾದವು.

೯) ಸದ್ಭಾವ ಪ್ರಸಾದ— ಮೇಲೆ ಹೇಳಿದ ರೀತಿಯಲ್ಲಿ ಪ್ರಸಾದ ಭೋಗಿಸುತ್ತ ನಡೆದರೆ, ಮುಂದೆ ಅವನಲ್ಲಿ ಸದ್ಭಾವನೆಯು ಹುಟ್ಟುವದು. (ಅಂತಹ ಸದ್ಭಾವನೆಯನ್ನು ಪಡೆಯಲು ಲಿಂಗಾಂಗಿಯು ಸತತ ಪ್ರಯತ್ನಿಸಲೇಬೇಕು )

ಮೇಲೆ ಹೇಳಿದವೆರಡೂ ಭಾವಕ್ಕೆ (ಸದ್ಭಾವ ಹಸ್ತದಲ್ಲಿ ಪೂಜಿಸುವ ಭಾವಲಿಂಗಕ್ಕೆ) ಸಂಬಂಧಿಸಿರುವದರಿಂದ ಇವು ಪ್ರಸಿದ್ಧ (ಜಂಗಮ) ಪ್ರಸಾದದ ಒಳಭೇದಗಳೆಂದು ತಿಳಿಯಬೇಕು.

ಆಚಾರವೇ ಗುರು, ಆದುದರಿಂದ ತನುವು ಸದಾಚಾರ ಸಂಪನ್ನತೆಯಿಂದ ವರ್ತಿಸಿದರೆ, ಅದನ್ನು ಗುರುವಿಗೆ ಅರ್ಪಿಸಿದಂತಾಗುವದು. ಸುಜ್ಞಾನವೇ ಲಿಂಗ. ಆದಕಾರಣ, ಮನವನ್ನು ಸುಜ್ಞಾನಮಯವಾಗಿ ಮಾಡಿಕೊಂಡರೆ, ಮಾತ್ರ ಅದೇ ಮನವನ್ನು ಲಿಂಗಾರ್ಪಿತ ಮಾಡಿಕೊಂಡಂತಾಗುವದು "ಜಂಗಮೊ ಜಗದ್ಭರಿತಃ" ಎಂದು ಹೇಳಿರುವದರಿಂದ, ಧನವನ್ನು ತನ್ನಂತೆಯೇ ಸರ್ವರಿಗೂ, ಸ್ವ, ಪರ, ಎಂಬ ಭೇದವಿಲ್ಲದೇ ಅರ್ಪಿಸುವದೇ ಧನವನ್ನು ಜಂಗಮಕ್ಕೆಂದರಿತಂತಾಗುವದು. (ಇಲ್ಲಿ ಸರ್ವರಿಗೆ ಎಂದು ಹೇಳಿರುವದು ಸತ್ಪಾತ್ರರಾದವರಿಗೆ ಎಂದು ಮಾತ್ರ ತಿಳಿಯತಕ್ಕದ್ದು; ವಿಹಿತವಾಗಿದೆ.) ಜಗತ್ ರೂಪದಿಂದ ಶಿವನು ಅನುಗ್ರಹಿಸಿದ ಧನವನ್ನು ಒಬ್ಬಿಬ್ಬರು, ಕೆಲವರು, ಇವರಿಗಾಗಿರದೆ, ಸರ್ವ ಪ್ರಾಣಿಗಳಿಗಾಗಿದೆ ಎಂಬುವದನ್ನು ಲಕ್ಷಿಸಬೇಕು.)

(೧೦) ಸಮತಾ ಪ್ರಸಾದ ಹೀಗೆ ಗುರು ಲಿಂಗ ಜಂಗಮ ಪ್ರಸಾದ ಗ್ರಾಹಿಯಾದ ಭಕ್ತನಲ್ಲಿ ಮುಂದೆ ಎಲ್ಲರಲ್ಲಿಯೂ ಮುಖ್ಯವಾಗಿ ಲಿಂಗಾಂಗಿಗಳೆಲ್ಲೆಲ್ಲ "ಸರಿಸಮಾನ" ಭಾವವು, ಒಡಮೂಡುವದು. ಹೀಗೆ ಆಗುವದೇ "ಸಮತಾ ಪ್ರಸಾದ" ವೆನಿಸುವದು. ಅಂತೇ ಬಸವಣ್ಣನವರು, "ಲಿಂಗವುಳ್ಳವರನೆಲ್ಲ ಸಂಗ ನೀನೇ ಎಂದು ನಂಬುವೆ" ಎಂದು ಹೇಳಿದ್ದಾರೆ.

(೧೧) ಸಮ್ಯಕ್ ಜ್ಞಾನ ಪ್ರಸಾದ-- ಹೀಗೆ ಎಲ್ಲರಲ್ಲೂ ಸಮತೆಯುಂಟಾಗಿ, ಶಿವಭಾವನೆಯಿಂದ ಅವರನ್ನು ನೋಡಹತ್ತುವದೂ ತದನುಸಾರ ವರ್ತಿಸುವದೂ ಸಾಮಾನ್ಯ ಜ್ಞಾನಕ್ಕೆ ಮೀರಿದ ವಿಷಯಗಳು. ಭಕ್ತನು ಪ್ರಜ್ಞಾನ ಸುಜ್ಞಾನ ಸಾಮ್ಯಕ್ ಜ್ಞಾನವಂತನಾದರೆ ಮಾತ್ರ ಅದು ಸಾಧ್ಯ ಹೀಗೆ ಒಮ್ಮೆ ಪಡೆದ ಸಮತೆಯನ್ನು ಎಂದೆಂದೂ ಬಿಡದಿರುವದೇ ಸಮ್ಯಕ್ ಜ್ಞಾನಪ್ರಸಾದವು.

ಈ ಏಕಾದಶ ಪ್ರಸಾದಗಳು ಲಭಿಸಿದರೆ ಎಲ್ಲೆಲ್ಲಿಯೂ ಶಿವಚಿತ್ಕಲೆಯೇ ಗೋಚರವಾಗುವದು ಅಂತಹ ಶರಣನೇ ಮುಂದೆ ಕ್ರಿಯಾಭಾವ ಜ್ಞಾನಗಳ ನಿಷ್ಪತ್ತಿಯನ್ನು ಹೊಂದಿ, ಸಹಜವಾಗಿ ಪ್ರವರ್ತಿಸಹತ್ತುವನು ಅವನೇ ಸಮರಸ ಐಕ್ಯವನ್ನು ಹೊಂದುವನು. ಹೀಗಾಗದಿದ್ದರೆ ಅವನ ಪ್ರಸಾದ ಭೋಗವೆಲ್ಲ ನಿರರ್ಥಕವೇ ಸರಿ.

ಆಯಿತು! ಇಲ್ಲಿಗೆ ಪ್ರಸಾದ ಪಾದೋದಕಗಳ ಸಂಕ್ಷಿಪ್ತ ವಿವೇಚನೆಯು ಮುಗಿಯಿತು. ಈ ವಿವರದಿಂದ ನೋಡಿದರೆ ಅವೇನೂ ಬರೇ ಆಟಗಳಲ್ಲ. ಬಹು ಜಾಗ್ರತೆಯಿಂದ ಭಕ್ತನು ತನ್ನಲ್ಲ ಸಾಧಿಸತಕ್ಕ ಉನ್ನತಿಯ ಮಹಾ ಕಾರ್ಯಗಳಾಗಿವೆ. ಸುಮ್ಮ ಸುಮ್ಮನೇ ದಿನಾಲು ಪಾದೋದಕವೆಂದು ಮೂಢ ಭಕ್ತಿಯಿಂದ ಅದಷ್ಟು ಕಾಲ್ತೊಳೆದ ನೀರು ಕುಡಿದರೂ; ಪ್ರಸಾದದ ಎಡೆಯನ್ನು ಕಣ್ಮುಚ್ಚಿ ಭುಂಜಿಸಿದರೂ, ಅವುಗಳಿಂದ ಏನೂ ಪ್ರಯೋಜನವಾಗದು. ಇದನ್ನು ಪ್ರಸಾದಿಗಳೂ ಗುರು ಜಂಗಮರೆಂದು ಹೇಳಿಕೊಳ್ಳುವವರೂ ಒಳಿತಾಗಿ ಲಕ್ಷಿಸಬೇಕು.

## ಏಕೋತ್ತರ ಶತಸ್ಥಲಗಳೊಳಗಿನ ಪಾದೋದಕ ಪ್ರಸಾದಗಳು.

ಪ್ರಸಾದಿ ಭಕ್ತನು ಬೆರೆಯುತಕ್ಕ ಶಿವಲಿಂಗಸ್ಥಳದ, ೯ ಉಪಸ್ಥಳಗಳಲ್ಲಿ ಮೊದಲನೆಯದು ಕಾಯಾನುಗ್ರಹ (ಅಂದರೆ ತನುವಿನ ಅನುಗ್ರಹ ಸಂಪಾದಿಸುವದು) ಎಂದೂ, ಎರಡನೆಯದು ಇಂದ್ರಿಯಾನುಗ್ರಹ (ಅಂದರೆ ಪಂಚೇಂದ್ರಿಯಗಳ ಕೃಪೆ ಪಡೆಯುವದು) ಎಂದೂ ಮೂರನೆಯದು ಪ್ರಾಣಾನುಗ್ರಹ ಅಂದರೆ ಪ್ರಾಣದ ಕರುಣೆ ಪಡೆಯುವದು ಎಂದೂ, ಹೇಳಲಾಗಿದೆ. ಈ ತನು, ಇಂದ್ರಿಯ, ಪ್ರಾಣಗಳನ್ನು ತನಗೆ ಅನುಕೂಲ ಪಡಿಸಿಕೊಂಡು, ಶಿವಲಿಂಗಕ್ಕೆ ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ ಇದು ಕರಣಾರ್ಪಿತದ ಭಾವವು) ಮಾಡಬೇಕೆಂದೂ ಮುಂದೆ ೪, ೫ ಮತ್ತು ೬ನೆಯ

ಸ್ಥಳಗಳಲ್ಲಿ ಹೇಳಲಾಗಿದೆ. ಇಲ್ಲಿ ಅನುಗ್ರಹ ಪಡೆಯುವದೇ ಪಾದೋದಕವು. ಅರ್ಪಿತ ಮಾಡುವದೇ ಅವನ್ನು ಪ್ರಸಾದ ಸ್ವರೂಪಕ್ಕೆ ಒಯ್ಯುವದು. ಇಲ್ಲಿ ಪ್ರಾಣದ ವಿಷಯವಾಗಿ ಏನೂ ಬರಲಿಲ್ಲ. ಅದು ಪ್ರಾಣಲಿಂಗಿಯ ಬೆರೆಯ ತಕ್ಕ ಜಂಗಮ ಲಿಂಗದ ಉಪಸ್ಥಳಗಳಲ್ಲಿ ಬಂದಿದೆ. ಪ್ರಾಣವೆಂಬುದು "ಅಂತರಾತ್ಮನ ಸ್ವರೂಪವು" ಆದುದರಿಂದ ಜೀವಾತ್ಮ, ಅಂತರಾತ್ಮ, ಪರ ಮಾತ್ಮರ ನಿಜಸ್ವರೂಪವನ್ನರಿತುಕೊಂಡು, (ಅಂದರೆ ಕ್ರಮವಾಗಿ, ಅಶುದ್ಧ ಜ್ಞಾನ, ಪರಿಶುದ್ಧ ಜ್ಞಾನ, ಹಾಗೂ ಜಗವನ್ನು ವ್ಯಾಪಿಸಿದ ಮಹಾಜ್ಞಾನ ವೆಂದು ಬಗೆದು) ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮಗಳನ್ನು ಹೊಂದಿ ಆದಿ ಪ್ರಸಾದಿ ಅಂತ್ಯ ಪ್ರಸಾದಿ ಸೇವ್ಯ ಪ್ರಸಾದಿಯಾಗಬೇಕೆಂದು ವಿವರಿಸಲ್ಪಟ್ಟಿದೆ. ಇಲ್ಲಿ ಪ್ರಾಣವು (ಆತ್ಮವು) ಜಂಗಮ ಲಿಂಗಾರ್ಪಿತ ವಾಗಿ, ಪ್ರಸಾದ ಸ್ವರೂಪವನ್ನು ಐದಿದೆ. ಇವೇ ಸ್ವಯ ಜಂಗಮಕ್ಕೇರಿದ ಸ್ಥಿತಿಯು. ಶಿವಭಕ್ತನು ಈ ಮೇರೆಗೆ ಪ್ರಗತಿ ಹೊಂದಿ, ಪ್ರಸಾದ ಪಡೆಯ ಲಿಕ್ಕೆ ಅವನು ಆರಂಭದಲ್ಲಿ ಹೊಂದಿದ ಲಿಂಗದೀಕ್ಷೆಯ ಅನುಗ್ರಹವೂ, ಶಿವಮಾರ್ಗದ ಯೋಗ್ಯ ಶಿಕ್ಷಣದ ಅನುಗ್ರಹವೂ ಶಿವಜ್ಞಾನೋಪದೇಶದ ಅನುಗ್ರಹವೂ, ಮುಖ್ಯವಾಗಿ ಕಾರಣವಾದವು. ಈ ತಳಹದಿಯು ಸರಿ ಯಾಗಿಯೂ, ಭದ್ರವಾಗಿಯೂ ಬಹು ಅವಶ್ಯವೆಂಬುದು ಇದರಿಂದ ಚನ್ನಾಗಿ ವ್ಯಕ್ತವಾಗುತ್ತದೆ.

ಭಕ್ತನು ಹೀಗೆ ತನು (ದೇಹ) ಮನ (ಭಾವ) ಪ್ರಾಣ (ಆತ್ಮ ಇಲ್ಲವೆ ಜ್ಞಾನ) ಗಳನ್ನು ಪ್ರಸಾದಸ್ವರೂಪಕ್ಕೊಯ್ದರೆ ಅವನು ಸ್ವೀಕೃತ ಪ್ರಸಾದಿ ಯಾದಂತಾಯಿತು. ಇದಲ್ಲದೆ ಅವನ ಮುಂದೆ ಜಗತ್ತು ಹಾಗೇ ಉಳಿದಿದೆ. ಅದೇ ಶಿಷ್ಟೋದನವು (ಉಳಿದಿರುವ ಅನ್ನವು) ಅದು ಸಹ ಪ್ರಸಾದ ಸ್ವರೂ ಪವನ್ನೈದಲೇ ಬೇಕು. ಅಂತಾದರೆ ಮಾತ್ರ ಭಕ್ತನ "ಶಿಷ್ಟೋದನ ಪ್ರಸಾದಿ" ಎಂದೆನಿಸುವನು. ಆಗ ಚರಾಚರವೆಲ್ಲವೂ ಲಯವಾಗಿ (ಅಡಗಿ) ಎಲ್ಲೆಲ್ಲಿಯೂ ಒಂದೇ ಒಂದು, ಪ್ರಸಾದ (ಶಿವಸ್ವರೂಪ) ವೇ ತೋರುವದು. ಭಕ್ತನೂ ವಿಶ್ವವೂ ಶಿವರೂಪಗೊಂಡು, ಏಕಮೇವಾದ್ವಿತೀಯವೆಂಬ ಒಂದೇ ಒಂದು ರೂಪಕ್ಕೆ ಬರುವದು.

ಸ್ವೀಕೃತ ಪ್ರಸಾದಿಯೇ ಆದಿ ಪ್ರಸಾದಿಯು. ಶಿಷ್ಟೋದನ ಪ್ರಸಾ ದಿಯೇ ಅಂತ್ಯ ಪ್ರಸಾದಿಯು. (ಈತನೇ ಚರಜಂಗಮನು.) ಇವೆರಡನ್ನೂ ಒಂದಾಗಿಸುವವನೇ ಸೇವ್ಯ ಪ್ರಸಾದಿಯು. (ಅಥವಾ ಪರಜಂಗಮನು) ಇಲ್ಲಿಗ

ಚರಾಚರಾದಿ ಉಳಿದ ಐಕ್ಯನ ಮಹಾಲಿಂಗದ ಉಪಸ್ಥಳಗಳೆಲ್ಲ ಅವನಿಗೆ ಸಹಜವಾಗಿಯೇ ಲಭಿಸುವವು.

ಶರಣನೇ ಅಷ್ಟಾವರಣಗಳಲ್ಲಿ ಆರನೆಯದಾದ ವಿಭೂತಿ ಸ್ವರೂಪನು. ಅವನು ಪಡೆದ ಸ್ವೀಕೃತ ಪ್ರಸಾದಿತ್ವ, ಶಿಷ್ಟೋದನ ಪ್ರಸಾದಿತ್ವಗಳೇ, ರುದ್ರಾಕ್ಷಿ ಸ್ವರೂಪ, ಹಾಗೂ ಆತನು ಐಕ್ಯತ್ವ ಪಡೆವುದೇ ಮಂತ್ರ ಸ್ವರೂಪ. ಈ ಪರಿಗೆ ಲಿಂಗ ಸ್ಥಳಗಳೂ ಸಹ, ಅಷ್ಟಾವರಣಗಳ ರೂಪ ದಲ್ಲಿಯೇ ಬರುವವು.

ಶೇಷವೆಂದು ಪ್ರಸಾದಕ್ಕೆ ಇನ್ನೊಂದು ಹೆಸರುಂಟು. ಪದಾರ್ಥಗಳ ಗುಣ-ರೂಪ-ನಾಮಗಳನ್ನು ಅತಜ್ಞಾನದಿಂದ ಕಳೆಯಲು, ಒಂದೇ ಒಂದಾದ ಶಿವಸ್ವರೂಪವೇ ಉಳಿಯುವದು. ಆದುದರಿಂದ ಅದಕ್ಕೆ ಶೇಷ (ಉಳಿದುದು) ಎನ್ನುವದು ಸಹಜವೇ ಸರಿ.

ಈ ಲೇಖದ ಆರಂಭದಲ್ಲಿ ಕೊಟ್ಟ ಕಂದ ಪದ್ಯದಲ್ಲಿ, ಲಿಂಗಾಯತರಲ್ಲಿ ಕರುಣೆ, ವಿನಯ, ಸೇವಾವೃತ್ತಿ, (ದಾಸೋಹಂ ಭಾವ) ಸಮತ್ವ, ಸತ್ಯ, ಸಮ್ಯಕ್ ಜ್ಞಾನಗಳೆಂಬ ಆರು ಗುಣಗಳು ಇರುವದು ಅವಶ್ಯವೆಂದೂ, ಅವಿರ ದಿದ್ದರೆ ಭಕ್ತನ ಜನ್ಮವೇ ವ್ಯರ್ಥವೆಂದೂ ಹೇಳಿವೆ. ಮೇಲಿನ ಲೇಖವನ್ನು ಓದಿದವರಿಗೆ, "ಅದರಲ್ಲಿ ಹಾಗೆ ಏಕೆ ಹೇಳಿದೆ" ಎಂಬುದು ಸಹಜವಾಗಿ ಲಕ್ಷ ವಲ್ಲಿ ಬಂದಿರಬಹುದು. ಪಾದೋದಕ ಪ್ರಸಾದಗಳನ್ನು ಪಡೆಯುವದು ಈ ಗುಣಗಳ ಪ್ರಾಪ್ತಿಗಾಗಿಯೇ. (ಅವೇ ವೀರಶೈವ ಮತದ ತಿರುಳಾಗಿವೆ)

(ಅ) ತನುವಿನ ಅನುಗ್ರಹ (ಗುರು ಪಾದೋದಕ) ಪಡೆದ ಮೇಲೆ ಅದರ ಫಲವಾಗಿ, ತನ್ನಲ್ಲಿ ಸದಾಚಾರವು ಒಡಮೂಡಿ, ಸತ್ಪಾತ್ರರಾದವರಿಗೆ ಕೊಡುಗೈಯಿಂದ ದಾನಧರ್ಮಗಳನ್ನು ಮಾಡಲು ತವಕಿಸಬೇಕು.

(ಬ) ಲಿಂಗ (ಸುಜ್ಞಾನ) ಪಾದೋದಕ ಹೊಂದಿದರೆ ಮನವು ಜ್ಞಾನ ಮಯವಾಗಿ, ದುರಹಂಕಾರ ಅಭಿಮಾನಗಳನ್ನು ತೊರೆದು ವಿನಯಶಾಲಿ ಯಾಗಿ, ಸಮಾಜದೊಡನೆ, ಹಿಂಸೆ, ಕಾಪಟ್ಯ ಮಾತ್ಸರ್ಯಗಳಿಲ್ಲದೆ, ಬಲು ಸೋಸಿ ನಡೆಯಬೇಕು.

(ಕ) ಜಂಗಮ ಪಾದೋದಕಗ್ರಾಹಿಯಾದ ಮೇಲೆ ಸಮಾಜದೊಡನೆ ಸೇವಾ (ದಾಸ್ಯ) ವೃತ್ತಿ ಹಿಡಿದು, ಸಮಾಜದ ಅನೇಕ ಉಪಯುಕ್ತ ಕಾರ್ಯ ಗಳಿಗೆ, ತನ್ನ ಗಳಿಕೆಯನ್ನು ಶುದ್ಧ ಭಾವದಿಂದ, ಹಿಂಜರಿಯದೆ, ತನ್ನ ಶಕ್ತ್ಯಾನುಸಾರ ವೆಚ್ಚ ಮಾಡಬೇಕು. ಸತ್ಯವನ್ನು ಪ್ರೀತಿಸುತ್ತ ಬೆಂಬಳಿಸಿ ಅದು ತನ್ನ ಮೈಗೊಳ್ಳುವಂತೆ, ಮಾಡಬೇಕು.

(ಗ) ಗುರುಪ್ರಸಾದ ಪಡೆಯುವದರಿಂದ, ತನಗೆ ಹೇಗೆ ಅನ್ನದ (ಪ್ರಸಾದದ) ಅವಶ್ಯಕತೆಯುಂಟೋ ಹಾಗೆಯೇ ಪರರನ್ನು "ಆತ್ಮವತ್" ಎಂದು ತಿಳಿದು, ಅವರಿಗೂ ಅನ್ನವನ್ನು ಕೊಡಬೇಕು.

(ಇ) ಲಿಂಗಪ್ರಸಾದವು ಲಭಿಸಿದ ಬಳಿಕ, ಎಲ್ಲ ಜಗತ್ತನ್ನು ಮುಖ್ಯವಾಗಿ ಭಕ್ತ ಸಮಾಜವನ್ನು ಗುಣಾತೀತ ರೂಪಾತೀತವಾಗಿ, ಅಂತಃಕರಣದಿಂದ ಬಗೆದು, ಸರ್ವರೀತಿಯಿಂದಲೂ ಅವರೊಡನೆ ಏಕವಾಗಿ ವರ್ತಿಸಬೇಕು.

(ಫ) ಜಂಗಮ ಪ್ರಸಾದ ಪಡೆದ ನಂತರ, ಸದಾಚಾರದಿಂದಲೇ ಯಾವಾಗಲೂ ವರ್ತಿಸುತ್ತ, ವಿವೇಕವನ್ನೇ ಅನುಸರಿಸುತ್ತ, ತನಗೆ ಲಭಿಸಿದ ಸಂಪತ್ತು "ಶಿವನ ಸೊತ್ತೆಂದೂ, ಅದನ್ನು ಅವನು ಸರ್ವರಿಗೂ ಕೊಟ್ಟಿರುವನೆಂದೂ, ತನ್ನ ದ್ವಾರವಾಗಿ, ಅದು ಸತ್ಪಾತ್ರದಲ್ಲಿ ಸವೆಯಬೇಕೆಂದುದ್ದೇಶದಿಂದ, ತನ್ನನ್ನು ಸೇರಿಸುವದೆಂದೂ ತಿಳಿದು," ಅದನ್ನು ಜಂಗಮಕ್ಕೆ (ಜನತೆಗೆ) ಉದಾರಾಂತಃಕರಣದಿಂದ, ನೀಡಬೇಕು.

ಈ ಗುಣಗಳು ಒಮ್ಮೆಲೇ ಯಾರಿಗೂ ಉಂಟಾಗಲಾರವು. ಆದರೂ ನಿತ್ಯ ಪಾದೋದಕ ಪ್ರಸಾದ ಸೇವಿಸುತ್ತ, ಅವುಗಳಿಂದ ಹೊಂದತಕ್ಕ ಉದ್ಧಾರವನ್ನು ನೆನೆಯುತ್ತ, ಸರ್ವಕಾಲವೂ ಅದೇ ಚಿಂತನೆಯಲ್ಲಿ (ಜಪದಲ್ಲಿ) ಇದ್ದರೆ, ಬರಬರುತ್ತ ಅವು ತಾವೇ ಅಂಟಿಕೊಳ್ಳುವವು.

(ಇಂತು ಅಭ್ಯಸಿಸುತ್ತ ಸದ್ಭಾವನೆ, ಸಮತ್ವ, ಸಮ್ಯಕ್ ಜ್ಞಾನಗಳನ್ನು ಸಂಪಾದಿಸಿದರೆ, ಯಾವದು ತಾನೇ ಆಗದು? "ಮನವಿದ್ದಲ್ಲಿ ಮಾರ್ಗವಿದ್ದೇ ಇದೆ" ಎಂಬ ಗಾದೆಯ ಮಾತು ಬಹು ಬೆಲೆಯುಳ್ಳದ್ದಿದೆ. ಇದನ್ನು ದುಷ್ಟ ಕಾರ್ಯಗಳಲ್ಲಿ ಬಳಿಸಲು ಬಹುಜನರು ಸಿದ್ಧರಿರುವರೇ ಹೊರತು ಸತ್ಕಾರ್ಯಗಳಲ್ಲಿ ಇಲ್ಲ.)

ಇತ್ತ ಅದೆಷ್ಟು ಜನರು ಲಕ್ಷಗೊಡುವರು ಎಂಬುದನ್ನು ವಾಚಕರೇ ಊಹಿಸಬೇಕು.

ಈ ಮೇರೆಗೆ ಅರಿದು ಆಚರಿಸಿದರೆ, ಶಿವನು ಶಿವಾಗಮದಲ್ಲಿ ಹೇಳಿದಂತೆ "ಏಕೇನ ಜನ್ಮನಾ ಮುಕ್ತಿಃ । ವೀರಾಣಾಂತು ಮಹೇಶ್ವರಿ॥" ಎಂಬುದೇನು ಅಸಾಧ್ಯ ! "ಉಂಡುಂಡು ಸ್ವರ್ಗಕ್ಕೈದಲಿಕ್ಕೆ ಅದನೇನು ರಂಡೆಯಾಳುವಳೇ?" ಎಂದು ಸರ್ವಜ್ಞ ಮೂರ್ತಿಯು ಸಮಾಜವನ್ನು ಎಚ್ಚರಿಸಿದ್ದಾನೆ. ಅದನ್ನು ಕೇಳಲಿಕ್ಕೆ ಹಾಗೂ ನಡೆಯಲಿಕ್ಕೆ ಎಷ್ಟು ಜನರಿಗೆ ವೇಳೆಯಿದೆ ? ಹಾಗೂ ಅಂತಃಕರಣ (ಭಕ್ತಿ) ಪೂರ್ವಕ ಬಯಕೆಯಿದೆ ?

---

# ಬಡವರಿಗೆ ಸರ್ವಜ್ಞನ ಹಿತೋಪದೇಶ

(ಲೇ:- ಶ್ರೀ ಅನ್ನದಾನೀಶ್ವರ ವಿರಕ್ತಮಠ.
ಶಿಕ್ಷಕರು:: ಬಸವೇಶ್ವರ ಕನ್ನಡ ಟ್ರೇನಿಂಗ ಕಾಲೇಜ ಬಾಗಲಕೋಟ )

---

ವಿಶ್ವಕವಿಯಾದ ಸರ್ವಜ್ಞನು ಮಾನಸ ಶಾಸ್ತ್ರಜ್ಞನಾಗಿದ್ದನೆಂದು ಅವನ ವಚನಗಳಿಂದ ನಾವು ತಿಳಿಯಬಹುದು. ಅವನು ವ್ಯವಹಾರ ಚತುರನೂ ಮನುಷ್ಯ ಸ್ವಭಾವ ಜ್ಞಾನವುಳ್ಳವನೂ ಆಗಿದ್ದನು. ಯೋಗಶಕ್ತಿಯಿಂದ ಆ ಮಹಾನುಭಾವನಿಗೆ ಅಂಥ ಶಕ್ತಿ ಬಂದಿತ್ತೆಂದು ಜ್ಞಾನಿಗಳು ಹೇಳುತ್ತಾರೆ. ಏನೇ ಇರಲಿ, ಸರ್ವಜ್ಞನು ಜಗತ್ತಿನ ಎಲ್ಲ ಬಡವರಿಗೆ ವ್ಯವಹಾರದಲ್ಲಿ ಹಿತವಾಗುವಂತೆ ಮಾರ್ಗದರ್ಶಕವಾದ ಮಾತುಗಳನ್ನು ಹೇಳಿರುವನು ಅವುಗಳಲ್ಲಿ ಕೆಲವನ್ನು ಇಲ್ಲಿ ಸಂಗ್ರಹ ರೂಪವಾಗಿ ಬರೆಯುತ್ತೇವೆ.

## ಬಡವರಿಗೆ ಹಿತೋಪದೇಶ

ಬಡವನು ತನ್ನ ದೇಹವನ್ನು ಬಲಿಷ್ಠವಾಗಿಟ್ಟುಕೊಂಡಿರಬೇಕು. ದೇಹ ಶಕ್ತಿಯೇ ಬಡವನ ನಿಜವಾದ ಭಂಡವಲು ಇಷ್ಟೇ ಏಕೆ? ಬಡವನ ದೇಹ ಶಕ್ತಿಯೇ ರಾಷ್ಟ್ರದ ಭಂಡವಲು ಎಂದು ಹೇಳಬಹುದು. ದುಶ್ಚಟಗಳಿಗೂ, ದುಷ್ಟ ರೂಢಿಗಳಿಗೂ, ದುರ್ವ್ಯಸನಗಳಿಗೂ ಬಲಿಬಿದ್ದು ತನ್ನ ನಡವ ಕಸುವನ್ನು ಕಳಕೊಳ್ಳಬಾರದು. ನಡದಲ್ಲಿಯ ಕಸುವು ದೇಹಶಕ್ತಿಯ ಹೆಗ್ಗುರುತು. ನಡದಲ್ಲಿ ತ್ರಾಣವಿಲ್ಲದವನು ಕಷ್ಟದ, ಭಾರವಾದ ಕೆಲಸಗಳನ್ನು ಮಾಡಲಿಕ್ಕೆ ಸಹನಶೀಲತೆಯಿಲ್ಲದವನಿರುತ್ತಾನೆ. ಸರಕಾರವು ಉದ್ಯೋಗ ಕೊಡಲಿಕ್ಕೆ ಸಿದ್ಧವಿದ್ದರೂ, ಶ್ರೀಮಂತರು ಒಂದುವೇಳೆ ಕೆಲಸಕ್ಕೆ ಹಚ್ಚಲಿಕ್ಕೆ ತಯಾರಿದ್ದರೂ ಬಡವನಿಗೆ ದುಡಿಯುವ ಕಸುವೇ ಇಲ್ಲದಿದ್ದರೆ ಪ್ರಯೋಜನವೇನು ? ಆದಕಾರಣ "ಬಡವನಿಗೆ ಬಿದ್ದ ನಡು ಹೊಲ್ಲ" ಎಂದು ಸರ್ವಜ್ಞ ಕವಿಯು ಬೋಧಿಸಿದ್ದಾನೆ

## ದೇಹಶಕ್ತಿಯ ಸದುಪಯೋಗ

ಬಡವನಿಗೆ ದೇಹಶಕ್ತಿ ಯಿದ್ದರೆ ಆ ಶಕ್ತಿಯನ್ನು ದುಡಿಯುವದರಲ್ಲಿ ಉಪಯೋಗಿಸಬೇಕು. ಉತ್ಪಾದನ ಮಾಡುವದರಲ್ಲಿ ವಿನಿಯೋಗಿಸಬೇಕು.

ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಬೇಕು. ಜಗಳ, ಬಡಿದಾಟಗಳಲ್ಲಿ ದೇಹದ ಶಕ್ತಿಯನ್ನು ವ್ಯರ್ಥವಾಗಿ ಖರ್ಚು ಮಾಡಬಾರದು. ಹಾಗೆ ಮಾಡಿದರೆ ಮಾನ ಹಾನಿ, ಗುಣಹಾನಿ, ಧನಹಾನಿ, ಬುದ್ಧಿಹಾನಿ, ಉತ್ಸಾಹಹಾನಿಗಳಿಗೆ ಒಳಗಾಗಿ ಕಷ್ಟ ಪರಂಪರೆಗಳಿಗೆ ತುತ್ತಾಗುತ್ತಾನೆ. ಉದ್ಯೋಗ ತೀರಿದಾಗ ಯಿಚ್ಛೆಯಿದ್ದರೆ ಗರಡೀ ಮನೆಯಲ್ಲಿ ಕುಸ್ತೀಆಡಬಹುದು. ಗರಡೀ ಮನೆಯಲ್ಲಿ ಗುದ್ಯಾಡಬಹುದು. ಆದರೆ ಹೊರಗೆ ದ್ವೇಷದಿಂದ ಅಸ್ವಾರಕೂಡ ಗುದ್ಯಾಡಬಾರದೆಂದೇ ಸರ್ವಜ್ಞನ ಸಂದೇಶವಾಗಿದೆ. ಆದಕಾರಣ "ಬಡವಗೆ ಗುದ್ಯಾಟ ಹೊಲ್ಲ" ಎಂದು ಉಸುರಿದ್ದಾನೆ.

## ಆಲಸ್ಯತನವು ವೈರಿಯು

ಬಡವನಿಗೆ ಆಲಸ್ಯತನವು ಮಹಾ ವೈರಿಯು. ಎಲ್ಲ ದುರ್ಗುಣಗಳ ದುರಾಚಾರಗಳ ತವರ್ಮನೆಯು. ಆಲಸ್ಯತನದಿಂದ ಸುಮ್ಮನೆ ಕೂತು ಕಾಲ ಹರಣ ಮಾಡಿದರೆ ಹೊಟ್ಟೆಗೆ ಹಿಟ್ಟು. ಮೈಗೆ ಬಟ್ಟೆ, ಇರಲಿಕ್ಕೆ ಆಶ್ರಯ, ಮೆದುಳಿಗೆ ವಿಚಾರ, ಮನಸ್ಸಿಗೆ ವಿಶ್ರಾಂತಿಗಳನ್ನು ಕೊಡುವವರಾರು? ಆಲಸ್ಯತನವನ್ನು ತಳ್ಳಿ ದುಡಿಯಲಿಕ್ಕೆ ಟೊಂಕಕಟ್ಟಲಿಕ್ಕೆಬೇಕು. ಆದಕಾರಣ "ಬಡವನು ಕೂತಿರಲು ಹೊಲ್ಲ" ಎಂದು ಸರ್ವಜ್ಞ ಕವಿಯು ನುಡಿದಿರುವನು.

## ಬಡವನ ಮಾತುಗಳು ಹೇಗಿರಬೇಕು ?

ಬಡವನು ಸತ್ಯವನ್ನು ನುಡಿಯಬೇಕು. ಸುಳ್ಳುಹೇಳಿದರೆ ಅವನ ಮುಖದ ಮುಂದೆಯೇ ತತ್‌ಕ್ಷಣ ಅವನನ್ನು ಖಂಡಿಸುತ್ತಾರೆ. ಏಕೆಂದರೆ ಬಡವನ ಭಿಡೆ ಜನರಿಗೆ ಇರುವದಿಲ್ಲ. ಅದೇ ಸಾಹುಕಾರರು, ಧನಿಕರು ಸುಳ್ಳುಹೇಳಿದರೆ ಜನರು ಸುಮ್ಮನಿರುತ್ತಾರೆ. ಖಂಡಿಸುವದಿಲ್ಲ; ಏಕೆಂದರೆ ಧನಿಕನಿಗೆ ಅವನ ಧನದಿಂದ ಸಮಾಜದಲ್ಲಿ ಒಂದು ವಿಚಿತ್ರ ದರ್ಜೆಯು ಬಂದಿರುವದು. ಧನಿಕರ ಭಿಡೆಯಲ್ಲಿಯೂ ಅನೇಕ ಜನರು ಇರುವದುಂಟು. ಸುಳ್ಳಾಡುವ ಬಡವನನ್ನು ಜನರು ನಂಬುವದಿಲ್ಲ. ದುಡಿಯಲಿಕ್ಕೆ ಬಾಯೆಂದು ಕರೆದರೆ ನಿಶ್ಚಯವಾಗಿ ನಾಳೆ ನಾಡದು ಬರುತ್ತೇನೆಂದು ಸುಳ್ಳು ಹೇಳುತ್ತ ತಲೆತಪ್ಪಿಸಿಕೊಳ್ಳುವ ಬಡವನಿಗೆ ಜನರು ಉದ್ಯೋಗವನ್ನು ಸಹ ಕೊಡುವದಿಲ್ಲ. ಮೊದಲೇ ಬಡವನನ್ನೂ ಬಡತನವನ್ನೂ ಸಮಾಜವು ಪ್ರೀತಿಸುವ

ದಿಲ್ಲ. ಸುಳ್ಳು ಹೇಳಿದರಂತೂ ಇದ್ದ ಅಲ್ಪ ಸ್ವಲ್ಪ ಸಹಾನುಭೂತಿ ಸಹ ಹೋಗಿ ತದ್ವಿರುದ್ಧ ಬಡವನ ಮೇಲೆ ಸಿಟ್ಟುಬರುತ್ತದೆ. ಆದಕಾರಣ ಬಡವನು "ಸುಳ್ಳಾಡ ಹೊಲ್ಲ"ಎಂದು ಸರ್ವಜ್ಞ ಕವಿಯು ಒಡನುಡಿದಿರುವನು.

## ಅಧಿಕ ಪ್ರಸಂಗತನ ಬೇಡ.

ಬಡವನು ತನಗೆ ಸಂಬಂಧವಿಲ್ಲದ ಓಲಗಕ್ಕೆ ಹೋಗಬಾರದು. ಸಭೆಯಲ್ಲಿ ಹೋಗಿ ಫಿರೇತನ ಮಾಡಲಿಕ್ಕೆ ಹೋಗಬಾರದು. ದೊಡ್ಡಿಸ್ತನದ ಮಾತುಗಳನ್ನು ಆಡಬಾರದು. ನಡುವೆ ಬಾಯಿಹಾಕಿ ತನ್ನವೆರಡು ಅಕ್ಕೀಕಾಳು ಉದುರಿಸಲಿಕ್ಕೆ ಹವಣಿಸಬಾರದು. ಓಲಗವು ಸಮಾರಂಭದ, ವಿಜೃಂಭಣೆಯ, ವೈಭವ, ವೈಖರಿಯ ಸ್ಥಾನವು. ಅಲ್ಲಿ ಬಡವರಿಗೆ ಸ್ಥಾನವಿರುವದಿಲ್ಲ. ಇದನ್ನು ತಿಳಿದು ತಾನಿರತಕ್ಕ ಕ್ಷೇತ್ರದಲ್ಲಿ ಇರತಕ್ಕದ್ದು. ತನಗೆ ಸಮಾನಶೀಲರಾದವರ ಕೂಡ ಗೆಳತನ ಮಾಡತಕ್ಕದ್ದು. ತನಗಿಂತ ಬಲಶಾಲಿಗಳ ಕೂಡ ಸಹವಾಸ ಮಾಡಿದರೆ ಬಡವನಿಗೇನೇ ಕೇಡುಂಟಾಗುವದು ನಿಶ್ಚಯ. ಡಾಂಭಿಕ ವೇಷ ಭೂಷಣಗಳಿಂದ ಕೂಡಿದ, ಡಾಂಭಿಕ ಮಾತಿನಮಲ್ಲರಿಂದ ತುಂಬಿದ, ಡಾಂಭಿಕ ಚರ್ಚೆಯಲ್ಲಿ ಕಾಲಕಳೆಯುತ್ತಿರುವ, ಡಾಂಭಿಕ ಆಟಕೂಟದಲ್ಲಿ ಕಾಲವ್ಯಯ ಮಾಡುತ್ತಿರುವ, ಓಲಗಕ್ಕೆ ಹೋದರೆ ಬಡವನಿಗೆ ಬರುವ ಭಾಗ್ಯವಾದರೂ ಏನು ?

ಬಡವನಿಗೆ ಓಲಗದ ರುಚಿ ಹತ್ತಿದರೆ ಉದ್ಯೋಗ ಪ್ರೀತಿ ಕಡಿಮೆಯಾಗಿ ಆಲಸಿಯಾಗಿ, ಠಕ್ಕತನದಿಂದ ಜೀವಿಸಲಿಕ್ಕೆ ಕಲಿತು ಕಪಟ ಹೃದಯವುಳ್ಳವನಾಗಿ, ಕೊನೆಗೊಮ್ಮೆ ಅಪಾರ ದು:ಖದಲ್ಲಿ ಬೀಳಬಹುದು ಆದಕಾರಣ "ಬಡವನಿಗೆ ಓಲಗವು ಹೊಲ್ಲ" ಎಂದು ಸರ್ವಜ್ಞ ಕವಿಯು ಉಪದೇಶಿಸುವನು.

## ದೇಶೋದ್ಧಾರದ ಒಣಮಾತು ಬೇಡ.

ಬಾಯಲ್ಲಿ ಹಲ್ಲಿಲ್ಲದವರಿಗೆ ಕಬ್ಬು ತಿನ್ನಲಿಕ್ಕೆ ಬರುವದಿಲ್ಲ. ಅಂಥ ಬೋಡನು ಕಬ್ಬಿನ ಬಗ್ಗೆ ಮಾತಾಡಿದರೆ ಏನು ಪ್ರಯೋಜನ ? ಅದರಂತೆ ದೇಶೋದ್ಧಾರ ಮಾಡಲಿಕ್ಕೆ ಶಕ್ತಿಯಿಲ್ಲದವನು ದೇಶದ ಉನ್ನತಿಯ ಮಾತಾಡುವದು ಒಣಮಾತಾಗುತ್ತದೆ. "ಒಣಮಾತಾಡಿದರೆ ಶನಿಹರಿದು ಹೋಗುವದೇ ?" ಎಂಬ ಬಾಲಲೀಲಾ ಮಹಂತ ಶಿವಯೋಗಿಗಳ ಮಹಾ ಕಾವ್ಯವನ್ನು ಸ್ಮರಿಸಬೇಕು.

ಬಡವನು ನಾಡಿನ ಒಂದು ಘಟಕ. ತನ್ನ ಉನ್ನತಿಯ ಬಗ್ಗೆ ಅವನು ಯತ್ನಿಸುತ್ತ ನಡೆದರೆ ನಾಡಿನ ಉನ್ನತಿಯು ಆಗಲಿಕ್ಕೆ ಸುಲಭವಾಗುತ್ತದೆ. ಪ್ರತಿಯೊಬ್ಬನು ತನ್ನ ಪಾಲಿನ ಕಾಯಕವನ್ನು ಮಾಡುತ್ತ ಸಾಗಿದರೆ ದೇಶದ ಉದ್ಧಾರವಾಗಲೀ ಜಗತ್ತಿನ ಉದ್ಧಾರವಾಗಲೀ ಸಹಜವಾಗಿ ಸಾಧಿಸುತ್ತವೆ. ವ್ಯಕ್ತಿಯು ತನ್ನ ಕಾಯಕ ಬಿಟ್ಟಿರುವದರಿಂದ, ಅಥವಾ ತೃಪ್ತಿಕರವಾಗಿ ಮಾಡದೇ ಇರುವದರಿಂದ ನಾಡಸೇವೆಯ ಸಲುವಾಗಿ ಬೇರೆ ಜನರು ಟೊಂಕ ಕಟ್ಟಬೇಕಾಗುತ್ತದೆ ಅಲ್ಲವೇ ?

ಬಡವನು ತನ್ನ ತನು, ಮನ. ಭಾವ, ಆತ್ಮಗಳ ಉದ್ಧಾರಕ್ಕೆ ಸತತವಾಗಿ ಪ್ರಯತ್ನಿಸಬೇಕು ತ್ರಿಕರಣ ಪೂರ್ವಕ ದುಡಿಯಬೇಕು. ಅದನ್ನು ಬಿಟ್ಟು ನಾಡ ಮಾತಾಡುತ್ತ ಕೋಡಗನಂತೆ ಅಡ್ಡಾಡುವದನ್ನು ಕಲಿತ್ತು ಕೇಡಿಯಾಗುವದು ನವಸಮಾಜ ನಿರ್ಮಾಣಕ್ಕೆ ಸಲ್ಲದು ಸಲ್ಲದು. ಅದ ಕಾರಣ "ಬಡವನಿಗೆ ನಾಡ ಮಾತೇಕೆ ?" ಎಂದು ಸರ್ವಜ್ಞ ಕವಿಯು ಪ್ರಶ್ನಿಸಿರುವನು.

## ಸ್ವಭಾವವನ್ನು ತಿದ್ದಿಕೊಳ್ಳಬೇಕು.

ಮನೆಯ ಗೋಡೆ ಬಿರಿದರೆ. ಒಡಕಿನ ಮನೆಯಲ್ಲಿದ್ದರೆ ಕೇಡುಂಟಾಗುವಂತೆ ಹಮ್ಮು ಬಿಮ್ಮುಗಳು ಬಡವನಿಗೆ ಹಾನಿಯನ್ನುಂಟುಮಾಡುತ್ತವೆ. ತನ್ನ ಇಷ್ಟದಂತೆ ಕೆಲಸವಾಗದಿದ್ದರೆ ಸಿಟಗೊಳ್ಳುವದಾಗಲೀ, ತನ್ನ ಮನಸ್ಸಿಗ ಬಂದಂತೆ ಅನ್ಯರು ಮಾತಾಡದಿದ್ದರೆ ಸಿಡುಕುತನ ತೋರಿಸುವದಾಗಲೀ ಬಡವನಿಗೆ ತರವಲ್ಲ. 'ಬಡವನ ಸಿಟ್ಟು ದವಡಿಗೆ ಕೇಡು.' ಜಗತ್ತಿನಲ್ಲಿ ಸಮಾಜದಲ್ಲಿದ್ದ ಮೇಲೆ ಅಕ್ಕ ಮಹಾದೇವಿಯವರು ಬೋಧಿಸಿದಂತೆ ಅನಾನ್ನುಕೂಲ ಪರಿಸ್ಥಿತಿಯಲ್ಲಿ ಸಹ ಮನದಲ್ಲಿ ಕೋಪವ ತಾಳದೆ ಶಾಂತನಾಗಿರಬೇಕು. ಇಂಥ ಸಹನಶೀಲತೆಯನ್ನು ಕಲಿಯಬೇಕು. ಪರಿಸ್ಥಿತಿಗೆ ಹೊಂದಿಕೊಂಡು ಹೋಗುವ ಪರಿವರ್ತನ ಸ್ವಭಾವವಿರಬೇಕು. ಸ್ವಭಾವವನ್ನು ತಿದ್ದುತ್ತ ಸಾಗಿದರೆ ಶೀಲವು ರೂಪುಗೊಳ್ಳುವದು. ಶೀಲ ಬಲವುಳ್ಳ ಬಡವನು ಜಗತ್ತಿನಲ್ಲಿ ಮಹಾ ಕಾರ್ಯ ಮಾಡಬಲ್ಲನು. ಆದಕಾರಣ ಸರ್ವಜ್ಞ ಕವಿಯು "ಬಡವರಿಗೆ ಸಿಡುಕು ತಾ ಹೊಲ್ಲ" ಎಂದು ಜಾಣ ನುಡಿಯನು ನುಡಿದಿರುವನು.

## ಆತ್ಮ ವಿಶ್ವಾಸವಿರಲಿ.

ತನ್ನ ಕೂಡ ಆದರದಿಂದ ಜನರು ಮಾತಾಡುವದಿಲ್ಲೆಂದೂ, ಸಮಾಜದಲ್ಲಿ ತನಗೆ ಸ್ಥಾನವಿಲ್ಲೆಂದೂ, ಬಡವನು ಮನದಲ್ಲಿ ಕೊರಗಬಾರದು. ಸಿರಿ ಮತ್ತು ಬಡತನಗಳು ಸ್ಥಿರವಲ್ಲವೆಂದೂ ಗುಣ ಮತ್ತು ವಿಚಾರಗಳು ಮಹತ್ವವೆಂದೂ, ಧನಕ್ಕಿಂತ ನೀತಿ ದೊಡ್ಡದೆಂದೂ ಬಡವನು ಗಟ್ಟಿಯಾಗಿ ಭಾವಿಸಿ ಕಾಯಕ ತತ್ಪರನಾಗಿರಲಿಕ್ಕೆ ಬೇಕು. ನಿರುದ್ಯೋಗಿಯಾದ ಬಡವನು ನಾಡಿಗಪಕಾರಿಯು. ಅಂಥ ಆಲಸಿಯು ಇದ್ದಲಿಗಿಂತಲೂ ಕನಿಷ್ಠನು ತುಂಬಿದ ಕೆರೆ ಬಾವಿ ಯಾವಾಗಲೂ ತುಂಬಿಯೇ ಇರುವದಿಲ್ಲ, ಲಕ್ಷ್ಮಿಯೇ ಶ್ರೇಷ್ಠವೆಂದು ನಂಬಿದರೆ ಕಷ್ಟಕ್ಕೊಳಗಾಗಬೇಕಾಗುತ್ತದೆ.

ಇಂದಿನ ಸಮಾಜದಲ್ಲಿಯ ವಿಷಮ ಪರಿಸ್ಥಿತಿಯನ್ನು ಕಂಡು ಬಡವನಿಗೆ ಅಸಮಾಧಾನ, ಅಶಾಂತಿಗಳು ಹೆಚ್ಚಿ ದ್ವೇಷಭಾವನೆಗೆ ಮಾತ್ರ ಎಡೆಗೊಡಬಾರದು. ಹಾಗಾದರೆ ವರ್ಗಕಲಹ ಬೆಳೆದು ಯುದ್ಧಕ್ಕೆ ದಾರಿಯಾಗಿ ಹಿಂಸೆಯಿಂದ ಜಗತ್ತಿಗೆ ಕಲ್ಯಾಣವಾಗುವದಿಲ್ಲ. ತನ್ನಲ್ಲಿಯ ಕೊರತೆಗಳನ್ನು ನೀಗುತ್ತ ಸ್ವಭಾವವನ್ನು ಮೇಲ್ಮಟ್ಟಕ್ಕೆ ಒಯ್ಯುತ್ತ ಪ್ರಗತಿ-ಪಥದಲ್ಲಿ ಕಾಯಕ ಮಾಡುತ್ತ ಸಾಗಿದರೆ, ಅಂಥವರಿಂದಲೇ ಸರ್ವೋದಯ ಸಮಾಜ ನಿರ್ಮಾಣವಾಗಬಲ್ಲದು. ಆದಕಾರಣ "ನಂಬಿರಬೇಡ ಲಕ್ಷ್ಮಿಯನು" ಎಂದೂ, ಸಿಡಕು ಹೊಲ್ಲ ಅರ್ಥಾತ್ ಹಿಂಸಾತ್ಮಕ ಪ್ರತಿಕ್ರಿಯೆ ಸರಿಯಲ್ಲವೆಂದೂ, ಆತ್ಮೋನ್ನತಿಯಿಂದ ಜಗದ ಉನ್ನತಿಯೆಂದೂ ಸರ್ವಜ್ಞನು ಉಪದೇಶಿಸಿರುವನು.

---

## ಶ್ರೀಯುತ ಚಂದ್ರಶೇಖರ ಫಕ್ಕೀರಪ್ಪ ಹಳಕಟ್ಟಿ ಬಿ. ಎಸ್. ಸಿ. (ಟೆಕ್ಸ) ಮ್ಯಾಂಚೆಸ್ಟರ

## ಇವರ ನಿಧನ

ರಾವ ಬಹಾದ್ದೂರ ಫ. ಗು. ಹಳಕಟ್ಟಿ ಇವರ ಚಿರಂಜೀವರಾದ ಚಂದ್ರಶೇಖರ ಹಳಕಟ್ಟಿ ಇವರು ದಿಲ್ಲಿಯಲ್ಲಿ ತಾ||೧೩||೨||೧೯೫೦ ನೇ ದಿನ ಆಕಸ್ಮಿಕವಾಗಿ ಲಿಂಗೈಕ್ಯರಾದರೆಂದು ತಿಳಿಸಲು ನಮಗೆ ಬಹಳ ದುಃಖ ವಾಗುತ್ತದೆ. ಅವರು ೧೯೩೩ರಲ್ಲಿ ಮುಂಬಯಿ ಸರಕಾರದಿಂದ ಸ್ಕಾಲರ ಶಿಪ್ಪನ್ನು ಹೊಂದಿ ಮ್ಯಾಂಚೆಸ್ಟರ ವಿಶ್ವವಿದ್ಯಾಲಯದಲ್ಲಿ ಟೆಕ್ಸಟಾಯಿಲ್ಸ (ಅರಿವೆ ನೆಯ್ಗೆಯ) ಕಲೆಯನ್ನು ಕಲಿಯಲು ಹೋದರು. ಅವರು ೧೯೨೮ರಲ್ಲಿ ವಿಜಾಪುರ ಹೈಸ್ಕೂಲಿನಿಂದ ಮ್ಯಾಟ್ರಿಕ್ಯುಲೇಶನ್ನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಒಂದು ವರ್ಷ ಅವರು ಪುಣೆ ಫರ್ಗ್ಯುಸನ್ ಕಾಲೇಜಿನಲ್ಲಿ ಪ್ರೀವ್ಹಿಯಸ್ ಕ್ಲಾಸಿನಲ್ಲಿದ್ದರು. ಆದರೆ ಅವರು ಯಂತ್ರಕಲೆ ಕೈಗಾರಿಕೆಗಳಲ್ಲಿ ಸ್ವಾಭಾವಿಕವಾಗಿ ಬುದ್ಧಿಶಾಲಿಗಳಾಗಿದ್ದರು. ಆದ್ದರಿಂದ ಅವರು ಮುಂಬಯಿಯಲ್ಲಿರುವ ವ್ಹಿಕ್ಟೋರಿಯಾ ಟೆಕ್ನಿಕಲ್ ಇನಸ್ಟಿಟ್ಯೂಟ ಎಂಬ ಪ್ರಸಿದ್ಧ ಔದ್ಯೋಗಿಕ ಶಾಲೆಯಲ್ಲಿ 'ಟೆಕ್ಸಟಾಯಿಲ್' ಎಂದರೆ ನೆಯ್ಗೆಯ ಶಾಖೆಗೆ ಸೇರ್ಪಡೆಯಾಗಿ ಅದರಲ್ಲಿ ಅವರು ತಮ್ಮ ಅಭ್ಯಾಸವನ್ನು ಮುಂದುವರಿಸಿದರು.

ಶ್ರೀಯುತ ಚಂದ್ರಶೇಖರ ಇವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ವಿಜಾಪುರದಲ್ಲಿ ಹೊಂದಿದರು. ಆಗ್ಗೆ ಅವರು ಕೈಕೆಲಸ, ಡ್ರಾಯಿಂಗ ಇಂಥ ವಿಷಯಗಳಲ್ಲಿ ವಿಶೇಷ ಪ್ರಾವೀಣ್ಯತೆಯನ್ನು ತೋರಿಸುತ್ತ ಇದ್ದರು. ಹಾಗೆಯೇ ಅವರು ಸ್ಕೇಟಿಂಗ, ಕ್ರಿಕೆಟ, ಟೆನಿಸ ಮೊದಲಾದ ಶಾಲೆಯ ಆಟಗಳಲ್ಲಿ ಮತ್ತು ವಿವಿಧ ಚಟುವಟಿಕೆಗಳಲ್ಲಿ ವಿಶೇಷ ಕೌಶಲ್ಯವನ್ನು ತೋರಿಸುವವರಾಗಿದ್ದರು.

ಆದರೆ ಇವರು ಮುಂಬಯಿ ಔದ್ಯೋಗಿಕ ಶಾಲೆಯನ್ನು ಪ್ರವೇಶಿಸಿದ ಬಳಿಕ ಇಂಥ ಆಟಗಳಿಗಿಂತಲೂ ತಮ್ಮ ಔದ್ಯೋಗಿಕ ಶಿಕ್ಷಣದಲ್ಲಿ ಹೆಚ್ಚಿಗೆ ಮನಸ್ಸು ಹಾಕಹತ್ತಿದರು. ಅವರು ಶಾಲೆಯಲ್ಲಿ ನಾಲ್ಕು ವರ್ಷ ಅಭ್ಯಾಸ

ಮಾಡಿ ೧೯೩೨ ನೇ ಇಸ್ವಿಯಲ್ಲಿ ಅವರು ತಮ್ಮ ಅಂತ್ಯ ಪರೀಕ್ಷೆಯಾದ ಎಲ್. ಟಿ. ಎಮ್. ಇದರಲ್ಲಿ ೨ನೇ ವರ್ಗದಲ್ಲಿ ಉತ್ತೀರ್ಣರಾದರು. ಈ ಕಾಲದಲ್ಲಿ ಅವರು ಸರಕಾರದಿಂದ ಸ್ಕಾಲರಶಿಪ್ಪನ್ನು ಸಹ ದೊರಕಿಸಿದ್ದರು. ಅವರು ಈ ಕಾಲದಲ್ಲಿ ಉತ್ತಮ ತರಗತಿಯ ವಿದ್ಯಾರ್ಥಿಎಂದು ವಿದ್ಯಾರ್ಥಿಗಳಲ್ಲಿಯೂ ಪ್ರೊಫೆಸರರಲ್ಲಿಯೂ ಮನ್ನಣೆಯನ್ನು ಹೊಂದಿದ್ದರು. ಇನಸ್ಟಿಟ್ಯೂಟನಲ್ಲಿ ಟೆಕ್ಸಟಾಯಿಲ್ ಅಸೋಸಿಏಶನವೆಂಬ ಒಂದು ಸಂಸ್ಥೆಯು ಇದೆ. ಆದರ ಸೆಕ್ರೆಟರಿಗಳಾಗಿಯೂ ಅವರು ಚುನಾಯಿಸಲ್ಪಟ್ಟಿದ್ದರು. ಅವರು ಈ ಸ್ಥಾನದಲ್ಲಿದ್ದು ಮುಂಬಯಿಯಲ್ಲಿಯ ತಜ್ಞರನ್ನು ಆಗಿಂದಾಗ್ಗೆ ಇನಸ್ಟಿಟ್ಯೂಟಕ್ಕೆ ಬರಮಾಡಿಕೊಂಡು ವಿದ್ಯಾರ್ಥಿಗಳಲ್ಲಿ ಉಪಯುಕ್ತ ಚಟುವಟಿಕೆಗಳನ್ನು ಉಂಟುಮಾಡಲು ತಮ್ಮ ಆಸಕ್ತಿಯನ್ನು ತೋರಿಸುತ್ತ ಬಂದರು.

ಅವರು ಈ ಪರೀಕ್ಷೆಯಲ್ಲಿ ಉತ್ತೀರ್ಣರಾದ ಬಳಿಕ, ಹೆಚ್ಚಿನ ಶಿಕ್ಷಣವನ್ನು ಪಡೆಯುಲಿಕ್ಕೆ ಇಂಗ್ಲಂಡಕ್ಕೆ ಹೋಗುವದು ಅವರಿಗೆ ಅವಶ್ಯವೆನಿಸಿತು. ಆಗ ಇದಕ್ಕೋಸ್ಕರ ಅವರು ವಿಶೇಷ ಪ್ರಯತ್ನ ನಡಿಸುತ್ತಿರಲು, ಇದರಲ್ಲಿ ಅವರ ಪ್ರೊಪೇಸರರೂ ಪ್ರಿನ್ಸಿಪಾಲರೂ ಅವರಿಗೆ ಬಹಳ ಸಹಾಯವಾದರು. ಹಾಗು ಅನೇಕ ವರ್ಷಗಳಿಂದಲೂ ಸರಕಾರದವರು ಪರದೇಶ ಶಿಕ್ಷಣಕ್ಕೆ ಯಾರಿಗೂ ಸಹಾಯ ಮಾಡಿದ್ದಿಲ್ಲ. ಆದ್ದರಿಂದ ಆಗ ಶಿಕ್ಷಣ ಮಂತ್ರಿಗಳಾದ ಸರ್ ಎಸ್. ಟಿ. ಕಂಬಳಿ ಇವರೂ ಅಸೆಂಬ್ಲಿಯ ಸಭಾಸದರೂ ಶ್ರೀಯುತ ಚಂದ್ರಶೇಖರ ಇವರ ಪ್ರಯತ್ನಗಳಿಗೆ ಬೆಂಬಲ ಕೊಟ್ಟರು. ಹೀಗೆ ಅವರು ಸರಕಾರದಿಂದ ವಿದ್ಯಾರ್ಥಿವೇತನವನ್ನು ಹೊಂದಿ, ೨೪ನೇ ಸಪ್ಟಂಬರ ೧೯೩೩ ನೇ ದಿವಸ ಹಡಗವನ್ನೇರಿ ಇಂಗ್ಲಂಡಕ್ಕೆ ಹೊರಟರು.

ಅವರು ಇಂಗ್ಲಂಡಕ್ಕೆ ಹೋದ ಬಳಿಕ, ಅರಿವೆ ತಯಾರಿಕೆಯ ವಿಷಯದಲ್ಲಿ ಅತಿ ಪ್ರಖ್ಯಾತಿಯನ್ನು ಹೊಂದಿದ ಮ್ಯಾಂಚೆಸ್ಟರ ವಿಶ್ವವಿದ್ಯಾಲಯವನ್ನು ಸೇರಿಕೊಂಡರು ಅಲ್ಲಿ ಅವರು ನಾಲ್ಕು ವರುಷ ಅಭ್ಯಾಸ ಮಾಡಿ ೧೯೩೭ರಲ್ಲಿ ಬಿ.ಎಸ್.ಸಿ. ಪರೀಕ್ಷೆಯಲ್ಲಿ ೨ನೇ ವರ್ಗದಲ್ಲಿ ಉತ್ತೀರ್ಣರಾದರು. ಅವರು ೧೯೩೭ರಲ್ಲಿ ಹಾಲಂಡದಲ್ಲಿರುವ ಎನ್‌ಶೀಡ ಎಂಬಲ್ಲಿರುವ ಒಂದು ದೊಡ್ಡ ಗಿರಣಿಯಲ್ಲಿ ಕೆಲಸ ಮಾಡಿ ವಿಶೇಷ ಅನುಭವವನ್ನು ಹೊಂದಿದರು. ಅವರು ಪದವೀಧರರಾದ ಬಳಿಕ ಸಹ ತಮ್ಮ ಉದ್ಯೋಗ

ದಲ್ಲಿ ವಿಶೇಷ ಜ್ಞಾನ ಹೊಂದಬೇಕೆಂದು ಇಂಗ್ಲಂಡದಲ್ಲಿ ಒಲ್ಡಹ್ಯಾಮ ಎಂಬಲ್ಲಿ ಆಮೇಲೆ ಜರ್ಮನಿಯಲ್ಲಿ ವರ್ಟೆಂಬರ್ಗ ಭಾಗದಲ್ಲಿರುವ ನ್ಯೂಸ್ಟ್ಯಾಟ್ ಎಂಬಲ್ಲಿ ಇರುವ ಗಿರಣಿಗಳಲ್ಲಿ ಕೆಲಸ ಮಾಡಿದರು. ಆಮೇಲೆ ಅವರು ಇಂಗ್ಲಂಡಕ್ಕೆ ಬಂದು ಬ್ಲಾಕಬರ್ನ ಎಂಬಲ್ಲಿಯ ಒಂದು ಗಿರಣಿಯಲ್ಲಿದ್ದರು. ಹೀಗೆ ಆರು ತಿಂಗಳು ಮಹತ್ವದ ಗಿರಣಿಗಳಲ್ಲಿ ಅನುಭವವನ್ನು ಹೊಂದಿ, ಹಿಂದುಸ್ತಾನಕ್ಕೆ ಮರಳಿದರು. ಅವರು ೧೦-೩-೩೮ ನೇ ದಿವಸ ಮುಂಬಯಿ ಬಂದರದಲ್ಲಿ ಬಂದಿಳಿದರು ಮತ್ತು ೧೩ ನೇ ತಾರೀಖಿನ ದಿವಸ ಮಾನ್ಯ ಎಂ. ಪಿ. ಪಾಟೀಲರು (ಈಗಿನ ಒಕ್ಕಲುತನದ ಮಂತ್ರಿಗಳು) ಇವರ ಅಧ್ಯಕ್ಷತೆಯಲ್ಲಿ ಅವರಿಗೋಸ್ಕರ ಮುಂಬಯಿಯಲ್ಲಿ ಒಂದು ಸಾರ್ವಜನಿಕ ಅಭಿನಂದನ ಸಭೆಯು ನೆರವೇರಿತು.

ಮುಂದೆ ಅವರು ೧೯೩೮-೩೯, ೧೯೩೯-೪೦ರಲ್ಲಿ ಗುಜರಾಥದಲ್ಲಿ ಬಿಲ್ಲಿಮೋರಾ ಎಂಬಲ್ಲಿ ಆಮೇಲೆ ಮಧ್ಯಪ್ರಾಂತದಲ್ಲಿ ಇಲಿಚಪುರ ಎಂಬಲ್ಲಿ ಇರುವ ಬಟ್ಟೆಯ ಗಿರಣಿಗಳಲ್ಲಿ ಕೆಲಸಮಾಡಿದರು.

೧೯೪೦ನೇ ಇಸ್ವಿಯಲ್ಲಿ ಬೆಂಗಳೂರಿನ ಶ್ರೀ ಬಿ. ಎಲ್. ಬಸವಲಿಂಗಯ್ಯ ಇವರ ಪುತ್ರಿಯರಾದ ಶ್ರೀಮತಿ ಗಿರಿಜಾ ಬಿ. ಎ. ಆನರ್ಸ ಇವರೊಂದಿಗೆ ಲಗ್ನವಾಯಿತು. ಇದೇ ಸಮಯದಲ್ಲಿ ಸರಕಾರಕ್ಕೆ ಬಟ್ಟೆಯ ಉದ್ಯೋಗ ಬಲ್ಲಂಥ ತಜ್ಞರು ತಮ್ಮ ಇಂಡಿಯನ್ನ ಸ್ಟೋರ್ಸ ಡಿಪಾರ್ಟಮೆಂಟಕ್ಕೆ ಬೇಕಾಗಿದ್ದರು. ಆಗ ಅವರು ಈ ಸ್ಥಳಕ್ಕೆ ಉಮೇದವಾರರನ್ನು ಕೋರಲಾಗಿ ಇಂಟರವ್ಯೂಕ್ಕೆ ಬಂದವರಲ್ಲಿ ಶ್ರೀಯುತ ಚಂದ್ರಶೇಖರ ಇವರನ್ನೇ ಕಮಿಟಿಯವರು ಶಿಫಾರಸು ಮಾಡಿದರು. ಮತ್ತು ಸರಕಾರದವರು ೧೯೪೧ ನೇ ಇಸ್ವಿಯಲ್ಲಿ ಕಲಕತ್ತೆಯ ಶಾಖೆಯಲ್ಲಿ ಇವರನ್ನು ೩೫೦ ರೂಪಾಯಿ ಸಂಬಳದ ಮೇಲೆ ನೇಮಿಸಿಕೊಂಡರು.

ಕಲಕತ್ತೆಯಲ್ಲಿ ಅವರು ಸುಮಾರು ೩ ವರ್ಷ ಕೆಲಸ ಮಾಡಿದಬಳಿಕ ಅವರು ೬೦೦ ರೂಪಾಯಿ ಸಂಬಳದಮೇಲೆ ಕೋಯಿಮತ್ತೂರು ಕೇಂದ್ರಕ್ಕೆ ವರ್ಗಾಯಿಸಲ್ಪಟ್ಟರು. ಮುಂದೆ ಅವರು ಮದ್ರಾಸಕ್ಕೆ ೧೯೪೪ರಲ್ಲಿ ನೇಮಿಸಲ್ಪಟ್ಟರು. ಅಲ್ಲಿ ಅವರು ಮೂರು ವರ್ಷ ಕೆಲಸ ಮಾಡಿದರು. ಈ ಕಾಲದಲ್ಲಿ ಅವರು ಅತ್ಯಂತ ಚಟುವಟಿಕೆಯಿಂದಲೂ ಉತ್ತಮ ರೀತಿಯಿಂದಲೂ ಕೆಲಸ ಮಾಡಿದ್ದರಿಂದ ಇವರ ಫಲವು ಅವರಿಗೆ ಬೇಗನೆ ದೊರಕಿತು.

ಈ ಸಮಯದಲ್ಲಿ ಯುದ್ಧವು ನಿಂತಿದ್ದರಿಂದ ಸರಕಾರದವರು ಉತ್ತಮ ಕೆಲಸ ಮಾಡಿದ ಕೆಲವರನ್ನು ಮಾತ್ರ ಇಟ್ಟುಕೊಂಡು ಉಳಿದವರನ್ನು ಕೆಲಸದಿಂದ ವಿಸರ್ಜಿಸಿದರು. ಹೀಗೆ ಇಟ್ಟುಕೊಳ್ಳಲ್ಪಟ್ಟವರಲ್ಲಿ ಶ್ರೀಯುತ ಚಂದ್ರಶೇಖರ ಇವರೊಬ್ಬರಿದ್ದು ಅವರು ಖಾತೆಯಲ್ಲಿ ಇಡಲ್ಪಟ್ಟರಷ್ಟೇ ಅಲ್ಲ, ಮುಂದೆ ಅವರು ೧೨೦೦ ರೂಪಾಯಿಗಳ ಮೇಲೆ ಮುಂಬಯಿಯಲ್ಲಿ ಡಿಪ್ಯೂಟಿ ಕಂಟ್ರೋಲರರಾಗಿ ನೇಮಿಸಲ್ಪಟ್ಟರು. ಅವರು ಮದ್ರಾಸದಲ್ಲಿ ಇದ್ದಾಗ್ಗೆ ಅಲ್ಲಿಯ ವೀರಶೈವ ವಿದ್ಯಾವರ್ಧಕ ಸಂಸ್ಥೆಯಲ್ಲಿ ಉತ್ತಮ ರೀತಿಯಿಂದ ಕೆಲಸ ಮಾಡಿದರು.

ತರುವಾಯ ಸರಕಾರದವರು ದಿಲ್ಲಿಯಲ್ಲಿ ಇಂಡಿಯನ್ನ ಸ್ಟ್ಯಾಂಡರ್ಡ್ಸ ಇನಸ್ಟಿಟ್ಯೂಶನ್ನ ಎಂಬ ಹೆಸರಿನ ಒಂದು ಯೋಜನೆಯನ್ನು ನಿರ್ಮಿಸಿದರು. ಈ ಯೋಜನೆಯು ಎಲ್ಲ ದೇಶಗಳಲ್ಲಿಯೂ ಉಂಟು. ಗಿರಣಿಗಳ ಮಾಲಕರು ಅಪ್ರಮಾಣಿಕ ವರ್ತನೆಯುಳ್ಳವರಾಗಿ ತಾವು ಹುಟ್ಟಿಸುವ ಮಾಲನ್ನು ಕೆಡಿಸಿ ಪರದೇಶಕ್ಕೆ ಕಳಿಸುವದುಂಟು. ಅರಿವೆಯ ಮೇಲೆ ಇನ್ನೂ ಕಂಟ್ರೋಲ ಇರುವದರಿಂದ ಅವರು ಕಡಿಮೆ ತರಗತಿಯ ಮಾಲನ್ನು ಹುಟ್ಟಿಸಿ ತುಟ್ಟಿಯಾಗಿ ಮಾರುತ್ತಾರೆ. ಈ ಕೃತಿಗಳು ದೇಶಕ್ಕೆ ಹಾನಿಕಾರಕವು. ಹೀಗಾಗ ಬಾರದೆಂದು ಹುಟ್ಟುವ ಮಾಲಿನಲ್ಲಿ ಕೆಲವು ತರಗತಿಗಳನ್ನು ಗೊತ್ತುಪಡಿಸಿ ಅಂಥ ಮಾಲನ್ನು ಹುಟ್ಟಿಸುವಂತೆ ಪ್ರಯತ್ನಿಸುವದೇ ಈ ಸ್ಟ್ಯಾಂಡರ್ಡ್ಸ ಇನಸ್ಟಿಟ್ಯೂಶನ್ನದ ಧ್ಯೇಯವಾಗಿರುತ್ತದೆ. ಇದಕ್ಕೆ ಔದ್ಯೋಗಿಕ ತಜ್ಞರೂ ಗಿರಣಿಗಳ ಮಾಲಕರೂ ಸಭಾಸದರಿರುತ್ತಾರೆ. ಕೇಂದ್ರ ಸರಕಾರದ ಔದ್ಯೋಗಿಕ ಶಾಖೆಯ ಮಂತ್ರಿಗಳೇ ಇದಕ್ಕೆ ಚೇರಮನ್ನರು. ಈ ಸಂಸ್ಥೆಯ ಬಟ್ಟೆಯ ಶಾಖೆಗೋಸ್ಕರ ಶ್ರೀಯುತ ಚಂದ್ರಶೇಖರ ಇವರು ಸರಕಾರದಿಂದ ನೇಮಿಸಲ್ಪಟ್ಟರು. ಮತ್ತು ಶ್ರೀ ವರ್ಮನ್ನ ಎಂಬವರು ಕಬ್ಬಿಣ ಸಾಮಾನುಗಳ ಶಾಖೆಗೆ ನೇಮಕವಾದರು. ಶ್ರೀ ವರ್ಮನ್ ಇವರು ಸರಕಾರದ ಹಳೇ ನೌಕರರಿದ್ದು ಇವರು ಡಾಯರೆಕ್ಟರರಾಗಿಯೂ ಶ್ರೀಯುತ ಚಂದ್ರಶೇಖರ ಇವರು ಅಸಿ॥ ಡಾಯರೆಕ್ಟರರಾಗಿಯೂ ನೇಮಿಸಲ್ಪಟ್ಟರು. ಇವರೇ ಈ ಹೊಸ ಸಂಸ್ಥೆಯನ್ನು ನಿರ್ಮಾಣ ಮಾಡಿದರೆಂದು ಹೇಳಬಹುದು. ಶ್ರೀಯುತ ಚಂದ್ರಶೇಖರ ಇವರು ಈ ಸಂಸ್ಥೆಯಲ್ಲಿದ್ದು ಒಂದೇ ಸವನೆ ೩ ವರ್ಷ ಪರಿಶ್ರಮಪೂರ್ವಕ ಕಡೆಯವರೆಗೂ ಕಾರ್ಯ ಮಾಡಿದರು. ಈಚೆಗೆ ಸರ

ಕಾರದವರು ಸಂಬಳದ ಸ್ಕೇಲನ್ನು ಕಡಿಮೆಮಾಡಿದ್ದರಿಂದ, ಶ್ರೀ ಚಂದ್ರಶೇಖರ ಇವರು ಡಿ|| ಕಂಟ್ರೋಲರರ ಸ್ಥಳವನ್ನು ಬಿಟ್ಟು ಈ ಸಂಸ್ಥೆಯಲ್ಲಿ ಸೇರಿಕೊಂಡರು.

ಈ ಸಂಸ್ಥೆಗೆ ಆರಂಭದಲ್ಲಿ ಶ್ರೀ ಸಿ. ರಾಜಗೋಪಾಲಾಚಾರ್ಯರು, ಆ ಮೇಲೆ ಸರ ಮಥಾಯಿ ಇವರು ಮತ್ತು ಈಗ ಡಾ| ಶಾಮ ಪ್ರಸಾದ ಮುಕರ್ಜೀಯವರು ಚೇರಮನ್ನರಾಗಿರುವರು. ಶ್ರೀಯುತ ಚಂದ್ರಶೇಖರ ಇವರು ರಾಜಗೋಲಾಚಾರ್ಯರನ್ನು ಮೊದಲು ಕಾಣಲು ಹೋದಾಗ "ಚಿಕ್ಕ ಹೆಗಲುಗಳ ಮೇಲೆ ಬಹು ಭಾರವಾದ ಜವಾಬುದಾರಿಯು" ಎಂಬ ಉದ್ಗಾರವನ್ನು ತೆಗೆದರು. ಆದರೆ ಶ್ರೀಯುತ ಚಂದ್ರಶೇಖರ ಆವರು ಉತ್ತಮ ಕೆಲಸಗಾರರಾಗಿದ್ದರಿಂದ ಅವರು ಬೇಗನೆ ಎಲ್ಲ ಮಂತ್ರಿಗಳ ಮನ್ನಣೆಯುನ್ನು ಹೊಂದಿದವರಾದರು.

ಎಪ್ರೆಲ್ ೧೯೪೮ರಲ್ಲಿ ಬೇರೆ ಬೇರೆ ದೇಶಗಳಲ್ಲಿರುವ ಸ್ಟಾಂಡರ್ಡ್ಸ ಇನಸ್ಟಿಟ್ಯೂಶನ್ನಗಳ ಪರವಾಗಿ ಅಂತರರಾಷ್ಟ್ರೀಯ ಪರಿಷತ್ತು ಇಂಗ್ಲಂಡಿನಲ್ಲಿ ಕೂಡಿತ್ತು. ಆಗ ಶ್ರೀಯುತ ಚಂದ್ರಶೇಖರ ಇವರನ್ನು ಇಂಡಿಯಾ ಸರಕಾರದವರು ತಮ್ಮ ಪ್ರತಿನಿಧಿಯಾಗಿ ಕಳಿಸಿದ್ದರು ಅಲ್ಲಿಗೆ ಅವರು ವಿಮಾನಮಾರ್ಗವಾಗಿ ಹೋಗಿ ಅಲ್ಲಿ ೨ ತಿಂಗಳು ಇದ್ದು ಅಲ್ಲಿಯ ಕಾರಖಾನೆಗಳನ್ನು ಸಂದರ್ಶಿಸಿ ಜೂನ ತಿಂಗಳಲ್ಲಿ ಹಿಂದುಸ್ತಾನಕ್ಕೆ ಮರಳಿ ಬಂದರು. ಆಗ ಅವರು ಆನೇಕ ಉಪಯುಕ್ತ ಮಾಹಿತಿಯನ್ನು ಸಂಗ್ರಹಿಸಿದರು ಈ ಕಾಲಕ್ಕೆ ಕೆಲವು ಅಮೇರಿಕನ್ನ ತಜ್ಞರು ಹಿಂದುಸ್ತಾನಕ್ಕೆ ಬಂದಿದ್ದರು. ಆಗ ಅವರಿಗೆ ಮಾಹಿತಿಯನ್ನು ಕೊಡುವ ಕಾರ್ಯವನ್ನು ಕೇಂದ್ರ ಸರಕಾರದವರು ಇವರಿಗೆಯೇ ಒಪ್ಪಿಸಿದ್ದರು. ಸರಕಾರದವರು ಮೊದಲು ನೂಲಿನ ಬಟ್ಟೆಗಳಿಗೆ ತರಗತಿ ಮಾಡುವದನ್ನು ತೆಗೆದುಕೊಂಡಿದ್ದರು. ಆದರೆ ಈಚೆಗೆ ಅವರು ಉಣ್ಣೆ ರೇಶ್ಮೆ ಮತ್ತು ನಾರು ಈ ಜೀನಸುಗಳನ್ನು ಸಹ ತೆಗೆದುಕೊಂಡು ಇವುಗಳ ತರಗತಿಗಳನ್ನು ಮಾಡುವ ಕಾರ್ಯವನ್ನು ಶ್ರೀಯುತ ಚಂದ್ರಶೇಖರ ಇವರಿಗೆ ಒಪ್ಪಿಸಿದರು. ಹೀಗೆ ಇವರ ಕಾರ್ಯಕ್ಷೇತ್ರವು ಬಹಳ ಹೆಚ್ಚಿಗೆ ಬೆಳೆಯಿತು. ಆದ್ದರಿಂದ ಅವರು ಹೋದ ಆಗಸ್ಟ ತಿಂಗಳಲ್ಲಿ ಉತ್ತರಕ್ಕೆ ಕಾನಪುರದಿಂದ ದಕ್ಷಿಣಕ್ಕೆ ತ್ರಾವಣಕೋರದ ವರೆಗೂ ಪ್ರವಾಸ ಮಾಡಿ ಕಾರಖಾನೆಗಳ ಮಾಲಕರನ್ನು

ಕಂಡು ಅಲ್ಲಲ್ಲಿಯ ಹುಟ್ಟುವಳಿಗಳನ್ನು ನಿರೀಕ್ಷಿಸುತ್ತ ತಮ್ಮ ಯೋಜನೆಗಳನ್ನು ಅವರಿಗೆ ತಿಳಿಸಿ ಹೇಳುವ ಕಾರ್ಯವನ್ನು ಮಾಡಿದರು. ಗಿರಣಿಗಳ ಒಡೆಯರು ಬಹುತರವಾಗಿ ಅಪ್ರಮಾಣಿರಾಗಿ ಈ ತೆರದ ನಿರ್ಬಂಧಕ್ಕೊಳಗಾಗಿ ಮಾಲು ತಯಾರಿಸಲು ಸಾಮಾನ್ಯವಾಗಿ ಒಪ್ಪುವದಿಲ್ಲ. ಆದರೆ, ಯೋಗ್ಯ ಮಾಲು ತಯಾರಿಸಿದಲ್ಲಿ ಪರದೇಶದ ವ್ಯಾಪಾರವು ಹೇಗೆ ಬೆಳೆದು ಎಲ್ಲರಿಗೂ ಪ್ರಯೋಜನವಾಗುವದೆಂಬದನ್ನು ಅವರಿಗೆ ತಿಳಿಸಿ ಹೇಳಿ ಅವರ ಮನಸ್ಸನ್ನು ಒಲಿಸುವದೇ ಈ ಕಾಲಕ್ಕೆ ಶ್ರೀ ಚಂದ್ರಶೇಖರ ಇವರ ಮುಖ್ಯ ಕಾರ್ಯವಾಗಿತ್ತು. ಆದ್ದರಿಂದ ಅವರು ಮುಂಬಯಿ ಮುಂತಾದ ಸ್ಥಳಗಳಿಗೆ ಆಗಿಂದಾಗ್ಗೆ ಹೋಗಬೇಕಾಗುತ್ತಿತ್ತು.

ಶ್ರೀ ಚಂದ್ರಶೇಖರ ಇವರು ಎತ್ತರವಾದ ನಿಲುಕಟ್ಟುಳ್ಳವರು, ಆರೋಗ್ಯವಂತರು, ದೇಹದಾರ್ಢ್ಯವುಳ್ಳವರು, ಶ್ರಮಸಹಿಷ್ಣುಗಳು ಆಗಿದ್ದರು. ಈಗಲೂ ಅವರು ಟೆನಿಸ್ ಆಟದಲ್ಲಿ ಬಲ್ಲಿದರಾಗಿದ್ದರು. ಅತ್ಯಂತ ಆನಂದೀ ಸ್ವಭಾವದವರೂ, ಆಕರ್ಷಕ ನಡೆಯುಳ್ಳವರೂ ಆಗಿ ಜನಪ್ರಿಯರಾಗಿದ್ದರು. ದಿಲ್ಲಿಯ ಈಗಿನ ಪರಿಸ್ಥಿತಿಯಲ್ಲಿ ಯುರೋಪಿಯನ್ನರಲ್ಲನೇಕರು ಸಹ ಅವರಿಗೆ ಅತಿಥಿಗಳಾಗಿ ಅವರ ಮನೆಯಲ್ಲಿಯೇ ಉಳಿಯುವರು. ಕೇಂದ್ರ ಸರಕಾರದಲ್ಲಿಯು ಬಹು ಜನ ಉಚ್ಚ ಅಧಿಕಾರಿಗಳು ಅವರಿಗೆ ಪರಮ ಸ್ನೇಹಿತರಾಗಿದ್ದರು. ಹೀಗೆ ಅವರು ೧೦ ವರ್ಷ ವಿರಾಮ ವಿಲ್ಲದೆ ಶ್ರಮವಹಿಸಿ ಇದೇ ಮೇ, ಜೂನ ತಿಂಗಳಿನಲ್ಲಿ ರಜೆಯನ್ನು ಹೊಂದಿ ವಿಜಾಪೂರ, ಧಾರವಾಡ, ಬೆಳಗಾವದಲ್ಲಿ ಬಂದು ತಮ್ಮ ಮಿತ್ರರನ್ನು ಕಾಣಲು ಆತುರರಾಗಿದ್ದರು. ಈಚೆಗೆ ಸರಕಾರದವರು ಹುಟ್ಟುವಳಿಯ ಬೇರೊಂದು ಖಾತೆಯನ್ನು ನಿರ್ಮಿಸಿ ಅದರ ಡಾಯರೆಕ್ಟರ ಸ್ಥಾನಕ್ಕೆ ಉಮೇದವಾರರನ್ನು ಕೋರಿದ್ದರು. ಇದರ ಮಾಸಿಕ ವೇತನವು ೧೫೦೦ ರೂಪಾಯಿಗಳು, ಇದಕ್ಕೆ ಶ್ರೀ ಚಂದ್ರಶೇಖರರು ತಮ್ಮ ಅರ್ಜಿಯನ್ನು ಹಾಕಿದ್ದರು. ಅವರ ಇಂಟರವ್ಯೂಕ್ಕೆ ಒಂದು ತಾರೀಖನ್ನು ಪಬ್ಲಿಕ್ಕ ಸರ್ವಿಸ ಕಮಿಶನದವರು ನೇಮಿಸಿದ್ದರು. ಆದರೆ ಆಗ ಇನ್‌ಫ್ಲುಎಂಜಾದಿಂದ ಅವರು ಅಸ್ವಸ್ಥತೆಯಲ್ಲಿದ್ದರು. ಆದ್ದರಿಂದ ಕಮಿಶನದವರು ೧೪ನೇ ಫೇಬರವರಿಗೆ ಮತ್ತೊಂದು ತಾರೀಖನ್ನು ಅವರಿಗಾಗಿ ನೇಮಿಸಿದ್ದರು. ಈ ಸ್ಥಾನವನ್ನು ಹೊಂದಲು ಶ್ರೀಯುತ ಚಂದ್ರ

ಶೇಖರ ಇವರು ಅರ್ಹರೂ, ಅನುಭವವುಳ್ಳವರೂ ಆಗಿದ್ದರು. ಇದು ದೇಶಕ್ಕೆ ಹಿತಕರವಾದ ಮಹತ್ವದ ಸ್ಥಾನವು. ಆದರೆ ಅದರ ಹಿಂದಿನ ದಿನವೇ ಅವರು ತಮ್ಮ ಇಹಲೋಕ ಯಾತ್ರೆಯನ್ನು ಮುಗಿಸಿ ಲಿಂಗೈಕ್ಯರಾಗಿದ್ದರು. ಇದರ ವಿವರಗಳು ಏನೆಂದರೆ:—

ಇದಕ್ಕೂ ಮೊದಲು ಶ್ರೀಯುತ ಚಂದ್ರಶೇಖರ ಇವರಿಗೆ ಮೂರು ವಾರಗಳಿಂದಲೂ ಇನಫ್ಲುಎಂಜಾ ಆಗಿ ಅವರ ಎರಡೂ ಶ್ವಾಸಕೋಶಗಳಲ್ಲಿ ಕಫವು ತುಂಬಿದ್ದಿತು. ಆದರೆ ಅವರು ರಜೆಯನ್ನು ತೆಗೆದುಕೊಂಡು ಡಾಕ್ಟರರ ಉಪಚಾರದಲ್ಲಿದ್ದರು. ಇದರಿಂದ ಅವರ ಕಫವು ಕಡಿಮೆಯಾಗುತ್ತ ಬಂದಿತ್ತು. ಜಾನೇವರಿ ೨೫-೨೬ನೇ ತಾರೀಖಿಗೆ ಮತ್ತು ಫೇಬರವಾರಿ ೨, ೩ ತಾರೀಖಿಗೆ ವಿಜಾಪುರದ ಕೆಲ ಸಭ್ಯಗೃಹಸ್ಥರು ಅವರನ್ನು ಕಂಡಾಗ್ಗೆ ಅವರಿಗೆ ಕೆಮ್ಮು ಇದ್ದರೂ ಅವರು ಚಿಂತಾಜನಕಸ್ಥಿತಿಯಲ್ಲಿರಲಿಲ್ಲ. ೨೫ನೇ ತಾರೀಖಿನ ದಿವಸ ಅವರು ಕೆಲವು ಅವಶ್ಯಕ ಕೆಲಸಗಳಿಗಾಗಿ ಕಚೇರಿಗೆ ಸಹ ಹೋಗಿದ್ದರು. ಮತ್ತು ಮನೆಯಲ್ಲಿಯೂ ಕೂಡ ಕಚೇರಿಯ ಜರೂರಿಯ ಕೆಲಸಗಳನ್ನು ಮಾಡುತ್ತಿದ್ದರು. ೮ನೇ ಫೇಬ್ರುವರಿ ದಿವಸ ಅವರ ಹೆಂಡತಿಯಾದ ಸೌ|| ಗಿರಿಜಾ ಇವರು ಶ್ರೀ ಚಂದ್ರಶೇಖರ ಇವರು ಇನಫ್ಲು ಎಂಜಾದಿಂದ ಪೂರ್ಣವಾಗಿಗುಣಹೊಂದಿ ೧೩ನೇ ತಾರೀಖಿನ ದಿವಸ ಕಚೇರಿಗೆ ಹೋಗುವರೆಂತಲೂ ರಾ|| ಬ|| ಹಳಕಟ್ಟಿಯವರಿಗೆ ತಿಳಿಸಿದ್ದರು.

ಹೀಗಿರಲು ೧೨ನೇ ತಾರೀಖಿನ ದಿವಸ ಅವರ ಕಚೇರಿಯ ಮಿತ್ರರೊಬ್ಬರು ಅವರನ್ನು ಕಂಡು ಮರುದಿನ ಬೆಳಿಗ್ಗೆ ಉಭಯತರು ಕೂಡಿಕೊಂಡು ಬೇರೊಬ್ಬ ಮಿತ್ರರ ಭೆಟ್ಟಿಗೆ ಹೋಗಬೇಕೆಂತಲೂ ಅದಕ್ಕೋಸ್ಕರ ತಾವು ತಮ್ಮ ಮೋಟಾರ ಕಾರಿನಲ್ಲಿ ಅವರನ್ನು ಕರೆದುಕೊಂಡು ಹೋಗುವೆವೆಂತಲೂ ತಿಳಿಸಿದ್ದರು. ಆ ಪ್ರಕಾರ ಶ್ರೀಯುತ ಚಂದ್ರಶೇಖರ ಇವರು ಮರುದಿನ ಅವರು ಬರುವದನ್ನು ನಿರೀಕ್ಷಿಸುತ್ತ ಮನೆಯಲ್ಲಿದ್ದರು. ಆದರೆ ಆ ಮಿತ್ರರು ವೇಳೆಗೆ ಬಾರದ್ದರಿಂದ ಶ್ರೀಯುತ ಚಂದ್ರಶೇಖರ ಇವರು ತಾವೇ ಕಾಲ್ನಡಿಗೆಯಿಂದ ಹೊರಗೆ ಹೊರಟರು. ಅವರ ಮೋಟರಕಾರು ಆ ದಿನ ನಾದುರಸ್ತ ಇದ್ದುದರಿಂದ ಅವರು ಹೀಗೆ ಹೊರಡಬೇಕಾಯಿತು.

ಆದರೆ ೧೧ನೇ ೧೨ನೇ ೧೩ನೇ ತಾರೀಖುಗಳಲ್ಲಿ ದಿಲ್ಲಿಯಲ್ಲಿ ಅತ್ಯುಗ್ರ ಚಳಿಗಾಳಿಯು ಬೀಸುತ್ತಿದ್ದಿತು. ಇದು ಇವರಿಗೆ ಗೊತ್ತಿದ್ದ ಹಾಗೆ ತೋರುವದಿಲ್ಲ. ಆಗ ಹವೆಯ ಉಷ್ಣತೆಯು ೩೪ ರಿಂದ ೩೬ ಡಿಗ್ರಿವರೆಗೆ ಇದ್ದಿತು!

ಶ್ರೀಯುತ ಚಂದ್ರಶೇಖರ ಇವರಿಗೆ ಇನಫ್ಲುಎಂಜಾ ನಿಂತರೂ ಅದು ಪೂರ್ಣ ಪರಿಹಾರವಾಗಲು ಕೆಲ ಕಾಲ ಹತ್ತುತ್ತದೆಂಬುದು ಇವರ ಲಕ್ಷ್ಯವಲ್ಲಿದ್ದ ಹಾಗೆ ಕಾಣುವದಿಲ್ಲ. ಅವರು ಹಾಗೆಯೇ ಮಾರ್ಗದಿಂದ ಹೋಗುವಾಗ್ಗೆ ಅತ್ಯುಗ್ರ ಚಳಿಗಾಳಿಯು ಅವರ ದುರ್ಬಲ ಶ್ವಾಸಕೋಶಕ್ಕೆ ಬಾಧೆ ತಂದಿರಬಹುದಾಗಿ ತೋರುತ್ತದೆ. ಇದರಿಂದ ಅವರ ಶ್ವಾಸೋಚ್ಛ್ವಾಸಕ್ಕೆ ಮೊದಲು ಪ್ರತಿಬಂಧ ಉಂಟಾಗಿರಬೇಕು. ಆಮೇಲೆ ಅವರ ರಕ್ತಾಭಿಸರಣಕ್ಕೂ ತಡೆಯಾಗಿರಬೇಕು. ಇದರಿಂದ ಅವರ ಹೃದಯದ ಮೇಲೆಯೂ ಪರಿಣಾಮವಾಗಿರಬಹುದು. ಈ ಸ್ಥಿತಿಯುಂಟಾಗಲು ಅವರು ದಾರಿಯಲ್ಲಿದ್ದ ಡಾ॥ ಮೋಹನಸಿಂಗ ಎಂಬವರ ಆಸ್ಪತ್ರಿಗೆ ಧಾವಿಸಿದರು. ಅಲ್ಲಿ ಅವರು ಅವರನ್ನು ಕಂಡು ತಮಗೆ ಬಹಳ ಬಾಧೆಯಾಗಿದೆ, ಕಾವಿನ ಉತ್ತೇಜಕ ಔಷಧ ಕೊಡಲು ಅವರಿಗೆ ತಿಳಿಸಿದರು. ಡಾ॥ಮೋಹನಸಿಂಗರು ಅವರಿಗೆ ಪರಿಚಿತರಿದ್ದು ಅವರು ತಾವು ತಪಾಸು ಮಾಡುವೆವು, ಒಳಗಿನ ಖೋಲಿಯಲ್ಲಿ ಮಲಗಲು ತಿಳಿಸಿದರು. ಡಾಕ್ಟರರು ಕೂಡಲೆ ತಮ್ಮ ಸ್ಟೇಥೋಸ್ಕೋಪ ತೆಗೆದುಕೊಂಡು ಅವರನ್ನು ತಪಾಸು ಮಾಡುವಷ್ಟರಲ್ಲಿಯೇ ಶ್ರೀಯುತ ಚಂದ್ರಶೇಖರ ಇವರು ಪ್ರಾಣಬಿಟ್ಟರು. ಅವರ ಹೃದಯಕ್ರಿಯೆಯು ಆಗ ನಿಂತುಹೋಗಿತ್ತು. ಈ ಪ್ರಕಾರ ಅಕಸ್ಮಾತ್ತಾಗಿ ಅವರು ಡಾಕ್ಟರ ಆಫೀಸಿನಲ್ಲಿಯೇ ಮರಣಹೊಂದಿದರು.

ಈ ವಾರ್ತೆಯನ್ನು ಡಾಯರೆಕ್ಟರರಾದ ಶ್ರೀಯುತ ವರ್ಮನ್ ಇವರು ವಿಜಾಪುರದಲ್ಲಿದ್ದ ಅವರ ತಂದೆಯವರಿಗೂ, ಅವರ ಧರ್ಮಪತ್ನಿಯವರ ಅಣ್ಣಂದಿರು ಮತ್ತು ಬೆಂಗಳೂರು ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲರು ಆದ ಡಾ॥ ಮಂಜುನಾಥ ಇವರಿಗೂ ಕಲಕತ್ತೆಯಲ್ಲಿ ಭೂಗರ್ಭ ಶಾಸ್ತ್ರಜ್ಞರಾಗಿ ಕೆಲಸ ಮಾಡುತ್ತಿದ್ದ ಮಿ॥ಚಂದ್ರಶೇಖರ ಇವರ ಹೆಂಡತಿ ಮತ್ತು ಸೌ॥ಗಿರಿಜಾ ಇವರ ತಂಗಿ ಆದ ಅಕಿಲಾ (ಬಿ.ಎಸ್.ಸಿ.) ಇವರಿಗೂ ತಿಳಿಸಿದರು. ಈ ವಾರ್ತೆಯು ಡಾ॥ ಮಂಜುನಾಥ ಇವರಿಗೆ ತಿಳಿದ ಕೂಡಲೆ, ಅವರು ತಮ್ಮ ತಮ್ಮಂದಿರಾದ ಡಾ॥ಶಾಂತಮಲ್ಲಪ್ಪ ಇವರನ್ನು ವಿಮಾನಮಾರ್ಗವಾಗಿ ರಾತ್ರಿಯಲ್ಲಿಯೇ

ದಿಲ್ಲಿಗೆ ಕಳಿಸಿಕೊಟ್ಟರು. ಅವರು ಮರುದಿನ ಬೆಳಿಗ್ಗೆ ದಿಲ್ಲಿಗೆ ಬರುವಷ್ಟರಲ್ಲಿ ಶ್ರೀಯುತ ಚಂದ್ರಶೇಖರ ಇವರ ಅಸಂಖ್ಯ ಮಿತ್ರರೂ ಅಸೆಂಬ್ಲಿಯ ವೀರ ಶೈವ ಸಭಾಸದರೂ ಅವರ ಮನೆಯಲ್ಲಿ ಅಂತ್ಯವಿಧಿಗಾಗಿ ನೆರೆದಿದ್ದರು. ಅವರು ವೀರಶೈವ ಪದ್ಧತಿಯ ಪ್ರಕಾರ ಕ್ಯಾರೋಲಬಾಗ ಇದಕ್ಕೆ ಸಮೀಪವಾಗಿರುವ ಸಾಧುಸಂತರನ್ನು ಹೂಗಿಯತಕ್ಕ ಸ್ಥಳದಲ್ಲಿ ಹೂಗಿದರು. ಆಗ ನೆರೆದ ದೊಡ್ಡ ಜನ ಸಮೂಹದ ಮೇಲಿಂದ ಶ್ರೀಯುತ ಚಂದ್ರಶೇಖರ ಇವರು ಎಷ್ಟು ಜನ ಪ್ರಿಯರಾಗಿದ್ದರೆಂಬ ಸಂಗತಿಯು ವ್ಯಕ್ತವಾಗುವಂತೆ, ಇತ್ತು.

ಈ ವಾರ್ತೆಯು ಅವರು ಕೆಲಸಮಾಡಿದ ಕಚೇರಿಗಳಿಗೆಲ್ಲ ತಿಳಿಸಲ್ಪಟ್ಟಿತು. ಆಗ ಅವುಗಳಲ್ಲಿಯ ಅಧಿಕಾರಿಗಳೂ, ನೌಕರರೂ ನೆರೆದು ದುಃಖ ಸೂಚಕ ಠರಾವನ್ನು ಪಾಸು ಮಾಡಿದ್ದಲ್ಲದೆ ಕೆಲವು ಕಚೇರಿಗಳು ಮುಚ್ಚಲ್ಪಟ್ಟವು. ರಾ|| ಬ|| ಹಳಕಟ್ಟಿಯವರು ದಿಲ್ಲಿಗೆ ಹೋಗಿ ತಮ್ಮ ಮಗನ ಸಮಾಧಿ ಸ್ಥಳವನ್ನು ನೋಡಿ ಅವನು ತೀರಿಕೊಂಡಾಗ್ಗೆ ನೆರೆಯಲ್ಲಿದ್ದ ಡಾಕ್ಟರರನ್ನು ಭೆಟ್ಟಿಯಾಗಿ ಅಲ್ಲಿ ಕೆಲ ದಿನವಿದ್ದು ವಿಜಾಪುರಕ್ಕೆ ಬಂದರು.

ಶ್ರೀಯುತ ಚಂದ್ರಶೇಖರ ಇವರಿಗೆ ಒಬ್ಬ ೭ ವರ್ಷದ ಮಗನು, ೪ ವರ್ಷದ ಹೆಣ್ಣು ಮಗುವು ಮತ್ತು ಮೂರು ತಿಂಗಳಿನ ಹೆಣ್ಣು ಕೂಸು ಇದ್ದಾರೆ. ಎಲ್ಲರೂ ಬೆಂಗಳೂರಿಗೆ ಹೋದರು.

ಈ ಪ್ರಕಾರ ೧೦ ವರ್ಷಗಳಲ್ಲಿ ಶ್ರೀಯುತ ಚಂದ್ರಶೇಖರ ಇವರು ಏನೂ ಬಿಡುವಿಲ್ಲದೆ ಕೆಲಸ ಮಾಡಿ ಸ್ವಂತ ಪರಿಶ್ರಮದಿಂದ ಒಂದು ಖಾತೆಯಲ್ಲಿ ಉಚ್ಚ ಸ್ಥಾನವನ್ನು ಹೊಂದಿ ತಮ್ಮ ೪೧ನೇ ವರ್ಷದ ವಯಸ್ಸಿನಲ್ಲಿಯೇ ಇಹಲೋಕ ಯಾತ್ರೆಯನ್ನು ಮುಗಿಸಿದರು. ಅವರ ಆತ್ಮಕ್ಕೆ ಚಿರಶಾಂತಿ ಯುಂಟಾಗಲಿ.

ಅವರು ಜೀವಂತ ಇದ್ದಿದ್ದರೆ, ಭಾರತದಲ್ಲಿ ಒಂದು ಅತ್ಯುಚ್ಚ ಔದ್ಯೋಗಿಕ ಖಾತೆಯಲ್ಲಿ ರಾಷ್ಟ್ರಹಿತಕಾರ್ಯ ಮಾಡಬಹುದಾಗಿತ್ತು. ಅವರು ಕರ್ನಾಟಕದ ಉದ್ಯೋಗಾಭಿವೃದ್ಧಿಗಾಗಿ ಕೆಲವು ಯೋಜನೆಗಳನ್ನು ಮಾಡಿದ್ದರು. ಅವುಗಳನ್ನು ನಿರ್ವಹಿಸಲು ಅವರು ತಮ್ಮ ಸರಕಾರಿ ನೌಕರಿಯನ್ನು ಸಹ ಬಿಡಲು ಮನಸ್ಸು ಮಾಡಿದವರಾಗಿದ್ದರು. ಅವರು ತಮ್ಮ ಈ ಇಚ್ಛೆಯನ್ನು ಆಗಿಂದಾಗ್ಗೆ ತಮ್ಮ ಮಿತ್ರರಲ್ಲಿ ಪ್ರಕಟಪಡಿಸುತ್ತಿದ್ದರು. ಅವರ ಅಕಾಲ ನಿಧನದಿಂದ ಅವರ ತಾಯಿ ತಂದೆಗಳಿಗೂ, ಆಪ್ತರಿಷ್ಟರಿಗೂ ಗೆಳೆಯರಿಗೂ ಬಹು ದುಃಖವಾಗಿದೆಂದು ಹೇಳುವದು ಅನಾವಶ್ಯಕವು

# ಶಿವಾನುಭವ ಸಮ್ಮೇಲನ ಮತ್ತು ಸರ್ವಧರ್ಮ ಪರಿಷತ್ತು

ಈ ಎರಡೂ ಪರಿಷತ್ತುಗಳು ಎಪ್ರಿಲ ೩೧ರಿಂದ ೬ತಾರೀಖಿನ ವರೆಗೆ ಉಚ್ಛ್ಯಾಣದಲ್ಲಿ ಜರಗಿದವು. ಶಿವಾನುಭವ ಸಮ್ಮೇಲನಕ್ಕೆ ಶ್ರೀ ಮಹಾದೇವ ಸ್ವಾಮಿಗಳು,ಸರ್ಪಭೂಷಣ ಮಠ ಬೆಂಗಳೂರ ಇವರು ಉದ್ಘಾಟಕರಾಗಿಯೂ ಶ್ರೀಯುತ ಚನಮಲ್ಲಪ್ಪ ಹಲಸಂಗಿ ಇವರು ಅಧ್ಯಕ್ಷರಾಗಿಯೂ ಇದ್ದರು. ಸರ್ವಧರ್ಮ ಪರಿಷತ್ತಿನ ಸತ್ಕಾರಕ ಸಮಿತಿಗೆ ರಾ॥ಬ॥ಹಳಕಟ್ಟಿಯವರು ಚೇರ ಮನ್ನರಾಗಿಯೂ ಮೈಸೂರು ಹೈಕೋರ್ಟಿನ ಹಿಂದಿನ ಮುಖ್ಯ ನ್ಯಾಯಾಧೀಶ ರಾದ ಶ್ರೀಯುತ ಜಿ. ಪರಮ ಶಿವಯ್ಯನವರು ಅಧ್ಯಕ್ಷರಾಗಿಯೂ ಇದ್ದರು. ಶಿವಾನುಭವ ಸಮ್ಮೇಲನದಲ್ಲಿ ಆದ ಭೂಷಣಗಳಿಂದ ವಚನಶಾಸ್ತ್ರದ ಮಹ ತ್ವವು ಸಮಾಜದವರಿಗೆ ಚನ್ನಾಗಿ ಈಗ ಅರಿಕೆಯಾಗಿದೆಂಬುದು ತಿಳಿದುಬರು ವಂತೆ ಇತ್ತು. ಈ ಪ್ರಕಾರ ಶಿವಾನುಭವ ಪತ್ರಿಕೆಯು ಒಂದು ಮಹತ್ವದ ವಾಙ್ಮಯಕಾರ್ಯ ಮಾಡಿದೆಂಬುದು ಅದರ ವಾಚಕರಿಗೆ ತಿಳಿದು ಅವರು ಸಂತೋಷ ಪಡುವರೆಂದು ಭಾವಿಸಿದ್ದೇವೆ. ಸರ್ವಧರ್ಮ ಪರಿಷತ್ತಿನಲ್ಲಿ ಆದ ಭಾಷಣಗಳ ಮೇಲಿಂದ ಸಹ ಶಿವಾನುಭವ ಶಾಸ್ತ್ರವು ಎಲ್ಲ ಧರ್ಮಗಳ ಸಾರವನ್ನು ಒಳಕೊಂಡಿದೆಂಬುದು ತಿಳಿಯುವಂತೆ ಇತ್ತು. ಆದ್ದರಿಂದ ಎಲ್ಲರೂ ವಚನ ಶಾಸ್ತ್ರವನ್ನು ಓದಿ ತಿಳಿದು ಗ್ರಹಣ ಮಾಡುವರೆಂದು ಹಾರೈಸಿದ್ದೇವೆ.

## ಕಾಣಿಕೆ.

(೧) ೩೧-೩-೫೦ನೇ ದಿನ ತಮ್ಮ ಧರ್ಮ ಪತ್ನಿಯವರಾದ ಚಿ॥ ಚನ್ನಪ್ಪ ಇವರು ಶಿವಾಧೀನರಾದ್ದರಿಂದ ಶಿವಾನುಭವ ಪತ್ರಿಕೆಗೆ ಶ್ರೀಯುತ ಅಂದಾನೆಪ್ಪ ಕುಪ್ಪಸದ ಮು೦ ಗುಡೂರ ತಾ॥ ಹುನಗುಂದ ಇವರು ೨ ರೂಪಾಯಿ ಕಾಣಿಕೆ ಕಳಿಸಿದ್ದಾರೆ ಕೈ.ವಾ.ಚನ್ನವ್ವ ಇವರ ಆತ್ಮಕ್ಕೆ ಶಾಂತಿಯುಂಟಾಗಲಿ

## ಕ್ಷಮಾಪಣೆ.

ಸಂಪಾದಕರಾದ ರಾ॥ ಬ॥ ಫ. ಗು. ಹಳಕಟ್ಟಿ ಇವರ ಕುಟುಂಬದಲ್ಲಿ ಆಕಸ್ಮಿಕ ಘಟನೆಗೋಸ್ಕರ ಮಾರ್ಚ ತಿಂಗಳಿನ ಪತ್ರಿಕೆಯು ಹೊರಟಿರು ವದಿಲ್ಲ. ಚಂದಾದಾರರ ಕ್ಷಮಾಪಣೆಯನ್ನು ಕೋರುತ್ತೇವೆ.

---

# ಶಿವಾನುಭವದ ಸತ್ಯಮಾರ್ಗ

ಶಿವಶರಣರ ಶಿವಾನುಭವದ ತತ್ವಗಳನ್ನು ಅರುಹುವ ಗ್ರಂಥವು ಇದಾಗಿದೆ. ಶ್ರೀ ಶಿವಯೋಗಿಗಳು ಬಂಥನಾಳ, ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗ ಸ್ವಾಮಿಗಳು ವಿಜಾಪುರ, ಶ್ರೀ ಮಹಾದೇವ ಸ್ವಾಮಿಗಳು ಸರ್ಪಭೂಷಣ ಮಠ ಬೆಂಗಳೂರ, ರಾ॥ ಬ॥ ಪಿ ಜಿ. ಹಳಕಟ್ಟಿ ವಿಜಾಪುರ, ಶ್ರೀಯುತ ಕಲ್ಯಾಣಪ್ಪ ಬ್ಯಾಳಿ, ಬಿ. ಎ ಬಿ. ಟಿ ಈ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಮಾಡಿದ ಮಹತ್ವದ ಲೇಖಗಳು ಇದರಲ್ಲಿವೆ. ಶಿವಶರಣರ ತಾತ್ವಿಕ ವಿಚಾರಗಳನ್ನು ತಿಳಿಸುಲು ಬಹು ಉಪಯುಕ್ತವಾದ ಗ್ರಂಥವು ಉತ್ತಮ ಕಾಗದ, ಮತ್ತು ಉತ್ತಮ ಬಾಯಿಂಡವುಳ್ಳದ್ದಿದೆ.

ದೊರೆಯುವ ಸ್ಥಳ:—ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ

ಬೆಲೆ:— ೧ ರೂ. ೧೦ ಆಣೆ (೧೩೮ ಪುಟಗಳು)

---

# ಶ್ರೀ ಬಸವೇಶ್ವರನ ತತ್ವಗಳು

ಕೈ. ವಾ. ಸಿದರಾಮಪ್ಪ ಪಾವಟೆ, ಕೈ. ವಾ. ವೀರಪ್ಪ ಬೆಳೇಅಂಗಡಿ, ರಾ॥ ಬ॥ ಪಿ. ಜಿ. ಹಳಕಟ್ಟಿ, ಶ್ರೀಯುತ ವೀರಪ್ಪ ಯುಗಟಿ ಬಿ. ಏ. ಎಲ್. ಎಲ್. ಬಿ. ಮೊದಲಾದ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ ಮಹತ್ವದ ಲೇಖಗಳು ಇದರಲ್ಲಿವೆ. ಇದರಲ್ಲಿ ಬಸವೇಶ್ವರನ ನೈತಿಕ ಮತ್ತು ಸಾಮಾಜಿಕ ವಿಚಾರಗಳು, ಅವನು ಮಾಡಿದ ವಾಙ್ಮಯ ಕ್ರಾಂತಿ. ಇವೇ ಮೊದಲಾದ ಮಹತ್ವದ ವಿಷಯಗಳ ಮೇಲೆ ಲೇಖಗಳು ಬಂದಿರುತ್ತವೆ. ಉತ್ತಮ ಕಾಗದ, ಉತ್ತಮ ಬಾಯಿಂಡವುಳ್ಳದ್ದಿರುತ್ತದೆ.

ದೊರೆಯುವ ಸ್ಥಳ:—ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ

ಬೆಲೆ:— ೧ ರೂ. ೮ ಆಣೆ (೧೦೫ ಪುಟಗಳು)

# ಪ್ರಕೃತಸಂಚಿಕೆಯ ವಿಷಯಗಳು

(೧) ಶ್ರೀಕರ ಭಾಷ್ಯದ ಸ್ಥಾನಮಾನ :— ಸಂಶೋಧನಾತ್ಮಕವಾದ ಮತ್ತು ವಿಚಾರ ಪರಿಪ್ಲುತವಾದ ಈ ಲೇಖನವನ್ನು ಶ್ರೀಯುತ ವೀರಪ್ಪ ಯಂಗಟಿ ಬಿ. ಎ., ಎಲ್. ಎಲ್. ಬಿ ಮು|| ಹಾವೇರಿ ಇವರು ಬರೆದಿದ್ದಾರೆ. ಈ ಲೇಖವು ಬಹು ಮಹತ್ವವಾದದ್ದು. ಕೆಲ ಮಹನೀಯರು ಈ ಭಾಷ್ಯವು ವೀರಶೈವ ಪರವಲ್ಲವೆಂದು ವಾದಿಸಿದ್ದಾರೆ. ಆದರೆ ಅವರ ಈ ಅಭಿಪ್ರಾಯಗಳು ಸರಿಯಲ್ಲವೆಂದು ಶ್ರೀಯುತ ಯಂಗಟಿಯವರು ಇದರಲ್ಲಿ ಸಾಧಾರವಾಗಿ ಸಿದ್ಧಮಾಡಲು ಯತ್ನಿಸಿದ್ದಾರೆ. ಈ ಭಾಷ್ಯವನ್ನು ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧ ಹೊಂದಿದ ಸಿ. ಹಯವದನರಾವ ಇವರು ಕೈ. ವಾ. ರಾಜಸಭಾಭೂಷಣ ಪುಟ್ಟಣ್ಣ ಶೆಟ್ಟರವರ ಪ್ರೋತ್ಸಾಹನೆಯಿಂದ ಮೈಸೂರ ವೀರಶೈವ ವಿದ್ಯಾಭಿವೃದ್ಧಿ ಫಂಡಿನ ಸಹಾಯದಿಂದ ಪ್ರಕಟಿಸಿದ್ದಾರೆ

(೨) ಷಟ್‌ಸ್ಥಲಗಳೂ ಏಕೋತ್ತರ ಶತಸ್ಥಲಗಳೂ (ಪ್ರಸಾದಿಸ್ಥಳ:— ಈ ಲೇಖವನ್ನು ಶ್ರೀಯುತ ಬಸವಪ್ಪ ಪಟ್ಟೇದ ಈ ಮಹನೀಯರು ಲಿಖಿಸಿದ್ದಾರೆ. ಷಟ್‌ಸ್ಥಲ ಸಿದ್ಧಾಂತದಲ್ಲಿ ಏಕೋತ್ತರ ಶತಸ್ಥಲಗಳು ಬಹು ಗೂಢವಾದ ವಿಷಯಗಳಾಗಿವೆ. ಕೆಲವು ಗ್ರಂಥಗಳಲ್ಲಿ ಅದು ಬಹು ಸಂಕ್ಷಿಪ್ತವಾಗಿ ನಿರೂಪಿಸಲ್ಪಟ್ಟಿರುತ್ತದೆ ಆದರೂ ಶ್ರೀಯುತ ಪಟ್ಟೇದ ಇವರು ಇವುಗಳ ತತ್ವಗಳನ್ನು ಕೂಲಂಕಷವಾಗಿ ಚರ್ಚಿಸಿದ್ದಾರೆ. ಈ ವಿಷಯವನ್ನು ಲೇಖಕರು ಸರಳವಾಗಿಯೂ ಸ್ಪಷ್ಟವಾಗಿಯೂ ಚರ್ಚಿಸಿದ್ದಾರೆ ವಾಚಕರು ವಿಷಯದ ಮಹತ್ವವನ್ನು ತಿಳಿದುಕೊಂಡು ಲಕ್ಷಪೂರ್ವಕವಾಗಿ ಈ ಲೇಖವನ್ನು ಓದಬೇಕೆಂದು ನಮ್ಮ ಸವಿನಯಸೂಚನೆ ಇದೆ.

(೩) ಶಾಲ್ಯದರಸು :— ಈತನು ವೀರಶೈವರಲ್ಲಿ ಒಬ್ಬ ಉಚ್ಚಶಿವಾನುಭವಿಯಾಗಿದ್ದಾನೆ. ಅವನ ಗ್ರಂಥಗಳನ್ನು ವೀರಶೈವರು ಪ್ರಕಟಿಸುವದು ಬಹು ಅವಶ್ಯವಾದುದು ಅವನ ಸ್ತುತಿಪರ ಕವಿತೆಯೊಂದನ್ನು ಹಿಂದಿನವರೊಬ್ಬರು ರಚಿಸಿದ್ದನ್ನು ಸಂಗ್ರಾಹಕರು ಎತ್ತಿ ನಮ್ಮ ಕಡೆಗೆ ಕಳಿಸಿದ್ದು ಇದನ್ನು ಪ್ರಸಿದ್ಧಿಸಿದ್ದೇವೆ.

ದೇಣಿಗೆಗಳು:— ಕೆಳಗೆ ಕಾಣಿಸಿದ ಮಹನೀಯರು ನಾವು ಪ್ರಕಟಿಸಲಿದ್ದ ಸಟೀಕ ಬಸವೇಶ್ವರ ವಚನಗಳ ಮುದ್ರಣಕ್ಕೋಸ್ಕರ ಸಹಾಯ ಧನವನ್ನು ಕಳಿಸಿದ್ದಾರೆ. ಅವರಿಗೆ ನಮ್ಮ ಅನಂತವಂದನೆಗಳು. ಇವರೆಲ್ಲರೂ ಶಿವಾನುಭವದ ಪತ್ರಿಕೆಯ ಪ್ರೇಮಿಗಳಿದ್ದು ಅವರು ಯಾವಾಗಲೂ ಇದೇ ಪ್ರಕಾರ ಸಹಾಯ ಮಾಡುತ್ತ ಬಂದಿದ್ದಾರೆ. ಅವರ ಹೆಸರುಗಳು—(೧) ಶ್ರೀ. ಈಶ್ವರಪ್ಪ ಕುಮಾರಾಣಿ ಸಬರಜಿಸ್ಟ್ರರ ಧಾರವಾಡ ಇವರು ತಮ್ಮ ಲಿಂಗೈಕ್ಯ ಮಾತೋಶ್ರೀಯವರಾದ ಶ್ರೀ. ರುದ್ರಮ್ಮನವರ ಆದರ್ಶ ಜೀವನ ಸ್ಮರಣಾರ್ಥವಾಗಿ ಕೊಟ್ಟಿದ್ದು ೧೧ ರೂ (೨) ಶ್ರೀ ಎಸ್. ವ್ಹಿ ಜವಳಿ ಮು.: ಬೈಲಹೊಂಗಲ ೫ ರೂ (೩) ಶ್ರೀ. ಶ್ರೀಮಂತಪ್ಪ ಶಿವಪ್ಪ ತಂಡಿ ಮು|| ಹಲಸಂಗಿ ೧೧ ರೂ (೪) ಶ್ರೀ. ಶಿವಪ್ಪ ನಿಂಬರಗಿ ಚೀಫ ಗುಡ್ಸ ಕ್ಲಾರ್ಕ ರಾಜಮಹೇಂದ್ರಿ ೧೧ ರೂ. (೫) ಶ್ರೀ ಟಿ. ರುದ್ರಪ್ಪ ತುಪ್ಪದ ಹಳ್ಳಿ ಮು. ಪಾಂಡೋಮಟ್ಟಿ ಜಿ. ಶಿವಮೊಗ್ಗಾ ಇಲ್ಲಿ ಶ್ರೀ ಸಂಗಮನಾಥ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಶ್ರೀ ಪುಣಬಗಟ್ಟಿ ಬಸವಯ್ಯನವರು ಶಿವಾನುಭವ ನಡಿಸಿದ ಕಾಲದಲ್ಲಿ ಶ್ರೋತೃಗಳಿಂದ ಕೂಡಿಸಿದ್ದು ೪೪ ರೂ. ಗಳು

ಕ್ಷಮಾಪಣೆ:— ಮತದಾರರ ಲಿಸ್ಟಿನ ಕೆಲಸದ ಮೂಲಕ ನವೆಂಬರ ತಿಂಗಳಿನಲ್ಲಿ ಶಿವಾನುಭವ ಪತ್ರಿಕೆಯನ್ನು ಸಕಾಲದಲ್ಲಿ ಹೊರಡಿಸಲು ಆಗಿರುವದಿಲ್ಲ. ಇದಕ್ಕೋಸ್ಕರ ನಾವು ವಾಚಕರ ಕ್ಷಮೆಯನ್ನು ಬೇಡಿಕೊಳ್ಳುತ್ತೇವೆ.

---

# ಶಿವಾನುಭವ.

ಸಂಪುಟ ೨೪ ] ( ಮಾಸಪತ್ರಿಕೆ ) [ ಸಂಚಿಕೆ ೧೨



ಡಿಸೆಂಬರ ೧೯೫೦] ವಿಜಾಪೂರ [ ಮಾರ್ಗಶೀರ್ಷ ೧೮೭೨

ವಾ. ಚಂ. ೫-೧೨-೨

ಕೊಂಡು ಮುಂದೆ ತನ್ನ ಜಂಗಮ ಲಿಂಗದಾರಾಧನೆಯನ್ನು ಮಾಡಿ ಅದರಲ್ಲಿ ಬೆರೆದು ಕೃತಾರ್ಥವಾಗತಕ್ಕದ್ದಿರುವದು.

ಪ್ರಾಣಲಿಂಗಿ ಇದರ ಉತ್ಪತ್ತಿಯು:—(೧) ಪ್ರಾಣವೇಲಿಂಗ, ಪ್ರಾಣಲಿಂಗ (೨) ಪ್ರಾಣವನ್ನೆ ಲಿಂಗವೆಂದರಿದಾತನು. (ಪ್ರಾಣಲಿಂಗ+ಇ= ಪ್ರಾಣಲಿಂಗಿ) ಪ್ರಾಣಲಿಂಗಿಯು ಎಂದಿರುತ್ತದೆ. ಇದರ ಮೇಲಿಂದ ಪ್ರಾಣಲಿಂಗವನ್ನು ಪೂಜಿಸುವ ಭಕ್ತನೇ ಪ್ರಾಣಲಿಂಗಿ ಎಂಬುದು ಸ್ಪಷ್ಟವಾಗುತ್ತದೆ ಪ್ರಾಣಲಿಂಗವು ಆತನ ಮಧ್ಯ ಹೃದಯದ ಅನಾಹತ ಚಕ್ರದಲ್ಲಿ ಇರುವದು. ದೇಹದಲ್ಲಿ ಪ್ರವಿಷ್ಟವಾಗಿರುವ ಪರಮಾತ್ಮನ ಅಂಶವನ್ನು ಅಂತರಾತ್ಮನೆಂದು ಕರೆಯುವರು. ಆ ಅಂತರಾತ್ಮನೇ ದೇಹಗತನಾದೊಡನೆ ಅದರ ಉಪಾಧಿಯಿಂದ ಜೀವಾತ್ಮನೆಂದು ಕರೆಯಲ್ಪಡುವನು. ಅನಾಹತ ಚಕ್ರಸ್ಥನಾಗಿರುವ ಪ್ರಾಣಲಿಂಗವೇ ಈ ಜೀವಾತ್ಮನು. ಈ ಪ್ರಾಣಲಿಂಗಾರ್ಚನೆ ಮಾಡುವದೆಂದರೆ ದೇಹೋಪಾಧಿಯಿಂದ ಪ್ರಾಣಕ್ಕೆ (ಅಂತರಾತ್ಮನಿಗೆ) ಸೋಂಕಿದ ಮಲಿನತೆಯನ್ನು ಹೋಗಲಾಡಿಸುವದೇ ಹೊರತು, ಮತ್ತೇನೂ ಅಲ್ಲ. ಇಂತಹ ಮಲಿನತೆಗೊಳಗಾದ ಜೀವಾತ್ಮನು ದೇಹಾಭಿಮಾನದ ಭೂತದಿಂದ ಒಳಿತಾಗಿಯೇ ವಿಕಾರಹೊಂದಿರುವನು. ಅಂದರೆ ಹಸುವು ತೃಷೆಗಳ ಬಾಧೆಯಿಂದ ಪೀಡಿತನಾಗಿರುವನು. ಅದಕ್ಕಾಗಿಯೇ ಆತನು ಪ್ರಾಪಂಚಿಕ ವಿಷಯಗಳನ್ನು ಸಂಗ್ರಹಿಸಿ, ಭೋಗಿಸಲು ಹವಣಿಸುವನು. ಹೊನ್ನು, ಹೆಣ್ಣು, ಮಣ್ಣು (ದೇಹ) ಗಳ ಬಲಿಯೊಳಗೆ ಸಿಕ್ಕು ಒದ್ದಾಡುವನು. ಆತನ ಈ ಭ್ರಾಂತಿಯನ್ನು ಬಿಡಿಸಿ "ನನಗೂ ದೇಹಕ್ಕೂ ಯಾವದೇ ತರದ ಸಂಬಂಧವಿಲ್ಲ. ನಾನು ಪರಮಾತ್ಮನ ಅಂಶವು. ದೇಹವು ನಷ್ಟಪ್ರಾಯುವಾದುದು. ಹಸುವು ತೃಷೆಗಳು ನನಗೆ ಇಲ್ಲ. ಅವು ದೇಹ ರಕ್ಷಣೆಗೆ ಮಾತ್ರ ಬೇಕಾದಂಥವು" ಇತ್ಯಾದಿ ವಿವೇಕವನ್ನುಂಟುಮಾಡಿ ಆತನನ್ನು ನಿರ್ಮಲಗೊಳಿಸಿ, ಪರಮಾತ್ಮನಲ್ಲಿ ಕೂಡಿಸುವದೇ ಪ್ರಾಣಲಿಂಗದ ಪೂಜೆಯು. ಇದು ಕೇವಲ ಜ್ಞಾನ ವಿಷಯವು. ವಚನ ಗ್ರಂಥಾವಲೋಕನದಿಂದ ನಿಜವಾದ ಆತ್ಮಜ್ಞಾನವನ್ನು ಪಡೆದು ಶಿವಾನುಭವಿಯಾಗದಿದ್ದರೆ ಇದು ತಾನಾಗಿ ಎಂದೂ ಸಿದ್ಧಿಸದು ಶಿವಾನುಭವವೆಂದರೆ ಜೀವ ಶಿವ ಜಗತ್ತು ಈ ಮೂರೂ ಒಂದೇ ವಸ್ತು ಎಂದರಿಯುವದು. ಪ್ರಾಣಲಿಂಗಿಯು ಈ ಸಂಗತಿಯನ್ನು ಒಳಿತಾಗಿ ಲಕ್ಷ್ಯದಲ್ಲಿಡತಕ್ಕದ್ದು.

ಪ್ರಾಣಲಿಂಗಕ್ಕೆ ಜಂಗಮ ಲಿಂಗ ( ಚರಲಿಂಗ ) ಎಂಬ ಹೆಸರೂ ಇರುವದು. ಚಲಿಸುವ ಶಕ್ತಿಯು ಪ್ರಾಣ ( ಜೀವ ) ದಲ್ಲಿರುವದೆಂಬುದನ್ನು ಎಲ್ಲರೂ ಬಲ್ಲರು. ಇದಲ್ಲದೆ ಆ ಪ್ರಾಣದಲ್ಲಿ ಇನ್ನೊಂದು ಮಹತ್ವದ ಶಕ್ತಿಯದೆ. ಅದೇ ವಿಜ್ಞಾನ ( ಮಹಾಜ್ಞಾನ ) ಶಕ್ತಿಯು. ಅಂತೆಯೇ ಜಂಗಮ ಶಬ್ದವು ಗಮನಾರ್ಥವಾಗಿಯೂ ಜ್ಞಾನಾರ್ಥವಾಗಿಯೂ ಉಭಯ ರೀತಿಯಲ್ಲಿ ಹೇಳಲ್ಪಟ್ಟಿರುವದು. ಪುರಾಣಾಂತ್ಯದಲ್ಲಿ ಅಂತರ್ಲಿಂಗ ಪೂಜಕರಾದ ಪ್ರಾಣಲಿಂಗಿಗಳಿಗೆ ಆಚಾರ ಪ್ರಾಣಿ, ಲಿಂಗ ಪ್ರಾಣಿ, ಜಂಗಮ ಪ್ರಾಣಿ ಎಂತಲೂ ಸಂಬೋಧಿಸಿರುವರು. ಲಿಂಗ ಪ್ರಾಣಿಯ ವಿಷಯದಲ್ಲಿ ಲಿಂಗವು ಅಜಾಗೃತ ಸ್ಥಿತಿಯಲ್ಲಿ ದೇಹದಿಂದ ಕಳಚಿ ಬಿದ್ದು ಹೋದರೆ ಕೂಡಲೇ ಅವನು ಗತಪ್ರಾಣನಾಗುತ್ತಿದ್ದನೆಂದೂ ಅದು ದೊರೆತು ದೇಹದಲ್ಲಿ ಧರಿಸಲ್ಪಟ್ಟೊಡನೆ ಪುನಃ ಪ್ರಾಣ ಬಂದು ಜೀವಿಯಾಗುತ್ತಿದ್ದನು. ಎಂದೂ ಹೇಳಲಾಗಿದೆ. ಅದೇ ಮೇರೆಗೆ ಜಂಗಮ ಪ್ರಾಣಿಯ ಬಗೆಗೆ ಜಂಗಮನು ಬಂದು ದರ್ಶನವೀಯದೇ ತಿರುಗಿ ಹೋದುದನ್ನು ಅರಿತೊಡನೆಯೇ ಆತನು ಜೀವ ತ್ಯಜಿಸುತ್ತಿದ್ದನೆಂದೂ, ಜಂಗಮನು ಪುನಃ ಬಂದು ದರ್ಶನವಿತ್ತೊಡನೆ ಕೂಡಲೇ ಸಪ್ರಾಣನಾಗುತ್ತಿದ್ದನೆಂದೂ ವರ್ಣನೆಯುಂಟು ಈ ಸಂಗತಿಯನ್ನು ಕೇಳಿ ಸರ್ವರಿಗೆಲ್ಲರಿಗೆ ಅತಿ ಸೋಜಿಗವೆನ್ನಿಸುವದಲ್ಲವೇ ! ಈಗೆಯೂ ಹಾಗೆ ನಡೆಯುತ್ತಿದ್ದುದನ್ನು ನಾವಾರೂ ನೋಡಿಲ್ಲ ಹಾಗೂ ಕೇಳಿಲ್ಲ ಸಹ ! ಹಾಗಾದರೆ ಆ ಪುರಾಣದ ಹೇಳಿಕೆಯು ಸಟೆಯೋ ದಿಟವೋ ? ಎಂಬ ಆಕಾಂಕ್ಷೆಯು ತಲೆದೋರುವದು. ತುಸು ವಿಚಾರಿಸಿ ನೋಡಿದರೆ ಅದೇನೂ ಸುಳ್ಳಿಲ್ಲ. ಸತ್ಯವದೆ. ಎಂಬುದು ಸಹಜವಾಗಿ ಕಂಡುಬರುವದು. ಅವರು ಆ ವಿಷಯಗಳನ್ನು ರೂಪಕಾಲಂಕಾರದಲ್ಲಿ ವಿವರಿಸುವರು. ಇಷ್ಟೇ ! ನೋಡಿರಿ ! ಲಿಂಗಪ್ರಾಣಿ ಹಾಗೂ ಜಂಗಮ ಪ್ರಾಣಿ ಈ ಶಬ್ದಗಳು ಸಾಮಾಜಿಕ ಶಬ್ದಗಳಿವೆ. ಅವುಗಳ ವಿಗ್ರಹವು—

ಲಿಂಗವೇ ಪ್ರಾಣವಾಗಿ ವುಳ್ಳವನು....ಲಿಂಗಪ್ರಾಣಿ }
ಜಂಗಮವೇ ಪ್ರಾಣವಾಗಿ ವುಳ್ಳವನು... ಜಂಗಮಪ್ರಾಣಿ } ಎಂದಿದೆ.
ಆಚಾರವೇ ಪ್ರಾಣವಾಗಿ ವುಳ್ಳವನು... ಆಚಾರಪ್ರಾಣಿ }

ಲಿಂಗವೆಂದರೆ ಶುಜ್ಞಾನವೆಂದೂ ಜಂಗಮವೆಂದರೆ ಅನುಭವಜ್ಞಾನವೆಂದೂ ವಚನಕಾರರು ಬಿಚ್ಚಿ ಹೇಳಿದ್ದಾರೆ, ಈ ಅರ್ಥವನ್ನು ಆ

( ಲಿಂಗ ಜಂಗಮ ) ಶಬ್ದಗಳ ಬದಲು ಸೇರಿಸಿದರೆ ಅರ್ಥ ವಿವರಣೆಯು ಸುಲಭವಾಗುವದು. ಲಿಂಗ ಪ್ರಾಣಿಯ ಲಿಂಗವು ಹೋಯಿತೆಂದರೆ, ಆತನು ವ್ಯವಹಾರದ ಮಟ್ಟಿನಲ್ಲಿ ಸಿಲುಕಿ ತನ್ನ ಸುಜ್ಞಾನವನ್ನು ತ್ಯಜಿಸುವದು ಎಂಬರ್ಥವು. ಇದರಿಂದ ಲಿಂಗವು ಕಳಚಿಬಿದ್ದಂತಾಗುವದು. ಆಗ ಜ್ಞಾನ ವಿಹೀನನಾದ ಅವನು ಸಮಾಜದಲ್ಲಿ ಜೀವಿಸಿಯೂ ನಿರ್ಜೀವನಾಗುವನು. ಅಂದರೆ ಮೊದಲಿನ ಸಾಮಾಜಿಕ ಪ್ರತಿಷ್ಠೆಗೆ ಭಂಗಬಂದು ಜನರಲ್ಲಿ ಅವನ ಅಪಕೀರ್ತಿಯು ಹಬ್ಬುತ್ತದೆ. 'ಮಾನ ಹೋದವನೇ ಲಿ ಮರಣ ಬಂದಹಾಗೆ' ಎಂಬ ಗಾದೆಯು ಪ್ರಾಪಂಚಿಕರಲ್ಲಿ ಯಾವಾಗಲೂ ಇದ್ದುದೇ! ಆದುದರಿಂದ ಜನತೆಯಲ್ಲಿ ತನ್ನ ಪ್ರಾಣವೇ ಮಾನಹಾನಿಯಿಂದ ಹೋದಂತೆಂದು ಭಾವಿಸಿ ಆ ಲಿಂಗಾಂಗಿಯು ಮುಂದೆ ಬಹು ಸಾವಧಾನದಿಂದ ವರ್ತಿಸಹತ್ತಿ ಬರುಬರುತ್ತ ತನ್ನ ಹೋದ ಪ್ರತಿಷ್ಠೆಯ ಸ್ಥಾಪನೆ ಗಳಿಸುತ್ತಾನೆ. ಆಗ ಪುನಃ ಅವನ ಕಳಚಿ ಹೋದ ಲಿಂಗ ( ಸುಜ್ಞಾನ ) ವು ದೊರೆದು ಅವನು ಸಪ್ರಾಣನಾಗುವನು. ಇದೇ ನೋರಿಗೆ ಆಚಾರ ಪ್ರಾಣಿಯು ತನ್ನ ಆಚಾರದಲ್ಲಿ ತಪ್ಪಿದರೆ ( ಅನಾಚಾರಿಯಾದರೆ ) ಪ್ರಾಣ ಬಿಡಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಅಥವಾ ನಾಚಿ ಬಹು ಮನಸ್ಸಿಗೆ ಹಚ್ಚಿಕೊಂಡು, ಪಶ್ಚಾತ್ತಾಪ ಪೂರ್ವಕವಾಗಿ, ಶಿವ ಧ್ಯಾನದಿಂದ ಆಚಾರದಲ್ಲಿ ತೃಪ್ತಿಕರವಾದ ಏಳ್ಗೆಯನ್ನು ಪಡೆದಾಗ ಮಾತ್ರ ಅವನಿಗೆ ಸಮಾಧಾನವಾಗಿ ಹೊಸದಾಗಿ ಜೀವ ಬಂದಂತೆ ಆಗುತ್ತಿತ್ತು.

ಇದೇ ಪರಿಯು ಜಂಗಮ ಪ್ರಾಣಿಯದು. ಬಂದ ಜಂಗಮನು ಹೊರಗಿಂದ ಹೊರಗೆಯೇ ತಿರುಗಿ ಹೋದರೆ ಆ ಜಂಗಮಲಿಂಗಿಗೆ ಅತ್ಯಂತ ತಾಪವಾಗುವದು. ಜಂಗಮವೆಂದರೇನು ಸಾಮಾನ್ಯನಲ್ಲ, ಅವನೇ ಮಹಾ ಜ್ಞಾನಿಯು, ಶರಣನು, ಸತ್ಪುರುಷನು. ಅಂತಹರ ಸಹವಾಸದಿಂದಲೇ ಜೀವಿಸುವದು ಭಕ್ತರಿಗೆ ಅತ್ಯಂತ ಹಿತಕಾರಕವು. 'ತನ್ನನ್ನು ಶರಣರಡಿಯ ಚಮ್ಮಾವುಗೆಯಾಗಿ ಮಾಡಿದರೂ ( ಅವರಡಿಯಲ್ಲಿ ) ಸಹವಾಸದಲ್ಲಿರಿಸೆಂದು ಕೂ. ಸಂ. ದೇವರನ್ನು ಬಸವಣ್ಣನವರು ಬೇಡಿಕೊಂಡಿದ್ದಾರೆ. ಜಂಗಮನು ಅನುಭವಜ್ಞಾನಿಯು, ಅವನ ಜ್ಞಾನವು ಬರಿಯ ಕೇಳಿಕೆಯದಲ್ಲ, ಓದಿನ ವಿಷಯವಲ್ಲ, ಅದರಂತೆ ಸ್ವತಃ ನಡೆದು ಒರೆಹಚ್ಚಿ

ನೋಡಿ ಸರಿ ಎಂದು ಮನಗಂಡಿರುದು. ಈ ಶರಣರು ತಾವ ಮೊದಲು ತವ್ವದಾಚರಿಸಿ, ' ಇದು ಜನರಿಗೆ ಹೇಳಲಿಕ್ಕೆ ಶಕ್ಯದಾಗಿದೆ. ' ಎಂಬು ದನ್ನು ಅರಿಕೆಗೆಯ್ದು, ಆ ಮೇಲೆಯೇ ಅದನ್ನು ಜನರಿಗೆ ಹೇಳುವರು. ಇವರಲ್ಲಿ ಮೊದಲು ನಡೆ ತರುವಾಯ ನುಡಿ ಎಂಬ ಕ್ರಮವಿರುವದು. ಅನಾಯಾಸವಾಗಿ ಬಂದ ಇಂತಹ ಮಹಾತ್ಮರ ಯೋಗವು ತಪ್ಪಿದರೆ ಆ ಭಕ್ತನಿಗೆ ಪ್ರಾಣ ಹೋದಂತೆ ತಳಮಳವಾಗುವದೇನೂ ಸೋಜಿಗವಲ್ಲ. ಅದನ್ನೇ ಜಂಗಮನ ನಿರ್ಗಮನದಿಂದ ಜಂಗಮಪ್ರಾಣಿ ಭಕ್ತನಜೀವ ಹೋಗುತ್ತಿತ್ತೆಂದೂ, ಆ ಜಂಗಮನು ಪುನಃ ಬಂದು ದರ್ಶನವಿತ್ತರೆ ಅವನಿಗೆ ಜೀವ ಬರುತ್ತಿತ್ತೆಂದೂ ಬರೆದಿರುವರು. ಆಗಿನ ಕಾಲದ ಭಕ್ತ ರಾದರೂ ಅಂತಹ ಘಟಿಕರೂ, ಶುದ್ಧಾಂತಃಕರಣಿಗಳೂ ಆಗಿರುತ್ತಿದ್ದರು. ಜಂಗಮರಾದರೂ ಸಾಕ್ಷಾತ್ ಶಿವಸದೃಶರಾಗಿರುತ್ತಿದ್ದರು ಈಗ ಆ ಸ್ಥಿತಿಯು ಎಲ್ಲಿರುವದು ಇದರ ಮೇಲಿಂದ ಮೊದಲಿನ ಪ್ರಾಣಲಿಂಗಿಗಳು ಅದೆಂತಹ ಜಂಗಮ ಪ್ರೇಮಿಗಳೂ, ಲಿಂಗಪ್ರೇಮಿಗಳೂ ಆಗಿರುತ್ತಿದ್ದ ರೆಂಬುದು ತಾನೇ ಒಡೆದು ಕಾಣುತ್ತದೆ.

ಪ್ರಸಾದಿಯು ತನ್ನೊಳಗೆ ಶಿವನೆಂಬ ಲಿಂಗವೇ ಇರುತ್ತದೆಂದು ಬಗೆದು ವರ್ತಿಸಬೇಕಾಗುತ್ತದೆ. ಪ್ರಾಣಲಿಂಗಿಯು ತನ್ನಲ್ಲಿರುವ ಪ್ರಾಣವೇ ಲಿಂಗವಿರುತ್ತದೆಂದು ಗ್ರಹಿಸಿಕೊಳ್ಳುವನು. ಶಿವ ಮತ್ತು ಲಿಂಗ ಇವೆರಡರ ಅರ್ಥ ಒಂದೇ. ಪ್ರಸಾದಿಯು ನಿರಹಂಕಾರ ಸ್ಥಿತಿಯನ್ನು ಪಡೆಯಬೇಕಾ ಗಿರುವದರಿಂದ ಶಿವನು ತನ್ನೊಬ್ಬನಲ್ಲಿ ಇರುವನೆಂದು ಭಾವಿಸಿದರೆ ಸಾಕಾ ಗುವದು. ಆದರೆ ಪ್ರಾಣಲಿಂಗಿಯು ಪ್ರಾಣವಿರುವವರೆಲ್ಲರನ್ನೂ ಲಿಂಗ ಸ್ವರೂಪವೆಂದು ತಿಳಿಯುವದು ಅವಶ್ಯವಾಗಿದೆ. " ಆತ್ಮವತ್ ಸರ್ವ ಭೂತಾನಿ " ಎಂದು ತಿಳಿದು ಎಲ್ಲ ಜನರೊಡನೆಯಷ್ಟೇ ಅಲ್ಲದೆ ಎಲ್ಲ ಪ್ರಾಣಿಗಳೊಡನೆ ಸಹ ಅಹಿಂಸೆಯಿಂದ ನಡೆಯಬೇಕಾಗುತ್ತದೆ.

ಆತ್ಮವತ್ ಸರ್ವ ಭೂತಾನಿ ಎಂಬ ವಾಕ್ಯವು ಚಿಕ್ಕದಾಗಿದ್ದರೂ ಅದರ ಅರ್ಥವ್ಯಾಪ್ತಿಯು ವಿಸ್ತೃತವಾಗಿರುವದು. ಇದನ್ನು ಹೇಳುವದು ತೀರಸುಲಭವಾಗಿದ್ದರೂ, ಅದರಂತೆ ನಡೆಯುವದು ಮಾತ್ರ ತೀರ ಕಠಿ ಣವಾಗಿರುವದು. ಆದಕಾರಣ ಅದರ ಅರ್ಥವನ್ನೂ ನಿಲುವನ್ನೂ ಸರಿ

ಯಾಗಿ ಅರಿತುಕೊಳ್ಳದಿದ್ದರೆ ಪ್ರಾಣಲಿಂಗಿಯು ಜಂಗಮಲಿಂಗ ಸಾಮರಸ್ಯದ ಕಲ್ಪನೆಯು ಸಾಮಾನ್ಯರಿಗೆ ಬರಲಾರದು. ಅಂತೆಯೇ ಈಗ ಅದನ್ನು ಕೆಳಗೆ ಹೆಚ್ಚಿಗೆ ಚರ್ಚಿಸಬೇಕಾಗಿದೆ. 'ಆತ್ಮವತ್ ಸರ್ವಭೂತಾನಿ' ಎಂದರೆ ಎಲ್ಲ ಪ್ರಾಣಿಗಳನ್ನು ಜೀವನು ತನ್ನಂತೆಯೇ ಭಾವಿಸಿ ವರ್ತಿಸಬೇಕೆಂಬರ್ಥವು. ಇದನ್ನೇ ಸರ್ವಜ್ಞ ಕವಿಯು, 'ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು ಸರ್ವಜ್ಞ" ಎಂದು ಹೇಳಿದ್ದಾನೆ. ಆತ್ಮನ್ ಶಬ್ದವೇ ತಾನು ಎಂದಾಗಿರುತ್ತದೆ. ಆದುದರಿಂದ ಆತ್ಮ ಎಂದರೆ ತಾನು ಭೂತ ಎಂದರೆ ಅರಿಯದವರು ದೆವ್ವ ಎಂದು ಭಾವಿಸುವರು. ಆದರೆ ಇದು ತಪ್ಪು ಗ್ರಹಿಕೆ. ಪ್ರಥ್ವಿಆದಿ ಪಂಚ ಮಹಾ ಭೂತಗಳಿಂದ ಸೃಷ್ಟಿಯಾಗಿದೆ. ಆದರೆ ಅದರೊಳಗಿನ ಎಲ್ಲ ಚರಾಚರ ವಸ್ತುಗಳು ಹುಟ್ಟಿರುತ್ತವೆ. ಇವನ್ನೆಲ್ಲ ಮುಖ್ಯವಾಗಿ ಚರವಸ್ತುಗಳನ್ನೆಲ್ಲ ಪ್ರಾಣಲಿಂಗಿಯು ತನ್ನಂತೆಯೇ ಸರಿಸಮಾನತೆಯಿಂದ ಅರಿತು ಅಭೇದ ಬುದ್ಧಿಯಿಂದ ವರ್ತಿಸಬೇಕಾಗುತ್ತಿದೆ. ಚರವಸ್ತುಗಳೆಂದರೆ ಸಕಲ ಪ್ರಾಣವರ್ಗವು. ಅದರಲ್ಲಿ ಕ್ರಿಮಿಕೀಟಾದಿಗಳಿಂದ ಮನುಜರವರೆಗೆ ಸರ್ವ ಜೀವಿಗಳ ಸೇರ್ಪಡೆಯಾಗುವದು. ಚಿಗರೆ, ಆಡು, ಕುರಿ ಆಕಳು, ಹಕ್ಕಿ, ಪಕ್ಷಿಗಳು ಮೊದಲಾದ ಸಭ್ಯಪ್ರಾಣಿಗಳಂತೆಯು ಹುಲಿ, ಸಿಂಹ ಹಾವು ಚೇಳು, ತಗಣಿ ಚಿಕ್ಕಾಡು ಮುಂತಾದ ಪೀಡಾಕಾರಕ ಪ್ರಾಣಿಗಳೂ ಬರುವವು. ಮನುಜರಲ್ಲಿ ಸಜ್ಜನರಂತೆ ದುರ್ಜನರ ಒಳಗಾವೂ ಸಮಾವಿಷ್ಟವಾಗಿರುವದು ಇವನ್ನೆಲ್ಲ ತನ್ನಪ್ರಾಣದಂತೆಯೇ ಪ್ರೀತಿಸಿ ನಡೆಯುವದು ಬಹು ದುಷ್ಕರವು. ತಗಣಿ ಚಿಕ್ಕಾಡು ಗುಂಗಾಡು ಚಿಟ್ಟೆ ಇತ್ಯಾದಿಗಳ ಪೀಡೆಯನ್ನು ಸಹಿಸುವದಂತೂ ಮಾನವನಿಗೆ ದುಸ್ತರವೇ ಆಗಿದೆ. ಹೀಗಿದ್ದರೂ ಯಾವದಕ್ಕೂ ಏನೂ ಉಪದ್ರವಕೊಡದೆ, ಅವನ್ನೆಲ್ಲ ಅಹಿಂಸೆಯಿಂದಲೇ ನಡೆಯಿಸಿಕೊಳ್ಳಬೇಕು. ದುರ್ಜನರು ಹೊಡೆದರೂ, ಬಿರುಸು ಡಿಯಾಡಿದರೂ, ಸಹಿಸಬೇಕು. ತನ್ನ ಒಡವೆಗಳನ್ನು ಅವರು ಒಯ್ದರೂ ಆತನ ಶಾಂತತೆಗೆ ಭಂಗ ಬರಕೂಡದು. ಶ್ರೀ ಬಸವಣ್ಣನವರು ಈ ಬಗೆಗೆ

"ಆಕಳನ್ನು ಕಳ್ಳರು ಒಯ್ದರೂ ಅದನ್ನು ಹುಡುಕಬೇಡ
ಅಲ್ಲಿದ್ದರೂ ಒಂದೇ ! ಇಲ್ಲಿದ್ದರೂ ಒಂದೇ ! ಎಲ್ಲಿದ್ದರೂ
ಕೂಡಲಸಂಗನಿಗೇ ಸಲ್ಲುವದು !! " ಎಂದು ಹೇಳಿದ್ದಾರೆ.

ದುರ್ಜನರು ತನ್ನನ್ನು ಮನಬಂದಂತೆ ಒದೆದು ಕಷ್ಟಕೊಟ್ಟರೂ, ಅದನ್ನು ನೆನೆಯದೆ ಮರೆತು ತಿರುಗಿ ಆ ಒದೆದವನಿಗೆ 'ನಿನ್ನ ಕಾಲಿಗೆ ಪೆಟ್ಟು ಹತ್ತಿ ನೋವಾಯಿತಲ್ಲ' ಎಂದು ಆತನ ಪಾದಸೇವೆ ಮಾಡಬೇಕು. ಕೆಟ್ಟ ಜನರು ತನ್ನ ಹೊದ್ದುಕೊಳ್ಳುವ ವಸ್ತ್ರವನ್ನು ಕಸಿದುಕೊಂಡಲ್ಲಿ 'ಅಪ್ಪಾ ನಿನಗೆ ಚಳಿಹತ್ತಿರಬಹುದು ಆದುದರಿಂದ ಈ ಅಂಗಿಯನ್ನು ಸಹ ತೆಗೆದುಕೋ' ಎಂದು ಸಂತೋಷದಿಂದ ಅದನ್ನು ಸಹ ಅರ್ಪಿಸಬೇಕು. ಶ್ರೀ ಬಸವಣ್ಣನವರಲ್ಲಿ ರಾತ್ರಿ ಕಳ್ಳರು ಸೇರಿ ಅವರ ಪತ್ನಿ ಗಂಗಾಂಬೆಯ ಆಭರಣಗಳನ್ನು ಬಲಾತ್ಕಾರದಿಂದ ಕಸಿದುಕೊಳ್ಳುವಾಗ ಆಕೆ ಬೇಗ ಕೊಡದೆ ಇದ್ದುದನ್ನು ನೋಡಿ, ಬಸವಣ್ಣನವರು "ಎಲಾ ಚಾಂಡಾಲಿ ಬೇಗ ಕೊಟ್ಟು ಬಿಡು. ಅವು ಅವರ ಒಡವೆ ಶಿವನ ಸೊಮ್ಮು ಶಿವನಿಗೇ ಸಲ್ಲಲಿ" ಎಂದು ಹೇಳಿ ಕೊಡಿಸಿ ಬಿಟ್ಟರು. ಇವರಂತೆಯೇ ಅಕ್ಕಮಹಾದೇವಿಯವರು — ದಿನಾಲು ಸಾವಿರಾರು ಜಲಚರಗಳನ್ನು ಘಾತಿಸುವ ಬೆಸ್ತನು ತನ್ನ ಮನೆಯಲ್ಲಿ ಒಂದು ಕೂಸು ಸತ್ತರೆ ಇಷ್ಟೇಕೆ ರೋದಿಸುವನು? ಎಂದು ಕೇಳಿದ್ದಾರೆ. ಇಲ್ಲಿ ತನ್ನ ಕೂಸಿನ ಪ್ರಾಣದಂತೆಯೇ ಎಲ್ಲ ಜಲಚರ ಪ್ರಾಣಿಗಳ ಜೀವವನ್ನೇಕೆ ಬಗೆಯಬಾರದು. ಎಂಬ ಪ್ರಾಣಲಿಂಗಿಯ ಅಂತಃಕರಣವನ್ನು ವ್ಯಕ್ತಗೊಳಿಸಿದ್ದಾರೆ. ಇಂತಹ ಉದಾಹರಣೆಗಳನ್ನು ಬೇಕಾದಷ್ಟು ಹೇಳಬಹುದು ಆದರೆ ಅವುಗಳ ಅವಶ್ಯಕತೆ ಇಲ್ಲ. ಅಗುಳಿನ ಪರೀಕ್ಷೆಯಿಂದಲೇ ಸಂಪೂರ್ಣ ಅನ್ನದ ಪರೀಕ್ಷೆಯಾಗುವಂತೆ, ಈಗ ಹೇಳಿದುದರ ಮೇಲಿಂದಲೇ ಪ್ರಾಣಲಿಂಗಿಯ ಆತ್ಮವತ್, ಸರ್ವಭೂತಾನಿ। ಎಂಬುದರ ಕಲ್ಪನೆಯು ಹೊಳೆಯಲು ಅಡ್ಡಿಯಿಲ್ಲ. ಪ್ರಾಣಲಿಂಗಿಯ ಶಿವಯೋಗ ಸಮಾಧಿಯು ಇದೇ

ಈಗ ನಮ್ಮ ದೇಶದಲ್ಲಿ ಕನಿಕರವಿಲ್ಲದೆ ಸಾಗುವ ಲಾಭಬಡಕತನ, ಲಂಚಗುಳಿತನ ಕಳ್ಳಪೇಟೆ ಇವೇ ಮೊದಲಾದ ನಿರ್ದಯತನದ ಕಾರ್ಯ ನಡೆಸಿ, ಬಡವರನ್ನು ಕೊಂದು ತಾವು ಮಾತ್ರ ಸಿರಿವಂತರಾಗುವ ಉದ್ಯೋಗದಲ್ಲಿ ಅದೆಷ್ಟು ಲಿಂಗಾಂಗಿಗಳು ನಿಮಗ್ನರಾಗಿರುವದಿಲ್ಲ? ಇವರಿಗೆ ತುಸುವಾದರೂ ಪ್ರಾಣಲಿಂಗಿಯ ವರ್ತನದ ಗಾಳಿಯು ಸೋಂಕಿರುವದೇ? ರಾಷ್ಟ್ರೀಯತ್ವದ ಭಾವನೆಯಾದರೂ, ಅವರ ಅಂತಃಕರಣದಲ್ಲಿ ಹಣಿಕಿಕ್ಕಿರುವದೇ? ಸಿದ್ಧಾಂತ ಶಿಖಾಮಣಿಯಲ್ಲಿ

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂದಯಾ ಕ್ಷಮಾ
ದಾನಂ ಪೂಜಾಂ ಜಪೋ ಧ್ಯಾನಂ ಇತೀ ಧರ್ಮಸ್ಯ ಸಂಗ್ರಹ: ॥

ಎಂದು ಹೇಳಿರುವರು. ಈ ಹತ್ತು ಸಂಗತಿಗಳನ್ನೆಲ್ಲ ಪ್ರಾಣಲಿಂಗಿಯಲ್ಲಿ ಅನಿವಾರ್ಯವಾಗಿ ವಾಸಿಸಬೇಕು. ತನ್ನಂತೆ ಪರರನ್ನು ಬಗೆಯುವವನು ಇವುಗಳನ್ನು ಬಹಿರಂಗದಲ್ಲಿ ಆಚರಿಸದಿದ್ದರೆ, ಆತನ ಪ್ರಾಣಲಿಂಗಿತ್ವವು ಅದು ಹೇಗೆ ಗೋಚರವಾಗುವದು? ಇದನ್ನೆಲ್ಲ ಅವಗಾಹನೆಗೆ ತಂದು ಕೊಂಡರೆ ಪ್ರಾಣಲಿಂಗಿತ್ವವೇನೂ ಸಹಜಾ ಸಹಜಿ ಲಭಿಸುವ ವಿಷಯ ಪ ಲ್ಲೆಂಬುದನ್ನು ಸುಜ್ಞರು ಊಹಿಸಬಹುದು.

ಪ್ರಾಣಲಿಂಗಿಯು ವಿಷಯವಾಗಿ ಬಸವಣ್ಣನವರ ಸೂತ್ರ ವಚನವು "ಪ್ರಾಣವು ಸ್ವಸ್ಥಿರವಾಗದನ್ನಕ್ಕರ ಪ್ರಾಣಲಿಂಗಿ ಎಂತೆಂಬೆ' ಎಂಬ ದದೆ. ಇದರ ಅರ್ಥವನ್ನು ಸುಲಭವಾಗಿಯೂ ಸಮೀಚೀನವಾಗಿಯೂ ಅರಿತು ಕೊಳ್ಳುವದು ದುಸ್ತರವೇ ಆಗಿದೆ. ಪ್ರಾಣವು ಸ್ವಸ್ಥಿರವಾಗಬೇಕು. ಎಂದರೇನೆಂಬುದೇ ವಿಚಾರ್ಯ ಮಾತು. ಪ್ರಾಣವೆಂದರೇನು ಎಂಬುದಂತೂ ಮೇಲೆ ಬಂದೇ ಇದೆ ಇನ್ನು ಸ್ವಸ್ಥಿರದ ಅರ್ಥವನ್ನು ಅರಿಯತಕ್ಕದ್ದದೆ ಸ್ವಸ್ಥಿರ ಇದು ಸಾಮಾಜಿಕ ಶಬ್ದವು. ಸ್ವ ದಲ್ಲಿ ಸ್ಥಿರವು= ಸ್ವಸ್ಥಿರವು. ಎಂದು ಅದರ ವಿಗ್ರಹ ಇದರ ಮೇಲಿಂದ ಪ್ರಾಣವು ಸ್ವ ದಲ್ಲಿ ಸ್ಥಿರವಾಗಿ ಉಳಿಯಬೇಕೆಂದು ಅಣ್ಣನವರು ಹೇಳುತ್ತಾರೆ. ಅದಾಗದಿದ್ದರೆ ಅವನು ನಿಜವಾದ ಪ್ರಾಣಲಿಂಗಿಯೇ ಅಲ್ಲ 'ಸ್ವ' ಅಂದರೆ ತಾನು (ಆತ್ಮವು ಪರಮಾತ್ಮನು) ಜೀವಾತ್ಮನೆನಿಸಿದ ಪ್ರಾಣಲಿಂಗವು ಪರಮಾತ್ಮನಲ್ಲಿ ಸ್ಥಿರ ವಾಗಿ ಬೆರೆದು ನಿಂತರೆ ಮಾತ್ರ ಪ್ರಾಣಲಿಂಗಿಯು ತನ್ನ ಕರ್ತವ್ಯ ಮುಗಿಸಿ ದಂತಾಗುವದು. ಹೀಗಾಗಲಿಕ್ಕೆ ಆ ಜೀವನ ದೇಹೋಪಾದಿಯು ಅಳಿದು ನಿರ್ಮಾಮವಾಗಿ ಅವನು ಶುದ್ಧ ಪಿಂಡವು ಅಂದರೆ ಅಂತರಾತ್ಮನಾಗಿ ಪರಿ ಶೋಭಿಸಬೇಕಾಗುವದ. ಹೀಗೆ ಪ್ರಾಣಲಿಂಗಿಯು ತನ್ನ ವಿಹಿತ ಕ್ರಿಯೆ ಗಳನ್ನು ಆಚರಿಸಬೇಕಾಗುವದು. ಪ್ರಸಾದಿಯಾದರೇನು ಸ್ಥಳಗೂಡಿದವ ನಾದರೇನು ಪ್ರಾಣಲಿಂಗಿಯಾದರೇನು ಎಲ್ಲರೂ ಬಹು ಎಚ್ಚರದಿಂದಲೇ ತಾವು ಅನುಸರಿಸುತ್ತಿರುವ ಸ್ಥಳದ ನಿಜಸ್ವರೂಪವನ್ನು ಸರಿಯಾದ ರೀತಿ ಯಲ್ಲಿ ಅರಿತುಕೊಂಡು, ಅದಕ್ಕೆ ಬೇಕಾದ ಜ್ಞಾನವನ್ನು ಪಡೆದು, ತದ ನುಸಾರ ವರ್ತಿಸುವದೇ ಅವರವರ ಲಿಂಗದ ಪೂಜೆ ಎನಿಸುವದು.

ಹಾಗೆ ಮಾಡದೆ ಬರಿಯ ಇಷ್ಟಲಿಂಗವನ್ನು ಮಾತ್ರ ಆಡಂಬರದಿಂದ ಪೂಜಿಸುತ್ತ ವ್ಯರ್ಥ ಕಾಲಕಳೆಯಬಾರದು. ಅಂತಹರನ್ನೇ ಕುರಿತು ಶ್ರೀ ಪ್ರಭುದೇವರು " ಅರುಹು ಪೂಜಿಸೆಂದು ಗುರುವು ಕರದಲ್ಲಿ ಕುರುಹು ಕೊಟ್ಟಿರಲು, ಆ ಅರುಹನ್ನೇ ಮರೆದು ಕುರುಹನ್ನೇ ಪೂಜಿಸುವ ನರಗುರಿಗಳ ಕಾಣಾ ಗುಹೇಶ್ವರಾ " ಎಂದು ನುಡಿದಿರುವರು. ಈ ವಚನವು ಸರ್ವ ಲಿಂಗಧಾರಿಗಳಿಗೆ ಸಮನಾಗಿಯೇ ಸಂಬಂಧಿಸುವದು.

ಸಾರಾಂಶವೇನೆಂದರೆ :— ಪ್ರಪಂಚದಲ್ಲಿ ಒಳಿತಾಗಿ ಅನುಭವ ಪಡೆದುಕೊಂಡು, ಅದೆಂತಹ ಪ್ರಸಂಗ ಒದಗಿದರೂ, ( ಪ್ರತ್ಯಕ್ಷ ಹುಲಿ ಹಾವುಗಳು ಮೈಮೇಲೆ ಅಡರಿ ಬಂದರೂ ) ಮನಸ್ಸನ್ನು ಸಹಸಾ ಚಂಚಲವಾಗಗೊಡದೆ ಯಾವಾಗಲೂ ಸಂಪೂರ್ಣ ಶಾಂತರೀತಿಯಲ್ಲಿಯೇ ಲೋಲಾಡುವದು ಪ್ರಾಣಲಿಂಗಿಯ ಮುಖ್ಯ ಕರ್ತವ್ಯವಾಗಿದೆ. ಇದಿಷ್ಟನ್ನು ಸಾಧಿಸಿದರೆ, ಅವನು ಸದ್‌ಗುರು ರೂಪದಿಂದ, ಜಗತ್ತಿನಲ್ಲಿ ಭಕ್ತೋದ್ಧಾರಾರ್ಥವಾಗಿ, ಸಂಚರಿಸುವ ಮಹಾ ಜಂಗಮ ( ಸ್ವಯ ಜಂಗಮ ) ನೇ ಆಗುವನು. ( ಜಂಗಮದಲ್ಲಿ ಬೆರೆತು ಏಕತ್ವ ಪಡೆಯುವನು. )

ಇದೆಲ್ಲ ವಿಚಾರಿಸಿದರೆ ಪ್ರಸಾದಿಸ್ಥಳಕ್ಕಿಂತಲೂ ಪ್ರಾಣಲಿಂಗಿಸ್ಥಳವು ವ್ಯಾಪಕವಾದುದದೆ ಎಂಬುದು ತಾನೇ ಸ್ಪಷ್ಟವಾಗುವದು.

ಪ್ರಾಣಲಿಂಗಿಯ ಅಂಗಸ್ಥಳಗಳು ಐದು. ಮತ್ತು ಲಿಂಗಸ್ಥಳಗಳು ಒಂಬತ್ತು ಇರುವವು. ಅವುಗಳ ವಿವರಣೆ —

## ಪ್ರಾಣಲಿಂಗಿಯ ಅಂಗಸ್ಥಳಗಳು.

( ೧ ) ಪ್ರಾಣಲಿಂಗಿಸ್ಥಳವು :— ಇದರಲ್ಲಿ ಪ್ರಾಣಲಿಂಗಿಯು ಆಚರಿಸತಕ್ಕ ರಿಷಯಗಳ ವಿವೇಚನೆಯದೆ –

( ೨ ) ಪ್ರಾಣಲಿಂಗಾರ್ಚನೆ ಸ್ಥಳ:— ಇದರಲ್ಲಿ ಪ್ರಾಣಲಿಂಗಾರ್ಚನೆಯನ್ನು ಅದು ಹೇಗೆ ಮಾಡುವದೆಂಬುದರ ವಿವೇಚನೆ ಇರುವದು. ಇದು ಬಹು ಮಹತ್ವದ್ದಾಗಿದೆ. ಪ್ರಾಣಲಿಂಗಾರ್ಚನೆ ಮಾಡುವ ರೀತಿಯೇ ತಿಳಿಯದಿದ್ದರೆ ಅದನ್ನು ಪೂಜಿಸುವದು ಅಶಕ್ಯವೇ ಸರಿ. ಇಲ್ಲಿ ಭಕ್ತನು

ತಾನು ಎಲ್ಲ ರೀತಿಯಲ್ಲಿ ಪರಿಶುದ್ಧತೆ ಪಡೆಯುವದಿರುತ್ತದೆ. ಮನವನ್ನು ಲಿಂಗಕ್ಕೆ ( ಸುಜ್ಞಾನಕ್ಕೆ ) ಅರ್ಪಿಸುವದದೆ. ಆ ಕಾರಣ ಅವನು ಶಾಂತಿಯೇ ಅಭಿಷೇಕ ಜಲ, ಅತಿ ಪಾವಿತ್ರ್ಯಕ್ಕೇರಿದ ಮನವೇ ವಿಭೂತಿ, ತ್ರಿಗುಣಾ ತೀತನಾಗುವದೇ ಬಿಲ್ವದಳ, ಸರ್ವದಾ ವಿವೇಕವನ್ನು ಧರಿಸುವದೇ ಗಂಧ, ಪ್ರಾಣವನ್ನು ಸುಜ್ಞಾನವೇ ಎಂದು ದೃಢವಾಗಿ ನಂಬುವದೇ ದೀಪ, ನಿರಂತರ ಹೊರಡುವ ಸುವಿಚಾರಗಳೇ ಧೂಪ, ಸದ್ವರ್ತನದಿಂದ ಲವಮಾ ತ್ರವೂ ಕದಲದಿರುವದೇ ಅಕ್ಷತೆ, ತನ್ನನ್ನು ಪ್ರಾಣಲಿಂಗದಲ್ಲಿ ಬೆರೆಸಿಬಿಡು ವದೇ ನೈವೇದ್ಯ ಇತ್ಯಾದಿಯಾಗಿ ಹೇಳಬಹುದು. ಈ ರೀತಿಯಾಗಿ ಭಕ್ತನು ತನ್ನಲ್ಲಿ ಪ್ರಗತಿಮಾಡಿಕೊಳ್ಳುತ್ತ ಸಾಗಬೇಕು.

( ೩ ) ಶಿವಯೋಗ ಸಮಾಧಿಸ್ಥಳ:— ಬಹ ಶಃ ಪತಂಜಲಿಯು ಹೇಳಿದ ಅಷ್ಟಾಂಗ ಯೋಗದಿಂದ ನಡೆಯುವದೇ ಶಿವಯೋಗ ಸಮಾಧಿ ಎಂದು ನಂಬುವದುಂಟು. ಆದರೆ ಅದು ಕೇವಲ ಗ್ರಾಹ್ಯವಾದುದೆಂದು ಪ್ರಮಥರು ನಂಬುವದಿಲ್ಲ. ಅವರು ಷಟ್‌ಸ್ಥಲ ಮಾರ್ಗದಿಂದ ನಡೆದು ಲಿಂಗಲೀಯವಾಗಬೇಕೆಂದೇ ಪ್ರತಿಪಾದಿಸಿರುವರು. ಇದನ್ನೇ ರಾಜಯೋಗ ವೆಂದು ಕರೆದಿರುವರು. ಪ್ರಾಣಾಯಾಮವು ಅತ್ಯಂತ ಕಷ್ಟಕರವಾದುದು. ಅದನ್ನು ಸಾಧಿಸುವದರಲ್ಲಿಯೇ ಬಹುಜನರು ತಮ್ಮ ಆಯುಷ್ಯವನ್ನೆ ಕಳೆದರೂ ಕೃತಕೃತ್ಯರಾಗಲಿಲ್ಲ. ಯಾರೋ ಒಬ್ಬಿಬ್ಬರು ಪಡೆದಿರಬಹುದು. ಇಂತಹ ಕ್ಲಿಷ್ಟ ಮಾರ್ಗವು ತ್ಯಾಜ್ಯವೇ ಸರಿ. ಅಂತೇ ನಮ್ಮ ಪ್ರಮಥರು ಅದನ್ನು ಹೆಚ್ಚಾಗಿ ಮನ್ನಿಸಿಲ್ಲ. ಇದಕ್ಕೆ ಮತ್ತು ಒಂದು ಕಾರಣ ವಿರಬ ಹುದೆಂದು ತೋರುತ್ತದೆ. ಅದು :— ಪರಮ ಪ್ರಯಾಸದಿಂದ ಪ್ರಾಣಾಯಾ ಮವನ್ನು ಸಾಧ್ಯ ಮಾಡಿಕೊಂಡು, ಒಮ್ಮೆ ಬ್ರಹ್ಮರಂಧ್ರದಮಾ ರ್ಗವಾಗಿ ಶಿರಸ್ಸಿನಲ್ಲಿ ಸೇರಲು, ಅಲ್ಲಿ ಒಂದು ದಿವ್ಯ ಪ್ರಕಾಶವು (ಲಿಂಗ ವು) ತೋರಿ ಮನಸ್ಸಿಗೆ ಅತ್ಯಂತ ಹರ್ಷವಾಗಿ, ಮಾನವನು ತೀರಪರ ವಶನಾಗಿ ಹೋಗುವರೆಂದು ಹೇಳುತ್ತಾರೆ ಆ ಆನಂದಕ್ಕೆ ಸಮಾ ನವಾದುದು ಬೇರೊಂದಿಲ್ಲವಂತೆ ಅದರಲ್ಲಿ ನಿಮಗ್ನನಾಗಿ ಕುಳಿತು ಬಿಡುವ ದೇ ಶಿವಯೋಗಸಮಾಧಿ ಎನ್ನಿಸುವದು. ಇಂತಹ ಸಮಾಧಿಸ್ಥನಾದ ಪುರುಷನು ಅದಕ್ಕೆ ಮೋಹಿತನಾಗಿ ಸಾವಿರಾರು ವರ್ಷ ಸಹ ಹಾಗೇ ಮೈಮರೆತು ಕುಳಿತು ಮೇಲೆ ವಲ್ಮೀಕ ( ಹುತ್ತು ) ಬೆಳೆದಂತೆ ಗ್ರಂಥಾಂತರ

ದಲ್ಲಿ ವರ್ಣನೆಗಳಿವೆ. ಇದೆಲ್ಲ ಸರಿ, ಹೀಗೇನೂ ಆನಂದ ಭರಿತನಾಗಿ ನಿಶ್ಚೇಷ್ಟ ಭರಿತನಾಗಿ ಬಿದ್ದುಕೊಂಡರೆ ಆದರಿಂದ ಲೋಕಕ್ಕಾಗುವ ಮಹದುಪಕಾರವೇನು ? ಜನತೆಗೆ ಅಲ್ಲದಿದ್ದರೂ ಅವನಿಗಾದರೂ ಅದು ಕಡೆತನಕ ಪೂರೈಸಲಾರದು. ಒಮ್ಮೆಯೊಮ್ಮೆ ಕಾರಣಾಂತರದಿಂದ, ಆ ಸಮಾಧಿಯು ವಿಸರ್ಜಿತವಾದರೆ ಅವನು ಪುನಃ ದೇಹಸ್ಮೃತಿಯನ್ನು ಪಡೆಯುವನೋ ಜಗತ್ತು ಮತ್ತೆ ದಕ್ಕೆ ಎಂದು ಮುಂದೆ ಬಂದು ನಿಂತೇ ಬಿಡುವದು ಈಗ ನಾವು ಸದ್ಯಕ್ಕೆ ಯೋಗಿವರ್ಯ ಅರವಿಂದರ ಉದಾಹರಣೆಯನ್ನು ತಕ್ಕೊಳ್ಳುವ, ಅವರು ಪ್ರತಿ ಮೂರು ತಿಂಗಳಿಗೊಮ್ಮೆ ಸಮಾಧಿಯನ್ನಿಳಿಸುವರು. ತುಸು ದಿನಗಳ ತರುವಾಯ ಮತ್ತೆ ಸಮಾಧಿ ಪಡೆಯುವರು. ಅಲ್ಲವೇ ಏಕಾಂತದಲ್ಲಿ ಮೌನವ್ರತವನ್ನಾರಂಭಿಸಿ ತಮ ಗಾಢ ಅನುಭವದ ಲೇಖಗಳ ಬರವಣಿಗೆಯನ್ನಾಗಲೀ, ಗ್ರಂಥ ವಿರಚನೆಯನ್ನಾಗಲೀ, ಕೈಕೊಳ್ಳುವರು. ಹೀಗೆಯೇ ಅವೆಷ್ಟುಕಾಲ ವರ್ತಿಸುವದು? ಅವರ ಸ್ವಂತ ಆತ್ಮಕ್ಕೆ ಪರಮಾನಂದವು ಲಭಿಸುತ್ತಿರಬಹುದು. ಗ್ರಂಥಗಳಿಂದ ಯೌಗಿಕ ಜಗತ್ತಿನ ಕೋಟಿ ಕಲ್ಯಾಣವಾದರೂ ಆಗುತ್ತಿದೆ. ಎನ್ನಲಿಕ್ಕಡ್ಡಿಯಿಲ್ಲ. ಆದರೆ ಸಾಮಾನ್ಯ ಜನತೆಯ ಆತ್ಮೋದ್ಧಾರವು, ಶಿವಶರಣರ ರೀತಿಯ ಬಹಿರಂಗ ಚರಣೆಯಿಂದ, ಮನದೊಳಚ್ಚೊತ್ತಿದಂತೆ ಮೂಡಿ ಅವರನ್ನು ಆನಂದ ಮುಗ್ಧರನ್ನುಮಾಡಿ ಹೇಗೆ ಸಾಧಿಸಲ್ಪಟ್ಟು ಬಹುದಿನ ಸಮಾಜದಲ್ಲಿ ಉಳಿದು ಬಿಡುವದೋ ಹಾಗೇನೂ ಇದು ಪ್ರಾಶಸ್ತ್ಯವನ್ನು ಪಡೆಯಲಾರದು. ಹಿಡಿದೂ ಬಿಟ್ಟೂ ಸಾಗುವ ಈ ಕ್ರಿಯೆಗಿಂತ ಷಟ್‌ಸ್ಥಲದ ಮಿಗಿಲಾದ ಜ್ಞಾನಮಾರ್ಗವಿಡಿದು ಪ್ರಾಣಲಿಂಗಿ ಶರಣಸ್ಥಲಗಳನ್ನೂ ಪಡೆದು ಜಗತಿನೊಡನೆ ಬೆರೆದು ಐಕ್ಯನೆನಿಸಿದರೆ ಮುಂದೆ ಅದು ಹೋಗುವ ಅಥವಾ ಅಗಲುವಸಂಭವವಿಲ್ಲೇ ಇಲ್ಲ. ಇಂತಹ ಬಹುಜನ ಶಿವಯೋಗಿಗಳು ಆಗಿಹೋದುದನ್ನು ಆಗುತ್ತಿರುವದನ್ನು ನಾವು ಕೇಳುತ್ತೇವೆ, ನೋಡುತ್ತೇವೆ. ಬಹಳ ಹಿಂದಣ ಕಾಲದವರು ಇರಲಿ, ಇತ್ತಿತ್ತಲಾಗಿ ನಿಜಗುಣಶಿವಯೋಗಿಗಳೂ ಸಿದ್ಧಾರೂಢರೂ, ಬಾಲಮಹಾಂತ ಸ್ವಾಮಿಗಳೂ, ಅಥಣಿಯ ಮುರುಗೇಂದ್ರ ಶಿವಯೋಗಿಗಳೂ, ಸೊನ್ನಲಾಪುರದ ವೀರೇಶ ಶಿವಶರಣರೂ, ಮುಂತಾದವರ ಸಂಖ್ಯೆಗೇನೂ ಕೊರತೆಇಲ್ಲ, ಆದುದರಿಂದ ನಮ್ಮ ಪ್ರಮುಥವರ್ಯರು ಷಟ್‌ಸ್ಥಲ ಮಾರ್ಗದಿಂದತೇ ಲಿಂಗಾಂಗ ಸಾಮರಸ್ಯ ಪಡೆಯುವದನ್ನೇ ಪುರಸ್ಕರಿಸಿದ್ದಾರೆ. ಇದು ಪಾತಾಂಜಲಿ ಯೋಗಕ್ಕಿಂತಲೂ

ಸುಲಭವಾದುದೂ, ದೃಢಮನಸ್ಸಿನಿಂದಲೂ ಸದಾ ಸದ್ಭಾವದಿ ದಲೂ ಪ್ರಯತ್ನಿಸುವವರಿಗೆಲ್ಲ ಸಾಧ್ಯವಾಗುವಂತಹದೂ ಇರುತ್ತದೆ. ಹೀಗೆಯೇ ವೀರಶೈವರೆಲ್ಲರೂ ಆಚರಿಸಿ ಶಿವಯೋಗ ಸಮಾಧಿ ಪಡೆಯತಕ್ಕದ್ದಿದೆ.

(೪) ಲಿಂಗ ನಿಜಸ್ಥಳಃ— ಅಂಗವು ಇಲ್ಲವೇ ಚೈತನ್ಯವು, ಒಬ್ಬ ಮನುಜನಲ್ಲಿಯೇ ಇಲ್ಲ ಅದು ಹೆಚ್ಚುಕಡಿಮೆ ಪ್ರಮಾಣದಿಂದ ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲಿಯೂ ಇರುವದು. ಆದುದರಿಂದ ನಿಜವಾಗಿ ಜಗತ್ತೇ ಲಿಂಗವಿರುವ ಸ್ಥಳವು ಎಂದು ಶಿವಜಗನ್ಮಯತೆಯನ್ನು ಇಲ್ಲಿ ವಿವರಿಸಿರುವರು.

(೫) ಅಂಗ ಲಿಂಗಸ್ಥಳಃ— ಆದರೂ ಆ ಲಿಂಗವು ಹೊರಗೆ ಪ್ರತ್ಯೇಕವಾಗಿ ಎಲ್ಲಿಯೂ ಇರುವದಿಲ್ಲ. ಒಂದು ಆಕಾರ ರೂಪಧರಿಸಿದ ಪದಾರ್ಥದಲ್ಲಿಯೇ ಒಳಗೆ ಅದೃಶ್ಯ ರೂಪದಿಂದ ಕೂಡಿಕೊಂಡಿರುವದು. ಮನುಷ್ಯನಲ್ಲಿಯೂ ಆತನ ದೇಹದೊಡನೆಯೇ ಕೂಡಿಕೊಂಡಿರುವದನ್ನು ನಾವು ನೋಡಿಯೇ ನೋಡುವೆವು. ಈ ಹೊರಗೆ ಮನುಷ್ಯಾಗಿರುವದೇ ಅಂಗ, ಒಳಗೆ ಅನಾಹತ ಚಕ್ರದಲ್ಲಿ ಸೂಕ್ಷ್ಮ ರೂಪದಿಂದ ಸುಜ್ಞಾನ ಸ್ವರೂಪವಾಗಿರುವ ಪ್ರಾಣವೇ ಲಿಂಗ, ಈ ರೀತಿ ಸ್ವಲ್ಪದಲ್ಲಿಯೇ ಅಂಗ ಲಿಂಗಸ್ಥಳದ ವಿಚಾರವಿರುವದು.

ಇನ್ನು ಪ್ರಾಣಲಿಂಗಿ ಸ್ಥಳದ ಒಂಬತ್ತು ಲಿಂಗಸ್ಥಳಗನ್ನು ಮುಂದೆ ಕ್ರಮವಾಗಿ ಕೊಡುವೆವು.

## ಪ್ರಾಣಲಿಂಗಿಯ ಲಿಂಗಸ್ಥಲಗಳು

(೧) ಜೀವಾತ್ಮಃ— ಶರೀರದ ಸಂಗತಿ ಫಲದಿಂದ ಅದ ಲ್ಲಿ ಪ್ರವೇಶಿಸಿದ ಅಂತರಾತ್ಮನು ಜೀವಾತ್ಮನೆನ್ನಿಸುವನೆಂಬುದು ಈ ಮೊದಲೇ ಹೇಳಲ್ಪಟ್ಟಿದೆಯಷ್ಟೇ. ಆ ಜೀವಾತ್ಮನ ಒಲವು ಸರ್ವಕಾಲವೂ ಶರೀರ ರಕ್ಷಣೆಗಾಗಿ ಜಗತ್ತಿನ ವಿಷಯಗಳನ್ನು ಭೋಗಿಸುವದೇ ಆಗಿಬಿಟ್ಟಿದೆ. ಆ ವಿಷಯಗಳನ್ನು ಎಷ್ಟು ಸಂಪಾದಿಸಿದರೂ ಭೋಗಿಸಿದರೂ ಅವನಿಗೆ ಸಾಕೆ

ನಿಸುವದಿಲ್ಲ. ಅವು ಅಶಾಶ್ವತವಾಗಿಯೂ ಅಲ್ಪ ಸುಖ ಮಹಾದುಃಖವ ನೀಯುವಂಥವುಗಳಾಗಿಯೂ ಇರುವವು ಆದುದರಿಂದ ಜೀವಾತ್ಮನು ಒಂದಿಲ್ಲೊಂದು ಬಗೆಯ ಚಿಂತೆಗೊಳಗಾಗಿ ಕೊರಗುತ್ತಿರುವನು.

(೨) ಅಂತರಾತ್ಮ :— ಇವನು ಜಗದ್ವ್ಯಾಪಿ ಪರಮಾತ್ಮನ ಒಂದಂಶ ರೂಪನು. ಪರಮಾತ್ಮನಲ್ಲಿರುವ ಎಲ್ಲ ಗುಣಧರ್ಮಗಳೂ ಇವ ನಲ್ಲಿರುವದರಿಂದ ಜ್ಞಾನ ಸ್ವರೂಪನೂ ಸರ್ವದಾ ತೃಪ್ತನೂ ಶಾಶ್ವತ ಸ್ವರೂಪನೂ ಆಗಿರುವನು. ಆಖಾತ ಉಪಸಾಗರಗಳಂತು ಮಹಾಸಾಗ ರದ ಭಾಗಗಳೋ ಬೆರಳು, ಮೂಗು, ಕಿವಿಗಳಂತು ದೇಹದ ವಿಭಾಗ ಗಳೋ ಹಾಗೆಯೇ ಈ ಅಂತರಾತ್ಮನು ಪರಮಾತ್ಮನೊಡನೆ ಹೊಂದಿ ಕೊಂಡು ಸದಾ ಏಕ ಸ್ವರೂಪದಲ್ಲಿಯೇ ಇರುವನು. ದೇಹವನ್ನು ಪ್ರವೇ ಶಿಸಿರುವದರಿಂದ ಈತನಿಗೆ ಅಂತರಾತ್ಮನೆಂಬ ಹೆಸರು ಬಂದಿತು.

(೩) ಪರಮಾತ್ಮ :- ಈತನೇ ಜಗತ್ತಿನ ಒಳಗೂ ಹೊರಗೂ ವ್ಯಾಪಿಸಿ ಬೆಳಗು ತೋರುವನು. ಹೊರಗೆ ತೋರುವ ಆಕಾರವೇ ಸ್ಥೂಲ ಜಗತ್ತು. ಒಳಗೆ ಸೂಕ್ಷ್ಮನಾಗಿ ಚೈತನ್ಯ ರೂಪದಿಂದ ಇರುವ ವಸ್ತುವೇ ಪರಮಾತ್ಮ. ಪರಮಾತ್ಮನು ಮಹಾಜ್ಞಾನ ಸ್ವರೂಪನು. ಅವನು ನಿತ್ಯನು. ಹೊರಗೆ ತೋರುವ ಆಕಾರವು ಒನ್ನಿಲ್ಲೊಮ್ಮೆ ನಾಶವಾಗಿ ಆ ಪರಮಾತ್ಮ ನಲ್ಲಿಯೇ ವಿಲೀನವಾಗುವದು. ಬರ್ಫಾಕಾರವು ಹೇಗೆ ನೀರಿನಿಂದಲೇ ಹುಟ್ಟಿ ಕರಗಿ ಹೇಗೆ ನೀರಾಗುವದೋ ಹಾಗೆಯೇ ಆಕಾರ ರೂಪ ಜಗ ತ್ತೆಲ್ಲ ನಾಶವಾಗಿ ಆ ಪರಮಾತ್ಮನಲ್ಲಿಯೇ ಸೇರುವದು. " ಯತ್ ದೃಷಂ ತತ್ ನಷ್ಟಮ್ " ಎಂಬ ಸಿದ್ಧಾಂತವು ನಿರ್ಬಾಧಿತವಾಗಿದೆ. ಜೀವರೂಪ ಚೈತನ್ಯಕ್ಕಿಂತಲೂ ಜ್ಞಾನರೂಪ ಚೈತನ್ಯವು ಮಿಗಿಲಾದುದು. ಜ್ಞಾನ ಪ್ರಕಾಶವು ಕೋಟಿ ಸೂರ್ಯಪ್ರಕಾಶಕ್ಕಿಂತಲೂ ಪ್ರಖರವದೆ. ಏಕೆಂದರೆ ಸೂರ್ಯ ಪ್ರಕಾಶದಿಂದ ಕಾಣಲಶಕ್ಯವಾದ ಅನೇಕ ಸಂಗತಿಗಳನ್ನು ಮನು ಷ್ಯನು ಜ್ಞಾನ ಪ್ರಕಾಶದಲ್ಲಿ ಕಾಣುವನೆಂಬ ಅನುಭವವು ಎಲ್ಲರಿಗೂ ಉಂಟು. ಈ ಮೂರೂ ಸ್ಥಳಗಳು ಆತ್ಮತ್ರಯ ಲಿಂಗವೆನ್ನಿಸುವವು.

( ೪ ) ನಿರ್ದೇಹಾಗಮಃ - ಪ್ರಸಾದಿಯು ಶಿವಲಿಂಗಕ್ಕೆ ಕಾಯಾರ್ಪಿತ ಮಾಡಿದ್ದರೂ ( ತನ್ನ ಶರೀರವನ್ನು ಅರ್ಪಿಸಿದ್ದರೂ ) ಅದು ಒಮ್ಮೆಲೆ ಸಾಧ್ಯವಾಗುವ ಸಂಗತಿಯಲ್ಲ. ನಡುನಡುವೆ ಅದು ತಲೆದೋರುತ್ತಲೇ ಇರುವದು ಆದುದರಿಂದ ಪ್ರಾಣಲಿಂಗಿಗೆ ಪರಿಪೂರ್ಣವಾಗಿ ದೇಹವನ್ನು ಮರೆತು ಅದು ಇಣಿಕಿಕ್ಕದಂತೆ ಮಾಡಲು ಮತ್ತೆ ಇಲ್ಲಿ ಅಜ್ಞಾಪಿಸಿದ್ದಾರೆ.

( ೫ ) ನಿರ್ಭಾವಾಗಮಃ— ಭಾವ ( ಮನ ) ವು ಸಹ ಪ್ರಸಾದಿಯಿಂದ ಲಿಂಗಕ್ಕೆ ಅರ್ಪಿಸಲ್ಪಟ್ಟಿದ್ದರೂ ಅದೂ ಕೂಡ ಆಗಾಗ್ಗೆ ಮುಂದೆ ಬಂದು ನಿಲ್ಲುತ್ತದೆ. ಆದಕಾರಣ ಇದನ್ನಾದರೂ ಸಂಪೂರ್ಣವಾಗಿ ಅಡಗಿಸಿಬಿಡುವದು ಅವಶ್ಯವದೆ.

( ೬ ) ನಷ್ಟಾಗಮಃ— ಈ ರೀತಿ ದೇಹವಾನಗಳು ನಾಶವಾದ ಜ್ಞಾನವು ತನ್ನ ಜಂಭ ಕೊಚ್ಚುತ್ತ ಅಹಂಕಾರವನ್ನು ಬಡಕಿಸಿಕೊಂಡು ಬಾಳುತ್ತಿರುತ್ತದೆ. ಹೀಗೆ ಅಜ್ಞಾನದಿಂದ ತಪ್ಪು ಆಗದಂತೆ ಒಳ್ಳೇ ಸಾವಧಾನದಿಂದ ಇರುವದು ಅಗತ್ಯವದೆ. ಈ ಪರಿಯು ಅಲಂಕಾರವೂ ಪೂರ್ಣ ಹೋದ ಹೊರತು ಪ್ರಾಣಲಿಂಗಿಯು ನಿರಂಹಕಾರಿ ಎಂದೆನಿಸಲಾರನು. ಆದಕಾರಣ ಆತನಿಗೆ ದ್ವಿರುಕ್ತಿಯಾದರೂ ಚಿಂತೆ ಇಲ್ಲೆಂದು ಈ ಸ್ಥಳಗಳು ಏರ್ಪಟ್ಟವೆ. ಹೀಗೆ ತನ್ನನ್ನು ಇಲ್ಲದಂತೆ ಮಾಡಿಕೊಳುವದೇ ನಷ್ಟಾಗಮವು.

ಈ ಮೂರಕ್ಕೂ ಕೂಡಿ ನಷ್ಟತ್ರಯ ಲಿಂಗವೆನ್ನಬಹುದು.

ಜೀವಾತ್ಮ ಅಂತರಾತ್ಮ ಪರಮಾತ್ಮರ ನಿಜಸ್ಥಿತಿಯನ್ನು ಅರಿತುಕೊಂಡು ತಾನು ಎಂಬ ಭ್ರಮೆಯನ್ನು ಪರಿಪೂರ್ಣವಾಗಿ ತೊಲಗಿಸಿದರೆ ಮಾತ್ರ ಪ್ರಸಾದಿತ್ವ ಕೈಗೂಡಲು ಅನುವಾಗುವದು. ಆ ಪ್ರಸಾದವು ಆದಿಪ್ರಸಾದ ಅಂತ್ಯಪ್ರಸಾದ ಸೇವ್ಯಪ್ರಸಾದ ಎಂದು ಮೂರು ವಿಧವಾಗಿರುವವು. ಇವನ್ನು ಪ್ರಸಾದ ಲಿಂಗತ್ರಯವೆಂದು ಕರೆಯುವರು.

( ೭ ) ಆದಿಪ್ರಸಾದಃ— ಜೀವಭಾವನೆಯನ್ನು ನೀಗಲಾಡಿಸಿವ, ಶುದ್ಧ ಸ್ವರುಪವನ್ನೈದಿದ, ಅಂತರಾತ್ಮತ್ವವು ಪ್ರಾಪ್ತವಾದರೆ ಅದೇ ಆದಿಪ್ರಸಾದವೆಂದೆನಿಸುವದು. ಇದಕ್ಕೇನೆ ಶುದ್ಧ ಪ್ರಸಾದವೆಂತಲೂ ಗುರುಪ್ರ

ಸಾದವೆಂತಲೂ ಸಹ ಹೆಸರುಗಳಿರವವು. ಪ್ರಸಾದವೆಂಡರೆ ಗುಣ. ರೂಪ, ನಾಮಾದಿಗಳನ್ನು ಕಳೆದು ಉಳಿಯುವ ಶೇಷವೆಂದೇ ಹಿಂದೆ ಹೇಳಿದುದನ್ನು ಸ್ಮರಣೆಗೆ ತರಬೇಕು.

( ೮ ) ಅಂತ್ಯ ಪ್ರಸಾದ:— ಅಂತರಾತ್ಮನು ಪರಿಶುದ್ಧನಾಗಿ ತನ್ನ ಮಹಾಸ್ವರೂಪವಾದ ಪರಮಾತ್ಮನಲ್ಲಿ ಸೇರ್ಪಡೆ ಹೊಂದುವದೇ ಅಂತ್ಯ ಪ್ರಸಾದವೆನ್ನಿಸುವದು. ಇಡನ್ನು ಸಿದ್ಧಪ್ರಸಾದವೆಂದೂ ಲಿಂಗಪ್ರಸಾದವೆಂದೂ ಸಂಬೋಧಿಸುವದುಂಟು.

( ೯ ) ಸೇವ್ಯ ಪ್ರಸಾದ:— ಅದಿ ಅಂತ್ಯ ಪ್ರಸಾದ ಸ್ವರೂಪವಾದವನೇ ಲೋಕಕ್ಕೆಲ್ಲ ಪೂಜ್ಯನೂ ಸೇವ್ಯನೂ ಆದ ದೇವಸ್ವರೂಪ ಹೊಂದುವನು. ಜನರೆಲ್ಲರೂ ಅವನನ್ನು ಸಾಕ್ಷಾತ್ ದೇವರೆಂದೇ ಭಾವಿಸುವರು. ಈತನೇ ಪ್ರಸಿದ್ಧ ಪ್ರಸಾದಿ ಎಂದೂ, ಜಂಗಮಪ್ರಸಾದಿ ಎಂದೂ ಕರೆಯಲ್ಪಡುವನು. ಈ ರೀತಿಯಾಗಿ ಪ್ರಸಾದತ್ರಯ ಸ್ವರೂಪನಾದವನೇ ಜಂಗಮ ಲಿಂಗದಲ್ಲಿ ಬೆರೆತು ಒಂದಾಗುವನು.

ಇಲ್ಲಿಗೆ ಒಂಬತ್ತು ಲಿಂಗಸ್ಥಳಗಳು ಮುಗಿದವು. ಮುಂದೆ ದೀಕ್ಷಾ ಪಾದೋದಕ ಶಿಕ್ಷಾ ಪಾದೋದಕ ಜ್ಞಾನಪಾದೋದಕವೆಂಬ ಮೂರು ಸ್ಥಳಗಳು ನಿರೂಪಿಸಲ್ಪಟ್ಟಿವೆ. ಇವು ಪ್ರಾಣಲಿಂಗಿಸ್ಥಳಕ್ಕೂ ಶರಣಸ್ಥಳಕ್ಕೂ ಮಧ್ಯಗತವಾದವುಗಳಿರುವದರಿಂದ, ಕೆಲವರು ಇವನ್ನು ಪ್ರಾಣಲಿಂಗಿಸ್ಥಳದಲ್ಲಿ ಎಣಿಸುವರು. ಬೇರೆ ಕೆಲವರು ಶರಣಸ್ಥಳದಲ್ಲಿ ಎಣಿಸುವರು. ಈಗ ಈ ಮೂವರ ವಿಷಯವಾಗಿ ವಿಚಾರಿಸುವಾ :–

ದೀಕ್ಷಾ ಪಾದೋದಕ :— ದೀಕ್ಷಾಗುರುವಿನ ಅನುಗ್ರಹವನ್ನು ಪಡೆದು, ಇಷ್ಟಲಿಂಗವನ್ನು ( ಕ್ರಿಯಾಲಿಂಗವನ್ನು ) ಸಂಪಾದಿಸಿ ಅದನ್ನು ಮನಮುಟ್ಟಿ ಪೂಜಿಸಿ, ಅನಿಷ್ಟ ಕ್ರಿಯೆಗಳನ್ನೆಲ್ಲ ತೊಲಗಿಸಿ, ಇಷ್ಟವೆಂದೆನಿಸುವ ಸತ್ಕ್ರಿಯೆ ( ಸದಾಚಾರ ) ಗಳನ್ನು ತನ್ನ ತನುವು ಅಳವಡಿಸಿಕೊಂಬುವದೇ ದೀಕ್ಷಾ ಪಾದೋದಕವು.

ಶಿಕ್ಷಾ ಪಾದೋದಕ :— ಶಿವಮಾರ್ಗದ ಶಿಕ್ಷಣವನ್ನು ಶಿಕ್ಷಾಗುರುವಿನ ಅನುಗ್ರಹ ಗಳಿಸಿ ಅವನಿಂದ ಭಾವಲಿಂಗ (ಅಥವಾ ಪ್ರಾಣಲಿಂಗ) ದೊರಕಿಸಿ, ಅದನ್ನು ಒಳಿತಾಗಿ ಪೂಜಿಸಿ (ಶಿವಮಾರ್ಗದ ರೀತಿ ನೀತಿಗಳನ್ನೆಲ್ಲ ಅಳವಡಿಸಿಕೊಂಡು) ಸರಿಯಾಗಿ ಹೊಂದಿ, ತನ್ನಭಾವವನ್ನು ತಿದ್ದಿಕೊಂಡು. (ಅದು ವಿಷಯಾಸೆಯಿಂದ ಜಗತ್ತಿನಕಡೆಗೆ ಹರಿಯುವವನ್ನು ಬಿಡಿಸಿ) ಅದು ಪ್ರಾಣಲಿಂಗ (ಸುಜ್ಞಾನ) ದಲ್ಲಿಯೇ ಕಲೆತು ಇರುವಂತೆ ಮಾಡಿಕೊಳ್ಳುವದೇ ಶಿಕ್ಷಾ ಪಾದೋದಕವು

ಜ್ಞಾನ ಪಾದೋದಕ :— ಶಿವಜ್ಞಾನ ಶಿವಾನುಭವಾದಿಗಳನ್ನು ತಾತ್ವಿಕ ಮಾರ್ಗದಿಂದ ಮಂತ್ರವಿಡಿಸು ಬೋಧಿಸುವವನೇ ಜ್ಞಾನ ಗುರುವು. ಅವನಿಂದ ಜ್ಞಾನಲಿಂಗ (ಸಾಧಾರಣ ಜನರು ತಿಳಿಯುವ ಭಾವಲಿಂಗ) ವನ್ನು ಪಡೆದು, ಅದನ್ನು ವಚನ ಶಾಸ್ತ್ರಗಳ ಅಭ್ಯಾಸದಿಂದಲೂ, ಗುರುವಾಕ್ಯಗಳಿಂದಲೂ ನಿರಂತರ ಪೂಜಿಸುತ್ತ ನಿಜಜ್ಞಾನವನ್ನು ಬಲಪಡಿಸಿಕೊಂಡು, "ಸೋಹಮ್ ಶಿವೋಹಮ್" ಎಂಬಸ್ಥಿತಿಗೆ ಮುಟ್ಟುವ ತೆ ತನ್ನನ್ನು ಮೇಲ್ಮಟ್ಟಕ್ಕೆ ಒಯ್ಯುವದೇ ಜ್ಞಾನಪಾದೋದಕವು.

ಈ ಬಗೆಯಾಗಿ ಅತ್ಯಂತ ಮಹತ್ವವಾಗಿರುವ ಈ ಪಾದೋದಕಗಳನ್ನು ಪಡೆಯುವದು, ವೀರಶೈವರಿಗೆಲ್ಲ ಬಹ. ಅವಶ್ಯವಾಗಿರುವದು. ಇವುಗಳ ಯೋಗದಿಂದಲೇ ಪ್ರಾಣಲಿಂಗಿಯು ಪ್ರಸಾದಿತ್ವ (ಜಂಗಮ ಲಿಂಗೈಕ್ಯತೆ) ಹೊಂದುವನು.

ಇಂತಹ ಮಹತ್ವದ ಪ್ರಾಣಲಿಂಗಿತ್ವವನ್ನು ಔದಾಸೀನ್ಯದಿಂದ ಅಲ್ಲಗಳೆಯುವದು ವಿಹಿತವಲ್ಲ. ಪ್ರಪಂಚದಲ್ಲಿ ನೊಂದು ಬೆಂದು ಕಷ್ಟ ಸಹಿಸಿ ಕೊನೆಗೆ ಭಕ್ತ (ಈಶ್ವರ) ನಾಗಿ, ಶ್ರಮವಹಿಸಿ ಮಹೇಶ್ವರತ್ವಹೊಂದಿ, ಬಳಿಕ ಪ್ರಸಾದಕ್ಕೆ ಕೈಚಾಚಿದ, ಪ್ರಸಾದಿ ಎಂಬ ಮಟ್ಟಲ ಸೇರಿ, ಅದನ್ನು ಸಂಪಾದಿಸಿದರು. ಮುಂದೆ ದಿಟ್ಟತನದಿಂದ ಪ್ರಾಣಲಿಂಗಿಯ ಮೆಟ್ಟಲವನೇರಲಿಕ್ಕೆ ಹಿಂದು ಮುಂದಾದರೆ ಮೊದಲುಪಟ್ಟ ಸಾಹಸವೆಲ್ಲ ವ್ಯರ್ಥವಾಗಿ ಹೋಗುವದಲ್ಲ! ಇದನ್ನು ನೆನೆದು ಪ್ರಸಾದಿಗಳು, ದೃಢಮನಸ್ಸಿನಿಂದ,

ನಿಸ್ಪೃಹತೆಯಲಿ ಪ್ರಾಣಲಿಂಗಿತ್ವ ಪಡೆಯುವದೇ ಶ್ರೇಯಸ್ಕರವಾದುದು. ಇದೊಂದನ್ನು ಸಾಧಿಸಿದರೆ, ಮುಂದಿನವೆರಡೂ ಸುಖವಾಗಿ ಸೇರುವವು. ಕಾರಣ ಶಕ್ಯವಿದ್ದ ತುಸುಜನ ಮಹನೀಯರೇ ಆಗಲೀ ಆ ಸ್ಥಳಕ್ಕೆ ಬಾಧ್ಯರಾಗುವದು ಒಳ್ಳೆಯದು. ಇದರಿಂದ ಸತ್ಯ ಶರಣರ ಪರಂಪರೆಯು, ಜೀವವಿಡಿದು ಸಮಾಜದಲ್ಲಿ ಬಾಳಿ ಉಳಿಯುವದು. ಇತ್ತ ನಿರಂಜನ ಜಂಗಮರೆನ್ನಿಸುವ ವಿರಕ್ತ ಮೂರ್ತಿಗಳೂ, ಸದ್ಭಕ್ತ ಶಿರೋಮಣಿಗಳೆನ್ನಿಸುವ ತಾತ್ವಿಕ ಭಕ್ತರೂ ಚಿತ್ತೈಸುವರೆಂದು ನಂಬಿರುವೆನು.

ಕಂದ || ಮೊಳೆ ಬಳ್ಳಿಯುಳಿವಳಿವುಗಳುಂ |
ತಳೆವುದು ಸಮರಸತೆ ಸರ್ವಮುಂ ಲಿಂಗದೊಳಂ ||
ತಿಳಿವಿನ ಲಿಂಗಾಂಗಗಳಿಗೆ |
ಹಳ ಹಳಿ ಸೋಂಕುಗಳಿಲ್ಲಿಹುದನುವು |



# ವಿಶ್ವಧರ್ಮದ ನೆಲೆಕಲೆ.

## ಲೇಖಾಂಕ ೪

( ಲೇಖಕ :— ಶ್ರೀಯುತ ಸಿ. ನಾ. ಮಹಾಂತಣ್ಣವರ ಹೂಗಾರ )

---

ವಿವೇಕಿಗಳು ವಿಚಾರ ಪೂರ್ವಕವಾಗಿ ವಿಶ್ವದ ಬಹಿರಂಗಗಳನ್ನು ನಿಟ್ಟಿಸಿ, ನಿಂದು ನಿರುಕಿಸಲು, ಅಣುಗಳು ತಮ್ಮ ತಮ್ಮ ಶಕ್ತಿಯಿಂದ ತಮ್ಮನ್ನು ಸಂರಕ್ಷಿಸಿಕೊಳ್ಳುತ್ತ ಒಂದನ್ನೊಂದು ಆಕರ್ಷಿಸಿ, ಅಂಟುತ್ತ ಅಪಾರವಾದ ವಿಶ್ವವೆಂದೆನ್ನಿಸಿಕೊಳ್ಳುತ್ತವೆ. ಮತ್ತು ವಿಶ್ವಗರ್ಭದಲ್ಲಿ ತಾವೇ ತಮ್ಮ ಅದ್ಭುತಶಕ್ತಿಯಿಂದ ಬೇರೆ ಬೇರೆ ರೂಪ, ರುಚಿ, ಮೃದು, ಕಠಿಣ ವರ್ಣಾದಿ ಗುಣಧರ್ಮ ಕರ್ಮಾದಿಗಳಿಂದ ಬೇರೆ ಬೇರೆ ನಾಮಗಳನಾಂತು, ತಮ್ಮ ರೂಪಾದ ಮುತ್ತು ರತ್ನ ವಜ್ರ ವೈಡೂರ್ಯ ಬಂಗಾರ ಬೆಳ್ಳಿ ತಾಮ್ರ ಕಬ್ಬಿಣ ಮೊದಲಾದವುಗಳನ್ನು ಒದಗಿಸುವವಲ್ಲದೆ, ಒಮ್ಮೊಮ್ಮೆ ಕ್ಷೋಭಿಸಿದಾಗ ಲಾವಾರಸವಾಗಿ ಜ್ವಾಲಾಮುಖಿದ್ವಾರಾ ಹೊರಬಿದ್ದು, ಪರ್ವತಗಳಾಗಿ ಲೋಹಗಳಾಗಿ ಕಲ್ಲಿದ್ದಲಿ ಕಲ್ಲೆಣ್ಣೆ ಪೆಟ್ರೋಲ ಕ್ರೋಡಾಯಿಲಗಳಾಗಿ, ಕಾಲಾಂತರದಿಂದ ಜೀವ ಕೋಟಿಗೆ ಉಪಯೋಗವಾಗುವದಲ್ಲದೆ, ಶಾಂತವಿದ್ದಾಗ ಮಹಾಸಾಗರವಾಗಿ ಮಹಾಮಳೆಯನ್ನು ಸುರಿಸಿ, ನದಿ, ಸರೋವರ ಉಪಸಾಗರಾದಿ ನಾಮವನಾಂತು ಉತ್ತಮ ಭೂಮಿಯೊಳು ಫಲವೃಕ್ಷಗಳೂ ಹೂ ಗಿಡಗಳೂ ಔಷಧಿಗಳೂ ಪೈರುಗಳೂ ಉಂಟಾಗಿ, ಚಿತ್ರವಿಚಿತ್ರವಾದ ಆಕಾರ ಬಣ್ಣ ರುಚಿ ಸುಗಂಧಗಳನ್ನು ಬೀರುವವು. ಹಾಗು ವಿಶ್ವನಾಥನ ಪಂಚಕೃತ್ಯಗಳೆನಿಸಿದ ಉತ್ಪತ್ತಿ, ಸ್ಥಿತಿ, ಲಯ, ತಿರೋಧಾನ ಅನುಗ್ರಹಗಳಿಗೆ ಅನುಕೂಲವಾಗುವವು. ಅಹಹಾ! ಒಂದೇ ಒಂದು ಅಣುವು ತನ್ನ ಅದ್ಭುತಶಕ್ತಿಯಿಂದ ತಾನೊಂದೇಯಾಗಿದೆ ಉಳಿದ ಅಣುಗಳೊಡನೆ ಸಹಕರಿಸಿ ಸದೃಢವಾಗಿ ಸವಿಸ್ತಾರವಾದ ವಿಶ್ವವಾಗಿ ವಿರಾಜಿಸುತ್ತದಲ್ಲ? ಇದಕ್ಕೆ ಯಾವ ಕಾರಣಾಗಳಿರಬಹುದು? ಒಡೆದು ಒಂಟಿಗನಾಗಿರೆನೆಂಬುದೇ ಅದರ ಶೀಲ; ಒಂದು ಅಣುವು ಮತ್ತೊಂದನ್ನು ದೂರೀಕರಿಸದೆ ಅಂದರೆ ನಾಶಮಾಡದೆ ಇರು

ವವೇ ಅದರ ಧರ್ಮವು. ಇಷ್ಟೇ ಅಲ್ಲ. ಒಂದನ್ನೊಂದು ಎಳೆಯಲು ತನ್ನ ತನ್ನ ಸ್ನೇಹಾಕರ್ಷಣ ಶಕ್ತಿಯೊಡನೆ ಸಂಸಿದ್ಧವಾಗಿರುವವೇ ವ್ರತ. ಕಾಲಸ್ಥಿತಿ ವಸ್ತುಗಳಿಗನುಸಾರವಾಗಿ ನಿಯಂತ್ರಿತವಾಗಿ ುವದೇ ನೇಮ. ಅಂದ ಬಳಿಕ ವಿಶ್ವದ ಇರುವಿಕೆಗೆ ಹಾಸ ಏನು ?

ಇಂಥ ವಿಶ್ವಶಾಂತಿಗೆ ಕಾರಣವಾದ ವಿಶ್ವಧರ್ಮಕರ್ಮಗುಣಶಕ್ತಿಗಳಲ್ಲಿ ಅಡಕವಾದ ವಿಶ್ವನಾಥನನ್ನು ಅರಿದು ಆಚರಿಸಿದ್ದಾದರೆ ಸ್ಥಿರವಾದ ಶಾಂತಿ ಸುಖಗಳು ದೊರೆಯದೆ ಇರವು. ಈ ವಿಶ್ವದ ೮೪ ಲಕ್ಷ ಜೀವ ರಾಶಿಗಳೊಳಗೆ ಜ್ಞಾನ ಜ್ಯೋತಿಯಿಂದ ಬೆಳಗುವ ಪರಮಾತ್ಮನು ಮಾನವ ಕೋಟಿಯಲ್ಲಿ ಹೆಚ್ಚು ವ್ಯಕ್ತವಾಗಿ ಪ್ರಕಾಶಿಸುವನು. ಇದನ್ನರಿತ ಸಾಮಾನ್ಯ ಜನಾಂಗದ ಮುಖದಲ್ಲಿ ಸಹ "ಮಣ್ಣು ಬಿಟ್ಟು ಮಡಿಕೆಯಿಲ್ಲ ತನ್ನ ಬಿಟ್ಟು ದೇವರಿಲ್ಲ." ಎಂಬ ಅನುಭವೋಕ್ತಿಯು ಅಲಿದಾಡುತ್ತಲಿದೆ. ಶ್ರೀ. ಬಸವಕಾಲದಲ್ಲಿಯ ಸಾಮಾನ್ಯ ಜನರು ಸಹ ವಿಶ್ವಧರ್ಮದ ಮರ್ಮವರಿತು, ಮಹಾನಂದದಲ್ಲಿ ಮಗ್ನರಾಗುತ್ತಿದ್ದರೆಂಬುದು, ಆದ್ಯರ ವಚನಾನುಭವಗಳಿಂದ ವ್ಯಕ್ತವಾಗುತ್ತದೆ. ತಾಯಿಯು ಹಸುಗೂಸಿಗೆ ಆರಂಭದಲ್ಲಿ ಹಾಲು, ಹಲ್ಲು ಬರಹತ್ತಿದಾಗ ಹಾಲೂ ಅನ್ನ, ಬರಬರುತ್ತ ಕಜ್ಜ ಕಾಯಿಪಲ್ಯಗಳನ್ನು ಉಣ್ಣಿಸಿ ಉಜ್ವಲಗೊಳಿಸುವಂತೆ, ನಮ್ಮ ಬಸವಾದಿ ಪ್ರಮಥರಾಚರಣೆಯ ಶಿವಶರಣರು ಇಂದಿನ ವರೆಗೂ ಗುಪ್ತವಾಗಿದ್ದು ಎಂಥ ಮಂದ ಮಾನುಜರಲ್ಲಿಯೂ ಭಕ್ತಿ ಭಾವ ಶಿವಭಾವನೆಗಳನ್ನು ತಮ್ಮ ತಮ್ಮ ಮನೆ ಮಠಗಳೊಳಗೆ ಶಿವಾನುಭವ ಮಂಟಪವನ್ನು ಹೋಲುವ ಶಿವಶರಣರ ಕೈಬರಹದ ವಚನಗಳನ್ನು ಕ್ವಚಿತ್ತಾಗಿ ಓದುತ ಹೇಳುತ್ತ ಬಂದಿರುವದು ಇಂದಿಗೆ ಐವತ್ತು ವರ್ಷದ ಹಿಂದಿನ ಮಾತಾದರೂ ಈಗ್ಯೂ ಅಚ್ಚಾದ ವಚನಾನುಭವಗಳ್ನು ಮಾಡುವ ತಂಡಗಳ ಠಾಣಗಳನ್ನು ಅಲ್ಲಲ್ಲಿ ನೋಡಬಹುದ. ಸಾಮಾನ್ಯಜನರಲ್ಲಿ ವೀರಶೈವ ತತ್ವಗಳನ್ನು ಉಪದೇಶಿಸುವದು ಬಹು ಸುಲಭ. ಆದರೆ ಅಂಥ ಶರಣನಲ್ಲಿ ನಿಸ್ಸ್ವಾರ್ಥತೆ ಪರೋಪಕಾರಗಳೂ, ವಿಶ್ವಾಸ ವಿನಯಗಳೂ ಮಾತ್ರ ನೆಲೆಗೊಂಡಿರಬೇಕು. ಶಿವಶರಣರು ಹೇಳಿದ ಧರ್ಮ, ಶೀಲ, ವ್ರತ ನೇಮ, ಆಚರಣೆಗಳು ಜನಸಾಮಾನ್ಯರಲ್ಲಿ ಏಡಿಯು ಹಿಡಿತವಿದ್ದಂತೆ; ಹಿಡಿದರೆ ಬಿಡುವದಿಲ್ಲ. ಬಿಟ್ಟರೆ ಹಿಡಿಯುವದಿಲ್ಲ.

ವಿಶ್ವದಲ್ಲಿ ಪ್ರಥಃಕರಣವಾದ ಅಣುವಿನ ಅನುವನ್ನರಿತ ಶಿವಶರಣರು ಮಾನವ ಕೋಟಿಯಲ್ಲಿ ಒಕ್ಕಟ್ಟು, ಸಹಕಾರ, ಸಹನಶೀಲತೆ, ದಯೆ, ನಿಯತವಾದ ಸತ್ಕರ್ಮಗಳಿಂದ ಶಾಂತಿ ಸುಖಗಳು ನೆಲೆಗೊಳ್ಳಲು ಶೀಲ ವ್ರತ ನೇಮಗಳನ್ನು ಕಂಡು ಹಿಡಿದು ಅವುಗಳನ್ನು ವಿಶ್ವಧರ್ಮದ ಬಳಕೆಯಲ್ಲಿ ತಂದಿದ್ದಾರೆ. ವಿಶ್ವಕ್ಕೆ ಅಣುಶಕ್ತಿಯ ಆಚರಣೆಯು ಎಷ್ಟು ಅವಶ್ಯವೋ ಅಷ್ಟೇ ಸಮಾಜಕ್ಕೆ ವ್ಯಕ್ತಿಯ ಆಚರಣೆಯು ಅವಶ್ಯವಿದೆ. ಒಬ್ಬ ವ್ಯಕ್ತಿಯು ಸಮಾಜದಿಂದ ಸಿಡಿದು ಹೋಗಿ ಏಕಾಂಗಿಯಾಗಿ ಗುಹೆ ಗಂಹರಗಳಲ್ಲಿ ಆತ್ಮೋನ್ನತಿಯನ್ನು ಮಾಡಿಕೊಳ್ಳಬಹುದು. ಆದರೆ ಅತನ ಆತ್ಮಸಂರಕ್ಷಣೆಗೆ ಆತಂಕಗಳು ಪರಂಪರೆಯಾಗಿ ಬರಬಹುದು. ಅಂಥವನು ಸಹ ಸಮಾಜದಲ್ಲಿ ಸೇರ್ಪಡೆಯಾಗುವದು ಸಮರ್ಪಕವೆಂದು ಮನಗಾಣಬಹುದು. ಆದ್ದರಿಂದ ಸಮಾಜಗಟ್ಟಿಕೊಂಡು ಇರಲು ನೀತಿಯು ನೆಲಗಟ್ಟೇ ಆದಿಯೆಂಬದು ಅನುಭವದ ಸಂಗತಿಯಾಗಿದೆ. ಇದನ್ನರಿತು ಶಿವಶರಣರು ಸಮಾಜದಿಂದ ಭಿನ್ನವಾಗಿರದೆ ನೀತಿಯನ್ನು ಭೀತಿಯಿಲ್ಲದೆ ಆಚರಿಸಿ ನೀತಿಯ ವಚನಗಳನ್ನು ಪರಿಪರಿಯಿಂದ ಪ್ರಮಾಣಿಸಿ ಪ್ರಸಾರಗೊಳಿಸಿದ್ದಾರೆ. ನೀತಿಯ ವಚನಗಳಲ್ಲಿ ಸತ್ಯ ಅಹಿಂಸೆ, ದಯೆ, ಸತ್ಕಾಯಕ, ಪ್ರಾಮಾಣಿಕತನ, ನಿಯಮಿತತನಗಳಿಗೆ ಹೆಚ್ಚು ಮಹತ್ವವನ್ನು ಕೊಟ್ಟು ವಿಶ್ವದ ಅಣುಶಕ್ತಿಯಲ್ಲಿ ತೋರಿಬರುವ ಕ್ರಿಯಾಶಕ್ತಿ, ಆಕರ್ಷಣಶಕ್ತಿ, ಅಂಟಿಕೊಳ್ಳುವ ( ಅಪ್ಪಿಕೊಳ್ಳುವ ) ಶಕ್ತಿಗಳನ್ನರಿತು, ಸನ್ನೀತಿಯಿಂದೊಡಗೂಡಿದ ಸತ್ಕಾಯಕ ಸತ್ಕ್ರಿಯಾಚಾರಗಳು ಸಕಾಲದಲ್ಲಿ ಸಾಗುವದೇ ನೇಮ, ಪರಹಿಂಸೆಯ ಗೈಯದಿರುವದೇ ಧರ್ಮ, ಪರಸತಿಯ ಬಯಸದೆ ಪರಧನವ ತುಡುಕದೆ ಪರದೈವದಿಚ್ಛೆ ನಡೆಯದೆ ಗುರುಲಿಂಗಜಂಗಮಕ್ಕೆ ಪರದಾಸನಾಗುವದೇ ವ್ರತ. ಸದ್ಭಕ್ತಿ, ಸದಯಾಂತಃಕರಣಿಯಾಗಿ ಸರ್ವಾತ್ಮಸಂಗಿಯಾಗಿರುವದೇ ಶೀಲ. ಎಂಬವುಗಳನ್ನು ವಿಶ್ವಧರ್ಮದಲ್ಲಿ ಇಂಬಿಟ್ಟು ಸಮಾಜದ ಘಟಕಗಳಾದ ಪ್ರತಿಯೊಂದು ವ್ಯಕ್ತಿಯಲ್ಲಿ ನೀತಿ ಕ್ರಿಯಾಚಾರಗಳೂ, ಶಿವಮಂತ್ರ ಶಿವಧ್ಯಾನ ಶಿವಯೋಗಗಳೂ, ಶಿವಭಕ್ತಿ, ಶಿವಜ್ಞಾನ ಶಿವಸಮಾಧಿಗಳೂ ನಿರಾತಂಕವಾಗಿ ನಡೆಯಲು ವಿಶ್ವಧರ್ಮವೆಂದೆನಿಸುವ ವೀರಶೈವದಲ್ಲಿ ಹಾಸುಹೊಕ್ಕಿನಂತೆ ಹೆಣೆದು ಅಣಿಮಾಡಿದ್ದಾರೆ

ಶ್ರೀ ಗುರುವು ತನ್ನ ಶಿಷ್ಯನಿಗೆ ಸಪ್ತತ್ರಯ ದೀಕ್ಷೆಗಳನ್ನು ಮಾಡು ವನಷ್ಟೇ. ಇದರಿಂದ ತನುಶುದ್ಧ, ಮನಶುದ್ಧ, ಭಾವಶುದ್ಧ, ಕಣ್ಣುಶುದ್ಧ ಕಾಲುಶುದ್ಧ, ಕೈ ಶುದ್ಧ, ಜ್ಞಾನಶುದ್ಧಗಳಾಗಿ ಲಿಂಗದ ನಡೆನುಡಿಗಳುಂಟಾಗಿ, ತನುವಿನಲ್ಲಿ ಗುರುಕ್ರಿಯೆ, ಕರ ಮನ ಭಾವಗಳಲ್ಲಿ ಲಿಂಗಪೂಜೆ, ಧ್ಯಾನಾನುಸಂಧಾನ, ಆಚಾರದಲ್ಲಿ ಜಂಗಮಾರ್ಚನೆ, ಕ್ರಿಯೆಯಲ್ಲಿ ಪಾದೋದಕ ಪ್ರಸಾದ, ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿ. ವಾಕ್ಕಿನಲ್ಲಿ ಮಂತ್ರಗಳು ಮನನವಾಗಿ, ತನುವಿಲ್ಲದ ಮನವಿಲ್ಲದ, ಭಾವವಿಲ್ಲದ, ಕರಣವಿಲ್ಲದ, ಕಾಯವಿಲ್ಲದ, ಕಲ್ಪಿತವಿಲ್ಲದ, ಕರ್ಮವಿಲ್ಲದವನಾಗಿ, ಅರಿಷಡ್ವರ್ಗಂಗಳನರಿಯದೆ, ಮದಗಳನೆಂಟನಂಟಿದೆ, ವ್ಯಸನಂಗಳಲ್ಲಿ ಸುಸುಳದೆ ಅಹಂಕಾರ ಮಮಕಾರ ಆಶೆ ಆಮಿಷಗಳಿಂದ ಅತಿದೂರನಾಗಿ, ವಿಶ್ವವನ್ನು ವ್ಯಾಪಿಸಿದ ವಿಶ್ವಕುಟುಂಬಿಯಲ್ಲಿ ವಿರಮಿಸುವನು. ದೀಕ್ಷಾತ್ರಯಂಗಳನ್ನು ಹೊಂದಿದ ಮಾತ್ರದಿಂದ ಸದ್ಭಕ್ತಾಚರಣೆಯು ಆಳವಟ್ಟಿತೆಂದು ಭಾವಿಸಲಾಗದು. ನೋಸಿದ ಹಿತ್ತಾಳಿಯಿಂದ ಮಾಡಿದ ಹಿತ್ತಾಳಿಯ ತಿರುಗಣಿಯ ತಂಬಿಗೆಯನ್ನು ಖರೀದಿ ಮಾಡಿ ತಂದು ಅದನ್ನು ದಿನಾಲು ನಿಯಮಿತವಾಗಿ ಬೆಳಗದಿದ್ದರೆ ಅದರ ತೇಜವು ಉಳಿಯಬಹುದೇ ? ದೀಕ್ಷಾಬದ್ಧನು ಇಡುತೊಡಮಾಡಗಲಿತು ನೀತಿ ಕ್ರಿಯಾಚಾರಾದಿಗಳನ್ನು ಅನುಸರಿಸದಿದ್ದರೆ ಆತನಲ್ಲಿ ಒಂದೊಂದೇ ದುರ್ಗುಣಗಳು ಸೇರಲನುವಾಗುವವು. ಹೊಲ ಹಸನಗೈದು ಮಳೆಗಾಲದಲ್ಲಿ ಹದಕ್ಕೆ ಸರಿಯಾಗಿ ಬಿತ್ತಿದ ಬೆಳೆಯಲ್ಲಿ ಕಸಮೂಡಿದಾಗ ತೆಗೆಯದಿದ್ದರೆ ಬೆಳೆ ಕುಗ್ಗಿ ಕಸದ ಕಸುವು ಅಸಿಮಿಸಿಯಿಲ್ಲದೆ ಬೆಳೆಯುವದು ಆದ್ದರಿಂದ ವಿಶ್ವಧರ್ಮವನ್ನನುಸರಿಸಿದ ಭಕ್ತನು ಭಕ್ತಾಚಾರವನ್ನರಿದು ಆಚರಿಸುತ್ತಲೇ ಇರಬೇಕು ಇದನ್ನರಿತು ಶಿವಶರಣರು ಸಣ್ಣ ದೊಡ್ಡ ಗ್ರಾಮಗಳಲ್ಲಿ ಮಠಸ್ಥಾಪನೆಯನ್ನು ಮಾಡಿರುವರು ಈ ಮಠಾಧಿಕಾರಿಗಳು ಸಮಾಜದ ವ್ಯಕ್ತಿಗಳಿಗೆ ಆಗಾಗ್ಗೆ ಪುರಾಣ ಪ್ರವಚನಗಳಿಂದಲೂ ತಮ್ಮ ಸದ್ವರ್ತನದಿಂದಲೂ ಒಕ್ಕಟ್ಟಿನ ಕಟ್ಟನ್ನೂ ಸಹಕಾರದ ಮೆಟ್ಟನ್ನೂ ಅನುಭವದ ಗುಟ್ಟನ್ನೂ ಅರುಹುತ್ತ ವಿಶ್ವ ಧರ್ಮೋಪದೇಶದಿಂದ ಸಮಾಜೋನ್ನತಿಯನ್ನು ಮಾಡುವರು.

ಒಬ್ಬನಿಂದ ಊರು ಪಾವನ, ಒಬ್ಬನಿಂದ ಕೇರಿ ಪಾವನ, ಎಂಬ ಅನುಭವದ ಮಾತಿನಂತೆ ಒಬ್ಬ ಅಯ್ಯನವರಿಂದ ಸಮಾಜದಲ್ಲಿ ಶೀಲ,

ವ್ರತ, ನೇಮಗಳಿಂದೊಡಗೂಡಿದ ವಿಶ್ವಧರ್ಮಾಚರಣೆಯು ಸಾಗುತ ಬಂದಿದೆ, ಸಾಗುತ್ತಲಿದೆ, ಮುಂದಾದರೂ ಸಾಗುವ ಭರವಸವಿದೆ. ಆದರೆ ಆ ಅಯ್ಯನವರಲ್ಲಿ ಕ್ರಿಯಾಚಾರಗಳು ನೆಲೆಗೊಂಡು ನಿಂತು ಬೋಧಿಸುವ ಕಲೆಯೂ ಅವಗತವಾಗಿರಬೇಕು. ಈ ಅಯ್ಯನವರ ಕರುಣಾರಸವಾದ ಕಂಣ ಪ್ರಸಾದಗಳು ಒಂದು ಅಣುವು ಮಾತ್ರೊಂದನ್ನು ಆಕರ್ಷಿಸುವಂತೆ ಸುತ್ತಲಿನ ಆತ್ಮರನ್ನು ಆಲಿಂಗಿಸುವಷ್ಟು ಸಿದ್ಧಿಯನ್ನು ಪಡೆದಿರಬೇಕು. ಮಠದಲ್ಲಿ ನುಸಿಗಡಿದು ನುಗ್ಗಾದ ಪುರಾತನ ವಚನಗಳ ಗಂಟನ್ನು ಬಿಚ್ಚದೆ, ತನುವಿನ ಗಳವಳ, ಮನದ ಆಳಿ, ಜೀವಭಾವದ ಭ್ರಾಂತಿಯೊಳು ಮುಳುಗಿದಲ್ಲಿ ಸಮಾಜೋದ್ಧಾರವು ಆಗುವ ಬಗೆಯೆಂತು ? ಆದರೆ ಹೀಗಾಗಲು ಅಯ್ಯನವರ ತಪ್ಪೇ ಎಂದು ಒಪ್ಪಿಕೊಳ್ಳಲು ಬಾರದು ; ಅವನತ ಸ್ಥಿತಿಗೆ ಭಕ್ತರೂ ಕಾರಣರೆಂದು ಕೈಯೆತ್ತಿ ಹೇಳಬಹುದು. ವೀರಶೈವರಲ್ಲಿ ಪಂಗಡ ಭೇದಗಳನ್ನು ಬೆಳಸುತ್ತ ಪಂಗಡ ಪಂಗಡಗಳಲ್ಲಿ ಭೇದೋಪಾಯವನ್ನು ಉಪಯೋಗಿಸಿ, ಗುರುಸ್ಥಲ ಮಠಗಳಲ್ಲಿ ಗುರು ವರ್ಗ, ಶಿಷ್ಯವರ್ಗದ್ದು ಮಠಗಳೆಂದು ಭೇದ ಮಾಡಿ ಆಯಾ ಮಠಗಳಲ್ಲಿ ಅಶಿಕ್ಷಿತ ಹಾಗು ಅನನುಭವಿಕ ಶಿಷ್ಯ ವರ್ಗದ ಮಠಾಧಿಕಾರವನ್ನು ಮಾಡುವ ಪ್ರಮುಖ ಭಕ್ತರೇ ಮೂಲ ಕಾರಣರೆಂದು ಮೂರ ಮನೆಯ ಹಳ್ಳಿಯ ಜನರಿಗೆ ಸಹ ಗೊತ್ತಾಗಿದೆ. ಆದರೆ ಇತ್ತಿತ್ತ ಶಿವಶರಣರ ವಚನಗಳನ್ನು ಓದಿ ಜಾತಿಭೇದದ ಬೇರು ಸಹ ವೀರಶೈವ ಮತತತ್ತ್ವಗಳಲ್ಲಿ ಇಲ್ಲೆಂಬ ಅರಿಹು ಉಂಟಾದದ್ದು ಶುಭಚಿಹ್ನವೆಂದು ಹೇಳಬಹುದು.

ಈ ವರೆಗೆ ಸದ್ಭಕ್ತ ಸದ್ಗುರುಗಳಿಂದ ವಿಶ್ವಧರ್ಮವು ಅಷ್ಟೊಂದು ಆಕುಂಚನವಾಗದೆ ಬಸವಾದಿ ಪ್ರಮಥರ ಗುಪ್ತಾಚರಣೆಯಿಂದಲೂ ಅಷ್ಟಾವರಣದಿಂದಲೂ ಅಷ್ಟಾವರಣ ಕ್ರಿಯೆಯಿಂದಲೂ ಪಂಚಾಚಾರದ ಪ್ರಭೆಯಿಂದಲೂ ಕಾಲಕಾಲಕ್ಕೆ ಅವತರಿಸಿದ ನೂತನ ಪುರಾತನರಿಂದಲೂ ಸ್ವಯ ಚರ ಪರ ಜಂಗಮರಿಂದಲೂ ಬದುಕಿ ಬಾಳಿದೆ. ಎಂಬದು ವೀರಶೈವದ ಬಹಿರಂತರಂಗ ಮುಮುಕ್ಷುಗಳಿಗೆ ಹೊಳೆದ ಮಾತು. ಈಗಂತೂ ಶಿವಾನುಭವ, ಸಾವಧಾನ, ಶರಣ ಸಾಹಿತ್ಯಾದಿ ಪತ್ರಿಕೆಗಳಿಂದಲೂ ವಚನ ಗ್ರಂಥಗಳು ಅಚ್ಚಾಗಿ ಅನುಭವಾನುಕೂಲವಾದದ್ದು

ರಿಂದಲೂ, ಅನುಭವ ಮಂಟಪ, ಶಿವಾನುಭವ ಸಮ್ಮೇಲನ, ಜ್ಞಾನ ದಾಸೋಹಗಳಿಂದಲೂ ವಿಶ್ವಧರ್ಮದ ತತ್ವಗಳ ಹೊಳವು ಸುಶಿಕ್ಷಿತರಲ್ಲಿಯೂ ಉಂಟಾಗಿ ಪರದೇಶಗಳಲ್ಲಿ ಸಹ ಬೆಳಗಲು ಸಿದ್ಧವಾಗಿದೆ. ಆದರೆ ಇದು ಮಾತೇ ಜ್ಯೋತಿರ್ಲಿಂಗವಾಗಿ ಆ ಲಿಂಗದ ಕಿರಣಗಳು ಕೇಳುವ ವ್ಯಕ್ತಿಗಳಲ್ಲಿ ಪ್ರಸಾದ ರೂಪಾಗಿ ಪಸರಿಸಿದಂತಾಯಿತು. ಇರಲಿ; ವಿಶ್ವಧರ್ಮವೆಂದು ಹೇಳಿಸಿಕೊಳ್ಳುವ ಶಿವತತ್ವಗಳು ವಿಶ್ವದ ಜನಾಂಗಕ್ಕೆಲ್ಲ ಮುಟ್ಟಲು ಶ್ರೀ ಬಸವಾದಿ ಪ್ರಮಥರ ಪದ್ಧತಿಯ ಬೋಧವು ಅತ್ಯವಶ್ಯವೆಂದು ಶಿವಶರಣಾಂಶಿಕರಿಗೆ ಹೊಳೆಯದೆ ಇರದು.

ಇಂಥ ಪದ್ಧತಿಯು ಶ್ರೀ ಅಲ್ಲಮ ಪ್ರಭು ಪುರಾಣ, ಶ್ರೀ ಶಂಕರ ದಾಸಿಮಾರ್ಯರ ಪುರಾಣ, ಶ್ರೀ ದೇವ ದಾಸಿಮಾರ್ಯರ ಪುರಾಣಗಳಲ್ಲಿ ಸುವಿಚಾರಗಳಿಗೆ ಕಂಡುಬರುವದು. ಆ ಮಹಾಮಹಿಮರು ಶಿವಾನುಭವ ಮಂಟಪ ಳಲ್ಲಿ ಜನಾಂಗದ ಆತ್ಮಗಳನ್ನು ಆಕರ್ಷಿಸುವ, ಹಾಗು ಗೃಸ್ತ ಲಿಂಗಪೂಜೆಯಲ್ಲಿ ಅಂದರೆ ಮಹಾಮನೆಯಲ್ಲಿ ದೀಕ್ಷೆ, ಶೀಕ್ಷೆ, ಮೋಕ್ಷಗಳ ಕ್ರಿಯಾ ಜ್ಞಾನಾನುಭವ ಸಮರಸ ಸುಖಗಳನ್ನು ಅನುಭಾವಿಸಿ ಬಿಡುವ ಪದ್ಧತಿಯು ಸುಲಭೋಪಾಯವಾಗಿದೆ. ಶ್ರೀ ಶಂಕರದಾಸಿಮಾರ್ಯರು ಮೊದಲು ಬ್ರಾಹ್ಮಣರಿದ್ದು ನವಲಿಯ ಶ್ರೀ ಜಡಿಶಂಕರಲಿಂಗನನ್ನು ಶೈವ ಪದ್ಧತಿಯಿಂದ ಪೂಜಿಸಲು ಶ್ರೀ ಶಂಕರನು ಅವರ ಭಕ್ತಿಗೆ ಮೆಚ್ಚಿ, ಜಂಗಮರೂಪ ತಾಳಿ, ವೀರಶೈವ ದೀಕ್ಷೆಯನ್ನಿತ್ತು ವೀರಶೈವ ತತ್ತ್ವೋಪದೇಶವನ್ನು ಮಾಡಿ, ಪೂಜೀ ಸತ್ಕ್ರಿಯಾ ಮಾಡಲು ಬೋಧಿಸಿ, ಅವರ ಉಗ್ರವಾದ ತಪಸ್ಸಿಗೆ ಮೆಚ್ಚಿ ಉರಿಗಣ್ಣನ್ನೂ ಒಬ್ಬ ಗಣಾಧೀಶನನ್ನೂ ಸಹಾಯ ಸಂಪದವನ್ನಿತ್ತು ಅನುಗ್ರಹಿಸಿ ಕಳಹಿದನು. ಆಗ ಶ್ರೀ ಶಂಕರನು ಮಾಡಿದ ತತ್ತ್ವೋಪದೇಶವು ಸಂಸಿದ್ಧವಾಗಿದೆ. ಅದೆಂತೆಂದೊಡೆ—

ಸರ್ವಾಂಗ ಪೂರ್ಣವಾದ ಸ್ಥೂಲಾಂಗದಲ್ಲಿ ಇಷ್ಟಲಿಂಗ, ಸೂಕ್ಷ್ಮಾಂಗದಲ್ಲಿ ಪ್ರಾಣಲಿಂಗ, ಕಾರಣಾಂಗದಲ್ಲಿ ಭಾವಲಿಂಗಗಳೆಂದು ಮೂರು ತೆರನಾಗಿರ್ಪವು. ಈ ಮೂರಂಗಗಳನ್ನು ವಿಂಗಡಿಸಲು ಆರಂಗಗಳಾದಕಾರಣದಿಂದ ಹೃದಯದೊಳು ಮಹಾಲಿಂಗ, ಕರ್ಣದೊಳು ಪ್ರಸಾದಲಿಂಗ, ತ್ವಕ್ಕಿನೊಳು ಜಂಗಮಲಿಂಗ, ನೇತ್ರದೊಳು ಶಿವಲಿಂಗ, ಜಿಹ್ವೆಯೊಳು

ಗುರುಲಿಂಗ, ನಾಸಿಕದೊಳು ಆಚಾರಲಿಂಗ, ಇಂತೀ ಆರು ಲಿಂಗಗಳು ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ಬೆಸುಗೆಯಾಗಿ, ಗುದ ನಾಸಿಕ, ಗುಹ್ಯೆ ರಸನೆ, ಪಾದ ನಯನ, ಪಾಣಿ ತ್ವಕ್ಕು, ವಾಕ್ ಶಬ್ದ, ಹೃದಯ ಪ್ರಾಣಗಳು ವಿರಾಜಿಸುವವು. ಆದ್ದರಿಂದ ಕಿವಿಗೂ ವಾಕ್ಕಿಗೂ ಶಬ್ದ ವಿಷಯವು, ಆಕಾಶ ತತ್ವವು ಈಶಾನನ ಧಿದೈವತವು ತ್ವಕ್ಕು ಕೈಗಳಿಗೆ ಅವಿರಳವಾದ ಸ್ಪರ್ಶನ ವಿಷಯವು ವಾಯುತ್ವವು ತತ್ಪುರುಷನಧಿದೈವತವು. ನೇತ್ರ ಪಾದಂಗಳಿಗೆ ರೂಪವೇ ವಿಷಯವು. ಅಗ್ನಿತತ್ವವು ಅಘೋರ ಮುಖವು. ಜಿಹ್ವೆ ಗುಹ್ಯಗಳಿಗೆ ರಸವಿಷಯವು. ಉದಕ ತತ್ವವು. ಮಹಾದೇವ ಮುಖವು. ನಾಸಿಕ ಗುದಗಳಿಗೆ ಗಂಧ ವಿಷಯವು. ಪೃಥ್ವಿತತ್ವವು. ಸದ್ಯೋಜಾತ ಮುಖವು. ಈ ದಶೇಂದ್ರಿಯಗಳಿಗೆ ಹೃದಯವು ಸ್ಥಾನವು. ಸ್ಥೂಲ ಸೂಕ್ಷ್ಮ ಕಾರಣ ಘಟದೊಳು ಇಂದ್ರಿಯ ವಚನಗಳು ಪೂರ್ಣವಾಗಿ ಅವುಗಳಲ್ಲಿ ಲಿಂಗಾನುಬಂಧವಾಗಿರುವವು.

ನಾಸಿಕದ ನಾಸಿಕವೇ ಆಚಾರಲಿಂಗ, ಜಿಹ್ವೆಯ ಜಿಹ್ವೆಯೇ ಗುರುಲಿಂಗ, ನೇತ್ರದ ನೇತ್ರವೇ ಶಿವಲಿಂಗ, ತ್ವಕ್ಕಿನ ತ್ವಕ್ಕೇ ಜಂಗಮಲಿಂಗ, ಕರ್ಣದ ಕರ್ಣವೇ ಪ್ರಸಾದಲಿಂಗ, ಹೃದಯದ ಹೃದಯವೇ ಮಹಾಲಿಂಗ, ಈ ಲಿಂಗೈಕ್ಯರು ಕ್ರಮದಿಂದ ಭಕ್ತ, ಮಾಹೇಶ, ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯರು. ಇವರಿರವು ಎಂತೆಂದೊಡೆ:— ಆತ್ಮಾಂಗದೊಳು ಭಾವ ಹಸ್ತದಿಂದ ಸರ್ವೇಂದ್ರಿಯದಿಂದಾದ ಸುತೃಪ್ತಿಯನು ಸಮರಸ ಭಕ್ತಿಯಿಂದ ಮಹಾಲಿಂಗಕರ್ಪಿಸುವವನೇ ಐಕ್ಯನು. ವ್ಯೋಮದೇಹದೊಳು ಸುಜ್ಞಾನ ಹಸ್ತದಿಂದ ಸುಶಬ್ದಂಗಳನು ಆನಂದ ಭಕ್ತಿಯಿಂ ಪ್ರಸಾದಲಿಂಗಕ್ಕರ್ಪಿಸುವವನೇ ಶರಣನು. ಮಾರುತಾಂಗದೊಳು ಸುಮನ ಹಸ್ತದಿಂದ ಸುಸ್ಪರ್ಶನವನು ಅನುಭಾವ ಭಕ್ತಿಯಿಂ ಜಂಗಮ ಲಿಂಗಕ್ಕೆ ಅರ್ಪಿಸುವವನು ಪ್ರಾಣಲಿಂಗಿ. ಅಗ್ನಿ ಶರೀರದೊಳು ನಿರಹಂಕಾರ ಹಸ್ತದಿಂದ ಸುರೂಪ ( ವರ್ಣ )ಗಳನು ಅವಧಾನ ಭಕ್ತಿಯಿಂ ಶಿವಲಿಂಗಕ್ಕೆರ್ಪಿಸುವ ವಿವಿಧಾನುಭಾವಿಯೇ ಪ್ರಸಾದಿ. ಅಪ್ಪುದೇಹದೊಳು ಸುಬುದ್ಧಿ ಹಸ್ತದಿಂದ ಸುರುಚಿ ಪದಾರ್ಥವನು ನೈಷ್ಠಿಕ ಭಕ್ತಿಯಿಂ ಗುರುಲಿಂಗಕ್ಕರ್ಪಿಸುವವನು ಮಹೇಶ್ವರನು. ಪೃಥ್ವಿ ಅಂಗದೊಳು ಸುಚಿತ್ತ ಹಸ್ತದಿಂದ ಸುಗಂಧ ಪದಾರ್ಥಂಗಳನು ಶ್ರದ್ಧಾ ಭಕ್ತಿಯಿಂ ಆಚಾರ ಲಿಂಗಕ್ಕರ್ಪಿಸುವವನು ಭಕ್ತನು.

ನಕಾರ, ಮಕಾರ, ಶಿಕಾರ, ವಾಕಾರ, ಯಕಾರ, ಓಂಕಾರಗಳು ಕ್ರಮದಿಂದ ಆಚಾರ ಗುರು ಶಿವ ಜಂಗಮ ಪ್ರಸಾದ ಮಹಾಲಿಂಗಗಳಾಗಿ, ಷಡಕ್ಷರಾತ್ಮಕವಾಗಿರುವದೇ ಲಿಂಗವು. ಈ ಷಡಕ್ಷರಗಳು ಕ್ರಮದಿಂದ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಗ್ನೇಯ ಚಕ್ರಗಳೊಳಗಿದ್ದು ಅಂಗದೊಳಗಂಗವಾಗಿರುವವು. ಓಂಕಾರವೇ ಸರ್ವಾಂಗಮಯವಾಗಿರುವದು. ನತ್ವವು ರೋಹಿತವಾಗಿ, ಮಕಾರವು ಮಾಂಸ ಸ್ವರೂಪವಾಗಿ, ಶಿತ್ವವು ಮೇದಸ್ಸೆನಿಸಿ, ವತ್ವವು ಅಸ್ಥಿಯಾಗಿ, ಯತ್ವವು ಮಜ್ಜಾಕಾರವಾಗಿ, ಆರು ಧಾತುಗಳ ವಿಕಾರವೇ ಆರು ತೆರದ ಲಿಂಗವಾಗಿ, ಆರು ಲಿಂಗಗಳೇ ದೇಹಗಳಾಗಿ ಲಿಂಗಾಂಗಿಗಳ ಏಕಾಕಾರದಿಂ ಈ ಘಟವಾಗಿರುವದು.

ಈಗಾದರೂ ಶರಣಾಂಶಿಕರು ಕ್ವಚಿತ್ತಾಗಿ ಅಲ್ಲಲ್ಲಿ ಇದ್ದೂ ಇಲ್ಲದಂತೆ ಗುಪ್ತವಾಗಿದ್ದು ಬಸವಾದಿ ಪ್ರಮಥರ ಆಚಾರಾನುಭವಗಳನ್ನು ಸುಗಮವಾಗಿ ಬೋಧಿಸಿ ಶರೀರದೊಳು ಅಂಗ- ಲಿಂಗ, ಸ್ಥಲ- ಚಕ್ರ ಕಲೆ- ಸಾದಾಖ್ಯ, ಭಕ್ತಿ- ಶಕ್ತಿ, ಅಧಿದೈವತ- ಪೂಜಾರಿ, ತನು- ಆತ್ಮ, ಲಕ್ಷಣ- ಸಂಜ್ಞೆ, ಆಕೃತಿ- ವರ್ಣ, ವೇದ- ನಾದ, ಅಕ್ಷರ- ದಿಕ್ಕು, ಹಸ್ತ ಮುಖ, ಪದಾರ್ಥ- ಪ್ರಸಾದ, ಗಳೆಂಬ ಸಕೀಲಂಗಳನ್ನೂ ಕರಣ ಹಸಿಗೆಯುಕ್ತ ತನು ಮನ ಭಾವ ಜ್ಞಾನ ಮುಖದಿಂದ ಮುಟ್ಟಿ ತಟ್ಟಿ ಪಾಸಂಗೊಳಿಸುವರು. ಅವರ ಚತುರ್ದಶಿಯ ಶಿವಯೋಗವು, ಅವರ ಮಹಾಮನೆಯಲ್ಲಿ ನಡೆದುದರಲ್ಲಿ ಶ್ರೀಪಾದ ಪೂಜೆ, ಪ್ರಸಾದ ಸೇವನೆ, ಲಿಂಗಾಂಗ ಸಮರಸಗಳ ಸತ್ಕ್ರಿಯೆ ಸುಜ್ಞಾನಗಳು ಅನುಭವ ಗೊಂಡ ಜೀವನ, ತನ್ನ ವಿಶ್ವದ ಸ್ವಾಭಾವಿಕ ವೃತ್ತಿಯನ್ನು ನಿವೃತ್ತಗೊಳಿಸಿ ಶಿವನಾಗಿ ಶಿವಾನುಭಾವಿಯಾಗಿ, ಶಿವಪ್ರಪಂಚಿಯಾಗಿ ಶಿವಾನಂದ ಸುಖವನ್ನು ಹೊಂದುವದರಲ್ಲಿ ಸಂಶಯವಿಲ್ಲ. ತೀವ್ರಮತಿಗಳೂ ಮಂದಮತಿಗಳೂ ದಾಸೋಹಂ ಎಂಬ ಸಂಜ್ಞೆಗೊಂಡು ಶಿವಶರಣರ ವಾಕ್ಯವೇ ವೇದವಾಕ್ಯವೆಂದರಿತು ಅವರ ತೊತ್ತಿನ ತೊತ್ತಾಗಿ ವರ್ತಿಸಿ ಸ್ವಯಸುಖಿಗಳಾದ ಉದಾಹರಣೆಗಳು ಎಷ್ಟೋ ಉಂಟು. ಮಡಿವಾಳ ಮಾಚಯ್ಯ ಹಡಪದ ಅಪ್ಪಣ್ಣ, ಮೋಳಿಗೆಯ ಮಾರಯ್ಯ, ಹರಳಯ್ಯ, ಮಧುವಯ್ಯ, ಮುಗ್ಧಸಂಗಯ್ಯ ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಬಿಬ್ಬಿಮಾಚಯ್ಯ, ಸತ್ಯಕ್ಕ

ದೇವಕ್ಕ, ಮಹಾದೇವಿಯಕ್ಕ, ಚಿಕ್ಕಲಗೆ ಮುದ್ದಯ್ಯ, ಮೋಚಲಸುದೇವಿ; ಕಾಚಲ ಸುದೇವಿ, ವೀರಗುಡ್ಡವ್ವೆ ಮೊದಲಾದವರೆಲ್ಲರು ಶ್ರೀ ಬಸವಾದಿ ಪ್ರಮಥರಾಚರಣೆಯುವರು, ಇತ್ತಿತ್ತ ಗೊತ್ತಿನ ಶ್ರೀ ಘನಮಠಾರ್ಯ, ಶ್ರೀ ಸರ್ಪಭೂಷಣ, ಸೊನ್ನಲಾಪುರದ ಶ್ರೀ ವಿರೇಶ್ವರ ಶ್ರೀ ಮುನ್ನಿರು ಜನ ಮೂರ್ತಿಗಳಾದ ಅಥಣಿ ಮುರುಗೇಂದ್ರ ಸ್ವಾಮಿಗಳು, ಇಲಕಲ್ಲ ಶ್ರೀ ಮಹಾಂತಸ್ವಾಮಿಗಳಲ್ಲವೇ ?

ಪ್ರಸಾದವೇ ಲಿಂಗವೆಂದರಿತ ಶ್ರೀ ಬಸವಣ್ಣನವರು ಸಹ, ಪ್ರಸಾದಕ್ಕಾಗಿ ಡೋಹರ ಕಕ್ಕಯ್ಯನ ಮನೆಯ ಬಾಗಿಲನ್ನು ಹನ್ನೆರಡುವರ್ಷ ಕಾಯ್ದರಂತೆ. ಮತ್ತು ದಾಸೋಹಂ ಎಂಬ ಸಂಜ್ಞೆಗೊಂಡು ಹೋಗಿ, ಗುರುವ ಕಂಡೆ, ಲಿಂಗವ ಕಂಡೆ, ಜಂಗಮ ಕಂಡೆ, ಪ್ರಸಾದವ ಕಂಡೆ, ಇಂತೀ ಚತುರ್ವಿಧ ಸಾರಾಯದಲ್ಲಿ ಸಂಪನ್ನನಾದೆನು ಕಾಣಾ, ಕೂಡಲಸಂಗಮ ದೇವಾ. ಎಂದು ಹಾಡಿಕೊಂಡಿದ್ದಾರೆ. ಇವರಂತೆ ಶ್ರೀ ಅಲ್ಲಮ ಪ್ರಭು ದೆ ವರಾದರೂ

" ಐದು ಮುಖ ಐದು ಕಲೆ, ಐದು ಸಮರಸದಲ್ಲಿ।
ನಾದ ಬಿಂದುವಿನ ಕಳೆ ಶಿವಕಳೆಯೊಳು ॥
ಐದೆ ಆರಕ್ಕರದ ಅದೃಷ್ಟ ಮಣಿಫಲದ ।
ಭೇದ್ಯ ಭೇದಕನುಪ್ಪ ನಿಜ ವಿಪ್ಪುದು ॥ ೧ ॥

ಹೀಗೆ ನಿಜ ತತ್ವವನು ಮುಂದರಿಸುತ್ತ, ।
" ಆಧಾರಮಂಬಲಿದು, ಊರ್ಧ್ವ ಮುಖದಲ್ಲಿ ನಿಂದು ।
ಮೇದಿನಿಯು ಕಳೆಮೊಳೆಯನೊಂದು ಮಾಡಿ ॥
ಭೇದಾದಿ ಭೇದದ ಮೂಲ ಪ್ರಣವವ ತಿಳಿದು ।
ನಾದ ಬೆಳಗಿನ ಕಳೆಯ ನೋಡಿ ಕಂಡೆ ॥ ೨ ॥

ಎಂಬದಾಗಿ ಲಿಂಗದ ನೆಲೆಕಲೆಯು ನಿಜದೃಷ್ಟಿಯೊಳು ನಿಂದ ನಿಲುಕಡೆಯನ್ನು ನಿಜಾನಂದದಿಂದ ಮಂತ್ರಗೋಪ್ಯದೊಳು ಒಡಮೂಡಿಸಿದ್ದಾರೆ.

ಈ ಮಹಿಮರ ಮಹದಾಚರಣೆಯೇ ಇಂದಿನ ವರೆಗೆ ನಡೆದು ಬಂದುದು ನಮ್ಮೆಲ್ಲರ ಭಾಗ್ಯವೆಂದೇ ಭಾವಿಸಬೇಕು.

ಒಟ್ಟಿನಲ್ಲಿ ವಿಶ್ವಧರ್ಮದ ನೆಲೆಕಲೆಗಳು, ವಿಶ್ವದೊಳು ಹುಟ್ಟಿ ಬೆಳೆದ ಮಾನವ ಕೋಟಿಗೆ ಮನನವಾಗಲು ಶ್ರೀ ಬಸವಾದಿ ಪ್ರಮಥರ ಬಹಿರಂತರಂಗದಾಚರಣೆಗಳೇ ಅವಿರಳಾನಂದಕ್ಕೆ ಸುಗಮವಾದ ಪದ್ಧತಿಯೆಂದು ಸದ್ಭಾವಿಗಳಿಗೆ ಹೊಳೆಯದೆ ಇರದು.

# ವಿಶ್ವಶಾಂತಿಯ ಪ್ರಬಲ ಸಾಧನ

# ಶಕ್ತಿವಿಶಿಷ್ಟವಾದ ಅದ್ವೈತ

ಬರೆದವರು:— ಅನ್ನದಾನೀಶ್ವರ ವಿರಕ್ತಮಠ ಶಿಕ್ಷಕರು ಶ್ರೀ ಬಸವೇಶ್ವರ
ಟ್ರೇನಿಂಗ ಕಾಲೇಜ ಬಾಗಲಕೋಟೆ

(೧) ಜಗದಹಾರೈಕೆ:— ಜಗತ್ತಿಗೆ ಏನುಬೇಕು? ಎಂಬ ಪ್ರಶ್ನೆಗೆ ಉತ್ತರ ಸುಲಭವಿದೆ. ಜಗಕ್ಕೆ ಶಾಂತಿಬೇಕು. ಭವ್ಯವಾದ ಶಾಂತಿಬೇಕು. ಯುದ್ಧವನ್ನು ಯಾರೂ ಬಯಸುವದಿಲ್ಲ. ಅಶಾಂತಿಯು ದುಃಖವನ್ನು ನೆನಿಸ ವದಿಲ್ಲ. ಶಾಂತಿಯು ಸುಖದ ತಾಯಿ.ಯು. ಶಾಂತವಾತಾವರಣದಲ್ಲಿ ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಯೋಜನೆಗಳೂ, ಕಾರ್ಯಕ್ರಮಗಳೂ ಫಲಕಾರಿಯಾಗುತ್ತವೆ. ಜಗತ್ತು ಬಯಸುವದೊಂದು. ನಡೆಯುವದ. ಮತ್ತೊಂದು. ನುಡಿಯುವ ರೀತಿ ಬೇರೆ. ನಡೆಯುವ ದಾರಿ ಬೇರೆ ಯೋಜನೆ ದೂಡುವದು ಒಂದು ತೆರೆನಾಗಿದ್ದರೆ, ಕಾರ್ಯವಾಡುವದು ಬೇರೋಂದು ತೆರನಾಗಿರುವದು. ಮಾತು ಬಹಳ ಕೃತಿಯಲ್ಲಿ ಸೊಬಗಿಲ್ಲ ಕಲೆಯಿಲ್ಲ ಕಲ್ಯಾಣವಿಲ್ಲ. ವಿಚಾರಗಳು ಪುರಾತನ, ಆಚಾರಗಳು ಕಿರಾತ. ವಿಚಾರದ ಮಾತು, ಕೃತಿಯಲ್ಲಿ ತಾಳವೇ ಇಲ್ಲ. ಸಾಮರಸ್ಯವಿಲ್ಲ, ಸಮರಸವಿಲ್ಲದ ಮೇಲೆ ಜೀವನವೆಲ್ಲಿ? ಜಗದಬಾಳು ಗೋಳುಬಾಳಾಗಿದೆ. ಈ ಗೋಳು ಹೋಗಿ ಬಾಳಿನಲ್ಲಿ ಬೆಳಕು ಮೂಡಬೇಕು. ಶಾಂತಿಯ ಆಶಾಕಿರಣ ಬೆಳಗಬೇಕು. ಇದೇಮಾನವ ಜನಾಂಗದ ಬಯಕೆ.

ಹಾರೈಕೆ ಕೈಗೂಡುವದೆಂತು?

ಜಗದ ಬಯಕೆ ವೈವೆತ್ತು ನಿಲ್ಲಬೇಕಾದರೆ ಸಮರಸ ಜೀವನಬೇಕು, ವಿಚಾರ, ಉಚ್ಚಾರ ಆಚಾರಗಳಲ್ಲಿ ಸಾಮರಸ್ಯವಿರಬೇಕು. ಮೊದಲು ವಿಚಾರಗಳು ಉಚ್ಚವಾಗಿರಬೇಕು. ಉನ್ನತವಾಗಿರಬೇಕು. ವಿಶಾಲವಾಗಿರಬೇಕು ವಿಶ್ವವ್ಯಾಪಕವಾಗಿರಬೇಕು- ಶೀಲ ಮತ್ತು ಮಾನವೀಯತೆಗಳೇ ಹೃದಯ

ನಾಗುಳ್ಳ ವಿಚಾರಗಳೆಂಬ ವಿರಾಟಪುರುಷನ ವಿಶ್ವರೂಪ ದರ್ಶನ ಇಂದು, ಮುಂದು, ಎಂದೆಂದಿಗೂ ಬೇಕು. ಆಗ ಜಾಗತಿಕ ಸರಕಾರ ಅಥವಾ ವಿಶ್ವದ ಪಾರ್ಲಿಮೆಂಟು ಮೂರ್ತರೂಪಕ್ಕೆ ಬರಬಹುದು ಸಂಯುಕ್ತರಾಷ್ಟ್ರ ಸಂಘದ ಕಾರ್ಯವು ಸುಗಮವಾಗಬಹುದು. ವಿಶ್ವನುತ್ಸದ್ದಿಗಳ ತಲೆಗೆ ವಿಶ್ರಾಂತಿ ಸಿಗಬಹದು. ಶಾಂತಿಯ ಶುಭ್ರ ಮಂಗಲ ಕಿರಣಗಳು ಹರಡಬಹುದು.

( ೩) ಧರ್ಮದ ಮಾರ್ಗದರ್ಶನಃ —

ವಿಶ್ವಶಾಂತಿಗೆ ಪೋಷಕವಾದ ವ್ಯಾಪಕವಿಚಾರಗಳನ್ನು ಸಮರಸ ಜೀವನವನ್ನು ಧರ್ಮವು ನೀಡಬಲ್ಲದು. ಧರ್ಮದಮಾರ್ಗದರ್ಶನವು ಜಗತ್ತಿಗೆ ಯಾವಾಗಲೂ ಬೇಕು. ಆದರೆ ಧರ್ಮವು ಸಂಕುಚಿತವಾಗಿರಬಾರದು ಸಜನಾದ ಧರ್ಮವು ಎಂದಿಗೂ ವ್ಯಾಪಕವಾಗಿಯೇ ಇರುವದು. ಪ್ರಗತಿಪರವಾಗಿಯೂ ಇರುವದು ಪ್ರಗತಿಪರವಲ್ಲದ ಧರ್ಮವು ಬಾಳಲಾರದು. ದೇಶಕಾಲ ಪರಿಸ್ಥಿತಿಗೆ ಒಗ್ಗದ, ಸಂಕುಚಿತ ಪ್ರತಿಗಾಮಿ ಕಲ್ಪನೆಗಳನ್ನು ದೂರಮಾಡುವ, ಮತ್ತು ಪ್ರಗತಿ, ಶಾಂತಿ, ಸಾತಂತ್ರ್ಯ, ಮಾನವೀಯತೆಗಳನ್ನು ಮೈಗೂಡಿಸಿಕೊಳ್ಳುವ ಧರ್ಮವು ತಾರಕವಾಗಿರುತ್ತದೆ

( ೪ ) ಶಾಶ್ವತ ಧರ್ಮವಾವುದು ?

ಯಜ್ಞ ಯಾಗ, ಹೋಮ ಹವನ, ವನವಾಸ, ಉಪವಾಸ, ಸ್ವರ್ಗ, ನರಕ ನಾನಾದೇವತೋಪಾಸನೆ, ಜಾತಿಭೇಧ, ವರ್ಣ, ಕುಲ, ಗೋತ್ರಭೇಧ ಶ್ರಾದ್ಧ. ವೈಧವ್ಯ, ಶಕುನ, ತಿಥಿವಾರ, ನಕ್ಷತ್ರ, ಜೋತಿಷ್ಯ, ಕ್ಷೇತ್ರ ತೀರ್ಥಸಂಚಾರ, ಅಸ್ಪೃಶ್ಯತೆ, ಮುಂತಾದ ಯಾವಕರ್ಮಗಳನ್ನು ಮಾಡದಿದ್ದರೂ ಮನ್ನಿಸದಿದ್ದರೂ, ಪರವಾ ಇಲ್ಲವೆಂದೇ ಶಾಶ್ವತ ಧರ್ಮವು ಘೋಧಿಸುತ್ತದೆ. ಕ್ರೂರ, ಹೃದಯಹೀನ, ಯಾಂತ್ರಿಕ, ಸಂಕುಚಿತ ಕರ್ಮಗಳು ಶಾಶ್ವತಧರ್ಮದ ಕಕ್ಷೆಯಲ್ಲಿ ಪ್ರವೇಶಿಸಲಾರವು. ಪೂರ್ಣವಿಶ್ವಾಸಕ್ಕೆ ಅನುಕೂಲವಾದ ಭದ್ರ, ಮಂಗಲ, ಶಿವಮಯವಾದ ಕ್ರಿಯೆಗಳನ್ನೇ ಶಾಶ್ವತ ಧರ್ಮವು ಬೋಧಿಸುತ್ತದೆ.

ಹೆಚ್ಚು ಕಡಿಮೆ, ಪ್ರಾಣಿಬಲಿ, ಅರ್ಥವಿಲ್ಲದ ಮಡಿಮೈಲಿಗೆ, ಧನಿಕ ದರಿದ್ರಭೇದ, ಪಕ್ಷಪಂಗಡಗಳ ದುರಭಿಮಾನ, ಮತಭ್ರಾಂತಿ, ದೈಹಿಕಶ್ರ

ಮವು ಕೀಳೆಂಬ ದುರಭಿಮಾನ, ಒಣಪ್ರತಿಷ್ಠೆ, ಶ್ರಮಜೀವಿಗಳಿಗೆ ಸರಿ ಯಾದ ಮನ್ನಣೆಕೊಡದಿರುವಿಕೆ, ಶಿಷ್ಯನು ಕೀಳೆಂಬ ಮನೋಭಾವನೆ ಆತ್ಮಸ್ತುತಿ, ಪರನಿಂದೆ ಇವುಯಾವವೂ ಶಾಶ್ವತಧರ್ಮದ ಬೆಳಕನ್ನು ಕಾಣಲಾರವು.

ಈ ದೃಷ್ಟಿಯಿಂದ ವಿಚಾರಿಸಿದರೆ ಶಕ್ತಿವಿಶಿಷ್ಟವಾದ ಅದ್ವೈತವು ಶಾಶ್ವತ ಧರ್ಮದ ಕ್ಷೇತ್ರದಲ್ಲಿ ಪ್ರವೇಶಿಸಿ ಉನ್ನತಸ್ಥಾನ ಪಡೆಯಲು ತಕ್ಕುದಾಗಿದೆ.

ಧಾರ್ಮಿಕ ಸ್ವಾತಂತ್ರ್ಯ, ಆರ್ಥಿಕ ಸಮತೆ, ಸಾಮಾಜಿಕನ್ಯಾಯ ವಿಶ್ವಸ್ವಾತಂತ್ರ್ಯ, ವಿಶ್ವಪ್ರಗತಿ, ವಿಶ್ವಶಾಂತಿ, ವಿಶ್ವಬಂಧುತ್ವ, ಅಂತರ ರಾಷ್ಟ್ರೀಯ ಸಮಾಲೋಚನೆ ಮುಂತಾದ ತತ್ವಗಳಿಗೆ ಯಾವದು ಆಸ್ಪದ ಕೊಡುವದೋ ಅದೇಶಾಶ್ವತಧರ್ಮ. ಮತ, ಪಂಥ, ಜಾತಿ, ವರ್ಣಾಶ್ರಮ ಗಳ ಮೇರೆಯನ್ನು ಮೀರಿದ್ದೇ ಶಾಶ್ವತಧರ್ಮವು. ಸತ್ಯನಿಷ್ಠೆ, ನ್ಯಾಯ ಪ್ರೀತಿ, ಸಾರ್ವಜನಿಕ ಕಲ್ಯಾಣದಭಾವನೆ, ಮಧುರ ಸೌಹಾರ್ದ ಹೃದಯ, ಸಭ್ಯ ನಡೆನುಡಿ ಸುಸಂಸ್ಕೃತಿ ಪ್ರೇಮ ಇವೆಲ್ಲವೂ ಶಾಶ್ವತ ಧರ್ಮದ ಅಂಗಗಳು. ಒಬ್ಬ ವಿಶ್ವಾತ್ಮನಲ್ಲಿ ಶ್ರದ್ಧೆ, ಮಾನವೀಯತೆಯಲ್ಲಿ ನಂಬಿಗೆ ಇವು ಶಾಶ್ವತಧರ್ಮದ ಜೀವಾಳ.

( ೫ ) ಶಾಶ್ವತ ಧರ್ಮದ ಪ್ರಚೋದನೆ: —

ಶಾಶ್ವತ ಧರ್ಮವು ವಿಶ್ವಪ್ರೇಮವನ್ನೇ ಪ್ರೇರೇಪಿಸುತ್ತದೆ. ದ್ವೇಷವನ್ನೂ, ಯುದ್ಧಮನೋವೃತ್ತಿಯನ್ನೂ ಎಂದೂ ಪ್ರಚೋದಿಸುವದಿಲ್ಲ. ರಾಮಾಯಣ, ಮಹಾಭಾರತ ಮುಂತಾದ ಯುದ್ಧಪ್ರಚೋದಕ ಮಹಾಕಾವ್ಯಗಳಿಗಿಂತಲೂ ಬುದ್ಧ, ಬಸವ, ಮಹಾತ್ಮಾಗಾಂಧಿಯವರ ಶಾಂತಿ ಪ್ರಚೋದಕ ವಚನಗಳಿಗೇನೇ ಶಾಶ್ವತ ಧರ್ಮವು ಹೆಚ್ಚು ಬೆಲೆಕೊಡುತ್ತದೆ. ತರ್ಕ, ಶಾಸ್ತ್ರ, ಪಾಂಡಿತ್ಯಕ್ಕಿಂಲೂ ಮಹಾ ಹೃದಯದ ಮಹಾನುಭಾವಕ್ಕೇನೇ ಅದು ಹೆಚ್ಚು ಗೌರವಕೊಡುತ್ತದೆ. ರಾಮಾಯಣ, ಮಹಾಭಾರತಗಳನ್ನು ವಿಶ್ವಕವಿ ಸರ್ವಜ್ಞನು ಖಂಡಿಸಿದ್ದು ಶಾಶ್ವತ ಧರ್ಮದ ದೃಷ್ಟಿಯಿಂದಲೇ ಸರಿ. ರಾಮಾಯಣ, ಮಹಾಭಾರತಗಳನ್ನು ಬೋಧಿ

ಸುತ್ತ ಯುದ್ಧ ಮನೋವೃತ್ತಿಯನ್ನು ಕಡಿಮೆಮಾಡಲು ಸಾಧ್ಯವಿರುವದೋ? ಯೋದ್ಧರಿಗಿಂತಲೂ ಅವರ ರಣಗರ್ಜನೆಯ ಘೋಷಣೆಗಳಿಗಿಂತಲೂ ಸುಪ್ರಸಿದ್ಧ ಕವಿಗಳಿಗಿಂತಲೂ ಅವರ ಜಗತ್ಪ್ರಸಿದ್ಧ ಕಾವ್ಯಗಳಿಗಿಂತಲೂ ಬುದ್ಧ ಕ್ರೈಸ್ತ, ಬಸವ, ರಾಮಕೃಷ್ಣ ಪರಮಹಂಸ, ಗಾಂಧಿ ಮುಖ್ಯರಾದ ಮಹಾತ್ಮರೂ ಅವರ ಅಮೃತವಚನಗಳೂ ಒಳ್ಳೇ ಶ್ರೇಷ್ಟವಾದವುಗಳೆಂದು ಜಗತ್ತು ಎಲ್ಲಿಯವರೆಗೆ ತಿಳಿಯುವದಿಲ್ಲವೋ ಅಲ್ಲಿಯವರೆಗೆ ವಿಶ್ವಶಾಂತಿಯೆಂಬುವು ಬರೀ ಕನಸಾಗಿಯೇ ಉಳಿಯುತ್ತದೆ. ಇದೇ ಶಾಶ್ವತಧರ್ಮದ ದಿವ್ಯ ಸಂದೇಶ !

( ೬ ) ಶಾಶ್ವತ ಧರ್ಮ ಮತ್ತು ಶಕ್ತಿವಿಶಿಷ್ಟವಾದ ಅದ್ವೈತ ಧರ್ಮ.

ಮೇಲೆ ವಿವರಿಸಿದ ಶಾಶ್ವತ ಧರ್ಮದ ತಳಹದಿಯಮೇಲೆ ಶಕ್ತಿವಿಶಿಷ್ಟವಾದ ಅದ್ವೈತ ಧರ್ಮವು ನಿಂತಿರುವದು.

ಶಕ್ತಿವಿಶಿಷ್ಟವಾದ ಅದ್ವೈತವು ವಿಶ್ವವ್ಯಾಪಕ ವಿಚಾರಗಳನ್ನು ಸಮರಸ ಜೀವನತತ್ವಗಳನ್ನು ಕರುಣಿಸಬಲ್ಲುದು ಇಷ್ಟೇ ಅಲ್ಲ. ಸಾಮರಸ್ಯವೇ ಅವರ ಜೀವ ಜೀವಾಳ. ಅಂಗವೆಂದರೆ ಭೌತಿಕ ಅಭಿವೃದ್ಧಿ. ಲಿಂಗವೆಂದರೆ ಪಾರಮಾರ್ಥಿಕ ಅಥವಾ ಆಧ್ಯಾತ್ಮಿಕ ಶಾಂತಿ ಲಿಂಗಾಂಗ ಸಾಮರಸ್ಯವೆಂದರೆ ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ಸುಂದರ ಸಮರಸ. ಲಿಂಗಾಂಗ ಸಾಮರಸ್ಯಕ್ಕೆ ಶಕ್ತಿ ವಿಶಿಷ್ಟವಾದ ಅದ್ವೈತ ಎಂಬ ಇನ್ನೊಂದು ಹೆಸರಿದೆ.

ಶಕ್ತಿವಿಶಿಷ್ಟವಾದ ಅದ್ವೈತವು ಕೇವಲ ಅದ್ವೈತವಲ್ಲ ಅದ್ವೈತವು ಜಗತ್ತು ಮಿಥ್ಯವೆಂದು ಧಿಕ್ಕರಿಸುತ್ತದೆ. ಆದರೆ ಶಕ್ತಿ ವಿಶಿಷ್ಟಾದ್ವೈತವು ಜಗತ್ತು ಸತ್ಯವೆಂದು ಸಾಧಿಸುತ್ತದೆ.

ಶಕ್ತಿವಿಶಿಷ್ಟವಾದ ಅದ್ವೈತವು ಕೇವಲ ದ್ವೈತವಲ್ಲ. ದ್ವೈತವು ಕರ್ಮದ ಕತ್ತಲೆಯನ್ನು ಪಸರಿಸುತ್ತದೆ. ಭೇದಬುದ್ಧಿ, ಸಂದೇಹವೃತ್ತಿಗಳನ್ನು ಪೋಷಿಸುತ್ತದೆ.

ಆದರೆ ಶಕ್ತಿವಿಶಿಷ್ಟವಾದ ಅದ್ವೈತವು ಭೇದಮೂಲ ಸಂಶಯಮೂಲ ಕರ್ಮಕಾಂಡವನ್ನು ಕತ್ತರಿಸುತ್ತದೆ.

ದ್ವೈತದ ಭಕ್ತಿ ಮಾರ್ಗವಾಗಲಿ ಅದ್ವೈತದ 'ಜ್ಞಾನಮಾರ್ಗವಾಗಲಿ ಒಳ್ಳೆಯವುಗಳು. ಆದರೆ ಕೇವಲ ಭಕ್ತಿ ಅಥವಾ ಕೇವಲ ಜ್ಞಾನ ಒಳ್ಳೆಯವುಗಳಲ್ಲ. ಭಕ್ತಿಜ್ಞಾನಗಳ ಸಾಮರಸ್ಯವು ಬಹು ಒಳ್ಳೆಯದು ಆದಕಾರಣ ಶಕ್ತಿವಿಶಿಷ್ಟವಾದ ಅದ್ವೈತವು ದ್ವೈತದ ಭಕ್ತಿಯನೂ ಅದ್ವೈತದ ಜ್ಞಾನವನ್ನೂ ಸಮರಸಗೊಳಿಸಿರುವದು. ಶಕ್ತಿವಿಶಿಷ್ಟವಾದ ಅದ್ವೈತವು ದ್ವೈತಾದ್ವೈತ ಸಮನ್ವಯ ಮಾರ್ಗವು ಷಟ್‌ಸ್ಥಲ ಮಾರ್ಗವೆಂದರೂ ಇದೇ ಭೌತಿಕ ಪ್ರಗತಿ ಮತ್ತು ಆಧ್ಯಾತ್ಮಿಕ ಶಾಂತಿ ಇವೆರಡೂ ಸಹಕರಿಸಿದರೆ ಅರ್ಥಾತ್ ಪಾಶ್ಚಾತ್ಯ ಪೌರ್ವಾತ್ಯ ರಾಷ್ಟ್ರಗಳು ಕೂಡಿ ನಡೆದರ ವಿಶ್ವ ಶಾಂತಿಯು ಸಾಧ್ಯವಾಗಲಾರದೇ ?

ನನ್ನ ರಾಷ್ಟ್ರ, ನನ್ನ ಸಂಸ್ಕೃತಿ ಮೇಲು ಎಂಬ 'ನನ್ನತನ' ಅಳಿಯಬೇಕು. ನಮ್ಮ ಜಗತ್ತು, ನಮ್ಮ ಸಂಸ್ಕೃತಿ ಎಂಬ 'ನಮ್ಮತನ' ಮೂಡಿ ಬೆಳೆಯಬೇಕು. ಈ ದೃಷ್ಟಿ ಬಲಿತರೆ ಪರತಂತ್ರ ದೇಶಗಳು ಸ್ವತಂತ್ರವಾಗುವವು. ಸ್ವತಂತ್ರ ದೇಶಗಳು ವಿಶ್ವಸರಕಾರ ಸ್ಥಾಪಿಸುವವು. ಆರ್ಥಿಕ, ಶೈಕ್ಷಣಿಕ, ವೈಜ್ಞಾನಿಕ, ಸಾಂಸ್ಕೃತಿಕ ದೃಷ್ಟಿಗಳಿಂದ ಹಿಂದುಳಿದ ದೇಶಗಳು ಪ್ರಗತಿಹೊಂದುವವು.

ಈ ಸಾಮರಸ್ಯ ದೃಷ್ಟಿಯನ್ನು ಬೆಳೆಸುವದೇ ಶಕ್ತಿವಿಶಿಷ್ಟವಾದ ಅದ್ವೈತದ ಗುರಿಯು. ಆದುದರಿಂದಲೇ ಅದು ವಿಶ್ವಶಾಂತಿಯ ಪ್ರಬಲ ಸಾಧನವೆಂದು ಮೇಲೆ ಹೇಳಿದ್ದೇವೆ.

ಶಕ್ತಿ ವಿಶಿಷ್ಟ ಅದ್ವೈತ ಸಿದ್ಧಾಂತದ ಅನುಯಾಯಿಗಳು ಹೀರಿ ಬೆಳೆಯುವ ಪ್ರಗತಿಯ ನಿಸರ್ಗ ಲಕ್ಷಣವನ್ನು ಲಕ್ಷಿಸಿ ನಡೆದರೆ ಸಾಕು. ವಿಶ್ವ ಶಾಂತಿಗೆ ಸಹಾಯಕರಾದಂತೆಯೇ. 'ನನ್ನ ತನ' ಅಳಿಯಲಿ 'ನಮ್ಮತನ' ಬೆಳೆಯಲಿ ! ವಿಶ್ವದಲ್ಲಿ ಶಾಂತಿಯ ಬೆಳಕು ಬೆಳಗಲಿ !

---

# ಸತ್ಯ

(ಲೇಖಕಃ- ಶ್ರೀ. ಮ. ಮಲ್ಲಪ್ಪ ಜ್ಞಾನಮಂದಿರ ಹಲಗೂರು)



"ಹರನೆಂಬುದೇ ಸತ್ಯ. ಸತ್ಯವೆಂಬುದೇ ಹರನು. ಎರಡಿಲ್ಲವೆಂದು ಶ್ರುತಿ ಸಾರುತಿರಲು ಆ ವಾಕ್ಯವ ಅರರೆ ಸಿರುತನ ಮಾಡಿ ನಾಜಗಕ್ಕೆ ತೋರಿದ ಹರಿಶ್ಚಂದ್ರ ಹರಿಶ್ಚಂದ್ರನು ಸತ್ಯದ ನಿಧಿಯು"

"ಅತಿಹುಸಿವ ಯತಿ ಹೊಲೆಯ, ಹುಸಿಯದಿಹ ಹೊಲೆಯ ಉನ್ನತ ಯತಿವರನು, ಅಸ್ಪೃಶನರಿಯದ ಹೊಲೆಯನಂ ನೆನೆಯೆ ಪುಣ್ಯವು"

ಹೀಗೆ ಸತ್ಯದ ಹೆಚ್ಚಳವನ್ನು ಕವಿಕಮಲ ಮಾರ್ತಾಂಡ ರಾಘವಾಂಕನು ಸಾರಿದ್ದಾನೆ.

ಧರ್ಮದ ಸಾರವಾದ ಸತ್ಯದಿಂದ ಇಹವೂ ಪರವೂ ಉಂಟು. "ಘನಸತ್ಯವೇ ಜೀವವೆಂದಿರ್ದ ಹೊಲೆಯನ ಸೇವೆ" ಎಂದು ಕವಿಯು ಘೋಷಿಸಿರುವನು. ಸತ್ಯವು ಪರಮಾತ್ಮನ ಸ್ವರೂಪವಾದ ಕಾರಣದಿಂದಲೇ **ಕೀಳುಜಾತಿಯವನಾದರೂ ಸತ್ಯವನ್ನು** ಹಿಡಿದಿದ್ದರಿಂದಲೇ ಉತ್ತಮನು ಎನಿಸಿಕೊಂಡಿರುವನು. ಸಕಲ ಧರ್ಮಗಳೂ ಸತ್ಯದಲ್ಲಿಯೇ ಅಡಕವಾಗಿವೆ. ನಿತ್ಯ ವೇದವು ಸತ್ಯವು. ಸತ್ಯವು ಸರ್ವ ವರ್ಣಗಳ ಸಾಮಾನ್ಯ ಧರ್ಮವಾಗಿದೆ. ಸತ್ಯದಿಂದ ಭೂಮಿಯು ನಿಲ್ಲುತ್ತದೆ. ಸೂರ್ಯನು ಸತ್ಯದಿಂದ ಬೆಳಗುತ್ತಾನೆ. ವಾಯು ಸತ್ಯದಿಂದ ಬೀಸುತ್ತಾನೆ. ಜಗತ್ತೆಲ್ಲವೂ ಸತ್ಯದಲ್ಲಿ ನೆಲೆಗೊಂಡಿರುತ್ತದೆ. ವಿಶ್ವ ನೀತಿ ನಿಯಮವು ಸತ್ಯ ಪಾಲನೆಗಾಗಿ. ಸತ್ಯೋಪಾಸನೆಯಲ್ಲದ ಬಾಳು ಬರಡು ಬಾಳು. ಸತ್ಯ ಒಳ್ಳೆಯತನ ಮತ್ತು ಸೌಂದರ್ಯವು ಇವು ಮೂರು ಮಾತ್ರವೇ ಸಹಜ ಮತ್ತು ಅಮೌಲ್ಯ ಬೆಲೆಯನ್ನು ಪಡೆದಿರತಕ್ಕವು. ಈ ಪ್ರಕಾರ ಡೀನ್ ಇನ್ನೇಜನು ನುಡಿದಿರುವನು. ಸತ್ಯವು ವಜ್ರದ ಬೆಲೆ ಬಾಳಬಹುದು. ಆದರೆ ಹೊಳಪು ಅದನ್ನು ಮೀರಿಸಬಲ್ಲದು. ಮಾನವನ ನಡತೆಯ ನಾಣ್ಯದಲ್ಲಿ ಸತ್ಯವೇ "ಸಾವ್ಹರಿನ್ನು." ಸತ್ಯದಿಂದ ಲಭಿಸುವ ಸಂತೋಷಕ್ಕೆ ಪಾರವೇ ಇಲ್ಲವು. ಉದಾರತೆಯಿಂದ ತಿರುಗಿದ ಮಹಲಿನ ಮೇಲ್ಮಂದಿರವೇ ಸತ್ಯವು. ಸರ್ವ ಶ್ರೇಷ್ಠ

ಗುಣವು ಸತ್ಯವು. ಸತ್ಯದ ಪಠನೆಯೇ ವೇದ ಪಠನೆಯು. ತಕ್ಕಡಿಯು ಒಂದು ತಟ್ಟೆಯಲ್ಲಿ ಸತ್ಯವನ್ನೂ ಮತ್ತೊಂದು ತಟ್ಟೆಯಲ್ಲಿ ಸಾವಿರ ಅಶ್ವ ಮೇಧದ ಫಲವನ್ನೂ ಇಟ್ಟರೆ ಸತ್ಯದ ತಟ್ಟೆಯು ಮೇಲೇರುವದು.

ಸತ್ಯಕ್ಕಿಂತ ಮಿಗಿಲಾದ ಧರ್ಮವೊಂದಿಲ್ಲ. ಆಧ್ಯಾತ್ಮಿಕ ಶಕ್ತಿಯ ವಿಕಾಸವು ಸತ್ಯದಿಂದಲೇ ಸುಲಭ ಸಾಧ್ಯವು. "ಸತ್ಯ ಪ್ರತಿಷ್ಠಾಯಾಂ ಕ್ರಿಯಾ ಫಲಾಶಯತ್ವಂ" ಎಂದು ಸತ್ಯ ಸಿದ್ಧಿಯನ್ನು ಮಾಡಿಕೊಂಡವನ ಸಕಲ ಕ್ರಿಯೆಗಳು ಸಫಲವಾಗುವವೆಂದ, ಪಾತಂಜಲಿ ಋಷಿಗಳು ನುಡಿದಿದ್ದಾರೆ. ಪ್ರಪಂಚದಲ್ಲಿ ಮಹಾ ವಿಭೂತಿಗಳಾಗಿ ಮೆರೆದದ್ದು ಅವರ ಸತ್ಯ ಧರ್ಮದ ಪರಿಪೂರ್ಣ ಪಾಲನೆಯಿಂದಲೇ ಎಂದು ಹೇಳಬಹುದು "ಸತ್ಯಂ ಭೂತ ಹಿತಂಪ್ರೋಕ್ತಂ" ಎಂದು ಪ್ರಾಣಿಮಾತ್ರಕ್ಕೆ ಸತ್ಯವೇ ಹಿತವ ಗಿದೆ ಯೆಂಬ ಶಾಸ್ತ್ರವಿದೆ.'ಸತ್ಯರಾ ನುಡಿತೀರ್ಥ' ಎಂದು ಸರ್ವಜ್ಞ ಕವಿಯು ನುಡಿದಿರುವುದನ್ನ ನೋಡಿ ಸುಳ್ಳನ್ನು ಹೇಳದೆ ಸತ್ಯವನ್ನೇ ಒಂದು ನೇಂಪಿಯನ್ನಾಗಿಟ್ಟುಕೊಂಡು ನಡೆದರೆ ನಮಗೆ ಮೋಕ್ಷ ಸಿಗುವದು ಖಂಡಿತ. ಹಿಂದಿನ ನ್ಯಾಯಸ್ಥಾನದಲ್ಲಿ ಒಂದು ಲಕ್ಷ ರೂಪಾಯಿಯನ್ನು ಕೊಟ್ಟರೂ ಸಟೆಯನ್ನ ಹೇಳುತ್ತಿರಲಿಲ್ಲ. ಇಂದಾದರೋ ಒಂದು ಲೋಟಾ ಕಾಫಿಯ ಆಸೆಗೆ ಸುಳ್ಳನ್ನು ಹೇಳಲು ನಿಂತಿರುವ ಜನರು ನಿಜವಾಗಿಯೂ ಪುರು ಷಾರ್ಥವನ್ನು ಪಡೆಯುವರೇ? "ಸತ್ಯಂ ವದಂ ಧರ್ಮಂ ಚರ" ಎಂಬ ಉಪನಿಷದ್ವಾಣಿ ಘೋಷಿಸುತ್ತಿದ್ದ ನಾಡಿನಲ್ಲಿ ಜನಿಸಿದ ನಳ, ದಶರಥ ಧರ್ಮರಾಯ, ಶಿಬಿ ಇವರ ನೆನಪಾದರೂ ಮನಸ್ಸಿಗೆ ಬಾರಾರದೇ? ಸುಳ್ಳುಗಾರನೆಂಬ ಅಪಕೀರ್ತಿಯನ್ನು ಪಡೆಯುತ್ತೇನಲ್ಲ ಎಂಬ ಅಂಜಿಕೆ ಯಿಂದ ಆಡಿದಮಾತಿಗೆ ತಪ್ಪದೆ ತನ್ನ ಪ್ರೀತಿ ಪಾತ್ರನಾದ ಸುತನನ್ನು ಅರಣ್ಯಕ್ಕೆ ಕಳುಹಿಸಿದ ದಶರಥ ಪರರಿಗಾಗಿ ತನ್ನ ಕಾಯವನ್ನು ಕತ್ತರಿಸಿ ಕೊಟ್ಟ ಶಿಬಿ ಇವರುಗಳನ್ನು ನೋಡಿದರೆ "ಸತ್ಯರಿಗೆ ಧರೆಯಲ್ಲ ಮಸ್ತಕವನೆರಗುವದು ಹೆತ್ತ ತಾಯ್ಮಗನ ಕರೆವಂತೆ ಶಿವನ ವರನೆತ್ತಿಕೊಂಬುವನು ಸರ್ವಜ್ಞ" ಎಂಬ ನುಡಿಯು ಅವರ ಕೀರ್ತಿ ಭೂಮಿಯಿಂದಲೇ ಜನಿಸಿರ ಬೇಕು. "ದಿಟವೇ ಪುಣ್ಯದಪುಂಜ. ಸಟೆಯೇ ಪಾಪದಬೀಜ ಕುಟಿಲ

ವಂಚನೆಗೆ ಹೋಗದಿರು ನಿಜವಸಿಡಿ ಘಟವನೆಚ್ಚರ ಸರ್ವಜ್ಞ " ಎಂಬ ನುಡಿಯನ್ನು ನೋಡಿಬಾಳಿದರೆ ಮಾನವನು ಅಮರನಾಗುವನು. ಆ ಸ್ಥಳವೇ ನಾಕವಾಗುವುದು " ಸಟಿದಿಟವೆಂಬ ವೆರಡು ವಿಡಿದು ನಡೇವುದೀ ಲೋಕವೆಲ್ಲವು. ಹುಸಿ ಎಂಬುದೇ ಹೊಲೆ ಶಿವಭಕ್ತರಿಗೆ ಹುಸಿಯೆಂಬುದುಂಟೆ? ಅಯ್ಯ " ಹುಸಿಯ ನಾಡಿ ಲಿಂಗವ ಪೂಜಿಸಿದಡೆ ಹೊಳ್ಳಬಿತ್ತಿ ಫಲವನರಸುವಂತೆ ಕಾಣಾ ಚನ್ನಮಲ್ಲಿಕಾರ್ಜುನಾ " ಎಂಬ ಮಹಾದೇವಿಅಕ್ಕನವರ ವಚನವನ್ನು ನೋಡಿದರೆ ನಾವು ಎಷ್ಟು ತೀರ್ಥ ಯಾತ್ರೆ ಮಾಡಿದರೂ ಹಲವು ದೇವರನ್ನು ಪೂಜೆ ಮಾಡಿದರೂ ದಿಟವನ್ನು ನುಡಿಯದಿದ್ದರೆ ಅವೆಲ್ಲವೂ ಜಳ್ಳು ಕಾಳನ್ನು ಬಿತ್ತಿ ಹಸನು ಫಲವನ್ನು ಬಯಸುವಂತೆಯೇ ಸರಿಯು."ಹುಸಿಯು ನುಡಿಯಲು ಬೇಡ ಇದೇ ಅಂತರಂಗಶುದ್ಧಿ" ಎಂದು ಒಂದುಕಡೆಯೂ; "ಸತ್ಯವ ನುಡಿವುದೇ ಸ್ವರ್ಗಲೋಕ " ಎಂದು ಮತ್ತೊಂದು ಕಡೆಯೂ ಜಗಜ್ಯೋತಿ ಬಸವಣ್ಣನವರು ನುಡಿದಿರುವದನ್ನು ನೋಡಿದರೆ ಸತ್ಯದ ಹೆಚ್ಚಳವು ಸರ್ವರಿಗೂ ವಿದ್ಥಿತ ಗೋಚರವಾಗುವದು.

" ಸತ್ಯದಲ್ಲಿ ನಡೆವುದೇ ಶೀಲ, ಸತ್ಯದಲ್ಲಿ ನುಡಿವುದೇ ಶೀಲ. ಸಜ್ಜನಸದಾಚಾರದಲ್ಲಿ ವರ್ತಿಸಿ ಸತ್ಯವನರಿತುದೇ ಶೀಲ ಕಾಣಿರೋ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ " " ದಿಟವ ನುಡಿವುದು. ನುಡಿದಂತೆ ನಡೆವುದು. ಹುಸಿಯಲಿ ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲಸಂಗಮದೇವ. " ಎಂಬ ವಚನಗಳನ್ನು ನೋಡಿದರೆ ಶಿವಶರಣರು ಸತ್ಯಕ್ಕೆ ಎಂತಹ ಸ್ಥಾನವನ್ನು ಕೊಟ್ಟಿದ್ದರು ಎಂಬುದು ತಿಳಿಯ ಬರುವುದು. ಶರಣರು ಸತ್ಯಜೀವಿಗಳಾಗಿ ಬಾಳಿ ಬದುಕಿದ್ದರಿಂದಲೇ ಅವರ ಕೀರ್ತಿಯು ಆಚಂದ್ರಾರ್ಕವಾಗಿ ನೆಲಿಸಿ, ನಿಂತಿರುವುದು. ಸತ್ಯದ ಸತ್ತಿಗೆಯನ್ನು ಹಿಡಿದು ಬಾಳಿದ ಧರ್ಮ ಚಕ್ರಗಳು ಶಿವ ಶರಣರು ಸತ್ಯದ ನೆಲೆ ನೆಲೆಯನ್ನು ಅರಿತು ಅದರಂತೆಯೇ ಆಚರಿಸಿದ ಆದರ್ಶರು ಶರಣರು. ಸತ್ಯದಿಂದಲೇ ಜಗತ್ತುಗಳು ಜೀವಿಸಿವೆ, ಎಂಬ ಶಾಸ್ತ್ರ ಸೂತ್ರವಿದೆ. ಜನರಲ್ಲಿ ಗಳಿಗೆ ಗಳಿಗೆಗೂ ವಚನ ಭ್ರಷ್ಟತ್ವ ಬಂದಿತೆಂದರೆ ಮೈತ್ರಿಯು ಬೆಳೆಗೆ ಕಾರಣವೆಲ್ಲಿದೆ? ಪ್ರತಿಜ್ಞಾಪಾಲನೆಯು ಇಡೀ ಜಗತ್ತನ್ನೇ ಆವರಿಸಿಕೊಂಡಿದೆ. ನಮ್ಮನ್ನೆಲ್ಲ ಕಗ್ಗತ್ತಲೆಯಲ್ಲಿ ಇಳಿಯ ಮುಳಿಯ ಮುಳುಗಿಸುವ ರವಿಯು ತನ್ನ ಜೀವನದಾಯಕ ಕಿರಣಗಳನ್ನು ಆಗಾಗ್ಗೆ

ಬೀರುತ್ತಿರುವುದು ರೂಢಿಯೇ ಸರಿಯು. ಋತುಗಳು ಕಾಲಕ್ರಮದಿಂದ ಚಲಿಸುತ್ತವೆ. ತಾರೆಗಳೂ ಸಂಯಮ ಶೀಲತೆಯಿಂದ ಜನಿಸಿ ಮುಳುಗುವುವು. ಪ್ರಕೃತಿಯ ಬಗೆ ಬಗೆಯ ದೃಶ್ಯಗಳೂ, ಕ್ರಿಯೆಗಳೂ, ತಮ್ಮ ತಮ್ಮ ಸೌಂದರ್ಯ ಸಮರಸ ಗಾನದ ಸಂಗಡ ಜರುಗದಿದ್ದರೆ ನಮ್ಮ ಬಾಳು ಎಂತು ಸುಗಮದಾಗಿ ಸಾಗುತ್ತಲಿತ್ತು? ಪ್ರಕೃತಿಯೇ ಪ್ರತಿಜ್ಞಾಪಾಲನೆಯನ್ನು ಪರಿಪೂರ್ಣವಾಗಿ ಮಾಡುತ್ತಿರುವಲ್ಲಿ ಯೋಗ್ಯಾಯೋಗ್ಯ ವಿಚಾರ ಶಕ್ತಿಯು ಮಾನವನಿಗೆ ಇರಬಾರದೇ? ಪ್ರತಿಜ್ಞಾಪಾಲನೆಯನ್ನು ಪರಿಪೂರ್ಣವಾಗಿ ಮಾಡಿದರೆ ತಾನೇ ಸಂಪೂರ್ಣ ಸತ್ಯಶೀಲರಾಗುವುದೂ, ನೈತಿಕ ಜೀವನಕ್ಕೆ ವಚನ ಪಾಲನೆಯೂ, ಸತ್ಯಪ್ರೇಮವೂ ಅತ್ಯಗತ್ಯವು ಎಂದು ಹಿಂದುಗಳು ಎಣಿಸುತ್ತಾರೆ ಸಾಧುವು ಸತ್ಯಶೀಲನೂ ಸತ್ಯ ಪರಿಪಾಲಕನೂ ಆಗಿರುವನು. ಸತ್ಯವು ಪಾಪಭೀತಿಯನ್ನು ಹುಟ್ಟಿಸುವುದು, ಸದ್ಗುಣವನ್ನು ಸಂವರ್ಧಿಸುವದು. ಸರ್ವಸತ್ಯನುಡಿಗಾರನು ಸರ್ವಾಂಗೀಣ ಸದ್ಗುಣಿಯಾಗಿರುವನು

"ಸತ್ಯಂ ಬ್ರೂಯಾತ್ ಪ್ರಿಯಂ ಭ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ ಪ್ರಿಯಂಚ ನಾನೃತಂ ಬ್ರೂಯಾತ್ ಏಷಧರ್ಮಃ ಸನಾತನಃ ||" ಎಂಬ ಸನಾತನ ನುಡಿಯನ್ನು ನೋಡಿದರೆ ಸಭ್ಯತೆಗಿಂತಲೂ ಸತ್ಯವೇ ಮೇಲೆಂಬುವುದು ತಿಳಿಯುವುದು. ಕಾಡು ರೀತಿಯಿಂದ ಸತ್ಯವನ್ನು ಪ್ರಕಾಶಿಸಿ ಜನರ ಮನಸ್ಸನ್ನು ನೋಯಿಸಿದರೆ ನಾವು ಸಭ್ಯರಾಗಲಾರೆವು. ಸಭ್ಯಾಚಾರವು ಪ್ರತಿಯೊಬ್ಬ ವಿದ್ಯಾವಂತನಿಗೂ ಉಚಿತವಾದದ್ದು. ಸಭ್ಯತೆಗಾಗಿ ಸತ್ಯವನ್ನು ವಧೆ ಮಾಡುವ ರೂಢಿಯುಂಟು. ಸಭ್ಯತೆಯು ಸತ್ಯತೆಯನ್ನು ಸರಿಗಟ್ಟಲು ಮಾತ್ರ ಸಾಧ್ಯವಿಲ್ಲ. ಸತ್ಯವು ಲೋಕ ಕಲ್ಯಾಣಾರ್ಥವಾಗಿದೆ. ಒಂದೇ ವೇಳೆ ತನಗೂ ಕೇಳುವವರಿಗೂ ಅಪ್ರಿಯವೆನಿಸಿದರೂ ಮಂಗಳ ಕಾರಕಸತ್ಯವನ್ನು ಮಾತ್ರ ನುಡಿಯಲು ಹಿಂದೆಗೆಯಬಾರದು. ಸತ್ಯವು ಸಕಲ ಸದ್ಗುಣಗಳ ಭಾಂಡಾಗಾರವು. ಧೈರ್ಯ, ಶಮ, ದಮ ಪರೋಪಕಾರ ಬುದ್ಧಿ ಇತ್ಯಾದಿ ಸದ್ಗುಣಗಳು ತಾವೇ ತಾವಾಗಿಯೇ ಒದಗುವವು. ಸತ್ಯವಿದ್ದರೆ ಎತ್ತಲೂ ಭಯವಿಲ್ಲ. ಸುಳ್ಳಿಗೆ ಸುಖವಿಲ್ಲ ಸತ್ಯಕ್ಕೆ ಸಾವಿಲ್ಲ ಎಂಬ ಗಾದೆಗಳನ್ನು ನೆನಪಿನಲ್ಲಿಟ್ಟುಕೊಂಡು ಬಾಳುವುದು ನಮಗೆ ಶ್ರೇಯಸ್ಸು. ಭಗವಂತನು ನಮಗೆ

ನಾಲಿಗೆಯನ್ನು ದಯಪಾಲಿಸಿರುವುದು ಸುಳ್ಳನ್ನು ಹೇಳು ಎಂದಲ್ಲವು. ಮಾನವನ ಮಹಾಪರಾಧದ ರಾಜಮಾರ್ಗವು ಸುಳ್ಳನ್ನು ಹೇಳುವದು ಸತ್ಯಮೇವ ಜಯತೇ ನಾನೃತಂ ಎಂಬ ಉಪನಿಷದ್ನುಡಿಯು ಎಂದೆಂದಿಗೂ ನನ್ನ ಮನದಲ್ಲಿರಲಿ. ಅದರಂತೆಯೇ ನಾವು ಶೂರರಾಗೋಣ. ಸದ್ಯದ ಫಲದ ಆಸೆಗಾಗಿ ಸುಳ್ಳನ್ನು ಹೇಳಿದರೆ ಅದು ಬರೀ ಆಡಂಬರವು. ತಾಮ್ರಕ್ಕೆ ಬೆಳ್ಳಿಯ ಮುಲಾಮು ಹಾಕಿದರೆ ಅದು ಬೆಳ್ಳಿ ಆದೀತೆ ? ಸತ್ಯಗಾರನಿಗೆ ನಿರ್ಭೀತಿ, ಸುಳ್ಳುಗಾರನಿಗೆ ಅಂಜಿಕೆಯು, ಅತ್ಯಂತ ಕೊನೆ ಕೊನೆಗೆ ಸಟೆಗಾರನು, ಅಪಹಾಸ್ಯಕ್ಕೆ ಪಕ್ಕಾಗಿ ಹುಚ್ಚನಾಗುವುದರಲ್ಲಿ ಯಾವ ಸಂಶಯವೂ ಇಲ್ಲವು.

ಸತ್ಯವೆಂಬ ನಿತ್ಯಧನದ ಬೆಲೆಯು ಅಮೌಲ್ಯವು. ಕಷ್ಟಕಾಲದಲ್ಲಿ ಬಹುವಾಗಿ ಸಹಾಯ ಮಾಡುವದು ಜರ್ಮನಿಯಲ್ಲಿ ೧೮೦೦ ರಲ್ಲಿ ರಾತ್ಸ ಚೈಲ್ಡ ಎಂಬ ವರ್ತಕನೊಬ್ಬನು ಸರ್ವ ಸಾಮಾನ್ಯ ಅಂಗಡಿ ಇಟ್ಟುಕೊಂಡಿದ್ದನು " ನಾಲಿಗೆಯಿದ್ದವನ ನುಡಿಯು ಹಾಲಿಗಿಂತ ಮಿಗಿಲು " ಎಂಬಂತೆ ಆತನು ಸತ್ಯಶೀಲನಾಗಿದ್ದರಿಂದ ಆತನಲ್ಲಿ ಎಲ್ಲರಿಗೂ ನಂಬಿಕೆಯಿದ್ದಿತು. ಜರ್ಮನಿ ದೇಶವನ್ನು ನೆಪೋಲಿಯನ್ನನು ಗೆಲ್ಲಲು ಬಂದಾಗ ಚಕ್ರವರ್ತಿಯು ಬಡವನಾದ ಈ ವರ್ತಕನಲ್ಲಿಗೆ ಬಂದು ಅಮೌಲ್ಯ ಪದಾರ್ಥಗಳಿರುವ ಒಂದು ಸಂದುಕವನ್ನು ತಂದು ಇದನ್ನು ನೀನು ಭದ್ರವಾಗಿಟ್ಟಿರಬೇಕು. ನಾನು ಜೀವದಿಂದ ಬಂದರೆ ಇದನ್ನು ನನಗೆ ಕೊಡು ಎಂದು ಗುಟ್ಟಾಗಿ ಹೇಳಿದನು. ಪ್ರತ್ಯುತ್ತರವಾಗಿ "ಮಹಾಸ್ವಾಮಿ ಇದನ್ನು ನಾನು ಭದ್ರವಾಗಿ ನೋಡಿಕೊಳ್ಳುವದು ನನ್ನಿಂದ ಮಾತ್ರ ಸಾಧ್ಯವಿಲ್ಲವು. ದಯವಿಟ್ಟು ಈ ಸಂದುಕವನ್ನು ತಾವು ತೆಗೆದುಕೊಂಡು ದಯಮಾಡಿಸಿ" ಎಂದು ಬಿನ್ನವಿಸಿಕೊಂಡನು. ಚಕ್ರವರ್ತಿಯು ಅದನ್ನು ಅಲ್ಲಿಯೇ ಬಿಟ್ಟು ಹೋದನು. ದೂರದೃಷ್ಟಿಯುಳ್ಳ ವರ್ತಕನು ಅದನ್ನು ತೆಗೆದುಕೊಂಡು ಹೋಗಿ ಹೂತಿಟ್ಟನು. ಗುರುತಿಗೆ ಅಲ್ಲಿ ಒಂದು ಗಿಡವನ್ನು ನೆಟ್ಟನು. ನಗರವು ಸೂರೆಯಾದ ಮೇಲೆ ನೆಪೋಲಿಯನ್ನನು ಇವನಲ್ಲಿಗೆ ಬಂದ. ಇವನಲ್ಲಿದ್ದ ಹಣವನ್ನು ಚಕ್ರವರ್ತಿ ಇಟ್ಟದುದೆಂದು ತಿಳಿದು ತೆಗೆದುಕೊಂಡು ಹೋದನು ನೆಪೋಲಿಯನ್ನನು ೧೮೧೫ ರಲ್ಲಿ ವಾಟರ್ಲೂ ಕದನದಲ್ಲಿ ಸೋತಮೇಲೆ ಈ ವರ್ತಕನು ಬಂದು ಹೂತಿಟ್ಟಿದ್ದ ಹಣವನ್ನು ತೆಗೆ

ದುಕೊಂಡು ವ್ಯಾಪಾರ ಮಾಡಿದನು. ಅದಕ್ಕೆ ಕ್ರಮವರಿತು ಲೆಕ್ಕವನ್ನೂ ಕೂಡಾ ಇಟ್ಟಿದ್ದನು. ಪುನಃ ಜರ್ಮನ ಚಕ್ರವರ್ತಿಯು ಈತನಲ್ಲಿಗೆ ಬಂದು ಹಣವನ್ನು ಕೇಳಿದನು. ಲೆಖ್ಖಾಚಾರ ಪ್ರಕಾರ ಮೊದಲಿನಿಂದ ಎಷ್ಟುಹಣವಾಯಿತೆಂಬುದನ್ನು ಕಂಡ ಹಿಡಿದು ಆ ಮೊಬಿಲಗನ್ನು ಪೂರ್ತಿಯಾಗಿ ಚಕ್ರವರ್ತಿಗೆ ಕೊಟ್ಟನು. ಆಗ ಚಕ್ರವರ್ತಿಯು ಈತನ ಸತ್ಯಸಂಧತೆಗೆ ಮೆಚ್ಚಿ ತಾನು ಕೊಟ್ಟದ್ದಷ್ಟೇ ಹಣವನ್ನು ತೆಗೆದುಕೊಂಡು ವೃದ್ಧಿಯಾದ ಧನವನ್ನೆಲ್ಲವನ್ನೂ ವರ್ತಕನಿಗೆ ಕೊಟ್ಟು ಯುರೋಪಿನ ಎಲ್ಲ ದೇಶಗಳಲ್ಲಿಯೂ ಈತನ ಸತ್ಯವನ್ನು ಪ್ರಚಾರಪಡಿಸಿದರು.

ಸ್ವತಂತ್ರ ಭಾರತದ ಧವಳ ಕೀರ್ತಿಯು ಸತ್ಯಪಾಲನೆಯಿಂದಲೇ. ರಾಷ್ಟ್ರದ ಧ್ಯೇಯ ವಾಕ್ಯವು 'ಸತ್ಯಮೇವ ಜಯತೇ' ಎಂಬ ಮುಂಡಕೋಪನಿಷತ್ತಿನ ನುಡಿಯಾಗಿರುವಲ್ಲಿ ಅಖಂಡ ಭಾರತದ ಸರ್ವಸಂಪತ್ತು ಅದರಲ್ಲಿಯೇ ವಿಲೀನವಾಗಿರುವದರ ವಿಚಾರಪಾಗಿ ಯಾವ ಸಂಶಯವೂ ಇಲ್ಲವು. "ಸತ್ಯಾನ್ನ ಪ್ರಮದಿತವ್ಯಂ" ಎಂದು ವೇದಗಳು ಘೋಷಿಸಿರುವದು ಎಲ್ಲರ ಗಮನಕ್ಕೂ ಬೀಳಲಿ ಪ್ರಜೆಯು ಸತ್ಯಕ್ಕಾಗಿ ಶ್ರಮಿಸಿ ಜೀವಿಸಬೇಕು. ಸತ್ಯಕ್ಕಾಗಿಯೇ ಹೋರಾಡ ಬೇಕು. ಸತ್ಯ ಜಯಗಳ ಪರಮಾರ್ಥವನ್ನೂ ಪ್ರಭಾವವನ್ನೂ ಎಂಟು ದಿಕ್ಕುಗಳಲ್ಲಿಯೂ ಹರಡಿ ಮನುಜರ ಬುದ್ಧಿಯನ್ನು ಪ್ರಚೋದನಗೊಳಿಸುವ ಉನ್ನತಗುರಿಯನ್ನಿಟ್ಟುಕೊಂಡು ರಾಮಾಯಣ ಭಾರತವನ್ನು ಮಹಾಕವಿ ವಾಲ್ಮೀಕಿ, ವೇದವ್ಯಾಸರು ರಚಿಸಿದ ಪುಣ್ಯಭೂಮಿಯನ್ನು ಸತ್ಯ ಪರ್ವದನಾಡನ್ನಾಗಿ ಮಾಡಿರುವರು. "ರಾಮ ನಿತ್ಯ ಪರಾಕ್ರಮಃ' ಎಂದು ಮಹಾಕವಿಯು ತನ್ನ ಕಾವ್ಯದಲ್ಲಿನ ನಾಯಕನನ್ನು ಹೊಗಳಿದರೂ ತಣಿಪೇ ಸಿಗನು. ಆತನಿಗೆ ಸತ್ಯ ಪರಾಕ್ರಮಿಯೋರ್ವನ ಸ್ತುತ್ಯವಾದ ಜೀವನ ಚರಿತ್ರೆಯನ್ನು ಚಿತ್ರಿಸಿ ಆತನಿಗೆ ದೊರೆತ ಸತ್ಯವಾದ ಜಯವನ್ನು ರೂಪಿಸಿ ಜನರಲ್ಲಿ ಸತ್ಯ ಪರಾಕ್ರಮದ ತತ್ವವನ್ನು ರೂಢಮೂಲವಾಗಿರಿಸಿದನು ವಾಲ್ಮೀಕಿಯು. ಸತ್ಯಧರ್ಮಗಳ ವ್ಯವಸ್ಥೆಯಿಂದ ಲಭಿಸಿದ ಜಯಸಿದ್ಧಿಯೇ ಭಾರತವಾಗಿ ಪರಿಣಮಿಸಿದೆ. ವ್ಯಾಪಾರ ದೃಷ್ಟಿಯಲ್ಲಿ ಭಾರತದ ಉದಯರಾಗದ ಹಾಡು ಸತ್ಯಧರ್ಮಗಳ ಸಿದ್ಧಿ ಸಂಕೇತವಲ್ಲೆ ? 'ರಾಜ್ಯ ಸುತರು ಕೀರ್ತಿ ಹಣ ಇವೆಲ್ಲವೂ ಸತ್ಯದ ಒಂದಂಶ' ಎಂದು ಧರ್ಮ ನಂದನನಿಂದ ನುಡಿಸಿ

ರುವನು ಕವಿಯು. ‘ ರಾಜ್ಯವು ಸತ್ಯಾತ್ಮಕವಾಗಿದೆ. ತಪಸ್ವಿಗಳೂ ಅವರೂ ಕೂಡ ಸತ್ಯವನ್ನೇ ಸರ್ವಶ್ರೇಷ್ಠವೆಂದಿದ್ದಾರೆ ಸತ್ಯವಾದಿಗೆ ಶ್ರೇಷ್ಠ ಗತಿಯು ಸಿಗುತ್ತದೆ. ನಾಕಕ್ಕೆ ಮೂಲವು ಸತ್ಯವು. ಸಕಲವೂ ಸತ್ಯ ಮೂಲಕದಲ್ಲಿದೆ. “ ಸತ್ಯಕ್ಕಿಂತ ಪರಮ ಪದವೊಂದಿಲ್ಲ. ” ಎಂದು ಶ್ರೀರಾಮನಿಂದ ಉಪದೇಶಿಸಿರುವನು. ಮಹಾಕವಿಯು ಸ್ವತಂತ್ರ ಸ್ವರ್ಣ ಭೂಮಿಯಲ್ಲಿ ಸತ್ಯದ ಸಾಕ್ಷಾತ್ಕಾರದಿಂದಲೇ ಸರ್ವಸಿದ್ಧಿಯತ್ತೆ ?

ಇಂದು ಜಗತ್ತಿನಲ್ಲಿಯೇ ಸತ್ಯೋಪಾಸಕರೆಂದು ಹೆಸರು ಪಡೆದಿರುವ ಮಹಾತ್ಮ ಗಾಂಧಿಯವರ ಸತ್ಯನಿಷ್ಠೆಯು ಸ್ತೋತ್ರಾರ್ಹವಾದುದು ಪೂಜ್ಯತೆಯ ಪೀಠವನ್ನು ಗಳಿಸಿ ಕೊಟ್ಟಿರುವುದು ಅವರ ಸತ್ಯಪಾಲನೆ. ಸತ್ಯದ ಬಲವನ್ನು ವೃದ್ಧಿಪಡಿಸಿ ಸಕಲ ಕಡೆಗಳಿಗೂ ಅದನ್ನು ಬಿಟ್ಟಿರುವ ಮಹಾತ್ಮ ಗಾಂಧಿಯವರ ಸತ್ಯಾನ್ವೇಷಣದಲ್ಲಿ ಸ್ವರ್ಗೀಯ ಸುಖ ಸೌರಭವಿದೆ. ಸಾಹಿತ್ಯದ ಮೂಲಕ ಸತ್ಯ ಸ್ಥಾಪನೆ ಮಾಡಿದ ಗಾಂಧಿಯವರ ಮಹಾ ವ್ಯಕ್ತಿತ್ವವು ಯಾರಿಗೆ ತಾನೇ ತಿಳಿಯದು ? ಇವರು ತಮ್ಮ ಬಾಲ್ಯದಲ್ಲಿಯೇ ಸಾಹಿತ್ಯದ ಸವಿಯನ್ನು ಕಂಡಿದ್ದರು. ಈ ಅನುಭವಗಳೇ ತಮ್ಮ ಜೀವನದಲ್ಲಿಯೇ ಸತ್ಯದ ಬಾಗಿಲನ್ನು ತೆರೆದವು. ಉಪಕಾರ ಮಾಡಿದವರಿಗೆ ಮಹದುಪಕಾರವನ್ನು ಮಾಡುವದಾಗಲಿ. ಕೇಡನ್ನು ಕೋರಿದವರಿಗೆ ಲೇಸನ್ನು ಬಯಸುವುದಾಗಲಿ, ಇರುವುದೇ ಸತ್ಯದ ರಹಸ್ಯವೆಂದು.

---

# ಭಾಷೆ ಮತ್ತು ಸಂಗೀತ

(ಲೇಖಕರು:- ಶ್ರೀ ಜಿ. ಎಸ್. ಜುಕ್ತಿಮಠ. ವಿಜಾಪೂರ)

ಇವೆರಡಕ್ಕೂ ಅನ್ಯೋನ್ಯ ಸಂಬಂಧವಿದೆ. ಭಾಷಾ ಸಾಹಿತ್ಯಕ್ಕೆ ಸಂಗೀತವು ಜೀವನವಿದ್ದಂತೆ. ಪಂಚಪ್ರಾಣವಿದ್ದಹಾಗೆ ಯಾವ ಭಾಷೆಯಾದರೂ ಪ್ರಗತಿ ಪಡೆಯುವಲ್ಲಿ ಸಂಗೀತವನ್ನು ಬಳಿಸಿಕೊಳ್ಳಬೇಕು. ಸಿನೇಮಾ ನೋಡಲು ಹೋದಾಗ ಅಲ್ಲದೆ ನಾಟಕ ನೋಡಲು ಹೋದಾಗ ಅಲ್ಲಿ ಸಾಹಿತಿಗಳೂ ಕೂಡ ಇದ್ದರೂ ಅಲ್ಲಿಯ ಸುತ್ತಲು ಸನ್ನಿವೇಶವನ್ನು ನೋಡಿ ಆನಂದ ಪಡೆಯುವರು. ಆದರೆ ಅದರೊಳಗಿನ ಎಷ್ಟೇ ಉತ್ತಮವಾದ ಮಾತುಗಳಿದ್ದರೂ ಪಾಠ ಮಾಡಿಕೊಂಡು ಬರುವದಿಲ್ಲ. ಬಂದರೂ ಎಷ್ಟು ಜನ ಪಾಠ ಮಾಡಿಕೊಂಡು ಬರಬಹುದು? ಅದೇ ಸಂಗೀತದ ಕಡೆ ಲಕ್ಷ್ಯ ಕೊಟ್ಟಲ್ಲಿ ಭಾಷೆ ತಿಳಿಯಲಿ, ತಿಳಿಯದಿರಲಿ, ಅದರಲ್ಲಿರುವ ಪದ್ಯಗಳನ್ನು ಎಷ್ಟು ಜನ ಅನ್ನಲು ಪ್ರಾರಂಭಿಸುವರು ಸಿನೇಮಾ ಗೀತೆಗಳ ಅರ್ಥ ತಿಳಿಯದಿದ್ದರೂ ಅವುಗಳನ್ನು ಸರ್ವ ಸಾಮಾನ್ಯ ಜನತೆಯು ಕೂಡಾ ಅನ್ನುವದು ಕಂಡುಬರುತ್ತದೆ. ಪದ್ಯಗಳನ್ನು ಪಾಠ ಮಾಡಬೇಕಾದಲ್ಲಿ ರಾಗ ತಾಳಗಳನ್ನು ಹೊಂದಿಸಿದ ಪದ್ಯವು ಬೇಗ ಪಾಠವಾಗುವದೋ ಅಥವಾ ರಾಗ ರಹಿತವಾದ ಪದ್ಯಗಳು ಬೇಗ ಪಾಠವಾಗುವವೋ? ಒಂದುವೇಳೆ ರಾಗ ರಹಿತವಾದ ಪದ್ಯವು ಪಾಠವಾದರೂ ಕೂಡಾ ಎಷ್ಟುದಿನ ನೆನಸಿನಲ್ಲಿ ಉಳಿಯಬಹುದು? ಅದೇರೀತಿ ರಾಗ ತಾಳಗಳನ್ನು ಹೊಂದಿಸಿದ ಪದ್ಯವು ಎಷ್ಟೇದಿನ ನೆನಪಿನಲ್ಲಿ ಉಳಿಯಬಹುದು. ಗೊಬ್ಬರ ಬಂಡಿ ಹೊಡೆಯುವ ರೈತನು ಕೂಡಾ ಪದ್ಯಗಳನ್ನು ಹೇಳುವದು ಕಂಡುಬರುತ್ತದೆ ಆದರೆ ಅವನನ್ನು ನೀನು ಈ ಪದ್ಯವನ್ನು ಎಲ್ಲಿ ಕಲಿತಿರುವೆ ಎಂದು ಕೇಳಿದಲ್ಲಿ ನಾವು ಸಣ್ಣವರು ಇದ್ದೇವು ಒಂದು ದೊಡ್ಡಾಟ ಮಾಡಿದ್ದೆವು, ಅದರೊಳಗಿಂದ ನನ್ನ ಸೋಗಿನ ಪದ ಎಂದು ಹೇಳುತ್ತಾನೆ. ೧೦ - ೧೫ ವರುಷ ಗತಿಸಿದರೂ ಆ ಪದ್ಯವು ಮಾತ್ರ ನೆನಪಿನಲ್ಲಿದೆ. ಆದರೆ ಆ ಪಾತ್ರದ ಮಾತು

ಗಳು ಮಾತ್ರ ನೆನಪಿನಲ್ಲಿಲ್ಲ. ಅಂದಮೇಲೆ ಭಾಷೆಯು ಪ್ರಗತಿಯನ್ನು ಹೊಂದಬೇಕಾದಲ್ಲಿ ಸಂಗೀತವನ್ನು ಹೆಚ್ಚಿಂದು ಬಳಸಿಕೊಂಡಲ್ಲಿ ಒಳ್ಳೇದು. ದಾಸ ಮತ್ತು ವಚನ ಸಾಹಿತ್ಯವು ಅಲ್ಲದೆ ಕವಿವರ್ಯ ಶ್ರೀ ಬೇಂದ್ರೆ ಯವರು ಶ್ರೀ ಕೆ. ವ್ಹಿ. ಪುಟ್ಟಪ್ಪನವರು ಮೊದಲಾದವರ ಕವನಗಳಬಗ್ಗೆ ವಿಚಾರಿಸಿದಲ್ಲಿ ರಾಗ ತಾಳಗಳನ್ನು ಹೊಂದಿಸಿ ಅನ್ನದ ಕವನಗಳು ಇನ್ನೂ ಎಷ್ಟೋ ಇದ್ದರೂ ಅವುಗಳು ಹೆಚ್ಚಾಗಿ ಪ್ರಚಾರದಲ್ಲಿಲ್ಲ! ನಮ್ಮ ನಾಡಿ ನಲ್ಲಿ ಅಕ್ಷರ ಅರಿತವರು ಬಹಳ ಕಡಿಮೆ. ಒಂದುವೇಳೆ ಓದು ಬಲ್ಲವ ರಿದ್ದರೂ ತಮ್ಮ ಉದ್ಯೋಗದಲ್ಲಿ ಊಟಕ್ಕೆ ಬಿಡುವು ಮಾಡಿಕೊಳ್ಳುವದೇ ಪರಾಕಷ್ಟ. ಇವ್ರುವರು ಇನ್ನು ಓದುವದೆಂತು? ಇನ್ನುಳಿದ ನಾಲ್ಕೆಂಟು ಜನ ಓದುಗರಿದ್ದರೂ ಇರಬಹುದು. ಆದರೆ ಇವರೆಲ್ಲರಿಗೂ ನಮ್ಮ ಸಾಹಿತ್ಯದ ಪರಿಚಯವಾಗಬೇಕು. ನಾಡಿನ ಸಲುವಾಗಿ ಕಳಕಳಿ ಹುಟ್ಟ ಬೇಕು. ನಾಡಿನ ಆಗು ಹೋಗುಗಳ ಪರಿಚಯವಿರಬೇಕಾದಲ್ಲಿ ಮೇಲಿ ನವರೆಲ್ಲರಿಗೂ ಮನರಂಜನೆಯು ಮೂಲಕವೇ ಸಾಧ್ಯ. ಇಲ್ಲಿ ಒಬ್ಬರು ಭಾಷಣಮಾಡುವನೆಂದರೆ ಎಷ್ಟು ಜನ ಕೂಡಬಹುದು? ಅಲ್ಲದೇ ಇಲ್ಲಿ ಡಪ್ಪಿನ ಪದಗಳಿವೆ. ಲಾವಣಿ ಪದಗಳಿವೆ. ನಾಟಕಗಳಿವೆ. ನೃತ್ಯ ಸಂಗೀತ ಗಳ ಕಾರ್ಯಕ್ರಮವಿದೆ ಎಂದಲ್ಲಿ ಎಷ್ಟು ಜನ ಸೇರಬಹುದು? ಬಿಡುವಿನ ವೇಳೆಯಲ್ಲಿ ಎಲ್ಲರಿಗೂ ಮನರಂಜನೆಯ ಕಾರ್ಯಕ್ರಮವು ಬೇಕೇ ಬೇಕಾದ ಕಾರಣ ಇದರ ಮೂಲಕವೇ ಸಾಹಿತ್ಯವನ್ನು ಒದಗಿಸಿಕೊಟ್ಟಲ್ಲಿ ರಾಷ್ಟ್ರಾ ಧ್ಯಕ್ಷರ ಅರಮನೆಯಿಂದ ಕಾರ್ಮಿಕರ ಗುಡಿಸಿಲಿನ ವರೆಗೂ ನಮ್ಮ ಭಾಷಾ ಸಾಹಿತ್ಯದಲ್ಲಿರುವ ವೈಭವವು ಪಸರಿಸುತ್ತದೆ. ನಾವು ಒಂದು ಕಥೆಯನ್ನು ಓದಿದರೆ ಎಷ್ಟುದಿನ ನೆನಪಿನಲ್ಲಿ ಉಳಿಯಬಹುದು. ಅದೇ ಕಥೆಯನ್ನು ನಾಟಕ ರೂಪದಲ್ಲಿ ಅಭಿನಯಿಸಿದ್ದನ್ನು ನೋಡಿದರೆ ನೆನಪಿನಲ್ಲಿ ಎಷ್ಟೋ ದಿನ ಉಳಿಯಬಹುದು. ಮೂರು ವರುಷದ ಮಗವು ಇರಲಿಕ್ಕೇನೇ ಭಗವದ್ಗೀತೆಯಲ್ಲಿಯ ಶ್ಲೋಕಗಳನ್ನಾಗಲಿ, ಗಾಂಧೀ ಆಶ್ರಮ ಭಜನಾ ವಳಿಯ ಗೀತೆಗಳನ್ನಾಗಲಿ ಶಿವಶರಣರ ಮತ್ತು ದಾಸರ ಪದ್ಯಗಳನ್ನಾಗಲಿ ಮುಂಜಾನೆ ಎದ್ದಕೂಡಲೇ ನಿತ್ಯ ಅನ್ನುವ ಪರಿಪಾಠವಿಟ್ಟಲ್ಲಿ ಆ ಮಗು ವಿಗೆ ಅದರ ಅರ್ಥ ತಿಳಿಯಲಿ, ತಿಳಿಯದಿರಲಿ, ನಮ್ಮ ಒತ್ತಾಯದ ಮೂಲಕ ನಿತ್ಯ ಅಂದು ಅಂದು, ಪಾಠ ಮಾತ್ರ ಆಗಿರುತ್ತದೆ. ಯಾರಾ ದರೂ ಮಹನೀಯರು ಬಂದಾಗ ಅವರ ಮುಂದೆ ಅನ್ನು ಎಂದಲ್ಲಿ ರಾಗ

ಸಹಿತ ನಾವು ಹೇಳಿಕೊಟ್ಟಂತೆ ಪ್ರಾರಂಭದಿಂದ ಮುಗಿಯುವ ವರೆಗೆ ಆ ಮಗು ಅನ್ನುತ್ತಾನೆ. ಇದರಂತೆಯೇ ಅವನು ನಿತ್ಯ ಅನ್ನುತ್ತಹೋಗಿ ಮುಂದೆ ದೊಡ್ಡವನಾದಾಗ, ವಿದ್ಯಾವಂತನಾದಾಗ ಮಾತ್ರ ಅವುಗಳ ಮಹತ್ವ ಮತ್ತು ಅರ್ಥ ಅವನಿಗಾದರೂ ತಿಳಿದು ಸಂತೋಷಪಟ್ಟಾನು. ಹಿರಿಯರಾದ ನಿಮ್ಮನ್ನು ಹೊಗಳಬಹುದು. ಅನುಕರಣ ಶಕ್ತಿಯು ಚಿಕ್ಕ ಮಕ್ಕಳಲ್ಲಿ ಹೆಚ್ಚಾಗಿರುವದರಿಂದ ಇದರ ದುರುಪಯೋಗವಾಗದಂತೆ ನೋಡಿಕೊಂಡು ನಮ್ಮ ರಾಷ್ಟ್ರಕ್ಕೆ ಮತ್ತು ನಾಡಿಗೆ ಈ ಪೀಳಿಗೆಯನ್ನು ಯಾವ ರೀತಿಯಿಂದ ತರಬೇತುಗೊಳಿಸಬೇಕು, ಎಂಬುದನ್ನೇ ಆಧಾರವಾಗಿಟ್ಟುಕೊಂಡು ಆ ರೀತಿ ಸರಕಾರದವರೂ ಕೂಡಾ ಪುಸ್ತಕಗಳನ್ನು ರಚಿಸಲು ಸಮಿತಿಯನ್ನು ನಿಯಮಿಸಿದ್ದು ಸಂತೋಷದ ಸಂಗತಿ. ಆದರೆ ಅದರಂತೆಯೇ ರೂಪ ನಕ್ಷೆಗಳನ್ನು ಮಾಡಿಸುವದು, ಕಟೆದು ಮೂರ್ತಿಯನ್ನು ತಯಾರಗೊಳಿಸುವ ಕಾರ್ಯವು, ಶಿಕ್ಷಕನಾದ ಶಿಲ್ಪಿಗನದು. ಈ ಶಿಲ್ಪಿಗನ ಕರ್ತವ್ಯವೇ ಮುಖ್ಯ ಕರ್ತವ್ಯವು. ಈ ಶಿಲ್ಪಿಗನು ಅನೇಕ ನಮೂನೆಯ ಕಲ್ಲುಗಳನ್ನು ಅನೇಕ ನಮೂನೆಯ ಮೂರ್ತಿಗಳನ್ನು ತಯಾರಗೊಳಿಸಬೇಕಾಗುವದರಿಂದ ಈ ಶಿಲ್ಪಿಗನು ಸಾಕಷ್ಟು ಪರಿಶ್ರಮ ಹೊಂದಿ ನಿಪುಣತೆಯನ್ನು ಹೊಂದದೆ ಗತ್ಯಂತರವಿಲ್ಲ. ಸರಕಾರದವರೂ ಕೂಡಾ ಶಿಲ್ಪಿಗನಿಗೆ ತಕ್ಕ ಸಲಕರಣೆಗಳನ್ನು ಒದಗಿಸಿಕೊಡದಿದ್ದಲ್ಲಿ ಸಾಧ್ಯವಾಗಲಾರದು. ಶಿಕ್ಷಣವು ಸುಗಮವಾಗಿ ಸಾಗಬೇಕಾದಲ್ಲಿ ಸಾಗಿದ್ದು ಅಳಿಯದೇ ಉಳಿಯಬೇಕೆಂದಲ್ಲಿ ಉಳಿದದ್ದು ಬೆಳೆಯಬೇಕೆಂದಲ್ಲಿ ಊಟದಲ್ಲಿ ನಂಜಿಕೊಳ್ಳಲು ಹಪ್ಪಳ, ಉಪ್ಪಿನಕಾಯಿಗಳನ್ನು ಉಪಯೋಗಿಸುವಂತೆ ಭಾಷೆಗೆ ಎಷ್ಟು ಪೋಷಕವು ಬೇಕೋ ಅಷ್ಟು ಸಂಗೀತವನ್ನು ಬಳಸಿಕೊಂಡು ತಿಳಿಯಾದ ಭಾಷೆಯಲ್ಲಿ ಎಲ್ಲ ವಿಷಯಗಳಲ್ಲಿ ಕವನಗಳನ್ನು ರಚಿಸಿ ಸರಾಗವಾಗಿ ಸರಳ ಧಾಟಿಗಳನ್ನು ಹೊಂದಿಸಿ ಚಿಕ್ಕಮಕ್ಕಳ ಮುಂದೆ ಮೊದಲು ಗುರುಗಳು ಅಂದಲ್ಲಿ ಮಕ್ಕಳುಕೂಡಾ ಅನ್ನಲು ಪ್ರಾರಂಭಿಸುವರು ಕೆಲವು ಶಿಕ್ಷಕರು ಈ ಮಾತಿಗೆ ಆಕ್ಷೇಪವನ್ನು ಎತ್ತುವರು. ಯಾಕೆಂದರೆ ಇದುವರೆಗೆ ಮನವರಿಕೆಯಾದ ಮಾತು "ನಮಗೆ ಧ್ವನಿಯೇ ಇಲ್ಲ. ಹೇಗೆ ಕಲಿಸಬೇಕು ? ಎಷ್ಟು ಪ್ರಯತ್ನ ಪಟ್ಟರೂ ಸಂಗೀತ ಬರಲಾರದು " ಈ ತಿಳುವಳಿಕೆಯು ನಮ್ಮ ಶಿಕ್ಷಕರಲ್ಲಿಯೇ ಅಲ್ಲದೆ ಸಂಗೀತ ಉತ್ಪತ್ತಿಗೆ ಆಧಾರವಾದ ನಮ್ಮ ನಾಡಿನಲ್ಲಿಯೇ ಈ ರೀತಿ ಹೆಚ್ಚಾಗಿ ಬೇರೂರಿದ್ದು ವಿಷಾದಕರವು.

ಈ ಮಾತಿನ ಕಡೆಗೆ ಲಕ್ಷಗೊಟ್ಟಲ್ಲಿ, ಉಳವೆ, ಗೋಕರ್ಣ, ರಾಮೇಶ್ವರ, ಕಾಶಿ, ಪಂಢರಪುರ ಈ ಊರುಗಳು ದೂರಿನಲ್ಲಿದ್ದ ನಮಗೆ ಒಳ್ಳೇ ಭಕ್ತಿಯನ್ನುಂಟುಮಾಡುತ್ತವೆ. ಆದರೆ ಅಲ್ಲಿಯೇ ಇದ್ದವರು ಒಂದು ದಿನ ವಾಪರೂ ದೇವಾಲಯಕ್ಕೆ ಹೋಗಿ ನಮಸ್ಕರಿಸುವದಿಲ್ಲವೆನ್ನುವದು ಕಂಡು ಬರುತ್ತದೆ. ವಿಜಾಪೂರದಲ್ಲಿ ಗೋಳಗುಮುಟವನ್ನು ವಿಜಾಪೂರದವರೇ ಇನ್ನೂ ನಾನು ಒಳಗೆ ಹತ್ತಿ ನೋಡಿಲ್ಲವೆನ್ನುವವರು ಎಷ್ಟೋ ಜನ ಸಿಗುತ್ತಾರೆ. ಇದು ಗುಣಧರ್ಮವೇ ಇದೆ. ಆದರಂತೆ ಈ ಮಾತು ಸಂಗೀತದಲ್ಲಿಯಾದರೂ ಅನ್ವಯಿಸುವದು ಈ ವಿಷಯದ ಬಗ್ಗೆ ಸರಿಯಾಗಿ ವಿಚಾರಿಸದೆ ಮತ್ತು ಒಲವು ಕೂಡಾ ತೋರಿಸದೆ ತಾತ್ಸಾರರೀತಿಯಿಂದ ಅನ್ನುವ ಮಾತುಗಳಿಂದು ನನಗೆ ಕಂಡು ಬಂದಿದೆ. ಮನುಷ್ಯನಿಗೆ ಎಲ್ಲ ರುಚಿಗಳು ಸೇರುತ್ತಿದ್ದರೂ ಒಂದೊಂದು ರುಚಿಯು ಮಾತ್ರ ಒಬ್ಬೊಬ್ಬರಿಗೆ ಹೆಚ್ಚಾಗಿ ಸೇರುತ್ತದೆ. ಒಬ್ಬನಿಗೆ ಖಾರ ಹೆಚ್ಚು ಸೇರಬಹುದು. ಮತ್ತೊಬ್ಬರಿಗೆ ಸಿಹಿಯು ಹೆಚ್ಚು ರುಚಿಸಬಹುದು. ಆದರೆ ಉಳಿದ ರುಚಿಗಳು ಸೇರುವದಿಲ್ಲವೆಂದು ತಿಳಿಯಬಹುದೋ ? ಹಾಗೆಯೇ ಸೃಷ್ಟಿ ನಿಯಮಿತವಾದ ಈ ಕಲೆಗಳು ಪ್ರತಿಯೊಬ್ಬನ ಸಲುವಾಗಿಯೇ ಉಂಟು. ಊಟದಲ್ಲಿಯ ರುಚಿಯಂತೆ ಒಬ್ಬೊಬ್ಬರಿಗೆ ಒಂದೊಂದು ಕಲೆಯು ಹೆಚ್ಚಾಗಿ ಸೇರಬಹುದು. ಅದರಲ್ಲಿಯೇ ನಿಪುಣನಾಗಬಹುದು. ಆದರೆ ಆದರಲ್ಲಿ ಅಭಿರುಚಿ ಇಲ್ಲವೆನ್ನಬಹುದೇ ? ವ್ಯವಹಾರದಲ್ಲಿ ನಿತ್ಯ ಉಪಯೋಗಬೀಳುವಷ್ಟು ಕಲೆಯು ಸಾಧ್ಯವಾಗದೇ ಇರದು.

ಉದಾಹರಣೆಗಾಗಿ ಚಿತ್ರಕಲೆ ತೆಗೆದುಕೊಳ್ಳೋಣ. ಪ್ರಯತ್ನಪಟ್ಟರೆ ಚಿಮಣಿ, ಮೇಜು, ಖುರ್ಚಿ, ಶೀಸೆ, ಮನುಷ್ಯ, ಆದರೆ ಮನುಷ್ಯನ ಆಕಾರ ದನ, ಇವುಗಳನ್ನು ಚಿತ್ರಿಸಲು ಸರ್ವ ಸಾಮಾನ್ಯನಿಗೂ ಕೂಡಾ ಸಾಧ್ಯವಿದೆ. ಒಂದು ಕ್ಲಾಸಿನಲ್ಲಿಯ ವಿದ್ಯಾರ್ಥಿಗಳನ್ನು ವಿಚಾರಿಸಿದಲ್ಲಿ ಎಲ್ಲರೂ ಸರ್ಟಿಫಿಕೇಟು ಪಡೆದದ್ದನ್ನು ನೋಡಿದರೆ ಎಲ್ಲರೂ ಸರಿಸಮಾನರಿರುವದು ಕಂಡುಬರುತ್ತದೆ. ಆದರೆ ನಿಜವಾಗಿ ವಿಚಾರಿಸಿದಲ್ಲಿ ಒಬ್ಬ ವಿದ್ಯಾರ್ಥಿಯು ಚಿತ್ರಕಲೆಯಲ್ಲಿ ನಿಪುಣನಿದ್ದದ್ದು ಕಂಡುಬರುತ್ತದೆ. ಒಬ್ಬನು ವಕ್ತೃತ್ವ ಕಲೆಯಲ್ಲಿ, ಮತ್ತೊಬ್ಬನು ಕವನಕಟ್ಟುವದರಲ್ಲಿ, ಮತ್ತೊಬ್ಬನು ಸಂಗೀತ ಕಲೆಯಲ್ಲಿ ನಿಪುಣನಿದ್ದದ್ದು ಕಂಡುಬರುತ್ತದೆ. ಇದರ ಬಗ್ಗೆಯೇ

ಊಟದ ರುಚಿಗಳ ಉದಾಹರಣೆಯನ್ನು ಅರಿಸಿಕೊಂಡದ್ದು ಉಳಿದ ಕಲೆಗಳು ಬರುವದಿಲ್ಲವೆಂದಲ್ಲಿ ವ್ಯವಹಾರದಲ್ಲಿ ಎಷ್ಟು ಬೇಕು ಅಷ್ಟು ಮಾತ್ರ ಬಂದೇಬರುವವು. ಒಬ್ಬನು ಮಾತನಾಡಿದರೆ ಎಲ್ಲರೂ ಮೆಚ್ಚುವರು ಎಂದು ನಾವೂ ಅವನಂತೆಯೇ ಆಗಬೇಕೆಂದು ಪ್ರಯತ್ನಪಟ್ಟರೆ ಅದು ಸಾಧ್ಯವಾಗಲಾರದು. ಯಾಕೆ? ಅದುವೇ ದೇವದತ್ತ ಗುಣವೆನ್ನುವುದು ಹಾಗಾದರೆ ನಮಗೆ ಮಾತನಾಡಲು ಬರುವದಿಲ್ಲವೇ? ಬರುತ್ತದೆ ವಕ್ತೃತ್ವ ಕಲೆಯುಳ್ಳವನಂತೆ ಮಾತ್ರ ಬರಲಾರದು. ಅದರಂತೆಯೇ ಸಂಗೀತ ವಿಷಯಕ್ಕಾದರೂ ಉಂಟು ಕೆಲವು ಕವನಗಳಲ್ಲಿ ಕೇವಲ ಮಾತ ನಾಡಿದಂತೆ ಅಂದರೆ ಗದ್ಯಕ್ಕೂ ಪದ್ಯಕ್ಕೂ ಭೇದವೇ ತೋರುವದಿಲ್ಲ. ಇದಾದರೂ ತಿಳಿಯುವಸಲುವಾಗಿಯಾದರೂ ಸ್ವಲ್ಪ ಸಂಗೀತವನ್ನು ಉಪಯೋಗಿಸಬೇಕಾಗುವದು.

ಸಂಗೀತವೆಂದ ಮಾತ್ರಕ್ಕೆ ಬಾನುಲಿಯಲ್ಲಿ ತಾನುಗಳನ್ನು ಹೊಡೆಯುವ ಗವಾಯಿಗಳನ್ನೇ ಆದರ್ಶವಾಗಿಟ್ಟುಕೊಳ್ಳತಕ್ಕದ್ದಲ್ಲ. ಪ್ರೌಢಶಿಕ್ಷಣದ ಉದಾಹರಣೆಯಂತೆ ತನ್ನ ಸಹಿಯಾದರೂ ಬರಯಲು ಬಂದರೆ ಸಾಕು ಎಂದು ಕಲಿಯಲು ಪ್ರಾರಂಭಿಸಿದವನು ಒಮ್ಮೆಲೇ ಸುಪ್ರಸಿದ್ಧ ಸಾಹಿತಿಗಳಾದ ಕವೀಂದ್ರ, ರವೀಂದ್ರನಾಥರ, ದಿವಂಗತ ಬಿ ಎಮ್ ಶ್ರೀ ಕಂಠಯ್ಯನವರ ಅಲ್ಲದೆ ಈಗಿರುವರಾದ ಕವಿವರ್ಯ ಬೇಂದ್ರೆಯವರ, ಶ್ರೀ ಕೆ. ವ್ಹಿ. ಪುಟ್ಟಪ್ಪನವರಂತೆ ನಾನೂ ಆಗಬೇಕೆಂಬ ಧ್ಯೇಯವನ್ನು ಧರಿಸಿದಲ್ಲಿ ಮನಸ್ಸು ಮಾಡಿದಲ್ಲಿ ಸಾಧ್ಯವಾಗಬಹುದೋ? ಸಾಧ್ಯವಾಗಬಹುದು. ಮೇಲಿನವರು ಇಷ್ಟು ಸುಪ್ರಸಿದ್ಧ ಸಾಹಿತಿಗಳೆಂದು ಹೊಗಳಿಸಿಕೊಳ್ಳುವಲ್ಲಿ ನಕ್ಷತ್ರಗಳ ಸಮೂಹದಲ್ಲಿ ಚಂದ್ರನು ಮಿಗಿಲಾಗಿ ತೋರುವಂತೆ ಈ ಸಾಹಿತಿಗಳು ನಮಗೆ ಕಾಣಬಹುದು. ಈ ಸಾಹಿತಿಗಳಾಗಬೇಕಾದಲ್ಲಿ ಎಷ್ಟು ಅಭ್ಯಾಸ ಮಾಡಿರುವರು? ಭಾಷಾ ಸಾಹಿತ್ಯದ ತಪಸ್ಸನ್ನು ಎಷ್ಟು ಆಚರಿಸಿ ಅದನ್ನು ಪ್ರಸನ್ನೀಕರಿಸಿಕೊಂಡಿದ್ದಾರೆ? ಇವರು ಎಷ್ಟು ವೇಳೆ ಖರ್ಚು ಮಾಡಿ ಎಷ್ಟು ಗ್ರಂಥಗಳನ್ನು ಓದಿದ್ದಾರೆ? ಇವೆಲ್ಲವುಗಳನ್ನು ವಿಚಾರಿಸಿ ಪ್ರಯತ್ನ ಪಟ್ಟಲ್ಲಿ ಮಾತ್ರ ಅದೂ ಸ್ವಲ್ಪ ಏನೋ ಸಾಧ್ಯವಾದರೆ ಆಗಬಹುದು. ಇಲ್ಲದಿದ್ದರೆ ಇಲ್ಲ.

ಕಾಲುನಡಿಗೆಯಿಂದ ಮುನ್ನೂರು ಗಾವುದ ಮುಂದೆ ಹೋದ ಮನುಷ್ಯನನ್ನು ನಾನು ಪ್ಲೇನಿನಲ್ಲಿ ಹೋಗಿ ಅರ್ಧತಾಸಿನಲ್ಲಿಯೇ ಮುಟ್ಟಬಹುದಲ್ಲ, ಎಂಬುದೊಂದು ಪ್ರಶ್ನೆ. ಕಾಲು ನಡಿಗೆಯಿಂದ ಹೋದ ಮನುಷ್ಯನು ಎಡಬಲದ ಎಲ್ಲ ಸವಿಸ್ತಾರ ಪರಿಚಯವನ್ನು ಪಡೆಯುತ್ತ ಎಲ್ಲ ರೀತಿಯ ಅನುಭವವನ್ನು ಹೊಂದುತ್ತ, ಎಲ್ಲಿ ಏನೇನು ಇವೆ. ಇವುಗಳ ಕಲ್ಪನೆಯು ಆಗಲು ಸಾಕಷ್ಟು ಸಮಯ ಸಿಗುವದು. ಆದರೆ ಪ್ಲೇನಿನಲ್ಲಿ ಹೋದವನಿಗೆ ಹತ್ತಿದ ಸ್ಥಳ, ಇಳಿದಸ್ಥಳ, ಇವುಗಳ ಪರಿಚಯವು ಮಾತ್ರ ಆಗುವದು. ಒಬ್ಬ ಪೈಲವಾನನನ್ನು ನೋಡಿ ಅಶಕ್ತನೂ ಕೂಡಾ ನಾನೂ ಒಂದೇ ದಿನದಲ್ಲಿ ಪೈಲವಾನನಾಗಬೇಕೆಂದು ತಿಳಿದು ಸಾವಿರ ಸಾಮು ತೆಗೆಯಲು ಪ್ರಯತ್ನ ಪಟ್ಟು ಕೊಡ ಹಾಲನ್ನು ಕುಡಿದು ಅದನ್ನು ಅರಗಿಸಿಕೊಳ್ಳದೆ ಹೊಟ್ಟೆಯುಬ್ಬಿ ಕೈಲಾಸ ಕಂಡಂತೆಯೇ ಸರಿ.

ಇದೇ ಮಾತು ಸಂಗೀತಕ್ಕೆ ಸಂಬಂಧಿಸುವದು ಸಂಗೀತ ಬಂದ ಕೂಡಲೆ ತಾನಗಳನ್ನು ಹೊಡೆಯುವ ರಾಗ ಬೆಳೆಸುವ ಗವಾಯಿಗಳ ನಿಪುಣತೆಯು ಇಲ್ಲಿ ಬೇಕಿಲ್ಲ. ಪದ್ಯಗಳ ಭಾವ ಹೊರಡುವ ಸಲುವಾಗಿ ಕೇಳುವವರ ಕರ್ಣಕ್ಕೆ ಕಠೋರವಾಗದಂತೆ ಸ್ವಲ್ಪ ಇಂಪಾಗುವಂತೆ ಸರಾಗವಾಗಿ ಸರಳ ಧಾಟಿಯಲ್ಲಿ ಕಾವ್ಯಕ್ಕೆ ಪ್ರಾಧಾನ್ಯತೆಕೊಟ್ಟು ಅನ್ನುವ ಕಾವ್ಯಗಾಯನವು ಇಲ್ಲಿ ಬೇಕಾಗಿದೆ. ಇಷ್ಟು ಮಾತ್ರ ಅನ್ನಲು ಪ್ರತಿಯೊಬ್ಬರಿಗೂ ಸಾಧ್ಯವಿದೆ. ಒಂದು ಕೊಡ ನೀರು ಸುರುವಿದರೆ ಏನೂ ಆಗಲಾರದು. ಹಾಗೆಯೇ ಧಾರಾಕಾರವಾಗಿ ನೀರು ಬೀಳಹತ್ತಿದರೆ, ನೀರು ಹರಿದು ಅಲ್ಲಿ ಹಳ್ಳದಾಕಾರ ಕೊರಕಲು ಬೀಳುತ್ತಿದೆ. ಅದರಂತೆಯೇ ಮೊದ ಮೊದಲು ಒಂದೊಂದೇ ಕವಿತೆಯನ್ನು ಬಿಡದೆ ನಿತ್ಯವೂ ಅಂದಲ್ಲಿ ತಾನೇ ಬರುವದು. ಗವಾಯಿ ಗಳ ದೃಷ್ಟಿಯಿಟ್ಟುಕೊಂಡಲ್ಲಿ ಮೇಲಿನ ಉದಾಹರಣೆಯೇ ಸಾಕು. ನಾಲ್ಕುಜನರನ್ನು ಕೂಡ್ರಿಸಿ ಕ್ಯಾಮರಾದಿಂದ ಫೋಟೋ ತೆಗೆದಂತೆಯೇ ಕ್ಯಾಮರಾದ ಆಧಾರವಿಲ್ಲದೆ ಕೇವಲಿ ಕುಂಚಿನಿಂದ ತೆಗೆಯಲು ಹೋದಲ್ಲಿ ಇದು ಒಮ್ಮೆವೆಗ್ಗ ಚಿತ್ರಕಲೆಯ ಶಿಕ್ಷಕರಿಗೂ ಕೂಡಾ ಸಾಧ್ಯವಾಗಲಿಕ್ಕಿಲ್ಲ ಅಂದಮೇಲೆ ಚಿತ್ರಕಲೆಯನ್ನು ಅವಶ್ಯಕ ಅಭ್ಯಾಸಪತ್ರಿಕೆಯಲ್ಲಿ ಸೇರಿಸಿ ಅನುಕೂಲಮಾಡಿದ್ದಷ್ಟೇ ಅಲ್ಲ, ಕೆಲವು ಪರೀಕ್ಷೆಗಳಲ್ಲಿ ಅಂದೊಂದ ವಿಷಯದಲ್ಲಿ ನಾಪಾಸಾದರೆ ಎಲ್ಲ ವಿಷಯಗ

ಳಲ್ಲಿಯೂ ನಾಪಾಸು ಎಂದು ಗಣಿಸಲಾಗುವದು. ಅದಕ್ಕಿಂತಲೂ ಸರಳವಾದ ಕಲೆಯನ್ನು ಐಚ್ಛಿಕವಾಗಿ ಇಟ್ಟಿದ್ದರಿಂದಲೇ ಎಷ್ಟೋ ವಿದ್ಯಾರ್ಥಿಗಳು ಇದಕ್ಕೆ ಲಕ್ಷಕೊಡುವದಿಲ್ಲ. ಸರಕಾರದವರೂ ಕೂಡಾ ಈ ರೀತಿಯಾಕೆ ಮಾಡಿದರೋ ತಿಳಿಯದಾಗಿದೆ. ಈ ಲಲಿತ ಕಲೆಗಳು ಒಂದಕ್ಕೊಂದು ಸಂಬಂಧವಿವೆ. ಕಣ್ಣು, ಮೂಗು, ನಾಲಿಗೆ, ಕಿವಿಗಳು ಮನುಷ್ಯನಿಗೆ ಹೇಗೆ ಅವಶ್ಯವೋ, ಹಾಗೆಯೇ ಆಯಾಯ ಕಾರ್ಯಗಳು ಆಯಾಯ ಕಲೆಗಳಿಂದಲೇ ಸಾಧ್ಯ. ನೋಡಲು ಕಣ್ಣು ಬೇಕಾಗುವಂತೆ ಕಲೆಗಳಲ್ಲಿಯೂ ಒಂದರಿಂದ ಆಗುವ ಕಾರ್ಯವನ್ನು ಇನ್ನೊಂದರಿಂದ ಸಾಧ್ಯವಿಲ್ಲ. ಮನುಷ್ಯನಿಗೆ ಕಣ್ಣು, ಮೂಗು, ಕಿವಿಗಳು ಹೇಗೆ ಅವಶ್ಯವೋ ಹಾಗೆಯೇ ಲಲಿತ ಕಲೆಗಳೂ ಕೂಡಾ ಶಿಕ್ಷಣದಲ್ಲಿ ಅವಶ್ಯವಾಗಿವೆ. ಕವಿಯು ಕವನ ಕಟ್ಟಿದ ಮೇಲೆ ಅವನ ಕೆಲಸ ಮುಗಿಯಿತು. ಆ ಪದ್ಯವನ್ನೇ ಚಿತ್ರಕಲಾವಿದನು ನೋಡಿ ಪದ್ಯದ ಭಾವಕ್ಕನುಸರಿಸಿ ಚಿತ್ರಿಸುತ್ತಾನೆ. ಅದೇ ಪದ್ಯವನ್ನು ಸಂಗೀತ ಕಲಾವಿದನು ತೆಗೆದುಕೊಂಡು ಭಾವಪೂರಿತವಾಗುವಂತೆ ರಾಗತಾಳಗಳನ್ನು ಹೊಂದಿಸಿ ಜನ ಸಮೂಹದಲ್ಲಿ ಅಂದು ಏಕಕಾಲಕ್ಕೆ ಸಾವಿರಾರು ಶ್ರೋತೃಗಳಿಗೆ ಕೇಳಿಸಿ ಪ್ರಚಾರದಲ್ಲಿ ತರುವನು. ಭಾಷೆಯನ್ನು ಪ್ರಗತಿಗೆ ತರಲು ಕವಿಗಳನ್ನು ಬೆಳಕಿಗೆ ತರಲು, ಶಿಕ್ಷಣವನ್ನು ಸುಗಮವಾಗಿ ಸಾಗಿಸಲು ಇಷ್ಟೇ ಅಲ್ಲ, ರಾಷ್ಟ್ರದ ಮೇಲ್ಮೆಯೂ, ಅವನತಿಯೂ ಕೂಡಾ ಲಲಿತ ಕಲೆಗಳನ್ನೇ ಅವಲಂಬಿಸಿವೆ.

ವಾಚಕ ಮಹಾಶಯರೇ, ಇದನ್ನು ನೀವೇ ಹೆಚ್ಚಾಗಿ ವಿಚಾರಿಸಿದಲ್ಲಿ ತಾನೇ ತಿಳಿಯುವದು. ಶಿಕ್ಷಣದಲ್ಲಿಯೂ ಸಮಾಜದಲ್ಲಿಯೂ ಹೆಜ್ಜೆ ಹೆಜ್ಜೆಗೆ ಉಪಯೋಗಬೀಳುವ ಸಂಗೀತ ಕಲೆಯ ಕಡೆಗೆ ಸರಕಾರವು ಹೆಚ್ಚಾಗಿ ಲಕ್ಷಕೊಡಬೇಕು. ಚಿತ್ರಪಟದಲ್ಲಿಯು ಕೆಲವು ಸನ್ನಿವೇಶಗಳನ್ನು ತೆಗೆದು ಕೊಳ್ಳುವ ಎಲ್ಲರೂ ಮಲಗಿರುತ್ತಾರೆ. ಕಳವು ಮಾಡಲು ಕಳ್ಳನು ಬರುತ್ತಿರುತ್ತಾನೆ. ಚಿತ್ರದಲ್ಲಿಯ ಆ ಸನ್ನಿವೇಶದ ಭಾವವು ಮನಸ್ಸಿನಲ್ಲಿ ಮೂಡುವಂತೆ ಕೆಲ ಕೆಲವು ವಾದನಗಳನ್ನು ಸನ್ನಿವೇಶಕ್ಕನುಸರಿಸಿ ಸಮಂಜಸವಾಗುವಂತೆ ಕೆಲ ಕೆಲವು ರಾಗಗಳನ್ನು ಆಲಾಪನೆಯನ್ನು ಮಾಡುವದು ಕಂಡು ಬರುತ್ತದೆ. ಸಂಗೀತವನ್ನು ಉಪಯೋಗಿಸುವದರಿಂದ ಬಹಳ

ರಾತ್ರಿಯಾದಂತೆ, ಭಯಾನಕ ದೃಶ್ಯವು ಮನಸ್ಸಿನಲ್ಲಿ ಮೂಡುತ್ತದೆ. ಆದರೆ ಅದನ್ನು ಇಲ್ಲಿ ಮಾತಿನಿಂದ ತಿಳಿಸಲು ಸಾಧ್ಯವಿಲ್ಲ. ಕವೀಂದ್ರ ರವೀಂದ್ರನಾಥ ಠಾಕೂರರವರು "ಯಾವದೊಂದು ಗಹನವಾದ ವಿಚಾರವನ್ನು ತಿಳಿಸಲು ಮತ್ತು ಅದನ್ನು ಪರಿಣಾಮಿಯಾಗುವಂತೆ ಮಾಡಲು ಸಂಗೀತದ ಅವಶ್ಯಕತೆ ಇದೆ" ಎಂಬ ಮಾತನ್ನು ಅಂದಿದ್ದಾರೆ. ಮತ್ತೊಂದು ಸ್ಥಳದಲ್ಲಿ 'ಮಾನವನು ಮಾತುಗಳಿಂದ, ಸಂವಾದದಿಂದ ತಿಳಿಸಲಾಗದ ವಿಷಯಗಳನ್ನು ಸಂಗೀತದಿಂದ ತಿಳಿಸಲು ಸಾಧ್ಯವಿದೆ. ಮಾತು ನಿಂತಾಗ ಸಂಗೀತಕ್ಕೆ ಶರಣು ಹೋಗಲೇ ಬೇಕಾಗುವದು.' ಎಂದು ಅಂದಿದ್ದಾರೆ. ನೀವೆಲ್ಲರೂ ವೀರಾವೇಶದಿಂದ ನಡೆಯಿರಿ ಅಂದರೆ ಹೇಗೆ ಅದೇ ಅದಕ್ಕೆ ತಕ್ಕಂತೆ ಕೆಲವು ಸ್ವರಗಳಿಂದ ತಕ್ಕತಾಳಗಳಿಂದ ಆ ರೀತಿ ವಾದನಗಳನ್ನು ಪ್ರಾರಂಭಿಸಿದರೆ ತಾನೇ ಭಾವವು ಬರುವದು. ಈಗ ಹೆಣ್ಣಿನಂತೆ ಪೋಷಾಕು (ಡ್ರೆಸ್) ಮಾಡದೆ ಹೆಣ್ಣಿನಂತೆ ಅಭಿನಯಿಸು ಎಂದಲ್ಲಿ ಅದು ಕಠಿಣ. ಯಾರಾದರೂ ಖಡ್ಗ ತಂದದ್ದನ್ನು ನೋಡಿ ಅವನ್ನು ನಮ್ಮ ಕೈಯಲ್ಲಿ ತೆಗೆದುಕೊಂಡು ನೋಡುವದರಲ್ಲಿಯೇ ವೀರಾವೇಶ ತಾಳಿದಂತೆ ಪದ್ಯದಿಂದ ಹೊರಡಿಸಲು ಸಂಗೀತದಿಂದಲೇ ಸಾಧ್ಯವು.

ಕೊನೆಯ ಮಾತು "ಮಾತುಗಳಿಂದ ತಿಳಿಸಲು ಸಾಧ್ಯವಾಗದ ಸನ್ನಿವೇಶದ ಭಾವವನ್ನು ಸಂಗೀತದಿಂದ ತಿಳಿಸಲು ಸಾಧ್ಯವಿದೆ. ಮತ್ತು ಮರಣೋನ್ಮುಖದಲ್ಲಿದ್ದ ಮಾನವನನ್ನು ಕೂಡಾ ಚೇತನಗೊಳಿಸುವ ಶಕ್ತಿ ತಾಳದಲ್ಲಿದೆ."

# ಶ್ರೀಯುತ ರಾ॥ಬ॥ ಫ ಗು. ಹಳಕಟ್ಟಿ

## ಬಿ. ಏ ಎಲ್. ಎಲ್. ಬಿ. ಇವರ

## ಸನ್ಮಾನಪತ್ರ ಸಮಾರಂಭ

ಈ ಸಮಾರಂಭವು ೨೯ | ೧೦ | ೫೦ ನೇ ತಾರೀಖಿನ ದಿವಸ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀಯುತ ಶ್ರೀನಿವಾಸ ಮೂರ್ತಿಗಳ ಅಧ್ಯಕ್ಷತೆಯಲ್ಲಿ ಪರಿಷನ್ಮಂದಿರದಲ್ಲಿ ಬಹು ವಿಜೃಂಭಣೆಯಿಂದ ನೆರವೇರಿತು. ಸಭಾಭವನದಲ್ಲಿ ನಗರದಲ್ಲಿಯ ಪ್ರಮುಖರೂ ಸಾಹಿತಿಗಳೂ ಸೇರಿದ್ದಲ್ಲದೆ ಶ್ರೋತೃವೃಂದವು ೬-೭ ನೂರರ ವರೆಗೂ ಇದ್ದಿತು.

ಆರಂಭದಲ್ಲಿ ಅಧ್ಯಕ್ಷರು ಸಭೆಯನ್ನು ಕರೆದಿದ್ದರ ಉದ್ದೇಶವನ್ನು ತಿಳಿಸಿ ಹೇಳಿದರು. ಆಮೇಲೆ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಕೆ. ಬಿ. ಧರಣೇಂದ್ರಯ್ಯ ಕಾಲೇಜ ಇವರು ಮಾನಪತ್ರವನ್ನು ಓದಿಹೇಳಿ ಅದನ್ನು ಗಂಧದ ಕರಂಡಿಕೆಯಲ್ಲಿ ರಾ || ಬ || ಫ. ಗು. ಹಳಕಟ್ಟಿ ಇವರಿಗೆ ಅರ್ಪಿಸಿದರು. ಅವರಿಗೆ ಒಂದು ಶಾಲೂ ಕೂಡ ಅರ್ಪಿಸಲ್ಪಟ್ಟಿತು. ಆಮೇಲೆ ಮಾನಪತ್ರಕ್ಕೆ ರಾ || ಬ || ಹಳಕಟ್ಟಿಯವರು ಉತ್ತರಕೊಟ್ಟಬಳಿಕ ಅಧ್ಯಕ್ಷರು ತಮ್ಮ ಸಮಾರೋಪಣ ಭಾಷಣವನ್ನು ಮಾಡಿದರು. ಮಾನಪತ್ರವೂ ರಾ || ಬ || ಹಳಕಟ್ಟಿಯವರ ಭಾಷಣವೂ ಕೆಳಗೆ ಕೊಡಲ್ಪಟ್ಟಿರುತ್ತವೆ.

## ಸನ್ಮಾನ ಪತ್ರ.

ಸನ್ಮಾನ್ಯರೇ,

ಪ್ರಾಚೀನ ವಿಜಯಪುರದ ನಿವಾಸಿಗಳೂ ಭಕ್ತಿ ಭಾಂಡಾರಿ ಬಸವಣ್ಣನವರ ಬಾಗೇವಾಡಿಯ ಸಮೀಪಸ್ಥರೂ ವಚನಶಾಸ್ತ್ರಪಿತಾಮಹರೂ ಮಹಾ ಶಿವಾನುಭವಿಗಳೂ ಶರಣಸಾಹಿತ್ಯ ಪ್ರಚಾರಕ್ಕಾಗಿ ಅವಿಶ್ರಾಂತ

ವಾಗಿ ದುಡಿಯುತ್ತಿರುವ ಕನ್ನಡನಾಡಿನ ಸತ್ಪುರುಷರೂ ಆದ ತಮ್ಮನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಬರಮಾಡಿಕೊಂಡು ತಮಗೆ ಕನ್ನಡನಾಡಿನ ಕೃತಜ್ಞತೆಯನ್ನು ಸಲ್ಲಿಸುವ ಭಾಗ್ಯ ನಮಗೆ ದೊರೆತುದಕ್ಕಾಗಿ ನಮಗೆಲ್ಲ ಬಹಳ ಸಂತೋಷವಾಗಿದೆ. ಕನ್ನಡಜನತೆಯು ಪರವಾಗಿ ತಮಗೆ ಆದರದ ಸ್ವಾಗತವನ್ನು ನೀಡುತ್ತೇವೆ. ಈ ದಿನ ಪರಿಷತ್ತಿನ ಚರಿತ್ರೆಯಲ್ಲಿ ಶುಭದಿನ. ತಾವು ನಮ್ಮಲ್ಲಿ ವಿಶ್ವಾಸವಿಟ್ಟು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಇಲ್ಲಿಗೆ ದಯಮಾಡಿಸಿದುದಕ್ಕಾಗಿ ತಮಗೆ ನಾವು ಋಣಿಗಳಾಗಿದ್ದೇವೆ.

ಕನ್ನಡ ಸಾಹಿತ್ಯದ ತಪೋವನದಲ್ಲಿ ಋಷಿಗಳಂತಿರುವ ಮಹಾ ಶಿವಶರಣರ ಉಪನಿಷತ್ ಸದೃಶವಾದ ವಚನಗಳ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಟ್ಟ ಮಹೋಪಕಾರಿಗಳು ತಾವು. ಆ ವಚನಾಮೃತ ಧಾರೆಯಿಂದ ವಿಶಾಲ ಮನೋಭಾವ ಮತ್ತು ವಿಶ್ವಪ್ರೇಮಗಳು ಪುನರುಜ್ಜೀವಿತವಾಗುವಂತೆ ಶರಣಪಂಥ ಕ್ಷೇತ್ರದಲ್ಲಿ ಕೃಷಿಮಾಡಿದ ಕೃಷೀವಲರು ತಾವು. ಸ್ವಮತೀಯರನ್ನೂ ಪರಮತೀಯರನ್ನೂ ಸಂಕೋಚಭಾವನೆಗಳಿಲ್ಲದಂತೆ ಮುಕ್ತರನ್ನಾಗಿ ಮಾಡಿ ಸರ್ವಮತೀಯರೂ ಪರಮತಸಹಿಷ್ಣುಗಳಾಗಿ ಉತ್ತಮ ಸಾಹಿತ್ಯಕ್ಕೆ ಆಕರ್ಷಿತರಾಗುವಂತೆ ಆದರ್ಶವನ್ನು ಮುಂದಿಟ್ಟ ಆಚಾರ್ಯಪುರುಷರು ತಾವು. ಸಂಪ್ರದಾಯಸ್ಥರಿಗೆ ಅಹಿತವಾದರೂ ಸತ್ಯವನ್ನೇ ಎತ್ತಿ ಹಿಡಿಯಬೇಕೆಂದು ಸಂಶೋಧನ ಕಾರ್ಯಗಳನ್ನು ನಡೆಸಿಯೂ, ನಡಸುವವರಿಗೆ ಬೆಂಬಲವಿತ್ತೂ ಧೈರ್ಯ ಸ್ಥೈರ್ಯಗಳನ್ನು ಪ್ರಕಾಶಪಡಿಸಿದ ಮಹಾನುಭಾವರು ತಾವು.

'ಶಿವಾನುಭವಪತ್ರಿಕೆ', 'ಶಿವಾನುಭವ ಗ್ರಂಥಮಾಲೆ' ಮತ್ತು 'ನವಕರ್ನಾಟಕ' ಗಳನ್ನು ಹಲವಾರುವರ್ಷಗಳಿಂದ ನಡಸಿಕೊಂಡು ಬರುತ್ತ ಕಷ್ಟಗಳನ್ನು ಲೆಕ್ಕಿಸದೆ ನಾಡುನುಡಿಗಳ ಸೇವೆಯನ್ನು ಏಕನಿಷ್ಠೆಯಿಂದ ಮಾಡುತ್ತ ಪತ್ರಿಕೋದ್ಯೋಗಿಗಳಿಗೂ ಸಾಹಿತ್ಯ ಸೇವಕರಿಗೂ ಮಾರ್ಗದರ್ಶಕರಾಗಿದ್ದೀರಿ. 'ಬಸವೇಶ್ವರ ಚರಿತ್ರೆ', 'ಶಿವಾನುಭವ ಕೋಶ' ಮೊದಲಾದ ಉದ್ಗ್ರಂಥಗಳನ್ನು ಬರೆದು ನಾಡಿನಲ್ಲಿ ಹೊಸಬೆಳಕನ್ನು ಹರಡಿದ್ದೀರಿ. ತಮ್ಮ 'ವಚನಶಾಸ್ತ್ರಸಾರ' ಎಂಬ ವಚನ

ಸಂಕಲನ ಗ್ರಂಥ ವೀರಶೈವ ಸಾಹಿತ್ಯ ಸಂಶೋಧಕರಿಗೂ ಶರಣರ ಜೀವನಚರಿತ್ರಕಾರರಿಗೂ ಅಮೌಲ್ಯವಾದ ಆಕರವಾಗಿರುವುದರಿಂದ ತಮ್ಮ ಉಪಕಾರ ಸ್ಮರಣೆಯನ್ನು ಮಾಡಿಯೇ ವೀರಶೈವ ಸಾಹಿತ್ಯ ಚರಿತ್ರೆಯನ್ನು ಎಲ್ಲರೂ ಬರೆಯಬೇಕಾಗಿದೆ ಶಿವಾನುಭವ ಪತ್ರಿಕೆಯಲ್ಲಿ ಷಟ್ಸ್ಥಲವಿವರಣೆ ಮೊದಲಾದ ಕ್ಲಿಷ್ಟ ವಿಷಯಗಳ ಬಗ್ಗೆ ತಾವು ಬರೆದಿರುವ ನೂರಾರು ಲೇಖನಗಳಿಂದ ತಮ್ಮಲ್ಲಿರುವ ಶಾಸ್ತ್ರಜ್ಞಾನ ಲೋಕೋಪಕಾರಕವಾಗಿ ಪರಿಣಮಿಸಿತು; ಶರಣಪಂಥದ ವಿಚಾರದಲ್ಲಿದ್ದ ಹಲವು ಸಂಶಯಗಳು ಮಾಯವಾದವು. ಮಾನ್ಯರೇ, ತಮ್ಮ ಈ ವಿದ್ವತ್ತನ್ನು ಕನ್ನಡ ಜನತೆ ಮೆಚ್ಚಿಕೊಂಡು ತಮಗೆ 'ವಚನಶಾಸ್ತ್ರ ಪ್ರವೀಣ,' 'ವಚನಶಾಸ್ತ್ರಪಿತಾಮಹ' ಎಂಬ ಪ್ರಶಸ್ತಿಗಳನ್ನು ಕೊಟ್ಟು ಗೌರವಿಸಿದ್ದು ಸಹಜವೇ ಆಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನೊಡನೆ ತಮ್ಮ ಸಂಬಂಧ ಅತಿನಿಕಟವೂ ದೀರ್ಘ ಕಾಲದ್ದೂ ಆಗಿರುವದೆಂದು ತಿಳಿಸಲು ಸಂತೋಷಪಡುತ್ತೇವೆ. ಸುಮಾರು ಮೂವತ್ತು ವರ್ಷಗಳ ಹಿಂದಿನಿಂದಲೂ ಸಾಹಿತ್ಯ ಸಮ್ಮೇಳನಗಳಿಗೆ ದಯಮಾಡಿಸಿ ಅಲ್ಲಿ ವಿಚಾರ ಪರಿಪ್ಲುತವಾದ ಉಪನ್ಯಾಸಗಳನ್ನು ತಾವು ಮಾಡಿದ್ದೀರಿ. ಚಿಕ್ಕಮಗಳೂರಿನಲ್ಲಿ ನಡೆದ ಸಮ್ಮೇಳನದಲ್ಲಿ ತಾವು ಶರಣರ ವಚನಗಳಮೇಲೆ ಮಾಡಿದ ಭಾಷಣದಿಂದ ಶ್ರೋತೃಗಳು ಹೇಗೆ ಚಕಿತರಾದರೆಂಬುದನ್ನು ನಾವುಗಳು ಮರೆಯುವಂತಿಲ್ಲ. ೧೯೩೬ ರಲ್ಲಿ ಬಳ್ಳಾರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ತಾವೇ ಅಧ್ಯಕ್ಷಪೀಠವನ್ನು ಅಲಂಕರಿಸಿ ಸಮ್ಮೇಳನಕ್ಕೆ ಕಳೆತುಂಬಿ ಅಮೌಲ್ಯವಾದ ಸಲಹೆಗಳಿಂದ ಜನಜಾಗೃತಿಯನ್ನುಂಟುಮಾಡಿದಿರಿ. ಬಿಜಾಪೂರದಲ್ಲಿ ನೆರೆದ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಆ ಸಮ್ಮೇಳನ ಬಹಳ ಯಶಸ್ವಿಯಾಗಿ ನಡೆಯುವಂತೆ ವ್ಯವಸ್ಥೆಯನ್ನು ಮಾಡಿದಿರಿ. ಕೆಲವು ವರ್ಷಗಳ ಕಾಲ ಪರಿಷತ್ತಿನ ಕಾರ್ಯಸಮಿತಿಯ ಸದಸ್ಯರಾಗಿಯೂ, ಅಖಿಲ ಕರ್ನಾಟಕಕ್ಕೂ ಅನ್ವಯಿಸುವ ಕನ್ನಡ ಪಠ್ಯ ಪುಸ್ತಕ ರಚನಾಸಮಿತಿಯ ಸದಸ್ಯರಾಗಿಯೂ ನೆರವು ನೀಡಿದಿರಿ. ಹೀಗೆ ಪರಿಷತ್ತಿಗೂ ತನ್ಮೂಲಕ ಕನ್ನಡ ನಾಡಿಗೂ ತಾವು ಮಾಡಿರುವ ಸೇವೆಯನ್ನು ನಾವು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇವೆ.

ಸಾಹಿತ್ಯಕ್ಷೇತ್ರದಲ್ಲಿ ಮಾತ್ರವಲ್ಲದೆ ವಿದ್ಯಾಭ್ಯಾಸ ಕ್ಷೇತ್ರದಲ್ಲಿಯೂ ತಾವು ದುಡಿದಿರುವುದನ್ನು ಕನ್ನಡನಾಡು ಮರೆಯುವಂತಿಲ್ಲ. ಬೊಂಬಾಯಿ ವಿಶ್ವವಿದ್ಯಾನಿಲಯ, ಕರ್ಣಾಟಕ ವಿಶ್ವವಿದ್ಯಾನಿಲಯ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಹಲವು ಸಭೆಗಳಿಗೂ ಸಮಿತಿಗಳಿಗೂ ಸದಸ್ಯರಾಗಿ ಕನ್ನಡಕ್ಕೆ ಉನ್ನತಸ್ಥಾನವನ್ನೂ ಗೌರವವನ್ನೂ ದೊರಕಿಸುವ ಪ್ರಯತ್ನಗಳನ್ನು ತಾವು ಮಾಡಿದ್ದೀರಿ. ಸ್ವಸ್ಥಳವಾದ ಬಿಜಾಪೂರದಲ್ಲಿ ಸಿದ್ಧೇಶ್ವರ ಸಂಸ್ಥೆ ಮೊದಲಾದವುಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸಿ ವಿದ್ಯಾಪ್ರಚಾರಕ್ಕೆ ಸಹಾಯ ಮಾಡಿದ್ದೀರಿ. ಲೌಕಿಕ ವ್ಯಾಪಾರಗಳಲ್ಲಿ ನಿರತರಾಗಿ ವಕೀಲ ವೃತ್ತಿಯ ಹೊಣೆಯನ್ನು ಹೊತ್ತಿರುವವರಾದರೂ ಅವಿಶ್ರಾಂತ ಸಾಹಿತ್ಯ ಸೇವೆಯನ್ನೂ ಶಿಕ್ಷಣ ಸಂಸ್ಥೆಯ ಸೇವೆಯನ್ನೂ ಮಾಡಿರುವುದನ್ನು ನೋಡಿ ನಾವುಗಳೆಲ್ಲ ಆಶ್ಚರ್ಯಪಡುತ್ತಿದ್ದೇವೆ.

ಮಹನೀಯರೇ, ಕರ್ಮ ಮತ್ತು ಜ್ಞಾನ ಎರಡಕ್ಕೂ ಸಮಾನಸ್ಥಾನಗಳನ್ನು ಕೊಟ್ಟು ಐಹಿಕ ಮತ್ತು ಪಾರಮಾರ್ಥಿಕಗಳೆರಡನ್ನೂ ಸಾಧಿಸಬೇಕೆಂಬ ಶರಣಪಂಥಕ್ಕೆ ತಾವು ಉತ್ತಮ ನಿದರ್ಶನರಾಗಿದ್ದೀರಿ. ತಮ್ಮ ಕರ್ತವ್ಯನಿಷ್ಠೆ, ಧ್ಯೇಯದಲ್ಲಿ ದೃಢವಿಶ್ವಾಸ, ಅಚಲವಾದ ಸತ್ಯಪ್ರಿಯತೆ ಸೌಜನ್ಯ ಮತ್ತು ಸಾತ್ವಿಕತೆಗಳು ಸಾಧಕರಿಗೆ ಅನುಕರಣೀಯವಾಗಿದೆ. ತಮಗೆ ಭಗವಂತನು ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ನಾಡನುಡಿಗಳ ಸೇವೆ ಇತೋಽಪ್ಯತಿಶಯವಾಗಿ ತಮ್ಮಿಂದ ನಡೆಯುವಂತೆ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು } ಇಂತು

೨೯-೧೧-೫೦ } ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರು

ಈ ಸನ್ಮಾನ ಪತ್ರಕ್ಕೆ ಉತ್ತರಕೊಡುವಾಗ್ಗೆ ರಾ || ಬ || ಹಳಕಟ್ಟಿಯವರು ಹೇಳಿದುದು ಏನೆಂದರೆ:— ಆರಂಭದಲ್ಲಿ ವಚನಕಾರರ ಸಂಖ್ಯೆಯು ೨೦೦-೩೦೦ ಇದ್ದುದು ಮೊದಲು ನನಗೆ ತಿಳಿದಿರಲಿಲ್ಲ. ಅದು ಉಚ್ಚ ವಾಙ್ಮಯವಾಗಿದ್ದಿತೆಂತಲೂ ಕೂಡ ಗೊತ್ತಾಗಿರಲಿಲ್ಲ. ಆದರೆ ಗಣ ಭಾಷ್ಯ

ರತ್ನ ಮಾಲೆ ಈ ಗ್ರಂಥದ ಮೇಲಿಂದ ಅದರಲ್ಲಿ ಉಚ್ಚ ತತ್ವಗಳಿವೆಂಬುದರ ಕಲ್ಪನೆಯು ಮೊದಲಿಗೆ ನನಗೆ ಬಂದಿತು. ಮುಂದೆ ಎಲ್. ಎಲ್. ಬಿ. ಅಭ್ಯಾಸ ಮುಗಿಸಿ ವಿಜಾಪುರ ಜಿಲ್ಲೆಯಲ್ಲಿ ವಕೀಲಿ ವೃತ್ತಿಯಿಂದಿರುವಾಗ್ಗೆ ಗ್ರಾಮಾಂತರಗಳಿಗೆ ಹೋಗುವ ಪ್ರಸಂಗಗಳು ಮೇಲಿಂದ ಮೇಲೆ ನನಗೆ ಬರುತ್ತಿದ್ದವು. ಆಗ ನಾನು ಹೋದಲ್ಲೆಲ್ಲ ಕೈಬರಹದ ಗ್ರಂಥಗಳನ್ನು ಶೋಧಿಸುತ್ತ ಇರುವಲ್ಲಿ ನನಗೆ ಅನೇಕ ವಚನ ಗ್ರಂಥಗಳು ದೊರೆಯು ಹತ್ತಿದವು. ಆಗ ಈ ವಾಙ್ಮಯವು ವಿಸ್ತಾರವಾದದ್ದೂ ಹೆಚ್ಚಿನತರದ್ದೂ ಇದೆ ಎಂಬುದರ ತಿಳಿವಳಿಕೆಯುಂಟಾಯಿತು. ಆಗ ಅದನ್ನು ಸಂಗ್ರಹಿಸುತ್ತ ವಿಷಯಾನುಕ್ರಮವಾಗಿ ವಚನಗಳನ್ನು ವ್ಯವಸ್ಥೆಗೊಳಿಸಹತ್ತಿದೆನು. ೧೯೨೬ ರಲ್ಲಿ ಶಿವಾನುಭವ ಪತ್ರಿಕೆಯನ್ನು ಪ್ರಾರಂಭಿಸಿ ವಚನ ಗ್ರಂಥಗಳನ್ನು ಕ್ರಮೇಣ ಪ್ರಕಟಿಸಲಾರಂಭಿಸಿದೆನು. ಇದರಿಂದ ಇದೊಂದು ಉಚ್ಚತರದ ವಾಙ್ಮಯವೆಂಬುದು ಈಗ ಎಲ್ಲರ ನಿದರ್ಶನಕ್ಕೆ ಬಂದಿದೆ.

ಹೇಗೆ ಕರ್ನಾಟಕ ವಾಙ್ಮಯಕ್ಕೋಸ್ಕರ ವೀರಶೈವರು ಪ್ರಯತ್ನಿಸಿರುವರೋ ಹಾಗೆಯೇ ಬ್ರಾಹ್ಮಣರೂ ಜೈನರೂ ಕೂಡ ಪ್ರಯತ್ನಿಸಿದ್ದಾರೆ. ಬ್ರಾಹ್ಮಣರ ಅಗ್ರಹಾರಗಳು ಕರ್ನಾಟಕದಲ್ಲಿ ಅಸಂಖ್ಯಾತವಾಗಿದ್ದವೆಂಬುದು ಶಿಲಾಶಾಸನಗಳಿಂದ ಕಂಡುಬರುತ್ತದೆ. ಹೀಗೆ ಬ್ರಾಹ್ಮಣರು ಸಂಸ್ಕೃತ ವಾಙ್ಮಯಕ್ಕೋಸ್ಕರ ಬಹಳ ಪ್ರಯತ್ನಿಸಿದ್ದಾರೆ. ಕರ್ನಾಟಕ ಬ್ರಾಹ್ಮಣರು ಮಾಡಿದ ಈ ಕಾರ್ಯಗಳು ಇನ್ನೂ ಸಂಶೋಧಿಸಲ್ಪಟ್ಟಿಲ್ಲ. ಇದೇ ಮೇರೆಗೆ ಜೈನರು ಮಾಡಿದ ಕಾರ್ಯಗಳು ಮಹತ್ತರವಾಗಿವೆ. ಅವುಗಳು ಸಹ ಇನ್ನೂ ಸಂಶೋಧಿಸಲ್ಪಟ್ಟಿಲ್ಲ. ವೀರಶೈವ ವಾಙ್ಮಯ ಸ್ಥಿತಿಯಾದರೂ ಇನ್ನೂ ಹೀಗೆಯೇ ಇದೆ.

ಈ ವಾಙ್ಮಯ ಕಾರ್ಯಗಳಲ್ಲಿ ಬಹುಜನರು ತಿಳಿದಿರುವಂತೆ ಜೈನ ಬ್ರಾಹ್ಮಣ, ವೀರಶೈವರು ಪರಸ್ಪರರನ್ನು ವಿರೋಧಿಸಿರುವದಿಲ್ಲ. ನಾಗವರ್ಮ ಚಾವುಂಡರಾಯ, ನೇಮಿಚಂದ್ರ ಅಗ್ಗಳ, ಜನ್ನ ಆಂಡಯ್ಯ, ಕೇಶಿರಾಜ ಈ ಮಹತ್ವದ ಜೈನ ಗ್ರಂಥಕಾರರು ಬಸವೇಶ್ವರನ ತರುವಾಯ ಪ್ರಸಿದ್ಧಿಗೆ ಬಂದಿದ್ದಾರೆ. ಶಿವಶರಣರಲ್ಲಿ ಬಹುಜನರು ಬ್ರಾಹ್ಮಣರಿರುವರು. ಈ ಸಂಗತಿಗಳು ಈ ಮೂರೂ ಧರ್ಮೀಯರಲ್ಲಿ ಪರಸ್ಪರ ವಿರೋಧ ಭಾವವನ್ನು ವ್ಯಕ್ತಗೊಳಿಸುವದಿಲ್ಲ.

ವೀರಶೈವರ ಷಟ್‌ಸ್ಥಲ ಸಿದ್ಧಾಂತದಲ್ಲಿ ಉಪನಿಷತ್ತುಗಳು, ಭಗವದ್ಗೀತೆ, ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ ಇವುಗಳ ತತ್ವಗಳನ್ನು ನಾವು ಕಾಣಬಹುದು. ಶಿವಶರಣರು ಈ ಗ್ರಂಥಗಳಲ್ಲಿರುವ ಉಚ್ಚ ತತ್ವಗಳನ್ನು ತಮ್ಮ ಸಿದ್ಧಾಂತದಲ್ಲಿ ಹೆಣೆದಿರುವರು.

ಮುಂದೆ ಮುಸಲ್ಮಾನರ ಹಾವಳಿಯು ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಲು ವೀರಶೈವ ಮತ್ತು ಜೈನ ಮುಖ್ಯ ಮಠಾಧೀಶರೂ, ಪಂಡಿತರೂ ಮೈಸೂರು ದಕ್ಷಿಣಭಾಗ ಮತ್ತು ಸುರಕ್ಷಿತವಾಗಿರುವ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿರುವ ಕಾಡು ಪ್ರದೇಶ ಇವುಗಳನ್ನು ಪ್ರವೇಶಿಸಿ ವಾಸವಾಡಹತ್ತಿದರು.

ವೀರಶೈವ ಧರ್ಮವು ಬ್ರಾಹ್ಮಣ ವಿರೋಧೀ ಧರ್ಮವೆಂದು ಕೆಲವು ಯುರೋಪಿಯನ್ನ ವಿದ್ವಾಂಸರು ಭಾವಿಸಿ ಅವರು ಹಾಗೆ ತಮ್ಮ ಗ್ರಂಥಗಳಲ್ಲಿ ಬರೆದಿರುವರು. ಆದರೆ ವೀರಶೈವ ತತ್ವಗಳನ್ನು ಚನ್ನಾಗಿ ಪರಿಶೀಲಿಸಿದರೆ ಇದು ನಿಜವೆಂದು ಕಂಡುಬರುವದಿಲ್ಲ. ಅದು ವೇದ ವಾಙ್ಮಯದಲ್ಲಿಯ ಮುಖ್ಯ ತತ್ವಗಳನ್ನು ಅಂಗೀಕರಿಸಿದೆ.

ಕರ್ನಾಟಕದಲ್ಲಿ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ ಎಂಬ ಭಿನ್ನಭಾವವು ಯಾವಾಗಲೂ ಇಲ್ಲ. ಈಗಿನ ಕಾಲದಲ್ಲಿ ಬ್ರಾಹ್ಮಣರು ತಮ್ಮ ಉಚ್ಚ ತಾತ್ವಿಕ ವಿಚಾರಗಳು, ಜೈನರು ತಮ್ಮ ಅಹಿಂಸಾ ಮೊದಲಾದ ಉಚ್ಚ ತತ್ವಗಳು, ವೀರಶೈವರು ತಮ್ಮ ವ್ಯವಹಾರಿಕ ಮತ್ತು ನೈತಿಕ ವಿಚಾರಗಳು ಇವುಗಳನ್ನು ಸಮನ್ವಯ ಮಾಡಿ ಏಕೀಕೃತ ಕರ್ನಾಟಕ ದೇಶವನ್ನು ಕಟ್ಟುವ ಪ್ರಸಂಗವು ಬಂದಿದೆ ಎಂದು ರಾ || ಬ || ಹಳಕಟ್ಟಿಯವರು ತಮ್ಮ ಭಾಷಣದಲ್ಲಿ ವಿದಿತಪಡಿಸಿದರು.

## ಸನ್ಮಾನ ಪತ್ರ

ಕನ್ನಡ ಶರಣರೆ

ಕರ್ನಾಟಕದ ಸುಪ್ರಸಿದ್ಧ ಸಾಹಿತಿಗಳೂ, ಪತ್ರಿಕಾಕರ್ತರೂ, ಗ್ರಂಥ ಪ್ರಕಾಶಕರೂ, ಇತಿಹಾಸ ಸಂಶೋಧಕರೂ, ನಾಡುನುಡಿಗಳ ಹಿತಚಿಂತ

ಕರೂ, ವೀರಶೈವ ಸಮಾಜದ ಅಭ್ಯುದಯಾಕಾಂಕ್ಷಿಗಳೂ, ಶಿವಶರಣರ ವಚನಶಾಸ್ತ್ರದ ಉದ್ಧಾರಕರೂ ಆದ ತಮ್ಮನ್ನು ಈ ದಿನ ನಮ್ಮ ವಿದ್ಯಾರ್ಥಿಸಂಘದ ಪರವಾಗಿ ' ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠ' ದಲ್ಲಿ, ಸಂಸ್ಥಾನದ ಪ್ರಮುಖ ರಾಜನೀತಿವಿಶಾರದರೂ, ಮಾಜಿ ಶಿಕ್ಷಣ ಮಂತ್ರಿಗಳೂ ಆದ ಮಾನ್ಯ ಶ್ರೀ. ಡಿ. ಎಚ್. ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಸ್ವಾಗತಿಸಿ ಸನ್ಮಾನಿಸುವ ಅವಕಾಶ ಪ್ರಾಪ್ತವಾದುದಕ್ಕಾಗಿ ನಮಗೆ ಅಮಿತಾನಂದವಾಗಿದೆ.

ಕನ್ನಡ ನಾಡಿನಲ್ಲಿ ಎಲ್ಲ ವಿಧದಿಂದಲೂ ಹಿರಿಯರೆನಿಸಿದ ತಾವು, ತಮ್ಮ ಶಿವಾನುಭವ, ಮತ್ತು ' ನವಕರ್ನಾಟಕ, ಪತ್ರಿಕೆಗಳ ಮತ್ತು ' ಶಿವಾನುಭವ ಗ್ರಂಥಮಾಲೆ,ಯ ಮೂಲಕವಾಗಿ ಕರ್ನಾಟಕದ ಚರಿತ್ರೆಯ ಸಂಶೋಧನೆ, ಶಿವಶರಣರ ಸಾಹಿತ್ಯ ಪ್ರಚಾರ, ವೀರಶೈವ ಧರ್ಮ ತತ್ವಗಳ ಪ್ರಚಾರ, ಕರ್ನಾಟಕ ಏಕೀಕರಣದ ವಿಚಾರ ಇತ್ಯಾದಿ ವಿಷಯಗಳಲ್ಲಿ ಅಗ್ರಗಣ್ಯವಾದ ಸೇವೆಯನ್ನು ಸಲ್ಲಿಸಿರುವಿರಿ. ಮಾನ್ಯರಾದ ತಾವು ಕರ್ನಾಟಕ ಏಕೀಕರಣ ಸಮ್ಮೇಳನ, ಕನ್ನಡ ಸಾಹಿತ್ಯ ಸಮ್ಮೇಳನ, ಅಖಿಲ ಭಾರತ ವೀರಶೈವ ಮಹಾಸಭ, ಬೊಂಬಾಯಿ ಶಾಸನಸಭ, ಮೈಸೂರು, ಬೊಂಬಾಯಿ ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳ ಪರೀಕ್ಷಾ ಸಮಿತಿಗಳು ಮೊದಲಾದವುಗಳ ಅಧ್ಯಕ್ಷರಾಗಿ, ಸದಸ್ಯರಾಗಿ ದೇಶಕ್ಕೆ ಸಲ್ಲಿಸಿದ ಸೇವೆ ಅಮೋಘವಾಗಿದೆ. ಬಿಜಾಪುರದಲ್ಲಿ ಸಿದ್ಧೇಶ್ವರ ಹಾಯಸ್ಕೂಲು, ಸಿದ್ಧರಾಮೇಶ್ವರ ದೇವಾಲಯ, ಲಿಂಗಾಯತ ಭವನವಾದ ' ಷಷ್ಠ್ಯಬ್ದಹಾಲ್ ಮೊದಲಾದವುಗಳ ನಿರ್ಮಾಣಕ್ಕಾಗಿ ಶ್ರೇಷ್ಠವಾದ ಸೇವೆಯನ್ನು ಸಲ್ಲಿಸಿರುತ್ತೀರಿ.

ಕನ್ನಡ ಕುಲರಸಿಕರಲ್ಲೊಬ್ಬರಾದ ತಾವು, ಸಾಹಿತ್ಯದ ಉನ್ನತಿಗಾಗಿಯೇ ಬಿಜಾಪುರದಲ್ಲಿ ' ಹಿತಚಿಂತಕ ಮುದ್ರಣಾಲಯವನ್ನು ಸ್ಥಾಪಿಸಿ, ವಚನಶಾಸ್ತ್ರಸಾರ, ಶಿವಶರಣರ ಚರಿತ್ರೆಗಳು, ಬಸವೇಶ್ವರ, ಚನ್ನಬಸವೇಶ್ವರ, ಸಿದ್ಧರಾಮೇಶ್ವರ, ಅಕ್ಕಮಹಾದೇವಿ, ಅಲ್ಲಮಪ್ರಭು, ಮಡಿವಳ ಮಾಚಯ್ಯ ದೇವರ ದಾಸಿಮಯ್ಯ, ಸ್ವತಂತ್ರ ಸಿದ್ಧಲಿಂಗೇಶ್ವರ ಮೊದಲಾದ ಶಿವಶರಣರ ವಚನಗಳನ್ನೂ, ಶೂನ್ಯಸಂಪಾದನೆ, ಹರಿಹರನ ರಗಳೆಗಳು

ಮೊದಲಾದ ಮಹತ್ವದ ಗ್ರಂಥಗಳನ್ನೂ ಪ್ರಕಟಿಸುವುದರ ಮೂಲಕ ವೀರ ಶೈವ ಸಮಾಜಕ್ಕೂ, ಕನ್ನಡ ಸಾಹಿತ್ಯಕ್ಕೂ ಮಹೋಪಕಾರಮಾಡಿರುತ್ತೀರಿ. ತಮ್ಮ ಗ್ರಂಥ ಪ್ರಕಟಣೆಯು ಕರ್ಣಾಟಕದಲ್ಲಿ ನವಚೈತನ್ಯವನ್ನು ಉಂಟು ಮಾಡಿದೆ. ತಮ್ಮ ಗ್ರಂಥಗಳು ಮೈಸೂರು, ಬೊಂಬಾಯಿ ವಿಶ್ವವಿದ್ಯಾ ನಿಲಯಗಳಲ್ಲಿ ಪಠ್ಯ ಪುಸ್ತಕವಾಗಿ ನೇಮಕವಾಗಿವೆ ಎಂಬುದೇ ತಮ್ಮ ಹಿರಿಮೆಗೂ, ಪಾಂಡಿತ್ಯಕ್ಕೂ ನಿದರ್ಶನವಾಗಿದೆ.
ಸಂಸಾರ ಯೋಗಿಗಳೇ

ದೈವಭಕ್ತಿ, ಧರ್ಮಶ್ರದ್ಧೆ, ಸಾಹಿತ್ಯಪ್ರೇಮ, ದೇಶಾಭಿಮಾನ, ಆತ್ಮ ಸಂಯಮ, ಸ್ನೇಹಪರತೆ, ಸತತೋದ್ಯೋಗ, ಕಾಯಕನಿಷ್ಠೆ ಮೊದಲಾದ ಮಹದ್ಗುಣಗಳಿಂದ ಪರಿಶೋಭಿತರಾಗಿ ಋಷಿತುಲ್ಯರಾದ ತಾವು ವೀರ ಶೈವ ಸಮಾಜಕ್ಕೆ ಅಲಂಕಾರ ಪ್ರಾಯರಾಗಿಯೂ, ಕರ್ಣಾಟಕ ದೇಶಕ್ಕೆ ಶಿರೋಮಣಿ ಪ್ರಾಯರಾಗಿಯೂ ಇರುವಿರಿ.

ಬಿಜಾಪುರಕ್ಕೆ ಬಂದ ಮಹನೀಯರು ಗೊಳಗುಮ್ಮಟವನ್ನು ನೋಡಿ ಆಶ್ಚರಿಪಡುವಂತೆಯೇ ಶಿವಶರಣರಾದ ತಮ್ಮನ್ನೂ ನೋಡಿ ಆನಂದ ಪಡು ತ್ತಾರೆ. ಮಾನ್ಯರಾದ ತಾವು ಇಂದು ನಮ್ಮ ಬಿನ್ನಹವನ್ನು ಕೈಗೊಂಡು ಇಲ್ಲಿಗೆ ಆಗಮಿಸಿದ್ದಕ್ಕಾಗಿ ಕೃತಜ್ಞರಾಗಿದ್ದೇವೆ. ಕರುಣಾಳುವಾದ ಪರ ಮೇಶ್ವರನು ತಮಗೆ ಇತೋಪ್ಯತಿಶಯವಾದ ಆಯುರಾರೋಗ್ಯವನ್ನು ಕರು ಣಿಸಿ ತಮ್ಮಿಂದ ನಮ್ಮನಾಡಿಗೂ ಸಮಾಜಕ್ಕೂ ಇನ್ನೂ ಹೆಚ್ಚಿನ ಸೇವೆ ಆಗುವಂತೆ ಅನುಗ್ರಹಿಸಲಿ. ತಮ್ಮ ನಿರ್ಮಲವಾದ ಕೀರ್ತಿ ಕನ್ನಡ ನಾಡಿನ ಮೂಲೆ ಮೂಲೆಗಳಲ್ಲೂ ಬೆಳಗಲಿ.

ದಿನಾಂಕ: ೩೦—೧೨—೧೯೫೦

ಬೆಂಗಳೂರ

ಈ ಮಾನಪತ್ರಕ್ಕೆ ರಾ || ಬ || ಹಳಕಟ್ಟಿಯವರು ಉತ್ತರ ಕೊಡು ವಲ್ಲಿ ಹೇಳಿದುದು ಏನೆಂದರೆ:— ವೀರಶೈವ ವಾಙ್ಮಯ ಸಂಶೋಧನ ಮತ್ತು ಪ್ರಸಾರ ಕಾರ್ಯಗಳಲ್ಲಿ ವೀರಶೈವರು ಹೆಚ್ಚಾದ ಭಾಗವನ್ನು ವಹಿ

ಸುವದು ಅವಶ್ಯವಿದೆ. ವೀರಶೈವ ಮತತತ್ವಗಳು, ವೀರಶೈವ ರಾಜಕೀಯ ಮತ್ತು ಸಾಮಾಜಿಕ ಇತಿಹಾಸಗಳು ಇನ್ನೂ ಪೂರ್ಣ ಸಂಶೋಧಿಸಲ್ಪಟ್ಟಿಲ್ಲ. ಈ ಕಾರ್ಯವನ್ನು ವೀರಶೈವ ವಿದ್ಯಾವಂತರು ಕೈ ಕೊಳ್ಳುವದು ಅತ್ಯವಶ್ಯಕವಾಗಿದೆ. ಎಲ್ಲಕಡೆಗೂ ವೀರಶೈವ ಸಂಶೋಧನ ಸಂಸ್ಥೆಗಳು ಉಂಟಾದಲ್ಲಿ ಈ ಕಾರ್ಯವು ಕೈಗೂಡುವದು. ಶಿವಾನುಭವ ಮಂಟಪಗಳನ್ನು ಎಲ್ಲಕಡೆಗೂ ಸ್ಥಾಪಿಸಿ ಅವುಗಳ ಮೂಲಕ ವೀರಶೈವರು ಪ್ರಚಾರ ಕಾರ್ಯಗಳನ್ನು ಬಹು ತೀವ್ರವಾಗಿ ನಡಿಸಬೇಕು. ಈ ರೀತಿಯ ಕಾರ್ಯಗಳಿಂದ ಸಮಾಜದಲ್ಲಿ ಒಕ್ಕಟ್ಟೂ ಸಂಘಟನೆಯೂ ಉಂಟಾಗುವವು. ಇದರಲ್ಲಿ ನಮ್ಮಲ್ಲಿಯ ಶ್ರೀಮಂತರೂ ಧಾರ್ಮಿಕ ವರ್ಗದವರೂ ತಮ್ಮ ಸಹಾಯವನ್ನು ವಿಪುಲವಾಗಿ ನೀಡಬೇಕು. ಈ ಪ್ರಕಾರ ರಾ|| ಬಾ|| ಹಳಕಟ್ಟಿಯವರು ಭಾಷಣ ಮಾಡಿದರು ಇದೇ ಕಾಲಕ್ಕೆ ಆ ಸ್ಥಾನ ವಿದ್ವಾನ್ ಶಿವಮೂರ್ತಿ ಶಾಸ್ತ್ರಿಗಳೂ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀಯುತ ಧರಣೇಂದ್ರಯ್ಯನವರು ಶಿವಶರಣ ವಿಶಾಲ ತತ್ವಗಳನ್ನು ಕುರಿತು ಬಹು ಬೋಧ ಪ್ರದಭಾಷಣಗಳನ್ನು ಮಾಡಿದರು. ಅಧ್ಯಕ್ಷರಾದ ಡಿ. ಎಚ್. ಚಂದ್ರಶೇಖರಯ್ಯನವರು ವೀರಶೈವ ವಾಙ್ಮಯ ಸಂಶೋಧನೆಯ ವಿಷಯವಾಗಿ ವೀರಶೈವರು ಮಾಡಬೇಕಾದ ಕಾರ್ಯಗಳನ್ನು ಕುರಿತು ಹೇಳಿದರು.

## ೩೩

## ಮರಣಕ್ಕಂಜದಿರು

ಸತ್ತ ಸತ್ತನೆಂದು ಸಾವಿಗೆ ದುಃಖಿಪ ।
ದೀನ ನರರ ಹುಚ್ಚು ತಿಳಿಸಲಳನೆ ॥
ಪ್ರಾಣದಲ್ಲಿ ಮೃತ್ಯು ಬಂಧಗಳ್ಬಿಡುವುವೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೨೮ ॥

ಹಿರಿದುಂ ಪಾಪಕೆ ಬೆದರುತೆ ।
ಮರಣಕೆ ನಿರ್ಭಯವ ತೋರುವುದು ತಾಂ ವಿಹಿತು ॥
ಮರೆವುದು ಪರನಿಂದೆಯುವಂ ।
ಮರೆವುದು ಸತಿಸುತರ ಮೇಲೆ ಮಮತೆಯು ವೇಮಾ ॥ ೧೨೯ ॥

ಜನನ ಮರಣದಲ್ಲಿ ಸ್ವಾತಂತ್ರ್ಯ ಹೀನನು ।
ಮೊದಲು ಕರ್ತನಲ್ಲ ತುದಿಗುಮಲ್ಲ ॥
ನಡುವೆ ಕರ್ತನೆನಲು ನಗೆಗೀಡದಲ್ಲವೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೦ ॥

ಸಾವೆಂಥದೋ ಹುಟ್ಟೆಂಥದೋ ।
ಸಾವಿಗೆ ಭಯಪಡುವದೇಕೆ ಜನ್ಮಕ್ಕೆ ಮೊದಲ್
ಜೀವಿಗೆ ದೇಹವವೆಲ್ಲಯು ।
ದೀ ವಿಧ ಭಾವದೊಳು ಗುರಿಯಿಡುವುದೈ ವೇಮಾ ॥ ೧೩೧ ॥

ಬಾಳು ನಿತ್ಯವೆನ್ನುತತಿಶಯಾನಂದದಿಂ ।
ದುಬ್ಬಿ ಉಬ್ಬಿ ಕುಣಿವ ಹುಚ್ಚರಿಹರು ॥
ಪ್ರಾಣಿಕೋಟಿಗಳೆಲ್ಲ ಯಮನಿಗೆ ಕುರಿಗಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೩೨ ॥

ಯಮನು ಬಿಗುಹಿನೊಳ್ಪ್ರಾಣವ ಸೆಳೆವಾಗ ।
ಭ್ರಮೆಯ ತೋರಿಸಿ ಬಿಡುವನೆ ಪಾಶಬಂಧ ॥

ಕ್ರಮವ ಮನದೊಳು ಗಮನಿಸಿ ನಡೆಯಬೇಕು ।
ವಿಮಲ ಗುಣ ರಾಜಯೋಗೀಂದ್ರ ವೇಮನಾರ್ಯ ॥ ೧೯೩ ॥

ಕಫವು ಹೆಚ್ಚಿ ಮತ್ತೆ ಕಣ್ಣುಗಳ್ಮುಚ್ಚುತ್ತೆ ।
ಬುದ್ಧಿ ಭ್ರಮಿಸಿ ಭುವಿಯು ಮರೆದು ಬಿಡುವ ॥
ವೇಳೆಯಲ್ಲಿ ನಿನ್ನ ಬೆದಕುವುದಾಗದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೯೪ ॥

ಪರಬಲವನು ನೋಡಿ ಪ್ರಾಣರಕ್ಷಣೆಗಾಗಿ ।
ಭರದೆ ಓಡುತಿರ್ಪ ಭಯದ ಭಟನ ॥
ಯಮನು ಕುಪಿತನಾಗೆ ಮದ್ಯಸ್ಥನಾದನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೯೫ ॥

ಈಜಿಗಿಂತ ಲಾಳವೆಲ್ಲಿಯುಮಿಲ್ಲವು ।
ಸಾವಿಗಿಂತ ಕೇಡು ಜಗದೊಳಿಲ್ಲ ॥
ಯಾವುದಿಲ್ಲ.ಪಲ್ಪಲಂಗೋಟಿಗಿಂತಲು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೯೬ ॥

ಭಕ್ತಿ ತೋರಿ ಸೂಳೆ ಹಲವು ಬಗೆ ಕರೆಯುವಳು ।
ಭಕ್ತಿಯಲ್ಲದು ಕಾಲಮೃತ್ಯು ನಿಜವು ॥
ಮೃತ್ಯು ಸೇರಿದ ಮನೆಯ ನುಂಗದೆ ಪೋಪುದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೯೭ ॥

ಎಣ್ಣೆ ಇರುವ ದೀಪ ಮೇಲಾಗಿ ಉರಿವುದು ।
ಎಣ್ಣೆಯಿಲ್ಲದಿರ್ಪ ದೀಪವಳಿಗುಂ ॥
ತನುವು ಬಿದ್ದ ಕ್ಷಣದಿ ನೆನಪುಗಳ್ಪೋಪವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೧೯೮ ॥

---

## ದೇಹದ ಮಹತ್ವವು

ನೀರೊಳ್ಗನಿಸಿದ ಲವಣವು ।
ಕ್ಷಾರವು ನೀರಾಯ್ತು ನೀರು ಲವಣಗಳೊಂದೇ ॥
ಈ ರೀತಿ ಶಿವನ ಜೀವನ ।
ಸೇರಿಕೆಯರಿಯುವುದು ಪರಮ ಗುರುವರ ವೇಮಾ ॥ ೧೯೯ ॥

ಭಯವೆಲ್ಲಾ ದೇಹಕ್ಕೇ ।
ಭಯವಡಗಲು ನಿಜವದೆಲ್ಲ ಪರಮಾತ್ಮನಿಗೇ ॥
ಲಯವೆಲ್ಲಾ ದೇಹಕ್ಕೇ ।
ಜಯವೆಲ್ಲಾ ಜೀವಗೆಂದು ಸಾರ್ವೈ ವೇಮಾ ॥ ೨೦೦ ॥

ಒಬ್ಬನನ್ನು ಕೆಡಿಸಲೆಣಿಪರು ಮನದೊಳು ।
ತಮ್ಮ ಕೇಡನರಿಯರವನಿ ಜನರು ॥
ಒಮ್ಮೆ ಕೆಡಿಸುವಾತ ದೈವ ತಾನಲ್ಲವೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೦೧ ॥

ಪ್ರತ್ಯಕ್ಷವು ಭೂಸೇವಿಯು ।
ಪ್ರತ್ಯಕ್ಷವು ವಾಯುವಗ್ನಿ ಜೀವೇಂದ್ರಿಯಗಳ್ ॥
ಪ್ರತ್ಯಕ್ಷವು ರವಿಚಂದ್ರರು ।
ಪ್ರತ್ಯಕ್ಷವನರಿಯಲಾರರ್ಗೆ ವರ ವೇಮಾ ॥ ೨೦೨ ॥

ಇಹವನುಳಿಯೆ ಫಲವು ಹೆಚ್ಚುವುದೆನುತಲಿ ।
ಮಹಿಯೊಳ್ಪೇಳುವವರ ಮತವು ಸುಳ್ಳು
ಇಹದೊಳ್ಳಿದೆ ಪರವು ಸೇರಿಹುದರಿಯರ್ರೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೦೩ ॥

ಹೃದಯದಲ್ಲಡಗಿರ್ಪ ಈಶನಂ ತಿಳಿಯದೆ ।
ಕಲ್ಲಿಗೆಲ್ಲ ಮುಗಿವ ಜೀವಿಗಳಿರ ॥

ಕಲ್ಲಿನೊಳೇನಿಹುದು ಜೀವದೊಳಲ್ಲದೆ ।
ವಿಶ್ವತೋಭಿರಾಮ ಕೇಳೊ ವೇಮಾ || ೨೦೪ ||

ದೇವನೆನಲು ಬೇರೆ ದೇಶದೊಳಿರ್ಪನೇ ।
ದೇವಿಯೊಡನೆ ಸತತ ದೇಹದೊಳಗೆ ॥
ವಾಹನಂಗಳೇರಿ ಹೊಡೆಯುತಲಿರ್ಪನು ।
ವಿಶ್ವತೋಭಿರಾಮ ಕೇಳೊ ವೇಮಾ || ೨೦೫ ||

ವಸ್ತುವಿದ್ದ ಸ್ಥಳದಿ ಶೋಧಿಸಲಪ್ಪುದು ।
ವಸ್ತುವಿಲ್ಲದೆಡೆಯೊಳ್ ಬೆದಕಲೇಕೆ ॥
ಅಂಜದಿರಲಾ ವಸ್ತು ದೊರೆಯದೇ ।
ವಿಶ್ವತೋಭಿರಾಮ ಕೇಳೊ ವೇಮಾ || ೨೦೬ ||

---

## ಶಿವನು ತನ್ನಲ್ಲಿಯೇ ಇದ್ದಾನೆ.

ಶಿಲೆಯು ನೋಡಿ ನರರು ಶಿವನೆಂದು ತಿಳಿವರು ।
ಶಿಲೆಯು ಶಿಲೆಯೆ ಹೊರತು ಶಿವನುಮಲ್ಲ ॥
ತನ್ನೊಳಿರ್ಪ ಶಿವನ ತಾನೇಕೆ ತಿಳಿಯನು ।
ವಿಶ್ವತೋಭಿರಾಮ ಕೇಳೊ ವೇಮಾ || ೨೦೭ ||

ಅಂತರಂಗದಲ್ಲಿ ಅಭವನುದ್ದೇಶಿಸಿ ।
ನಿಲಿಸಿ ನೋಡೆ ನೋಡೆ ನಿಲ್ವ ಹೊರತು ।
ಬಾಹ್ಯದಲ್ಲಿ ಶಿವನ ಭಾವಿಸೆ ನಿಲುವನೇ ।
ವಿಶ್ವತೋಭಿರಾಮ ಕೇಳೊ ವೇಮಾ || ೨೦೮ ||

ಜೀವಲಿಂಗಪೂಜೆ ಮಾಡಿದ ನರನಿಗೆ ।
ಶಿಲೆಯ ರೂಪದಲ್ಲಿ ಚಿಂತೆಯೇಕೆ ॥

ವ ಧುವ ಸೇವಿಸುವಗೆ ವಿಷವೆಂದು ಉಚಿಸುದು |
ವಿಶ್ವತೋಭಿರಾಮ ಕೇಳೊ ವೇಮಾ ‖ ೨೦೯ ‖

ಒಳಗೆ ನೋಡೆ ನೋಡೆ ಲೋಕಾಭಿರಾಮವು |
ಹೊರಗೆ ನೋಡೆ ನೋಡೆ ಬಂಧನವದು ‖
ತನ್ನ ನೋಡೆ ನೋಡೆ ತಾರಕಬ್ರಹ್ಮವು |
ವಿಶ್ವತೋಭಿರಾಮ ಕೇಳೊ ವೇಮಾ ‖ ೨೧೦ ‖

ಕಲ್ಲು ಲಿಂಗಗಳಿಗೆ ರಾಜರು ಮೊದಲಾಗಿ |
ಪೂಜೆ ಮಾಳ್ಪರಡವಿ ಪೂಗಳಿಂದ ‖
ಆತ್ಮಲಿಂಗದಿಂದ ಲಾನಂದ ಪೊಂದರು |
ವಿಶ್ವತೋಭಿರಾಮ ಕೇಳೊ ವೇಮಾ ‖ ೨೧೧ ‖

ಬ್ರಹ್ಮಘಟವೇ ತನುವು ಪ್ರಾಣವೇ ವಾಯುವು |
ಮಿತ್ರ, ಚಂದ್ರ, ವಹ್ನಿ, ನೇತ್ರ ಚಯವು ‖
ಮತ್ತೆ ಬ್ರಹ್ಮವೆನಲು ಧರೆಯೊಳಗಿಲ್ಲವೈ |
ವಿಶ್ವತೋಭಿರಾಮ ಕೇಳೊ ವೇಮಾ ‖ ೨೧೨ ‖

ಚುಕ್ಕೆಗಳಿಷ್ಟೆಂದು ಲೆಕ್ಕಿಸೆ ಬರ್ಪುದು |
ಸೂರ್ಯಮಂಡಲವನು ನೋಡಲಹುದು ‖
ಆತ್ಮನಾಥನೊಡನೆ ಆಟವಸಾಧ್ಯವು |
ವಿಶ್ವತೋಭಿರಾಮ ಕೇಳೊ ವೇಮಾ ‖ ೨೧೩ ‖

---

## ಪುಣ್ಯ ಪಾಪಗಳು

ಧರ್ಮಾರ್ಥ ಕಾಮ ಮೋಕ್ಷವ |
ನಿರ್ಮಲಮತಿಯರಿವನಲ್ಲದಿತರರಿಗಳವೇ ‖
ಉರ್ವಿಯೊಳಿಲ್ಲೆಡೆ ಚರಿಸಲ್ |
ಕರ್ಮಿಗಳಿಗೆ ಮುಕ್ತಿ ದೊರೆವುದೇನೈ ವೇಮಾ ‖ ೨೧೪ ‖

ಚಿತ್ತಶುದ್ಧಿಯಿಂದ ಮಾಡಿದ ಪುಣ್ಯವು ।
ಸ್ವಲ್ಪವಾದರದುವೆ ದೊಡ್ಡದಹುದು ॥
ಬಿತ್ತವೆನಿತು ನೋಡಲಾಲದ ವೃಕ್ಷಕ್ಕೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೧೫ ॥

ಪಾಪವೆಂಬುದದುವೆ ಪರಲೋಕದೊಳಗಿಲ್ಲ ।
ತನ್ನ ಕರ್ಮದೊಳಗೆ ಅಡಗಿಯಿರುವು ॥
ಕರ್ಮ ಧರ್ಮಗಳನು ತಿಳಿಯಲು ಬಪ್ಪುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೧೬ ॥

ತನ್ನ ಕುಲಗೋತ್ರ ರೂಪವು ।
ತನ್ನಯ ಸಂಪದವು ಬಲವು ತನಗಿನ್ನೇಕೋ ॥
ತನ್ನೊಡನೆ ಬಾರವಾವುಂ ।
ತನ್ನಯ ಸತ್ಯವದು ಜೊತೆಗೆ ಬರುವುದು ವೇಮಾ ॥ ೨೧೭ ||

ರಾಮನೋರ್ವಜನಿಸಿ ರವಿವಂಶ ಬೆಳೆದುದು ।
ಕುರುಪ ಜನಿಸಿ ತನ್ನ ಕುಲವೆ ಕೋಯ್ತು ॥
ಧರೆಯೊಳ್ಪುಣ್ಯ ಪಾಪವೀ ರೀತಿಯಲ್ಲವೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೧೮ ॥

ತನ್ನ ತಾನರಿಯನು ತಾನದಾರಿಗೆ ಪೇಳ್ವ ।
ಬರಿದೆ ತಿರುಗುತಿರ್ಪ ಪಶುವಿನ ಮಗ ॥
ಕಾಸಿನಾಸೆಗಾಗಿ ಕರ್ಮವ ಮಾಡಿಪ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೧೯ ॥

ದಶರಥಾವನಿಪನು ರಾಮಗೆ ಪಟ್ಟವ ।
ಕಟ್ಟಲೆಳಸೆ ಜಡೆಯ ಕಟ್ಟಿ ನಡೆದ ॥
ನೆನೆದ ರೀತಿಯಹುದೆ ದೈವೇಚ್ಛೆಯಲ್ಲವೇ !
ವಿಶ್ವತೋಭಿರಾಮ ಕೇಳೊ ವೇಮಾ ॥ ೨೨೦ ॥

ತಂದೆತಾಯಿ ಹಿತರು ಬಂಧುಬಾಂಧವರೆಲ್ಲ ।
ಸೇರಿ ಕೋರಿ ವರನ ಬುದ್ಧಿ ನೋಡಿ ॥
ವಧುವನೀವರಲ್ತು ಭಾಗ್ಯವನೀಯರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೨೧ ॥

ಧನಪತಿ ಸಖನಾಗಿರ್ದುಂ ।
ಅನುವಿಂ ಶಂಕರನು ಭಿಕ್ಷವೆತ್ತಿದ ಮುನ್ನಂ ॥
ತನಗೆಷ್ಟು ಜನಗಳಿರ್ದರು ।
ತನಗುಂಟಾಗಿರ್ದ ಭಾಗ್ಯ ತನ್ನದು ವೇಮಾ ॥ ೨೨೨ ॥

ನಾಕಭಟ್ಟನಾಗಿ ಕಾಷಾಯಗಳನುಟ್ಟು ।
ಧರ್ಮನಿದ್ದನಾ ಪರಾಟನಲ್ಲಿ ॥
ಕಾಲಕರ್ಮಗತಿಗಳರಿವುದೇ ಕಷ್ಟವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೨೩ ॥

ಚಿಪ್ಪಿನಲ್ಲಿ ಬಿದ್ದ ಹನಿಯು ಮುತ್ತಾಯಿತು ।
ನೀರೊಳ್ಬಿದ್ದ ಹನಿಯು ನೀರದಾಯ್ತು ॥
ಪ್ರಾಪ್ತವಿರುವ ಕಡೆಯೊಳ್ ಫಲವು ತಪ್ಪುವುದೇಕೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೨೪ ॥

ತಾಮಸ ಪ್ರಕೃತಿಯಿಂದಾವುದಾದರು ಕಾರ್ಯ ।
ಬೇಗ ಬೇಗ ಮಾಡೆ ವಿಷಮವಹುದು ॥
ಕಾಯಿ ಕಾವಿಗಿಡಲು ಹಣ್ಣಾಗಬಲ್ಲುದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೨೫ ॥

ಕೆಲವು ಕಪ್ಪಗಿಹುದು ಕೆಲವು ಕೆಂಪಗೆಯಿಹುದು ।
ಕೆಲವು ಬೆಳ್ಳಗಿಹುದು ಧರಣಿಯಲ್ಲಿ ।
ಒಂದೇ ರೀತಿಯೊಳಿರದದೇನು ಕಾರಣವದು ।
ವಿಶ್ವತೋಭಿರಾಮ ಕೇಳೊ ವೇಮಾ । ॥ ೨೨೬ ॥

ಉಪ್ಪು ಕರ್ಪೂರವನು ಒಂದೆ ನಿರನಿರೀಕ್ಷಿಸುಂ |
ನೊಡೆ ನೋಡೆ ರುಚಿಗಳ್ಬೇರೆ ಬೇರೆ |
ಪುರುಷರಲ್ಲಿ ಪುಣ್ಯಪುರುಷರು ಬೇರಯ್ಯ |
ವಿಶ್ವತೋಭಿರಾಮ ಕೇಳೊ ವೇಮಾ || ೨೨೭ ||

ಎಲೆಯ ಮೇಲಣ ಬರಹವೆಲ್ಲರಿಗು ತಿಳಿಯುವುದು |
ಕೈಯ ಮೇಲಿನ ಬರಹ ಹೇಳಬಹುದು. ||
ತೊಗಲೊಳಗಿಹ ಬರಹ ದೊಡ್ಡವರರಿವರೈ |
ವಿಶ್ವತೋಭಿರಾಮ ಕೇಳೊ ವೇಮಾ || ೨೨೮ ||

ಮುಳುಗಿ ವಿಪ್ರ ತಾನು ಮುಂಮುಗಾಣನೆ ಹೋದ |
ತಿರುಗಿ ತಿರುಗೆ ಜೋಗಿ ಅರಿಯದಾದ ||
ಕೂಗಿ ಕೂಗಿ ವಾದಿ ನಾಯಿಯು ತಾನಾದ |
ವಿಶ್ವತೋಭಿರಾಮ ಕೇಳೊ ವೇಮಾ || ೨೨೯ ||

ಆಗದದು ಕೋರಲಾಗದು |
ಆಗಲಿಹುದು ಕೋರದಿರ್ದೊಡಾಗ್ವದು ನಿಕ್ಕಂ |
ಹೇಗೆಂದು ಚಿಂತಿಸಿದೊಡುಂ |
ಆಗಲ್ಕಿಹುದಾಗದಿರದು ಕೇಳೊ ವೇಮಾ ೨೩೦ ||

ತನಗೆ ಪ್ರಾಪ್ತವಿಲ್ಲದಲೆ ದಾತ ಕೊಡನೆಂದು |
ದೋಷಬುದ್ಧಿಯಿಂದ ದೂರ್ವುದೆಲ್ಲ ||
ಮೂಗು ನೀಟು ನೋಡಿ ಮೂಗುತಿಯ ಬೈದಂತೆ |
ವಿಶ್ವತೋಭಿರಾಮ ಕೇಳೊ ವೇಮಾ || ೨೩೧ ||

---